# ಶುಭ-ಆಶೀರ್ವಾದಗಳು



**ಪರಮ ಪೂಜ್ಯ ಸದ್ಗುರು ನಾರಾಯನಾಂದ ತೀರ್ಥ ಮಹಾಸ್ವಾಮಿಗಳು**

ಶ್ರೀ ಕ್ಷೇತ್ರ ಔದುಂಬರ, ತಾಲೂಕ ಪಲುಸ, ಜಿಲ್ಲಾ ಸಾಂಗ್ಲಿ - 416320, ಮಹಾರಾಷ್ಟ್ರ

ಪೂರ್ವಾಶ್ರಮ

**ಶ್ರೀ ವೇದಮೂರ್ತಿ ತಿಮ್ಮಣ್ಣ ನರಸಿಂಹ ದಿಕ್ಷಿತ, ಒಣಿಕೈ,**

(02/09/1886 - 15/02/1968)

ಪೋಸ್ಟ: ಪಂಚಲಿಂಗ, ತಾಲೂಕ : ಶಿರಸಿ, ಉತ್ತರಕನ್ನಡ 581403 ಕರ್ನಾಟಕ

ಶ್ರೀ ತಿಮ್ಮಣ್ಣ ಭಟ್ಟ ಮತ್ತು ಶ್ರೀಮತಿ ಯಮುನಾ ಅವರ ಕಿರು ಪರಿಚಯ

ತಿಮ್ಮಣ್ಣ ಭಟ್ಟರು ಭಾದ್ರಪದ ಶುದ್ದ ಪಂಚಮಿ 1808ರಲ್ಲಿ ಜನನ, (ಗುರುವಾರ 2ನೆ ಸೆಪ್ಟಂಬರ್ 1886). 8 ವರ್ಷಕ್ಕೆ ಉಪನಯನ, ಗೋಕರ್ಣದ ಗಾಯತ್ರಿ ತಿಮ್ಮಣ್ಣ ಭಟ್ಟರಲ್ಲಿ ಕೃಷ್ಣ ಯುಜುರ್ವೇದ ಅಭ್ಯಾಸ. ಶ್ರೀ ಶಿವಾನಂದ ಸರಸ್ವತಿ ಶಿಗೆಹಳ್ಳಿ ಅವರ ಸನ್ಯಾಸ ದೀಕ್ಷೆ ಸಮಾರಂಭದ ಪೌರೋಹಿತ್ಯ ವಹಿಸಿದರು. ಕಡಬಾಳದ ಯಮುನಾ ಅವರನ್ನು ಮದುವೆಯಾಗಿ ನರಸಿಂಹ, ಯಜ್ಞನಾರಾಯಣ, ಮಹಾದೇವಿ, ದತ್ತಾತ್ರೇಯ, ದಕ್ಷಿಣಾಮೂರ್ತಿ, ರಾಮಚಂದ್ರ, ಗಂಗಾ ಒಟ್ಟು 7 ಮಕ್ಕಳನ್ನು ಪಡೆದರು ಹಾಗೂ ಅಗ್ನಿಹೋತ್ರವನ್ನು ಶುರು ಮಾಡಿದರು. ಸೋಮಯಾಗ ಯಜ್ಞವನ್ನು ಪೂರೈಸಿ ತಿಮ್ಮಣ್ಣ ದಿಕ್ಷಿತ್ ಎನಿಸಿಕೊಂಡರು. ಚಾತುರ್ಮಾಸ ಯಾಗ ಮತ್ತು ನಕ್ಷತ್ರ ಯಾಗಗಳನ್ನೂ ನೆರವೇರಿಸಿದರು. 30ನೆ ವಯಸ್ಸಿನಲ್ಲಿ ದತ್ತಮಂದಿರವನ್ನು ಸ್ಥಾಪಿಸಿದರು. ಶ್ರೀಧರ ಸ್ವಾಮೀ ಮತ್ತು ಇತರರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಶ್ರಾವಣ ಶುದ್ದ ಪಂಚಮಿ ಬುಧವಾರ 1873 ಶಕೆ (ಆಗಸ್ಟ್ 8 1951) ಔದಂಬರದಲ್ಲಿ ತಾವೇ ಸನ್ಯಾಸ ದೀಕ್ಷೆ ಸ್ವೀಕರಿಸಿ ಶ್ರೀ ನಾರಾಯಣಾನಂದ ತೀರ್ಥರಾದರು. ಟೆಂಬೆ ಮಹಾರಾಜ, ಅವಧೂತ ಸ್ವಾಮಿ, ಅಕ್ಕಲಕೋಟ ಮಹಾರಾಜ ಮುಂತಾದವರ ಒಡನಾಟ. ಔದಂಬರದಲ್ಲಿ ಶ್ರೀ ಗುರು ಶಿವಶಂಕರಾನಂದ ಆಶ್ರಮ ಸ್ಥಾಪನೆ. ದತ್ತಮಂದಿರ ಸ್ಥಾಪನೆ. ಮಾಘ ಬಹುಳ ಪಾಡ್ಯ 1889 ರಂದು ತಮ್ಮ 82ನೆ ವಯಸ್ಸಿನಲ್ಲಿ ಸಮಾಧಿ ಹೊಂದಿದರು. (ಗುರುವಾರ ಫೆಬ್ರವರಿ 15 1968)

# ಪ್ರಕಾಶಕರ ನುಡಿ

ಮನುಷ್ಯನಿಗೆ ಮಾತ್ರ ಧರ್ಮವನ್ನು ಆಚರಿಸುವ ಸಾಮರ್ಥ್ಯವಿರುವುದು. ಧರ್ಮಾಚರಣೆಯಿಂದಲೇ ಒಬ್ಬ ವ್ಯಕ್ತಿಯು ಸುಂದರವಾದ ಬದುಕನ್ನು ತಾನು ಅನುಭವಿಸುವುದಲ್ಲದೆ, ತನ್ನ ಕುಟುಂಬ, ಸಮಾಜ, ದೇಶ ಹೀಗೆ ಎಲ್ಲವನ್ನು ಬೆಳೆಸಿ ಮೋಕ್ಷ ಸಾಧನೆ ಸಾಧ್ಯವಾಗುವುದು. ಧರ್ಮದ ಸ್ವರೂಪವನ್ನು ವೇದಗಳು, ಶಾಸ್ತ್ರಗಳು, ಉಪನಿಷತ್ತುಗಳು, ಪುರಾಣಗಳು ಮುಂತಾದವುಗಳಿಂದ ತಿಳಿಯಬಹುದಾಗಿದೆ. ಅನೂಚಾನವಾಗಿ ಧರ್ಮಾಚರಣೆ ಮುಂದುವರೆಸಲು ನಮ್ಮ ಪೂರ್ವಜರು ಎಲ್ಲ ಸ್ತರಗಳಲ್ಲಿ ವ್ಯಕ್ತಿ, ಕುಟುಂಬ, ಸಮಾಜ, ದೇಶ, ಹಾಗೂ ಎಲ್ಲ ಕಾಲದಲ್ಲಿ ಅಂದರೆ ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ, ಹುಟ್ಟಿದಾಗಿನಿಂದ ಸಾಯುವವರೆಗೆ ಮನುಷ್ಯನಾದವನು ಪಾಲಿಸಬೇಕಾದ ನಿಯಮಗಳನ್ನು ರೂಪಿಸಿದ್ದಾರೆ. ಈ ನಿಯಮಗಳು ಎಲ್ಲರಿಗೆ ಎಲ್ಲ ಕಾಲದಲ್ಲಿ ವ್ಯವಸ್ಥಿತವಾಗಿ ಸಿಗುವಂತಾಗಲು, ಸಮಾಜದ ಪ್ರತಿಯೋಬ್ಬನೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧದ ಪುರುಷಾರ್ಥಗಳನ್ನು ಪಡೆಯಬೇಕೆಂಬ ಸಂಕಲ್ಪದಿಂದ, ಮಠಮಾನ್ಯಗಳು, ಸಂಘ ಸಂಸ್ಥೆಗಳು, ದೇವಾಲಯಗಳು, ಸನ್ಯಾಸಿಗಳು, ಪುರೋಹಿತರು, ಅರ್ಚಕರು ಹೀಗೆ ಅನೇಕರನ್ನೊಳಗೊಂಡ ಸುಂದರವಾದ ವ್ಯವಸ್ತೆಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವುದೇ ಈ ಸಂಗ್ರಹದ ಉದ್ದೇಶ.

ಕೃಷ್ಣ ಯಜುರ್ವೇದ-ಬೋಧಾಯನೀಯ ಸ್ಮಾರ್ತ ಹವ್ಯಕ ಸಂಪ್ರದಾಯಸ್ಥ ಮನೆತನವಾದ ಓಣಿಕೈ ಕುಟುಂಬವು ಎಲ್ಲ ಧಾರ್ಮಿಕ - ವೈದಿಕ, ಹಬ್ಬ - ಹರಿದಿನಗಳು, ಹಿರಿಯರ ದಿನಗಳನ್ನು ಪೂರ್ವಜರು ಹಾಕಿಕೊಟ್ಟ ಪದ್ದತಿಯಂತೆ ಅನೂಚಾನವಾಗಿ ನಡೆಸಿಕೊಂಡು ಬರುತ್ತಾ ಇದ್ದಾರೆ . ಅಪಾರ ಆಸ್ತಿಕ ಶಿಷ್ಯರನ್ನೂ ಕಾಲಮಾನಕ್ಕೆ ಅನುಗುಣವಾಗಿ ಅಲ್ಪಸ್ವಲ್ಪ ತಿದ್ದುಪಡಿಗಳೊಂದಿಗೆ ಮಾರ್ಗದರ್ಶಕ ಸ್ಥಾನದಲ್ಲಿ ನಿಂತು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

ನಮ್ಮ ಕುಟುಂಬದವರು ಹಾಗೂ ಶಿಷ್ಯರು, ಬೆಂಗಳೂರು, ಔದುಂಬರ, ಮುಂತಾದ ಊರುಗಳಲ್ಲಿ ನೆಲೆಸಿದ್ದಾರೆ. ಅಲ್ಲಿಯೂ ಧಾರ್ಮಿಕ, ವೈದಿಕ ಆಚಾರ ವಿಚಾರಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲವಾಗುವ ನಿಟ್ಟಿನಲ್ಲಿ, ಹಾಗೂ ಈ ಎಲ್ಲಾ ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುವತ್ತ, ಪ ಪೂ ನಾರಾಯಣಾನಂದ ತೀರ್ಥ ಪ್ರತಿಷ್ಠಾನವು ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯಡಿಯಲ್ಲಿ ಪ್ರಕಟಣಾ ಕಾರ್ಯದಲ್ಲಿ ತೊಡಗಿಸಿಕೊಂಡಿದೆ.

ಆಸಕ್ತ ಜನಸಾಮಾನ್ಯರಿಗೆ ಸರಳ ಕನ್ನಡಭಾಷೆಯಲ್ಲಿ, ಚಿಕ್ಕ ಚಿಕ್ಕ ಪ್ರಕಟಣೆಗಳ ಮೂಲಕ ಉಚಿತವಾಗಿ ಒದಗಿಸುವ ಉದ್ದೇಶ ಪ್ರತಿಷ್ಠಾನದ್ದು. ಪ್ರತಿಷ್ಠಾನದ ಈ ಸೇವಾ ಕಾರ್ಯದಲ್ಲಿ ವಿಷಯ ಸಂಗ್ರಹಣೆ, ಸಂಪಾದನೆ, ಕರಡು ಪರಿಷ್ಕರಣೆ, ವಿನ್ಯಾಸ ಹೀಗೆ ಹಲವು ಕೆಲಸಗಳಲ್ಲಿ ಸಲಹೆ, ಸಹಾಯ, ಸಹಕಾರ ನೀಡಿದ ನನ್ನ ತಮ್ಮ ಶ್ರೀ ಕೇಶವ, ಪತ್ನಿ ಶ್ರೀಮತಿ ಭಾಗೀರಥಿ, ಹಾಗೂ ಪ್ರತ್ಯಕ್ಷ-ಪರೋಕ್ಷವಾಗಿ ಪರಿಶ್ರಮಿಸಿದ ಎಲ್ಲರಿಗೂ ಕೃತಜ್ಞತೆಗಳು. ಆಸಕ್ತ ಆಸ್ತಿಕಲೋಕ ಸಹೃಯದಯರಾಗಿ ಸ್ವೀಕರಿಸಬೇಕೆಂದು ಕೋರಿದೆ.

**ಪ್ರಕಾಶಕರು**

# “Stotra Sangraha – Bhavartha Sahita”

Smt. Kamala Daxinamurthy Grantha Maalike

Axi – 24

Compiled by

**Shridatta Dixit Onikai**,
Bengaluru

First Print: 2022



Price: Free

Publisher



**Pa. Pu. Narayanananda Tirtha Pratistana (R)**

No 431, ShriRaksha, 7th Main Road, ISRO Layout, Bengaluru - 560111, Karnataka, Cell No. 9448242402, Email: sddixit@outlook. com

# ಸ್ತೋತ್ರ ಸಂಗ್ರಹ – ಭಾವಾರ್ಥ ಸಹಿತ

ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆ

ಅಕ್ಷಿ – 24

ಸಂಪಾದನೆ

**ಶ್ರೀದತ್ತ ದಿಕ್ಷಿತ ಓಣಿಕೈ, ಬೆಂಗಳೂರು**



ಪ್ರಕಾಶಕರು



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,
ಕರ್ನಾಟಕ, ದೂರವಾಣಿ : +91 94482 42402, sddixit@outlook. com

# ಅನುಕ್ರಮಣಿಕೆ

# 1 ಪೀಠಿಕೆ

ಮಾನವರಲ್ಲಿರುವ ದೇವರ ಬಗೆಗಿನ ಕಲ್ಪನೆಗಳು ಮತ್ತು ನಂಬುಗೆಗಳು ಸಾವಿರಾರುವರ್ಷ ಪುರಾತನವಾದವು. ಈ ನಂಬುಗೆ ಜನರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿವೆ. ಹಿಂದೂಸಮಾಜದ ಜನರಲ್ಲಿ ಏಕೈಕ ದೇವರ ಕಲ್ಪನೆಯನ್ನು ಉಪನಿಷತ ಕಾಲದಲ್ಲಿ ಕಾಣಬಹುದು. ಸಾಮಾನ್ಯಜನರ ಮಾನಸಿಕ ಇತಿಮಿತಿಗಳನ್ನು ಮತ್ತು ಬಯಕೆಗಳನ್ನು ಗಮನಿಸಿದ ತತ್ವಜ್ಞಾನಿಗಳು, ನೂರಾರು ದೇವತೆಗಳ ವಿವಿಧ ಆರಾಧನಾ ಮಾರ್ಗಗಳನ್ನು ರೂಪಿಸಿಕೊಟ್ಟರು. ಪೂಜೆ-ಪುನಸ್ಕಾರ, ಜಪ-ತಪ, ಹೋಮ-ಹವನ, ದಾನ-ತರ್ಪಣೆ-ಸಂತರ್ಪಣೆ, ನೃತ್ಯ-ಗಾಯನ, ಕೀರ್ತನೆ-ಭಜನೆ, ಪ್ರದಕ್ಷಿಣೆ-ನಮಸ್ಕಾರ, ಕ್ಷೇತ್ರದರ್ಶನ-ತೀರ್ಥಸ್ನಾನ ಹೀಗೆ ಹತ್ತು-ಹಲವು ಮಾರ್ಗಗಳು. ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು ಎಂಬ ಐದು ದೇವತೆಗಳ **ಪಂಚಾಯತನ** ಪೂಜಾಕ್ರಮವನ್ನು **ಶ್ರೀ ಆದಿ ಶಂಕರಾಚಾರ್ಯರು** ಪ್ರಚುರ ಪಡಿಸಿದರೆಂಬುದು ಪ್ರತೀತಿ. ಈ ಸಂಕಲನದಲ್ಲಿ ಪ್ರತಾಸ್ಮರಣೆ, ಶ್ರೀ ಗುರುಗಳು, ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು, ಸ್ತೋತ್ರಗಳಿವೆ. ಅಲ್ಲದೇ ಇತರ ದೇವಿ ದೇವತೆಗಳು ಮತ್ತು ಆರೋಗ್ಯ, ವಿವಾಹ, ಸಂತಾನ, ಐಶ್ವರ್ಯ ಮೊದಲಾದ ವಿಷಯಗಳಿಗೆ ಸಂಬಂದಪಟ್ಟ ಫಲಪ್ರದ ಶ್ಲೋಕಗಳು ಇವೆ. ಈ ಸ್ತೋತ್ರಗಳ ಪಠಣದಿಂದ ನಿಮಗೆ ಶಾಂತಿ, ಸಮಾಧಾನ ದೊರೆತು ಇಚ್ಛಾ ಪೂರೈಕೆ ಆದರೆ ನಮ್ಮ ಶ್ರಮ ಸಾರ್ಥಕ.

----- ****** -----

# 2 ಶ್ರೀ ಗುರು ಸ್ತೋತ್ರಗಳು

## 2.1 ಪರಬ್ರಹ್ಮ ಪ್ರಾತಃಸ್ಮರಣಂ

**ಪ್ರಾತಃ ಸ್ಮರಾಮಿ ಹೃದಿ ಸಂಸ್ಫುರದಾತ್ಮ ತತ್ವಂ । ಸಚ್ಚಿತ್ಸುಖಂ ಪರಮ ಹಂಸಗತಿಂ ತುರೀಯಂ ॥ ಯತ್ ಸ್ವಪ್ನ ಜಾಗ್ರತ್ಸುಷುಪ್ತಿ ಮವೈತಿ ನಿತ್ಯಂ । ತದ್ಬ್ರಹ್ಮ ನಿಷ್ಕಲಮಹಂ ನ ಚ ಭೂತ ಸಂಘಃ ॥1॥**

ಭಾವಾರ್ಥ - ಸದ್ರೂಪವೂ, ಚಿದ್ರೂಪವೂ, ಸುಖಮಯವೂ ತುಂಬಿರುವಂತಹಾ ನನ್ನೀ ಹೃದಯದೊಳಗೆ ಮಿಡಿಯುತ್ತಲಿರುವ ಆತ್ಮ ತತ್ವವನ್ನು ನಾನು ಉಷಃಕಾಲದಲ್ಲಿ ಸ್ಮರಿಸುವೆನು. ಶ್ರೇಷ್ಠ ಸಂನ್ಯಾಸತ್ವ ಸ್ಥಿತಿಗೆ ನನ್ನನ್ನು ಕರೆದೊಯ್ದು ತಲಪಿಸುವಂತಹಾ ತಿಳುವಳಿಕಾ ಶಕ್ತಿಯಿಂದ ಯಾವ ಜಾಗ್ರತ್ ಸ್ವಪ್ನ ನಿದ್ರಾ ಸ್ಥಿತಿಗಳನ್ನು ಅರಿತು ಸದಾ ಪಂಚ ಮಹಾ ಭೂತಗಳ ಸೇರುವಿಕೆಯಾಗಿರುವ ಶರೀರವು ನಾನಾಗಿರದೆ ಅತ್ಯಂತ ಪರಿಶುದ್ಧವಾಗಿರುವ ಪರಬ್ರಹ್ಮನೇ ರೂಪನಾಗಿರುವೆ.

**ಪ್ರಾತರ್ಭಜಾಮಿ ಮನಸೋ ವಚಸಾವಗಮ್ಯಂ । ವಾಚೋ ವಿಭಾಂತಿ ನಿಖಿಲಾ ಯದನುಗ್ರಹೇಣ ॥ ಯನ್ನೇತಿ ನೇತಿ ವಚನೈರ್ನಿಗಮಾ ಅವೋಚುಃ । ತಂ ದೇವ ದೇವ ಜಮುಚ್ಯುತ ಮಾಹುರಗ್ರ್ಯಂ ॥2॥**

ಭಾವಾರ್ಥ - ಮನೋವಾಕ್ಕುಗಳಿಗೆ ಅಗೋಚರವಾಗಿ ಯಾವುದಿದೆಯೋ, ಯಾವುದರ ಕೃಪೆಯಿಂದ ಮಾತುಗಳು ಪ್ರವೃತ್ತಿಸಲ್ಪಡುವುದೋ, ಯಾವುದನ್ನು ವೇದಗಳು ಅದಲ್ಲ, ಅದಲ್ಲ ಎಂದು ತಿಳಿಸಿ ಮೌನ ತಾಳಿದವೋ, ಯಾವುದಕ್ಕೆ ಜನ್ಮವಾಗಲೀ ನಾಶವಾಗಲೀ ಇರದೆ ದೇವರದೇವನೆಂದು ಹೇಳಲ್ಪಟ್ಟಿದೆಯೋ ಅಂತೆಯೇ ಅನಾದಿಕಾಲದಿಂದಲೂ ಇರುವ ಆ ಪರಬ್ರಹ್ಮವನ್ನು ಉಷಃಕಾಲದಲ್ಲಿ ನಾನು ಭಜಿಸುವೆನು.

**ಪ್ರಾತರ್ನಮಾಮಿ ತಮಸಃಪರಮಾರ್ಕವರ್ಣಂ । ಪೂರ್ಣಂ ಸನಾತನ ಪದಂ ಪುರುಷೋತ್ತಮಾಖ್ಯಂ ॥ ಯಸ್ಮಿನ್ನಿದಂ ಜಗದೇಷಮಶೇಷಮೂರ್ತೌ । ರಜ್ಜ್ವಾಂಭುಜಂಗಮಂ ಇವ ಪ್ರತಿಭಾಸಿತಂ ವೈ ॥3 ॥**

ಭಾವಾರ್ಥ - ಯಾವುದು ಕತ್ತಲನ್ನು ಹೋಗಲಾಡಿಸುವ ಸೂರ್ಯನಂತಿದೆಯೋ, ಅಜ್ಞಾನವನ್ನು ಹೊಡೆದೋಡಿಸುವ ಜ್ಞಾನ ಸ್ವರೂಪವಾಗಿದೆಯೋ, ಯಾವುದು ಪರಿಪೂರ್ಣವೂ ಸನಾತನ ಶಬ್ದವೂ ಆಗಿರುವುದನ್ನು ಪುರುಷೋತ್ತಮನೆಂದು ಸಂಭೋಧಿಸುತ್ತದೆಯೋ, ಯಾವುದು ಬ್ರಹ್ಮಾಂಡವನ್ನು ಹಾವು ಹಗ್ಗದ ರೂಪದಲ್ಲಿ ಭಾಸವಾಗುವಂತೆ ಮಾಡುತ್ತದೆಯೋ ಅಂತಹಾ ಶೇಷವೂ ಅಶೇಷವೂ ಆಗಿರುವ ಅನಂತ ಸ್ವರೂಪದಲ್ಲಿರುವ ಆ ಪರಮಾತ್ಮ ತತ್ವವನ್ನು ಉಷಃಕಾಲದಲ್ಲಿ ನಾನು ನಮಿಸುವೆನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಪರಬ್ರಹ್ಮ ಪ್ರಾತಃಸ್ಮರಣಂ ಸಂಪೂರ್ಣಂ ॥

## 2.2 ಶ್ರೀ ಗುರು ಸ್ತೋತ್ರಂ [ವಿಶ್ವಸಾರ ತಂತ್ರ]

**ಗುರುಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ । ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥1॥**

ಭಾವಾರ್ಥ - ಗುರುಗಳೇ ಬ್ರಹ್ಮ ಸ್ವರೂಪ, ಗುರುಗಳೇ ವಿಷ್ಣು ಸ್ವರೂಪ, ಗುರುಗಳೇ ಸರ್ವೇಶ್ವರ ಆದ ಮಹೇಶ್ವರ, ಗುರುಗಳೇ ಸಾಕ್ಷಾತ್ ಪರಬ್ರಹ್ಮ ಸ್ವರೂಪ, ಅಂತಹಾ ಆ ಮಹಾ ಗುರುಗಳಿಗೆ ನನ್ನ ನಮಸ್ಕಾರಂಗಳು.

**ಅಖಂಡಮಂಡಲಾಕಾರಂ ವ್ಯಾಪ್ತಂಯೇನ ಚರಾಚರಂ । ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥2॥**

ಭಾವಾರ್ಥ - ಅಖಂಡ ಮಂಡಲಾಕಾರನಾಗಿರುವಂತಹಾ ಈ ಚರಾಚರ ಜಗತ್ತಿನನ್ನು ವ್ಯಾಪಿಸಿರುವಂತಾ ತತ್ವಂಗಳನ್ನು ಯಾರು ತೋರಿಸಿಕೊಟ್ಟಿರುವರೋ ಅಂತಹಾ ಶ್ರೀಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ । ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥3॥**

ಭಾವಾರ್ಥ - ಅಜ್ಞಾನ ಅನ್ನುವ ಕತ್ತಲಿನಿಂದ ಕುರುಡನಾಗಿದ್ದವನ ಕಣ್ಣುಗಳನ್ನು ಜ್ಞಾನ ಅನ್ನುವ ಬರ್ಚಿಯಿಂದ ಬಿಡಿಸಿದ ಆ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಸ್ಥಾವರಂ ಜಂಗಮಂ ವ್ಯಾಪ್ತಂ ಯೇನಕೃತ್ಸ್ನಂ ಚರಾಚರಂ । ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥4॥**

ಭಾವಾರ್ಥ - ಸ್ಥಾವರಜಂಗಮರೂಪದ ಚರಾಚರಾತ್ಮಕವಾಗಿರುವಂತಹಾ ಈ ಜಗತ್ತಿನಲ್ಲಿ ತುಂಬಿಕೊಂಡು ಇರುವ ತತ್ವಂಗಳನ್ನು ಯಾರು ಬೆಳಕಿಗೆ ತಂದು ತೋರಿಸಿ ಕೊಟ್ಟವರೋ ಆ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಚಿದ್ರೂಪೇಣ ಪರಿವ್ಯಾಪ್ತಂ ತ್ರೈಲೋಕ್ಯಂ ಚರಾಚರಂ । ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥5॥**

ಭಾವಾರ್ಥ - ಚರಾಚರಾತ್ಮಕವಾಗಿರುವಂತಹಾ ಮೂರು ಲೋಕಂಗಳನ್ನು ಜ್ಞಾನರೂಪದಲ್ಲಿ ತುಂಬಿಕೊಂಡು ಇರುವಂತಹಾ ತತ್ವಂಗಳನ್ನು ಲೋಕಕ್ಕೆ ಯಾರು ತೋರಿಸಿಕೊಟ್ಟವರೋ ಅಂತಹಾ ಆ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು ॥5॥

**ಸರ್ವಶೃತಿಶಿರೋರತ್ನ ಸಮುದ್ಭಾಸಿತ ಮೂರ್ತಯೇ । ವೇದಾಂತಾಂಬುಜ ಸೂರ್ಯಾಯ ತಸ್ಮೈ ಶ್ರೀಗುರವೇ ನಮಃ ॥6॥**

ಭಾವಾರ್ಥ - ಸಮಸ್ತ ವೇದಂಗಳಿಗೆ ಶಿರಸ್ಸು [ತಲೆ] ಅನ್ನಿಸಿಕೊಂಡಂತಹಾ ಉಪನಿಷತ್ ಎನ್ನುವ ರತ್ನದಿಂದ ಹೊಳೆಯುವಂತಹಾ ಮೂರ್ತಿ ಸ್ವರೂಪನೂ, ವೇದಾಂತಾ ಅನ್ನುವ ಕಮಲವನ್ನು ಅರಳಿಸುವಂತಹಾ ಸೂರ್ಯ ಸ್ವರೂಪನೂ ಆಗಿರುವಂತಹಾ ಆ ಮಹಾ ಗುರುಗಳಿಗೆ ನನ್ನ ನಮಸ್ಕಾರಂಗಳು.

**ಚೈತನ್ಯಃ ಶಾಶ್ವತಃ ಶಾಂತೋ ವ್ಯೋಮಾತೀತೋ ನಿರಂಜನಃ । ಬಿಂದುನಾದಕಲಾತೀತಸ್ತಸ್ಮೈ ಶ್ರೀ ಗುರವೇ ನಮಃ ॥7॥**

ಭಾವಾರ್ಥ - ಚೈತನ್ಯ ಶಕ್ತಿಯೂ, ಶಾಶ್ವತನೂ, ಶಾಂತಸ್ವರೂಪನೂ, ಆಕಾಶಕ್ಕೆ ನಿಲುಕದವನೂ, ನಿರಂಜನರೂಪನೂ, ಬಿಂದು, ನಾದ, ಕಲೆಗಳಿಗೆ ಹೊರತಾದ ಶ್ರೇಷ್ಟನೂ ಆಗಿರುವಂತಹಾ ಆ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಜ್ಞಾನಶಕ್ತಿ ಸಮಾರೂಢಸ್ತತ್ವಮಾಲಾ ವಿಭೂಷಿತಃ । ಭುಕ್ತಿ ಮುಕ್ತಿ ಪ್ರದಾತಾ ಚ ತಸ್ಮೈ ಶ್ರೀ ಗುರವೇ ನಮಃ ॥8॥**

ಭಾವಾರ್ಥ - ತತ್ವಮಾಲೆಗಳಿಂದ ಅಲಂಕೃತನಾಗಿ ಜ್ಞಾನಶಕ್ತಿಯ ಮಹಾಪೀಠದ ಮೇಲೆ ಆರೂಢನಾಗಿ ಇಹಸುಖವನ್ನೂ, ಮುಕ್ತಿಯೋಗವನ್ನೂ ದಯಪಾಲಿಸುವಂತಹಾ ಆ ಶ್ರೀ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಅನೇಕಜನ್ಮ ಸಂಪ್ರಾಪ್ತಕರ್ಮೇಂಧನವಿದಾಹಿನೇ । ಆತ್ಮಜ್ಞಾನಾಗ್ನಿದಾನೇನ ತಸ್ಮೈ ಶ್ರೀ ಗುರವೇ ನಮಃ ॥9॥**

ಭಾವಾರ್ಥ - ಜನ್ಮಜನ್ಮಾಂತರಗಳಿಂದ ಬಂದಂತಹಾ ಕರ್ಮಾ ಅನ್ನುವ ಕಾಷ್ಠವನ್ನು ಆತ್ಮಾ ಅನ್ನುವ ಅಗ್ನಿಯಿಂದ ಸುಟ್ಟು ಭಸ್ಮ ಮಾಡಲು ಶಕ್ತನಾಗಿರುವ ಆ ಶ್ರೀ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಶೋಷಣಂ ಭವ ಸಿಂಧೋಶ್ಚ ಪ್ರಾಪಣಂ ಸಾರಸಂಪದಃ । ಯಸ್ಯ ಪಾದೋದಕಂ ಸಮ್ಯಕ್ ತಸ್ಮೈ ಶ್ರೀ ಗುರವೇ ನಮಃ ॥10॥**

ಭಾವಾರ್ಥ - ಯಾರ ಪಾದತೀರ್ಥವು ಇಹಸಂಸಾರದ ಕಷ್ಟಂಗಳ ನಾಶಕ್ಕೂ, ಸಾರವತ್ತಾದ ಸಂಪತ್ತಿನ ಪ್ರಾಪ್ತಿಗೂ ಸಾಧನವಾಗಿರುವುದೋ ಅಂತಹಾ ಆ ಶ್ರೀ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ನ ಗುರೋರಧಿಕಂ ತತ್ವಂ ನ ಗುರೋರಧಿಕಂ ತಪಃ । ತತ್ವಜ್ಞಾನಾತ್ ಪರಂ ನಾಸ್ತಿ ತಸ್ಮೈ ಶ್ರೀ ಗುರವೇ ನಮಃ ॥11॥**

ಭಾವಾರ್ಥ - ಗುರುಗಳಿಂದಲೂ ಅಧಿಕವಾಗಿರುವಂತಹಾ ತತ್ವಂಗಳು ಇಲ್ಲ, ಗುರುಗಳಿಂದ ಅಧಿಕವಾಗಿರುವಂತಹಾ ತಪಸ್ಸಿಲ್ಲ, ತತ್ವ ಜ್ಞಾನದಿಂದಲೂ

ಶ್ರೇಷ್ಠವಾಗಿರುವುದು ಯಾವುದೂ ಇಲ್ಲ. ಆದ ಕಾರಣ ಅಂತಹಾ ತತ್ವ ಜ್ಞಾನವನ್ನು ಕರುಣಿಸುವ ಆ ಶ್ರೀ ಮಹಾಗುರುಗಳಿಗೆ ನನ್ನ ನಮಸ್ಕಾರಂಗಳು.

**ಮನ್ನಾಥಃ ಶ್ರೀ ಜಗನ್ನಾಥೋ ಮದ್ಗುರು ಶ್ರೀಜಗದ್ಗುರುಃ । ಮದಾತ್ಮಾ ಸರ್ವ ಭೂತಾತ್ಮಾ ತಸ್ಮೈ ಶ್ರೀ ಗುರವೇ ನಮಃ ॥12॥**

ಭಾವಾರ್ಥ - ಶ್ರೀ ಜಗನ್ನಾಥನೇ ನನ್ನ ಸ್ವಾಮಿ, ಶ್ರೀ ಜಗದ್ಗುರುವೇ ನನ್ನ ಗುರು. ಸರ್ವ ಭೂತಗಳ ಆತ್ಮವೇ ನನ್ನಾತ್ಮ. ಅಂತಹಾ ಆ ಮಹಾ ಸದ್ಗುರುಗಳಿಗೆ ನನ್ನ ನಮಸ್ಕಾರಂಗಳು.

**ಗುರುನಾದಿರನಾದಿಶ್ಚ ಗುರುಃ ಪರಮ ದೈವತಂ । ಗುರೋಃ ಪರತರಂ ನಾಸ್ತಿ ತಸ್ಮೈ ಶ್ರೀ ಗುರವೇ ನಮಃ ॥13॥**

ಭಾವಾರ್ಥ - ಗುರುವೇ ಜಗತ್ತಿನ ಆದಿ, ಆ ಗುರುವು ಆದಿ ಅಂತ್ಯಗಳಿಲ್ಲದಿರುವ ಅನಾದಿ ಶಕ್ತಿ. ಗುರುಗಳೇ ಪರಮ ದೇವತೆ. ಗುರುಗಳಿಂದ ಶ್ರೇಷ್ಠ ಆಗಿರುವುದು ಯಾವುದೂ ಇಲ್ಲ. ಅಂತಹಾ ಆ ಮಹಾ ಜಗದ್ಗುರುಗಳಿಗೆ ನನ್ನ ನಮಸ್ಕಾರಂಗಳು.

**ಬ್ರಹ್ಮಾನಂದಂ ಪರಮ ಸುಖದಂ ಕೇವಲಂ ಜ್ಞಾನಮೂರ್ತಿಂ ದ್ವಂದ್ವಾತೀತಂ ಗಗನಸದೃಶಂ ತತ್ವಮಸ್ಯಾದಿಲಕ್ಷ್ಯಂ । ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥14॥**

ಭಾವಾರ್ಥ - ಬ್ರಹ್ಮಾನಂದಸ್ವರೂಪನೂ, ಪರಮಸುಖಪ್ರದಾಯಕನೂ, ಸಮಗ್ರನೂ, ಜ್ಞಾನಸಂಪನ್ನನೂ, ದ್ವಂದ್ವಗಳಿಗೆ ಸಿಲುಕದನೂ, ಆಕಾಶಕ್ಕೆ ಸಮಾನವಾದವನೂ, ತತ್ವಮಸಿ ಎಂಬಿತ್ಯಾದಿ ವಾಕ್ಯಗಳಿಗೆ ಗಮನನೂ, ಅದ್ವೀತೀಯನೂ, ನಿತ್ಯನೂ, ವಿಮಲಸ್ವರೂಪಿಯೂ, ಅಚಲನೂ, ಬುದ್ಧಿಯಸಮಸ್ತ ಕಾರ್ಯಗಳಿಗೆ ಸಾಕ್ಷಿಯಾಗಿರುವವನೂ, ಭಾವನೆಗಳಿಗೆ ಹೊರತಾದವನೂ, ತ್ರಿಗುಣರಹಿತನೂ ಆದ ಸದ್ಗುರುವಿಗೆ ಪ್ರಣಾಮಗಳು

॥ ಇತಿ ವಿಶ್ವಸಾರ ತಂತ್ರೇ ಶ್ರೀ ಗುರುಸ್ತೋತ್ರಂ ಸಂಪೂರ್ಣಂ ॥

## 2.3 ಶ್ರೀ ಗುರ್ವಷ್ಟಕಂ

**ಶರೀರಂ ಸುರೂಪಂ ತಥಾ ವಾ ಕಲತ್ರಂ ಯಶಶ್ಚಾರು ಚಿತ್ರಂ ಧನಂ ಮೇರು ತುಲ್ಯಂ ।**
**ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥1॥**

ಭಾವಾರ್ಥ - ಸುಂದರವಾದ ದೇಹ, ಸುರೂಪಿಯಾದ ಸತಿ, ವಿಧವಿಧವಾದ ಸ್ತುತಿಗಳು, ಕುಬೇರನಿಗೆ ಸಮಾನವಾದ ಸಂಪತ್ತು, ಇವೆಲ್ಲ ಇದ್ದರೂ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಕಲತ್ರಂ ಧನಂ ಪುತ್ರ ಪೌತ್ರಾದಿ ಸರ್ವಂ ಗೃಹಂ ಬಾಂಧವಾಃ ಸರ್ವಮೇತದ್ಧಿ ಜಾತಂ ।**
**ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥2॥**

ಭಾವಾರ್ಥ - ಮಾನವವಾದ ನನಗೆ ಹೆಂಡತಿ, ಮಕ್ಕಳು, ಮೊಮ್ಮಕ್ಕಳು, ಮನೆ, ನೆಂಟರು ಎಲ್ಲವೂ ಇದೆ. ಆದರೆ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಷಡಂಗಾದಿ ವೇದೋ ಮುಖೇ ಶಾಸ್ತ್ರವಿದ್ಯಾ ಕವಿತ್ವಾದಿ ಗದ್ಯಂ ಸುಪದ್ಯಂ ಕರೋತಿ ।**
**ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥3॥**

ಭಾವಾರ್ಥ - ಷಡಂಗಯುಕ್ತವಾಗಿರುವ ವೇದಗಳನ್ನೂ, ಮೀಮಾಂಸಾದಿ ಎಲ್ಲಾ ಶಾಸ್ತ್ರಗಳನ್ನೂ ಅಧಯನ ಮಾಡಿದ್ದಿರಬಹುದು. ಗದ್ಯ ಪದ್ಯಾದಿಕಾವ್ಯಗಳನ್ನು ರಚಿಸುವ ಸಾಮರ್ಥ್ಯವೂ ನನಗಿರಬಹುದು. ಆದರೆ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ವಿದೇಶೇಶು ಮಾನ್ಯಃ ಸ್ವದೇಶೇಶು ಧನ್ಯಃ ಸದಾಚಾರವೃತ್ತೇಷು ಮತ್ತೋ ನ ಚಾನ್ಯ ।**
**ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥4॥**

ಭಾವಾರ್ಥ - ಅನ್ಯದೇಶಗಳಲ್ಲಿ ಗೌರವಪಡೆದು, ಜನ್ಮಭೂಮಿಯಲ್ಲಿ ಕೀರ್ತಿ ಸಂಪಾದಿಸಿದ್ದರೂ, ಸತ್ಕರ್ಮಾಚರಣೆಯಲ್ಲಿ ತನಗಿಂತ ಶ್ರೇಷ್ಠರಿಲ್ಲದಿದ್ದರೂ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಕ್ಷಮಾಮಂಡಲೇ ಭೂಪಭೂಪಾಲವೃಂದೈಃ ಸದಾ ಸೇವಿತಂ ಯಸ್ಯ ಪಾದಾರವಿಂದಂ । ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥5॥**

ಭಾವಾರ್ಥ - ಭುವಿಯಲ್ಲಿ ಚಕ್ರವರ್ತಿಗಳೂ, ರಾಜಾದಿರಾಜರುಗಳು ತನ್ನ ಸೇವೆಯನ್ನು ಮಾಡುತ್ತಿರಬಹುದಾದರೂ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಯಶೋ ಮೇ ಗತಂ ದಿಕ್ಷು ದಾನ ಪ್ರತಾಪಾಜ್ಜಗದ್ವಸ್ತು ಸರ್ವಂ ಕರೇ ಮತ್ಪ್ರಸಾದಾತ್ । ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥6॥**

ಭಾವಾರ್ಥ - ದಾನದ ಪ್ರಭಾವದಿಂದ ನನ್ನ ಕೀರ್ತಿಯು ಚತುರ್ದಿಸೆಗಳಲ್ಲಿಯೂ ಹರಡಿದೆ. ನನ್ನ ಪ್ರಭಾವದಿಂದ ಜಗತ್ತಿನಲ್ಲಿ ಯಾವ ವಸ್ತುವೇ ಆದರೂ ನನ್ನ ವಶವಾಗುವುದು. ಆದರೇನು? ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ನ ಭೋಗೇ ನ ಯೋಗೇ ನ ವಾ ವಾಜಿರಾಜೌ ನ ಕಾಂತಾಸುಖೇ ನೈವ ವಿತ್ತೇಷು ಚಿತ್ತಂ । ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥7॥**

ಭಾವಾರ್ಥ - ಭೋಗ ಯೋಗಗಳಲ್ಲಾಗಲೀ, ಅಶ್ವ ಸವಾರಿಯಲ್ಲಾಗಲೀ, ಜೂಜು ಸ್ತ್ರೀ ಸಂಸರ್ಗದಲ್ಲಾಗಲೀ, ಐಶ್ವರ್ಯಾದಿ ಸುಖಾನುಭವದಲ್ಲಾಗಲೀ ನನ್ನ ಮನಸ್ಸು ಆಸಕ್ತಿಹೊಂದಿರುವುದಿಲ್ಲ. ಆ ಬಗ್ಗೆ ನಿರಾಸಕ್ತಿ ಹೊಂದಿದೆ. ಹೀಗಿದ್ದರೂ ಸದ್ಗುರುವಿನ

ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಅರಣ್ಯೇ ನ ವಾ ಸ್ವಸ್ಯ ಗೇಹೇ ನ ಕಾರ್ಯೇ ನದೇಹೇ ಮನೋವರ್ತತೇ ಮೇ ತ್ವನರ್ಘ್ಯೇ । ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥8॥**

ಭಾವಾರ್ಥ - ಅರಣ್ಯವಾಸಿಯಾಗಿ ಹೋಗಿ ಬಿಡಲು ಮನಸ್ಸು ಬರುವುದಿಲ್ಲ. ಮನೆಯಲ್ಲಿಯೇ ಇರಬೇಕೆಂದು ಎನಿಸುತ್ತಲೂ ಇಲ್ಲ. ಯಾವುದೇ ಕಾರ್ಯ ಮಾಡಲು ಮನಸ್ಸು ಅನಾಸಕ್ತವಾಗಿದೆ. ದೇಹ ರಕ್ಷಣೆಯಲ್ಲಿಯೂ ಮನಸ್ಸು ನಿರಾಸಕ್ತವಾಗಿ ವೈರಾಗ್ಯದಿಂದಿದೆ. ಆದರೂ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಅನರ್ಘ್ಯಾಣಿ ರತ್ನಾನಿ ಭುಕ್ತಾನಿ ಸಮ್ಯಕ್ ಸಮಾಲಿಂಗಿತಾ ಕಾಮಿನೀ ಯಾಮಿನೀಷು । ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ॥9॥**

ಭಾವಾರ್ಥ - ಬೆಲೆಬಾಳುವ ರತ್ನಹಾರಗಳನ್ನು ಧರಿಸಿದ್ದಾಗಿದೆ. ರಾತ್ರಿಯ ವೇಳೆ ಸ್ತ್ರೀಸುಖಾಲಿಂಗನ ಸಂತಸ ಅನುಭವಿಸಿದ್ದಾಯಿತು. ಆದರೇನು? ಆ ಸದ್ಗುರುವಿನ ಚರಣಾರವಿಂದಗಳಲ್ಲಿ ಮನಸ್ಸು ನಿಲ್ಲದೆ ಹೋದರೆ ಫಲವೇನು? ಫಲವೇನು? ಫಲವೇನು?

**ಗುರೋರಷ್ಟಕಂ ಯಃ ಪಠೇತ್ಪುಣ್ಯ ದೇಹೀ ಯತಿರ್ಭೂಪತಿರ್ಬ್ರಹ್ಮಚಾರೀ ಚ ಗೇಹೀ । ಲಭೇದ್ವಾಂಛಿತಾರ್ಥಂ ಪದಂ ಬ್ರಹ್ಮಸಂಜ್ಞಂ ಗುರೋರುಕ್ತ ವಾಕ್ಯೇ ಮನೋ ಯಸ್ಯ ಲಗ್ನಂ ॥10॥**

ಭಾವಾರ್ಥ - ಅರಸನಾಗಲೀ, ವಿರಕ್ತನಾಗಲೀ, ಬ್ರಹ್ಮಚಾರಿಯಾಗಲೀ, ಗೃಹಸ್ಥನಾಗಲೀ ಯಾರೇ ಆದರೂ ಆ ಮಹಾ ಸದ್ಗುರುವಿನ ಅನುಗ್ರಹಾಕಾಂಕ್ಷಿಗಳು ಈ ಸದ್ಗುರು ಅಷ್ಟಕವನ್ನು ಶ್ರದ್ಧೆಯಿಂದ ಉಚ್ಚರಿಸುವಂತಹಾ ಪುಣ್ಯ ಪುರುಷರು ಆ ಗುರುವರ್ಯರು ಭೋಧಿಸುವ "ತತ್ವಮಸಿ" "ಅಹಂ ಬ್ರಹ್ಮಾಸ್ಮಿ" ಎಂಬಿತ್ಯಾದಿ ಮಹಾ

ವಾಕ್ಯಗಳ ಸಾರ ಸರ್ವಸ್ವವನ್ನು ಅರಿತುಕೊಳ್ಳಲು ಮನಸ್ಸು ತೊಡಗಿಸಿದರೆ ಆತನಿಗೆ ಶ್ರೇಷ್ಠವಾದ ಬ್ರಹ್ಮಾನಂದ ಸ್ವರೂಪದ ಆನಂದಾನುಭವವಾಗುವುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಗುರ್ವಷ್ಟಕಂ ಸಂಪೂರ್ಣಂ ॥

## 2.4 ಸಪ್ತ ಶ್ಲೋಕೀ ಆಚಾರ್ಯ ಪರಂಪರಾ ಸ್ತುತಿ

**ಶಂಕರಂ ಶಂಕರಾಚಾರ್ಯಂ ಕೇಶವಂ ಬಾದರಾಯಣಂ । ಸೂತ್ರಭಾಷ್ಯಕೃತೌ ವಂದೇ ಭಗವಂತೌ ಪುನಃ ಪುನಃ ॥1॥**

ಭಾವಾರ್ಥ - ಸಾಕ್ಷಾತ್ ಭಗವಾನ್ ಶಂಕರನೇ ಆಗಿರುವ ಶ್ರೀ ಆದಿ ಶಂಕರ ಭಗವತ್ಪಾದರನ್ನೂ, ಸಾಕ್ಷಾತ್ ಕೇಶವನೇ ಆಗಿರುವ ಬಾದರಾಯಣ ವ್ಯಾಸಮಹರ್ಷಿಗಳವರನ್ನೂ ಸ್ಮರಿಸುತ್ತಾ, ಬ್ರಹ್ಮಸೂತ್ರವನ್ನು ರಚಿಸಿ ಅದಕ್ಕೆ ಭಾಷ್ಯವನ್ನು ಬರೆದಂತಹಾ ಈ ಈರ್ವರು ಭಗವಾನ್ ಸ್ವರೂಪಿಗಳಿಗೆ ಶಿರಸಾ ನಮಸ್ಕರಿಸುವೆ.

**ಶೃತಿಸ್ಮೃತಿ ಪುರಾಣಾಂ ಆಲಯಂ ಕರುಣಾಲಯಂ । ನಮಾಮಿ ಭಗವತ್ಪಾದಂ ಶಂಕರಂ ಲೋಕಶಂಕರಂ ॥2॥**

ಭಾವಾರ್ಥ - ವೇದ, ಸ್ಮೃತಿ, ಪುರಾಣಗಳಿಗೆ ಆಶ್ರಯತಾಣವಾಗಿರುವ, ಕರುಣೆಯ ನೆಲೆಯಾಗಿರುವ, ವಿಶ್ವಕ್ಕೆಲ್ಲಾ ಸುಖವನ್ನು ಉಂಟು ಮಾಡುವ ಸಾಕ್ಷಾತ್ ಶಂಕರ ಸ್ವರೂಪೀ ಶ್ರೀ ಶಂಕರ ಭಗವತ್ಪಾದಾಚಾರ್ಯರಿಗೆ ನಮಸ್ಕರಿಸುವೆ.

**ಸೂತ್ರಭಾಷ್ಯ ಪ್ರಣೇತಾರೌ ವೇದಾಂತಾಬ್ಜ ಪ್ರಭಾಕರೌ । ವಂದೇ ಪರಸ್ಪರಾತ್ಮಾನೌ ಬಾದರಾಯಣ ಶಂಕರೌ ॥3॥**

ಭಾವಾರ್ಥ - ಶಾರೀರಿಕಸೂತ್ರಗಳನ್ನು ವಿರಚಿಸಿ, ಅವುಗಳಿಗೆ ಭಾಷ್ಯವನ್ನು ಬರೆದು, ವೇದಾಂತವೆಂಬ ಕಮಲಕ್ಕೆ ಸೂರ್ಯನೋಪಾದಿಯವರೂ ಆಗಿರುವ ಪರಸ್ಪರ ಆತ್ಮ

ಸ್ವರೂಪರೂ ಆಗಿರುವ, ಭಗವಾನ್ ಶ್ರೀ ಬಾದರಾಯಣ ಹಾಗೂ ಶ್ರೀಶಂಕರ ಭಗವತ್ಪಾದಾಚಾರ್ಯರೀರ್ವರಿಗೂ ನಾನು ಭಕ್ತಿ ಪುರಸ್ಸರವಾಗಿ ನಮಸ್ಕರಿಸುವೆ.

**ಸದಾಶಿವ ಸಮಾರಂಭಾಂ ಶಂಕರಾಚಾರ್ಯ ಮಧ್ಯಮಾಂ । ಅಸ್ಮದಾಚಾರ್ಯ ಪರ್ಯಂತಾಂ ವಂದೇ ಗುರು ಪರಂಪರಾಂ ॥4॥**

ಭಾವಾರ್ಥ - ಭಗವಂತನಾದ ಶಂಕರನಿಂದ ಆರಂಭಗೊಂಡು ಆದಿ ಜಗದ್ಗುರು ಶ್ರೀಶಂಕರಾಚಾರ್ಯರನ್ನು ಮಧ್ಯದಲ್ಲಿ ಇರಿಸಿಕೊಂಡು ನಮ್ಮ ಈಗಿನ ಶ್ರೀ ಶ್ರೀ ಗುರುವರ್ಯರ ತನಕ ಅವಿಚ್ಛಿನ್ನವಾಗಿ ಸಾಗಿ ಬಂದಿರುವ ಸಮಸ್ತ ಗುರು ಪರಂಪರೆಯನ್ನು ನಾನು ಭಕ್ತಿ ಪುರಸ್ಸರವಾಗಿ ನಮಸ್ಕರಿಸುವೆ.

**ವಂದೇಽಹಂ ಭಗವತ್ಪಾದಂ ಗುರುಂ ಶಂಕರಮವ್ಯಯಂ । ಯಮಾಶ್ರಿತ್ಯ ಜಗತ್ಸರ್ವಂ ಲಭತೇ ಶಾಂತಿಮುತ್ತಮಾಂ ॥5॥**

ಭಾವಾರ್ಥ - ಯಾರನ್ನು ಆಶ್ರಯಿಸಿ ಪೂರ್ಣ ಪ್ರಪಂಚವು ಉತ್ಕೃಷ್ಟವಾದ ಶಾಂತಿಯನ್ನು ಪಡೆಯುವುದೋ, ಅಂಥಾ ಕಾಲಾತೀತರಾದ ಶ್ರೀಶಂಕರ ಭಗವತ್ಪಾದ ಗುರು ಪರಂಪರೆಯನ್ನು ನಾನು ಭಕ್ತಿ ಪುರಸ್ಸರವಾಗಿ ನಮಸ್ಕರಿಸುವೆ.

**ಶಾಸ್ತ್ರಂ ಶಾರೀರಮೀಮಾಂಸಾ ದೇವಸ್ತು ಪರಮೇಶ್ವರಃ । ಆಚಾರ್ಯಾಃ ಶಂಕರಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ ॥6॥**

ಭಾವಾರ್ಥ - ನನಗೆ ಶಾಸ್ತ್ರವೆಂದರೆ ಶಾರೀರಮೀಮಾಂಸೆಯಾಗಿದೆ. ದೇವರೆಂದರೆ ಸಾಕ್ಷಾತ್ ಪರಮೇಶ್ವರನೇ ಆಗಿರುವನು. ಆಚಾರ್ಯರೆಂದರೆ ಸಾಕ್ಷಾತ್ ಶ್ರೀ ಶಂಕರಾಚಾರ್ಯರೇ ಆಗಿರುವರು. ನನ್ನ ಜನ್ಮ ಜನ್ಮಗಳಲ್ಲಿಯೂ ಶ್ರೀಶಂಕರಾಚಾರ್ಯಾದಿ ಅವಿಚ್ಛಿನ್ನ ಗುರುಪರಂಪರೆಯೇ ನನಗೆ ಗುರುಗಳಾಗಿ ದೊರಕಲಿ.

**ಶಂಖಾರೂಪೇಣ ಮಚ್ಚಿತ್ತಂ ಪಂಕೀಕೃತಮಭೂದ್ಯಯಾ । ಕಿಂಕರೀ ಯಸ್ಯ ಸಾ ಮಾಯಾ ಶಂಕರಾಚಾರ್ಯಮಾಶ್ರಯೇ ॥7॥**

ಭಾವಾರ್ಥ - ಸಂಶಯಸ್ವರೂಪಿಣಿಯಾಗಿರುವ ಮಾಯೆಯ ಕಾರಣದಿಂದ ನನ್ನ ಚಿತ್ತವು ಮಲಿನಗೊಂಡಿತ್ತು. ಅಂತಹಾ ಆ ಮಾಯೆಯು ಯಾರಿಗೆ ದಾಸಿಯೋ ಅಂತಹಾ ಶ್ರೀಶಂಕರ ಭಗವತ್ಪಾದ ಪರಂಪರೆಯನ್ನು ನಾನು ಆಶ್ರಯಿಸುತ್ತೇನೆ.

॥ ಇತಿ ಸಪ್ತ ಶ್ಲೋಕೀ ಆಚಾರ್ಯ ಪರಂಪರಾ ಸ್ತುತಿ ಸಂಪೂರ್ಣಂ ॥

## 2.5 ಯತಿ ಪಂಚಕ

**ವೇದಾಂತವಾಕ್ಯೇಷು ಸದಾ ರಮಂತಃ । ಭಿಕ್ಷಾನ್ನಮಾತ್ರೇಣ ಚ ತುಷ್ಟಿಮಂತಃ ॥**
**ಅಶೋಕವಂತಃಕರುಣೈಕವಂತಃ । ಕೌಪೀನವಂತಃ ಖಲು ಭಾಗ್ಯವಂತಃ ॥1॥**

ಭಾವಾರ್ಥ - ವೇದಾಂತಗಳೆಂದು ಪ್ರಸಿದ್ಧಿಪಡೆದಿರುವ ಉಪನಿಷತ್ತುಗಳ ವಾಕ್ಯಗಳ ತಾತ್ಪರ್ಯವನ್ನೂ ಶಕ್ಯಾರ್ಥವನ್ನೂ ಸದಾಚಿಂತಿಸುತ್ತಾ ಅದರಿಂದಲೇ ಮುದಗೊಳ್ಳುತ್ತಾ ಕೇವಲ ಭಿಕ್ಷಾನ್ನದಿಂದಲೇ ತೃಪ್ತಿಪಟ್ಟುಗೊಂಡು ದುಃಖರಹಿತರಾಗಿಯೂ ದಯಾಮಯಿಗಳೂ ಆಗಿರುವಂತಹಾ ಕೌಪೀನಧಾರಿಗಳೇ ನಿಜವಾಗಿಯೂ ಧನ್ಯರು.

**ಮೂಲಂತರೋಃ ಕೇವಲಮಾಶ್ರಯಂತಃ । ಪಾಣಿದ್ವಯೇ ಭೋಕ್ತುಮಮತ್ರಯಂತಃ ॥**
**ಕಂಥಾಮಪಿ ಸ್ತ್ರೀಮಿವ ಕುತ್ಸಯಂತಃ । ಕೌಪೀನವಂತಃ ಖಲು ಭಾಗ್ಯವಂತಃ ॥2॥**

ಭಾವಾರ್ಥ - ಮರಗಿಡಗಳ ಅಡಿಯಲ್ಲಿ ವಾಸಿಸುತ್ತಾ ತಮ್ಮ ಎರಡೂ ಹಸ್ತಗಳನ್ನೇ ಊಟದಪಾತ್ರೆಯನ್ನಾಗಿ ಉಪಯೋಗಿಸುತ್ತಾ ದೊರಕಿದ ಸ್ತ್ರೀಸುಖವನ್ನು ತೊರೆಯುವುದರೊಂದಿಗೆ ಹಾಸುಗೆಯನ್ನು ಅನಾದರಿಸುವ ಕೌಪೀನಧಾರಿಗಳೇ ನಿಜವಾಗಿಯೂ ಧನ್ಯರು.

**ದೇಹಾಭಿಮಾನಂ ಸುಪರಿತ್ಯಜಂತಃ । ಆತ್ಮಾನಮಾತ್ಮನ್ಯವಲೋಕಯಂತಃ ॥**
**ಅಹರ್ನಿಶಂ ಬ್ರಹ್ಮಣಿ ಯೇ ರಮಂತಃ । ಕೌಪೀನವಂತಃ ಖಲು ಭಾಗ್ಯವಂತಃ ॥3॥**

ಭಾವಾರ್ಥ - ಶಾರೀರಿಕ ಮೋಹವನ್ನು ದೂರೀಕರಿಸುತ್ತಾ ತಮ್ಮಲ್ಲಿಯೇ ತಮ್ಮಾತ್ಮ ಸ್ವರೂಪವನ್ನು ಕಾಣುತ್ತಾ ಅಹರ್ನಿಶಿ ಪರಬ್ರಹ್ಮಚಿಂತನೆಯಲ್ಲಿಯೇ ಸಂತಸಪಡುತ್ತಾ ಇರುವ ಕೌಪೀನಧಾರಿಗಳೇ ನಿಜವಾಗಿಯೂ ಧನ್ಯರು.

**ಸ್ವಾನಂದಭಾವೇ ಪರಿತುಷ್ಟಿಮಂತಃ । ಸುಶಾಂತಸರ್ವೇಂದ್ರಿಯವೃತ್ತಿಮಂತಃ ॥**
**ನಾಂತಂ ನ ಮಧ್ಯಂ ನ ಬಹಿಃ ಸ್ಮರಂತಃ । ಕೌಪೀನವಂತಃ ಖಲು ಭಾಗ್ಯವಂತಃ ॥4॥**

ಭಾವಾರ್ಥ - ಆತ್ಮಾನಂದ ಭಾವದಲ್ಲಿಯೇ ಮುದಗೊಳ್ಳುತ್ತಾ, ಸಮಸ್ತ ಇಂದ್ರಿಯಗಳ ಕಾರ್ಯಗಳನ್ನು ತಮ್ಮಲ್ಲಿಯೇ ತೃಪ್ತಿಗೊಳಿಸುತ್ತಾ ಒಳಗೂ, ಹೊರಗೂ, ನಡುವೆಯೂ, ಎಲ್ಲೆಡೆಗಳಲ್ಲಿಯೂ ಅನ್ಯ ಯಾವುದರನ್ನೂ ಸ್ಮರಣೆಮಾಡದೆ ಇರುವ ಕೌಪೀನಧಾರಿಗಳೇ ನಿಜವಾಗಿಯೂ ಧನ್ಯರು.

**ಪಂಚಾಕ್ಷರಂ ಪಾವನಮುಚ್ಚರಂತಃ । ಪತಿಂ ಪಶೂನಂ ಹೃದಿ ಭಾವಯಂತಃ ॥**
**ಭಿಕ್ಷಾಶನಾ ದಿಕ್ಷು ಪರಿಭ್ರಮಂತಃ । ಕೌಪೀನವಂತಃ ಖಲು ಭಾಗ್ಯವಂತಃ ॥5॥**

ಭಾವಾರ್ಥ - ಪರಮಪಾವನವಾಗಿರುವ ನಮಃಶಿವಾಯ ಎನ್ನುವ ಶಿವಪಂಚಾಕ್ಷರೀ ಮಂತ್ರವನ್ನು ಅನವರತವೂ ಜಪಿಸುತ್ತಾ ಮನಸ್ಸಿನಲ್ಲಿಯೇ ನಿರಂತರ ಆ ಪಶುಪತಿಯನ್ನೇ ಧ್ಯಾನಿಸುತ್ತಾ ಕೇವಲ ಭಿಕ್ಷಾನ್ನದಿಂದಲೇ ಜೀವಧಾರಣೆಮಾಡುತ್ತಾ ಧರ್ಮಪ್ರಸಾರ ಹಾಗೂ ಧರ್ಮರಕ್ಷಣೆಮಾಡುತ್ತಾ ದೇಶ ಸಂಚಾರಮಾಡುತ್ತಿರುವ ಕೌಪೀನಧಾರಿಗಳೇ ನಿಜವಾಗಿಯೂ ಧನ್ಯರು. ಅವರೇ ಭಾಗ್ಯಶಾಲಿಗಳು. ಅವರೇ ಪುಣ್ಯವಂತರು.

॥ ಇತಿ ಯತಿ ಪಂಚಕಂ ಸಂಪೂರ್ಣಂ ॥

## 2.6 ತೋಟಕಾಷ್ಟಕಂ

**ವಿದಿತಾಖಿಲಶಾಸ್ತ್ರಸುಧಾಜಲಧೇ । ಮಹಿತೋಪನಿಷತ್ಕಥಿತಾರ್ಥನಿಧೇ ॥ ಹೃದಯೇ ಕಲಯೇ ವಿಮಲಂ ಚರಣಂ । ಭವ ಶಂಕರ ದೇಶಿಕ ಮೇ ಶರಣಂ ॥1॥**

ಭಾವಾರ್ಥ - ಸಮಸ್ತ ವೇದಶಾಸ್ತ್ರಗಳಿಗೆ ಅಮೃತಮಯಿ ಸಾಗರದಂತಿರುವ ಸದ್ಗುರುವೇ! ತಾವು ವಿಖ್ಯಾತಿ ಹೊಂದಿರುವ ವೇದೋಪನಿಷತ್ತುಗಳ ಅರ್ಥವನ್ನು ಎಲ್ಲರಿಗೂ ತಿಳಿಸಿ ಕೊಟ್ಟವರು. ತಮ್ಮ ಪವಿತ್ರ ಪಾದಗಳನ್ನು ನನ್ನ ಹೃತ್ಕಮಲದಲ್ಲಿ ಧರಿಸುವೆನು. ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ಕರುಣಾವರುಣಾಲಯ ಪಾಲಯ ಮಾಂ । ಭವಸಾಗರದುಃಖವಿದೂನಹೃದಂ ॥**
**ರಚಯಾಖಿಲದರ್ಶನ ತತ್ವಮಿದಂ । ಭವ ಶಂಕರ ದೇಶಿಕ ಮೇ ಶರಣಂ ॥2॥**

ಭಾವಾರ್ಥ - ದಯಾಸಾಗರರಾಗಿರುವ ಸದ್ಗುರುವೇ! ನಾನು ಸಂಸಾರಸಾಗರದ ಕೊರಗಿನಿಂದ ತಬ್ಬಿಬ್ಬಾಗಿರುವ ಹೃದಯವುಳ್ಳವಾನಾಗಿರುವೆನು. ನೀವಾದರೋ ಸಕಲ ತತ್ವಗಳನ್ನೂ ಅರಿತವರು. ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ಭವತಾ ಜನತಾ ಸುಖಿತಾ ಭವಿತಾ । ನಿಜಭೋಧ ವಿಚಾರಣ ಚಾರುಮತೇ ॥**
**ಕಲಯೇಶ್ವರ ಜೀವವಿವೇಕಮಿದಂ । ಭವ ಶಂಕರ ದೇಶಿಕ ಮೇ ಶರಣಂ ॥3॥**

ಭಾವಾರ್ಥ - ಅಜ್ಞಾನವನ್ನು ನಿವಾರಿಸಿ ಶುಭವನ್ನು ನೀಡುವ ಗುಣವುಳ್ಳ ಸದ್ಗುರುವೇ! ತಮ್ಮ ನೈಜವಾದ ಜ್ಞಾನದ ಭೋಧನೆಯನ್ನು ಕೇಳಿ ಮನನ ಮಾಡಿಕೊಳ್ಳುವುದರಿಂದ ಜನರು ಸುಖಿಗಳಾಗುವರು. ಈಶ-ಜೀವರ ಏಕತ್ವವನ್ನು ನನಗೆ ತಿಳಿಸಿಕೊಡುವವರಾಗಿ ಗುರುವೇ. ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ಭವ ಏವ ಭವಾನಿತಿ ಮೇ ನಿತರಾಂ । ಸಮಜಾಯತ ಚೇತಸಿ ಕೌತುಕಿತಾ ॥ ಮಮ ವಾರಯ ಮೋಹ ಮಹಾಜಲಧಿಂ । ಭವ ಶಂಕರ ದೇಶಿಕ ಮೇ ಶರಣಂ ॥4॥**

ಭಾವಾರ್ಥ - ತಾವು ಶಿವನೇ ಎಂಬುದು ಖಚಿತವಾಗಿ ನನಗೆ ಅರಿವಾಗಿ ಅತ್ಯಂತ ಮುದಗೊಂಡಿರುವೆನು. ನನ್ನಲ್ಲಿನ ಭ್ರಾಂತಿಯನ್ನು ಹೋಗಲಾಡಿಸಿ ಗುರುವೇ. ನನ್ನ

ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ಸುಕೃತೇಧಿಕೃತೇ ಬಹುಧಾ ಭವತೋ । ಭವಿತಾ ಪದದರ್ಶನಲಾಲಸತಾ ॥**
**ಅತಿದೀನಮಿಮಂ ಪರಿಪಾಲಯ ಮಾಂ । ಭವ ಶಂಕರ ದೇಶಿಕ ಮೇ ಶರಣಂ ॥5॥**

ಭಾವಾರ್ಥ - ಶ್ರೇಷ್ಠವಾಗಿರುವ ಉತ್ತಮ ಪುಣ್ಯಕಾರ್ಯಗಳನ್ನು ಮಾಡಿದುದರ ಸಲುವಾಗಿ ನನಗೆ ತಮ್ಮ ಪಾದ ದರ್ಶನ ಮಾಡಬೇಕೆಂಬ ಸದ್ಬುದ್ಧಿಯುಂಟಾಗಿದೆ. ಅತಿ ದುಃಖಿತನಾಗಿರುವ ನನ್ನನ್ನು ಪರಿಪಾಲಿಸಿ ಸದ್ಗುರುವೇ! ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ಜಗತೀಮವತುಂ ಕಲಿತಾಕೃತಯೋ । ವಿಚರಂತಿ ಮಹಾಮಹಸಚ್ಛಲತಃ ॥**
**ಅಹಿಮಾಂಶುರಿವಾತ್ರ ವಿಭಾಸಿ ಪುರೋ । ಭವ ಶಂಕರ ದೇಶಿಕ ಮೇ ಶರಣಂ ॥6॥**

ಭಾವಾರ್ಥ - ಜಗತ್ತನ್ನು ಸಂರಕ್ಷಿಸಲು ಶ್ರೇಷ್ಠಪುರುಷರು ಮಾನವ ಜನ್ಮವೆತ್ತಿ ಈ ಭುವಿಯಲ್ಲಿ ಸಂಚರಿಸುತ್ತಿರುವರು. ಅಂಥಹವರಲ್ಲಿ ಸೂರ್ಯನಂತೆ ನನ್ನೆದುರಿಗೆ ತಾವಿರುವಿರಿ. ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ಗುರುಪುಂಗವ ಪುಂಗವಕೇತನ ತೇ । ಸಮತಾಮಯತಾಂ ನ ಹಿ ಕೋಽಪಿ ಸುಧೀಃ ॥**
**ಶರಣಾಗತವತ್ಸಲ ತತ್ವನಿಧೇ । ಭವ ಶಂಕರ ದೇಶಿಕ ಮೇ ಶರಣಂ ॥7॥**

ಭಾವಾರ್ಥ - ಹೇ ಗುರುಶ್ರೇಷ್ಠರೇ! ಪರಮಪೂಜ್ಯರೇ! ಶ್ರೇಷ್ಠವಾಗಿರುವ ತೇಜಸ್ಸುಳ್ಳ ಶಿವನೇ ತಾವಾಗಿರುವಿರಿ. ಉತ್ತಮವಾಗಿರುವ ತಿಳುವಳಿಕೆಯುಳ್ಳ ಗುರುವರ್ಯಾ, ತಮ್ಮ ಸಮಾನರು ಅನ್ಯರಾರೂ ಇಲ್ಲ. ತಾವು ಶರಣು ಹೊಗುವವರಿಗೆ ಆಶ್ರಯವನ್ನು ನೀಡುವವರು. ತತ್ವಸಂಪದವುಳ್ಳವರು. ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

**ವಿದಿತಾ ನ ಮಯಾ ವಿಶದೈಕಕಲಾ । ನ ಚ ಕಿಂಚನ ಕಾಂಚನ ಮಸ್ತಿಗುರೋ ॥**
**ದ್ರುತಮೇವ ವಿಧೇಹಿ ಕೃಪಾಂ ಸಹಜಾಂ । ಭವ ಶಂಕರ ದೇಶಿಕ ಮೇ ಶರಣಂ ॥8॥**

ಭಾವಾರ್ಥ - ಸದ್ಗುರುವೇ!ನನಗೆ ಯಾವ ವಿದ್ಯೆಗಳೂ ತಿಳಿದಿರುವುದಿಲ್ಲ. ನನ್ನಲ್ಲಿ ಯಾವ ಸಂಪದವೂ ಇಲ್ಲ. ಅತಿಶೀಘ್ರವಾಗಿ ನನ್ನ ಮೇಲೆ ಸಹೃದಯ ಸಾಧುಸ್ವಭಾವದ ಕೃಪೆಯನ್ನು ಕರುಣಿಸಿರಿ. ನನ್ನ ಮೇಲೆ ಕೃಪೆಯಿರಿಸಿ ತಮ್ಮ ಚರಣಾರವಿಂದಗಳಲ್ಲಿ ಆಶ್ರಯವನ್ನು ದಯಪಾಲಿಸುವವರಾಗಿರಿ.

॥ ಇತಿ ತೋಟಕಾಷ್ಟಕಂ ಸಂಪೂರ್ಣಂ ॥

## 2.7 ಶ್ರೀ ವೇದವ್ಯಾಸಾಷ್ಟಕಂ

**ಕಲಿಮಲಾಸ್ತ ವಿವೇಕ ದಿವಾಕರಂ । ಸಮವಲೋಕ್ಯ ತಮೋವಲಿತಂ ಜನಂ ॥**
**ಕರುಣಯಾ ಭುವಿದರ್ಶಿತ ವಿಗ್ರಹಂ । ಮುನಿವರಂ ತಮಹಂ ಸತತಂ ಭಜೇ ॥1॥**

ಭಾವಾರ್ಥ - ಯುಗಗಳ ಪೈಕಿ ನಾಲ್ಕನೆಯದಾದ ಕಲಿಯುಗದಲ್ಲಿ ಪಾಪಕೂಪದಲ್ಲಿ ಮುಳುಗಿರುವ ಪ್ರಜಾಜನರನ್ನು ವಿವೇಕವೆಂಬ ಬೆಳಕಿನ ಕಿರಣಗಳನ್ನು ಹೊಂದಿದ ವೇದವ್ಯಾಸ ಮುನಿಶ್ರೇಷ್ಠರು ಗಮನಿಸಿ ದಯಾಭರಿತರಾಗಿ ಭುವಿಯಲ್ಲಿ ಅವತರಿಸಿದರು. ಅಂತಹಾ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ಭರತವಂಶ ಸಮುದ್ಧರಣೇಚ್ಛಯಾ । ಸ್ವಜನನೀವಚಸಾ ಪರಿನೋದಿತಃ ॥**
**ಅಜನಯತ್ತನಯ ತ್ರಿತಯಂ ಪ್ರಭುರ್- । ಮುನಿವರಂ ತಮಹಂ ಸತತಂ ಭಜೇ ॥2॥**

ಭಾವಾರ್ಥ - ತನ್ನ ಮಾತೆಯ ಇಚ್ಛೆಯನ್ನು ಗೌರವಿಸಿ ಅದರಿಂದ ಪ್ರಭಾವಿತನಾಗಿ ಭರತ ವಂಶವನ್ನು ಉದ್ಧರಿಸುವ ಬಯಕೆಯನ್ನು ಹೊಂದಿ ಮೂರು ಮಂದಿ ಮಕ್ಕಳ ಜನನಕ್ಕೆ ಕಾರಣರಾದ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ಮತಿಅಬಲಾದಿ ನಿರೀಕ್ಷ್ಯಕಲೌ ನೃಣಾಂ । ಲಘುತರಂ ಕೃಪಯಾ ನಿಗಮಾಂಬುಧೇಃ ॥**
**ಸಮಕರೋದಿಹ ಭಾಗಮನೇಕಥಾ । ಮುನಿವರಂ ತಮಹಂ ಸತತಂ ಭಜೇ ॥3॥**

ಭಾವಾರ್ಥ - ಕಲಿಯುಗದಲ್ಲಿನ ಮನುಜರ ಕ್ಷೀಣವಾಗಿರುವ ಬುದ್ಧಿ, ಶಕ್ತಿ ಇತ್ಯಾದಿಗಳನ್ನು ಕಂಡು ದಯಾಪೂರಿತನಾಗಿ ವೇದವೆಂಬ ಮಹಾಸಾಗರದಲ್ಲಿ ಉತ್ತಮವಾಗಿ ಹಲವು ವಿಭಾಗಗಳನ್ನು ಅವರು ಮಾಡಿದರು. ಅಂತಹಾ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ಸಕಲಧರ್ಮನಿರೂಪಣಸಾಗರಂ । ವಿವಿಧ ಚಿತ್ರಕಥಾ ಸಮಲಂಕೃತಂ ॥ ವ್ಯರಚಮಚ್ಚ ಪುರಾಣ ಕದಂಬಕಂ । ಮುನಿವರಂ ತಮಹಂ ಸತತಂ ಭಜೇ ॥4॥**

ಭಾವಾರ್ಥ - ಸಮಸ್ತ ಧರ್ಮಗಳ ದೃಷ್ಟಾಂತಸಾಗರವೋ ಎನ್ನುವಂತೆ ನಾನಾವಿಧದ ಕಥೆಗಳಿಂದ ಅಲಂಕೃತವಾದ ಪುರಾಣ ಗುಚ್ಛವನ್ನು ಅವರು ವಿಶೇಷವಗಿ ವಿರಚಿಸಿದರು. ಅಂತಹಾ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ಶೃತಿವಿರೋಧ ಸಮನ್ವಯ ದರ್ಪಣಂ । ನಿಖಿಲವಾದಿಮತಾಂಧ ವಿದಾರಣಂ ॥**
**ಗ್ರಥಿತವಾನಪಿ ಸೂತ್ರಸಮೂಹಕಂ । ಮುನಿವರಂ ತಮಹಂ ಸತತಂ ಭಜೇ ॥5॥**

ಭಾವಾರ್ಥ - ವೇದಗಳಲ್ಲಿರುವ ವಿರೋದಾಭಾಸಗಳನ್ನು ಸಮನ್ವಯಗೊಳಿಸುವ ಕನ್ನಡಿಯಂತಿರುವ ನಿರಂತರವೂ ಮತಾಂಧರ ಮತಾಂಧತೆಯನ್ನು ಅಳಿಸಿ ಹಾಕುವ ಬ್ರಹ್ಮಸೂತ್ರ ಸಮೂಹವನ್ನು ರಚಿಸಿದ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ಯದನುಭಾವವಶೇನ ದಿವಂ ಗತಃ । ಸಮಧಿಗಮ್ಯ ಮಹಾಸ್ತ್ರ ಸಮುಚ್ಚಯಂ ॥**
**ಕುರುಚಮೂಮಜಯದ್ವಿಜಯೊದ್ರುತಂ । ಮುನಿವರಂ ತಮಹಂ ಸತತಂ ಭಜೇ ॥6॥**

ಭಾವಾರ್ಥ - ಯಾವುದು ಆತ್ಮಾನುಭವ ವಶವರ್ತಿಯಾಗಿ ಸ್ವರ್ಗವನ್ನು ತಲಪಿತೋ ಅಂತಹಾ ಮಹಾಸ್ತ್ರಸಮೂಹವನ್ನು ಉತ್ತಮವಾಗಿ ಅಭ್ಯಸಿಸಿ ಬೇಗನೆ ಗೆದ್ದು ವಿಜಯಶಾಲಿಯಾದ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ಸಮರವೃತ್ತವಿಬೋಧಸಮೀಹಯಾ । ಕುರುವರೇಣ ಮುದಾಕೃತಯಾಚನಃ ॥**
**ಸಪದಿಸೂತಮದಾದಮಲೇಕ್ಷಣಂ । ಮುನಿವರಂ ತಮಹಂ ಸತತಂ ಭಜೇ ॥7॥**

ಭಾವಾರ್ಥ - ಕುರುಕ್ಷೇತ್ರದ ಸಮರ ವೃತ್ತಾಂತವನ್ನು ಅರಿತುಕೊಳ್ಳುವ ಇಚ್ಛೆಯಿಂದ ಕುರುಕುಲಶ್ರೇಷ್ಠ ಧೃತರಾಷ್ಟ್ರನಿಂದ ವಾತ್ಸಲ್ಯಪೂರ್ವಕವಾಗಿ ಕೇಳಿ ವ್ಯವಸ್ಥೆಯನ್ನು ಕಲ್ಪಿಸಿಕೊಂಡವರೂ, ಸೂತನಿಗೆ ಕುಳಿತಲ್ಲಿಂದಲೇ ಕಾಳಗದ ದೃಶ್ಯ ಕಾಣುವ ದಿವ್ಯ ದೃಷ್ಟಿಯನ್ನು ಕರುಣಿಸಿದವರೂ ಆಗಿರುವ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ವನನಿವಾಸಪರೌ ಕುರುದಂಪತಿ । ಸುತಶುಚಾ ತಪಸಾ ಚ ವಿಕರ್ಷಿತೌ ॥**
**ಮೃತತನೂಜಗಣಂ ಸಮದರ್ಶಯನ್- । ಮುನಿವರಂ ತಮಹಂ ಸತತಂ ಭಜೇ ॥8॥**

ಭಾವಾರ್ಥ - ಮಕ್ಕಳ ವಿಯೋಗದಿಂದ ದುಃಖಭರಿತರಾಗಿ ಕಾನನದಲ್ಲಿ ವಾಸ ಮಾಡುವ ಇಚ್ಛೆಯುಳ್ಳವರಾಗಿ ತಪವನ್ನು ಮಾಡಲು ಸೆಳೆತವುಳ್ಳವರೂ ಆದ ಕುರುದಂಪತಿಗಳಿಗೆ ಅವರ ಮೃತಮಕ್ಕಳ ಗುಂಪನ್ನು ತೋರಿಸಿದ ಮಹಾಗುರು ಶ್ರೇಷ್ಠರನ್ನು ನಾನು ಸದಾ ಸ್ತುತಿಸುವೆನು.

**ವ್ಯಾಸಾಷ್ಟಕಮಿದಂ ಪುಣ್ಯಂ । ಬ್ರಹ್ಮಾನಂದೇನ ಕೀರ್ತಿತಂ ॥**
**ಯಃ ಪಠೇನ್ಮನುಜೋನ್ನಿತ್ಯಂ । ಸ ಭವೇಚ್ಛಾಸ್ತ್ರ ಪಾರಗಃ ॥9॥**

ಭಾವಾರ್ಥ - ಬ್ರಹ್ಮಾನಂದರಿಂದ ಹಾಡಲ್ಪಟ್ಟಿರುವ ಈ ವ್ಯಾಸಾಷ್ಟಕವನ್ನು ಯಾವ ಮಾನವರು ಪ್ರತಿದಿನವೂ ಪಠಿಸುವರೋ ಅವರು ಸರ್ವ ಶಾಸ್ತ್ರಪಾರಂಗತರಾಗುವರು.

॥ ಇತಿ ಶ್ರೀ ವೇದ ವ್ಯಾಸಾಷ್ಟಕಂ ಸಂಪೂರ್ಣಂ ॥

## 2.8 ಶ್ರೀಮದ್ರಾಮಚಂದ್ರಾಪುರ ಶ್ರೀ ಗುರ್ವಷ್ಟಕಂ

**[ವಸಂತತಿಲಕಾವೃತ್ತಂ]**

**ಶ್ರೀ ಕಾರಕ ಪ್ರಣವ ಚೈತ್ರಪಿಕಂ ಮಹಾಂತಂ । ಭೂತಾದಿನಾಥ ದಯಿತಾಸು ಹಿತಾರ್ಥವಂತಂ॥ ಶ್ರೀರಾಮಚಂದ್ರಪುರಭದ್ರ ಮಠಾಧಿವಾಸಂ । ಶ್ರೀರಾಘವೇಶ್ವರ ಗುರುಂ ಸತತಂ ಭಜಾಮಿ ॥1॥**

**ಶ್ರೀರಾಮಚಂದ್ರ ಮಹದರ್ಚನ ಚಿತ್ತಚಂದ್ರಂ । ಶ್ರೀರಾಮಚಂದ್ರ ಕರುಣಾರ್ಣವ ಯೋಗಚಂದ್ರಂ॥ ಶ್ರೀರಾಮಚಂದ್ರ ಪುರಭದ್ರ ಮಠಾಭ್ರಚಂದ್ರಂ । ಶ್ರೀರಾಮಚಂದ್ರ ಗುರುಪುಂಗವಮಾಶ್ರಯಾಮಿ ॥2॥**

**ಸ್ವಾತ್ಮ ಪ್ರಮಾಣ ಪರಯೋಗ ಕಲಾಸಮುದ್ರಂ । ಸ್ವಾತ್ಮಕ್ಷಮಾಭ್ಯುದಯ ಕಾಂತಿ ವಿಶೇಷಭದ್ರಂ॥ ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ । ಶ್ರೀರಾಘವೇಂದ್ರ ಗುರುಪುಂಗವಮಾಶ್ರಯಾಮಿ ॥3॥**

**ಗೋಕರ್ಣಮಂಡಲ ಮಹಾಜನ ಪೂಜ್ಯಮೇಕಂ । ಶ್ರೀ ಶಂಕರಾರ್ಯ ಭಗವತ್ಪದಸಕ್ತಚಿತ್ತಂ॥ ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ । ಶ್ರೀರಾಘವೇಶ್ವರ ಗುರುಂ ಸತತಂ ಭಜಾಮಿ ॥4॥**

**ವರ್ಣಾಶ್ರಮೋಚಿತ ಮಹಾಕರ ಪಾತ್ರದಂಡಂ । ವರ್ಣ ಪ್ರಮಾವಿಹಿತ ಮಂತ್ರ ಪರಾರ್ಥ ದಂಡಂ ॥ ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ । ಶ್ರೀರಾಮಚಂದ್ರ ಗುರುಪುಂಗವಮಾಶ್ರಯಾಮಿ ॥5॥**

**ನಾರಾಯಣ ಸ್ಮರಣಪೂರ್ವಕ ವಾಕ್ಪ್ರಸಾದಂ । ಪಾರಾಯಣ ಪ್ರಣತಲೋಕ ಜನಾರ್ಥವಾದಂ ॥ ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ । ಶ್ರೀರಾಘವೇಶ್ವರ ಗುರುಪುಂಗವಮಾಶ್ರಯಾಮಿ ॥6॥**

**ಶ್ರೀರ್ಮಧಕರ್ಮ ಮಹದಾಸನ ದೇಶಿಕೇಂದ್ರಂ । ಶ್ರೀಧರ್ಮರೂಪಮನುಯೋಗಿ ಜನೋತ್ತರೇಂದ್ರಂ ॥ ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ । ಶ್ರೀಸದ್ಗುರುಂ ಜಗದನಂತ ಹಿತೇಂದ್ರಮೀಡೆ ॥ 7॥**

**ಶ್ರೀರಾಮಚಂದ್ರ ಪರಿಸಕ್ತ ಹೃದಂಮಹಾಂತಂ । ಸ್ವಧ್ಯಾನನಿಷ್ಟ ಮನವದ್ಯಗುಣಾಭಿರಾಮಂ ॥ ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ । ಶ್ರೀಸದ್ಗುರುಂ ಜಗದನಂತ ಹಿತೇಂದ್ರಮೀಡೆ ॥8॥**

**ಇದಂ ಗುರ್ವಷ್ಟಕಂಪುಣ್ಯಂ ದುಸ್ಸಹಾರ್ತಿವಿನಾಶಕಂ । ಯಃಪಠೇತ್ ಶೃಣುಯಾತ್ ಭಕ್ತ್ಯಾ ಸಲಭೇತ್ ಸರ್ವಸಂಪದಃ ॥9॥**

ಭಾವಾರ್ಥ - ವಸಂತಕಾಲದ ಕೋಗಿಲೆಯ ಮಧುರ ಧ್ವನಿಯಂತೆ ಇಂಪಾದ ಸ್ವರದಲ್ಲಿ ಶುಭದಾಯಕ "ಓಂ"ಕಾರ ಮಂತ್ರವನ್ನು ಉಚ್ಚರಿಸುತ್ತಿರುವ ಮಹನೀಯರಾಗಿರುವ, ಜೀವಿಗಳ ಬಗೆಗೆ ಕರುಣೆಯನ್ನು ಹೊಂದಿರುವವರಾಗಿ ಅವರ ಹಿತವನ್ನು ಬಯಸುವ ಶ್ರೀರಾಮಚಂದ್ರಾಪುರ ಮಠದಲ್ಲಿ ನೆಲೆಯಾಗಿರುವ ಶ್ರೀ ರಾಘವೇಶ್ವರ ಗುರುಗಳನ್ನು ನಾನು ಎಡೆಬಿಡದೆ ಭಜಿಸುವೆ. ಶ್ರೀ ರಾಮಚಂದ್ರನ ಆರಾಧನೆಯಲ್ಲಿ ಮಘ್ನರಾಗಿ ಶ್ರೀರಾಮಚಂದ್ರನ ಕರುಣೆಗೆ ಪಾತ್ರವಾಗಿರುವ ಯೋಗ ಸಿಂಹಾಸೀನಾಧೀಶ ಶ್ರೀರಾಮಚಂದ್ರಾಪುರ ಮಠದಲ್ಲಿ ಚಂದ್ರನೋಪಾದಿಯಲ್ಲಿ ಶೋಭಿಸುತ್ತಿರುವ ಶ್ರೀರಾಮಚಂದ್ರ ಗುರುವರೇಣ್ಯರನ್ನು ನಾನು ಆಶ್ರಯಿಸುವೆ. ಆತ್ಮ ಜ್ಞಾನ, ಶಾಸ್ತ್ರ, ಯೋಗಗಳಿಗೆ ನಿದರ್ಶನರೂಪದ ವಿದ್ಯಾಸಗರ, ಆತ್ಮಜ್ಞಾನ, ಕ್ಷಮೆ, ಅಭ್ಯುದಯಗಳ ಮೇಲ್ಮೆಯ ನೆಲೆಯಾಗಿ ಶೋಭಿಸುತ್ತಾ ಶ್ರೀರಾಮಚಂದ್ರಾಪುರ ಮಠದಲ್ಲಿ ನೆಲೆಯಾಗಿರುವ ಶ್ರೀ ರಾಘವೇಶ್ವರ ಗುರುವರೇಣ್ಯರನ್ನು ನಾನು ಆಶ್ರಯಿಸುವೆ. ಗೋಕರ್ಣ ಮಹಾ ಮಂಡಲದ ಮಹಾಜನರ ಪೂಜನೀಯರಾಗಿ ಶ್ರೀ ಶಂಕರಾಚಾರ್ಯ ಭಗವತ್ಪಾದರ ಹಾದಿಯಲ್ಲಿ ಮಗ್ನರಾಗಿರುವ ಶ್ರೀರಾಮಚಂದ್ರಾಪುರ ಮಠವೇ ವಾಸಸ್ಥಳವಾಗಿರುವ ಶ್ರೀರಾಘವೇಶ್ವರ ಗುರುಗಳನ್ನು ನಾನು ನಿರಂತರ ಭಜಿಸುವೆ. ವರ್ಣಾಶ್ರಮಗಳಿಗೆ ತಕ್ಕುದಾದ ಶೇಷ್ಟವಾದ ಖನಿಯಾಗಿ ಧರ್ಮ ರಕ್ಷಾದಂಡವನ್ನು ಹೊಂದಿರುವ ವರ್ಣಾಶ್ರಮಗಳಿಗೆ ತಕ್ಕುದಾದ ಅಲೌಕಿಕ ಗುರಿಯ ಮಂತ್ರಗಳ ಅನುಷ್ಠಾನಿಸುತ್ತಿರುವ ಶ್ರೀರಾಮಚಂದ್ರ ಗುರುವರೇಣ್ಯರನ್ನು ನಾನು ಆಶ್ರಯಿಸುವೆ. ಶ್ರೀಮನ್ನಾರಾಯಣನ ಸ್ಮರಣ ಪೂರ್ವಕವಾಗಿ ಭಕ್ತಾದಿಗಳಿಗೆ ವಾಕ್ಪೂರ್ವಕ ಪ್ರಸಾದವನ್ನು ಅನುಗ್ರಹಿಸುತ್ತಾ ಲೋಕದ ಶಿಷ್ಯಜನ ಹಿತಕ್ಕಾಗಿ ವಿನೀತರಾಗಿ ಪಾರಾಯಣವನ್ನು ಮಾಡುತ್ತಾ ಶ್ರೀರಾಮಚಂದ್ರಾಪುರ ಮಠದಲ್ಲಿ ನೆಲೆಯಾಗಿರುವ ಶ್ರೀ ರಾಘವೇಶ್ವರ ಗುರುವರೇಣ್ಯರನ್ನು ನಾನು ಆಶ್ರಯಿಸುವೆ. ಆಚಾರ ವಿಚಾರಗಳ ಮಹಾಧರ್ಮಸಿಂಹಾಸನಾಧೀಶ್ವರರಾಗಿ ಉಪದೇಶಿಕರಾಗಿ ಶ್ರೀ ಧರ್ಮದ ರೂಪವೇ

ತಾನಾಗಿ ಯೋಗಿವರೇಣ್ಯರಲಿ ಶ್ರೇಷ್ಠರಾಗಿರುವ ಶ್ರೀರಾಮಚಂದ್ರಾಪುರ ಮಠದಲ್ಲಿ ನೆಲೆಯಾಗಿರುವ ಶ್ರೀ ಸದ್ಗುರುಗಳನ್ನು ನಾನು ಜಗದ ಹಿತಕ್ಕಾಗಿ ಸ್ಮರಿಸುವೆ. ಶ್ರೀರಾಮಚಂದ್ರನ ಆರಾಧನೆಯಲ್ಲಿ ಅಧಿಕ ಅಂತಃಕರಣಪೂರ್ವಕವಾಗಿ ತೊಡಗಿ ತಾನು ಧ್ಯಾನದಲ್ಲಿ ಮಘ್ನನಾಗಿರುವ ಮನೋಹರ ತೇಜೋವಂತನಾಗಿ ಶ್ರೀರಾಮಚಂದ್ರಾಪುರ ಮಠದಲ್ಲಿ ನೆಲೆಯಾಗಿರುವ ಶ್ರೀಸದ್ಗುರುಗಳನ್ನು ಜಗದ ಹಿತಕ್ಕಾಗಿ ನಾನು ಸ್ಮರಿಸುವೆ.

ಈ ಗುರು ಅಷ್ಟಕಗಳು ಪುಣ್ಯಮಯವಾಗಿದ್ದು ಜಗತ್ತಿನ ದುಃಖ ವಿನಾಶಕವಾಗಿದ್ದು ಯಾವಾತನು ಇವುಗಳನ್ನು ಭಕ್ತಿಯಿಂದ ಕೇಳುವನೋ, ಓದುವನೋ ಅಂತಹವನಿಗೆ ಸರ್ವ ಸಂಪದಗಳೂ ಲಭಿಸುತ್ತವೆ.

॥ ಇತಿ ಶ್ರೀಮದ್ರಾಮಚಂದ್ರಾಪುರ ಗುರ್ವಷ್ಟಕಂ ಸಂಪೂರ್ಣಂ ॥

## 2.9 ಶ್ರೀ ಶಂಕರಾಚಾರ್ಯ ಮಂಗಲಂ

**ಮಂಗಲಂ ಬ್ರಹ್ಮರೂಪಾಯ ಮಂಗಲಂ ಗುರು ರೂಪಿಣೇ । ಮಂಗಲಂ ತತ್ವಭೋಧಾಯ ಶಂಕರಾರ್ಯಾಯ ಮಂಗಲಂ ॥1॥**

ಭಾವಾರ್ಥ - ಬ್ರಹ್ಮ ಸ್ವರೂಪರೂ ಗುರುರೂಪರೂ ತತ್ವಭೋಧನಾಕಾರರೂ ಆಗಿರುವ ಶಂಕರಾಚಾರ್ಯ ಗುರುಗಳಿಗೆ ಮಂಗಲವಾಗಲಿ.

**ಮಂಗಲಂ ಶಿವರೂಪಾಯ ಮಂಗಲಂ ಶಂಕರಾಯ ಚ । ಶಿವಾರ್ಯಾಂಬಾ ತನೂಜಾಯ ಶಂಕರಾರ್ಯಾಯ ಮಂಗಲಂ ॥2॥**

ಭಾವಾರ್ಥ - ಸಾಕ್ಷಾತ್ ಶಿವ ಸ್ವರೂಪರೂ ಸುಖಪ್ರದಾತರೂ ಶಿವಾರ್ಯಾಂಬಾ ದಂಪತಿಗಳಸತ್ಪುತ್ರರೂ ಆಗಿರುವ ಶಂಕರಾಚಾರ್ಯ ಗುರುಗಳಿಗೆ ಮಂಗಲವಾಗಲಿ.

**ಮಂಗಲಂ ಸತ್ಯಭೋಧಾಯ ಮಂಗಲಂ ಸತ್ಯರೂಪಿಣೇ ।**
**ಅದ್ವೈತಾಚಾರ್ಯವರ್ಯಾಯ ಶಂಕರಾರ್ಯಾಯ ಮಂಗಲಂ ॥3॥**

ಭಾವಾರ್ಥ - ಸತ್ಯವನ್ನು ಭೋಧಿಸಿದವರೂ ಸತ್ಯರೂಪರೂ ಅದ್ವೈತಮತ ಸಂಸ್ಥಾಪನಾಚಾರ್ಯ ಶ್ರೇಷ್ಠರೂ ಆಗಿರುವ ಶಂಕರಾಚಾರ್ಯ ಗುರುಗಳಿಗೆ ಮಂಗಲವಾಗಲಿ.

**ಮಂಗಲಂ ವೇದವೇದ್ಯಾಯ ವೇದಜ್ಞಾಯ ಚ ಮಂಗಲಂ । ಮಂಗಲಂ ವೇದರೂಪಾಯ ಶಂಕರಾರ್ಯಾಯ ಮಂಗಲಂ ॥4॥**

ಭಾವಾರ್ಥ - ವೇದಗಳಿಂದ ತಿಳಿಯಲ್ಪಟ್ಟವರೂ ವೇದ ಪರಿಣಿತರೂ ವೇದಸ್ವರೂಪರೂ ಆಗಿರುವ ಶಂಕರಾಚಾರ್ಯ ಗುರುಗಳಿಗೆ ಮಂಗಲವಾಗಲಿ.

**ಮಂಗಲಂ ನಿಷ್ಪ್ರಪಂಚಾಯ ಮಂಗಲಂ ಮೋಕ್ಷರೂಪಿಣೇ । ಭಾಷ್ಯತ್ರಯಕೃತೇ ನಿತ್ಯಂಶಂಕರಾರ್ಯಾಯ ಮಂಗಲಂ ॥5॥**

ಭಾವಾರ್ಥ - ನಿಷ್ಪ್ರಪಂಚರೂ ಮೋಕ್ಷಪ್ರಧಾತರೂ ಭಾಷ್ಯತ್ರಯಗಳ ಕರ್ತೃವೂ ಆಗಿರುವ ಶಂಕರಾಚಾರ್ಯ ಗುರುಗಳಿಗೆ ನಿತ್ಯವೂ ಮಂಗಲವಾಗಲಿ.

**ಮಂಗಲಂ ಮಠನಿರ್ಮಾತ್ರೇ ಮಂಗಲಂ ಶಿಷ್ಯಭೋಧಿನೇ । ವಿಶ್ವೋದ್ಧಾರಾವತಾರಾಯ ಶಂಕರಾರ್ಯಾಯ ಮಂಗಲಂ ॥6॥**

ಭಾವಾರ್ಥ - ಚತುರಾಮ್ನಾಯ ಮಠ ಸಂಸ್ಥಾಪಕರೂ ಶಿಷ್ಯರಿಗೆ ಧರ್ಮ ಸೂಕ್ಷ್ಮಗಳ ಭೋಧಕರೂ ಆಗಿದ್ದ ವಿಶ್ವೋದ್ಧಾರಕ ಪರಮಗುರು ಶಂಕರಾಚಾರ್ಯರಿಗೆ ಮಂಗಲವಾಗಲಿ.

**ಸರ್ವಲೋಕ ಶರಣ್ಯಾಯ ಮಂಗಲಂ ಪರಮಾತ್ಮನೇ । ಮಂಗಲಂ ಗುರುವರೇಭ್ಯಃ ಸರ್ವ ಲೋಕಾಯ ಮಂಗಲಂ ॥7॥**

ಭಾವಾರ್ಥ - ಸಮಸ್ತ ಲೋಕವೂ ಶರಣು ಬರುವಂತಹಾ ಪರಮಾತ್ಮ ಸ್ವರೂಪೀ ಗುರುವರ್ಯರೇ, ನಿಮಗೆ ಮಂಗಲವಾಗಲಿ. ಆ ಮೂಲಕ ಸರ್ವ ಲೋಕಕ್ಕೆ ಮಂಗಲವಾಗಲಿ.

॥ ಇತಿ ಶ್ರೀ ಶಂಕರಾಚಾರ್ಯ ಮಂಗಲ ಸ್ತೋತ್ರಂ ಸಂಪೂರ್ಣಂ ॥

----- ****** -----

# 3 ಶ್ರೀ ಗಣೇಶ ಸ್ತೋತ್ರಗಳು

## 3.1 ಶ್ರೀ ಗಣೇಶ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃಸ್ಮರಾಮಿ ಗಣನಾಥಮನಾಥಬಂಧುಂ । ಸಿಂದೂರಪೂರ ಪರಿಶೋಭಿತ ಗಂಡಯುಗ್ಮಂ ॥ ಉದ್ದಂಡ ವಿಘ್ನ ಪರಿಖಂಡನ ಚಂಡದಂಡಂ । ಆಖಂಡಲಾದಿ ಸುರನಾಯಕವೃಂದ ವಂದ್ಯಂ ॥1॥**

ಭಾವಾರ್ಥ - ಸಿಂಧೂರ ಲೇಪನದಿಂದ ಹೊಳೆಯುತ್ತಲಿರುವ ಎರಡು ಕೆನ್ನೆಗಳುಳ್ಳವನಾದ, ಗುಂಪು ಅಡಚಣೆಗಳನ್ನು ನಿವಾರಿಸುವ ಭೀಕರ ದಂಡವನ್ನು ಹೊಂದಿರುವವನಾದ, ಇಂದ್ರಾದಿ ದೇವತೆಗಳ ನಾಯಕರ ಸಮೂಹದಿಂದ ನಮಸ್ಕರಿಸಲ್ಪಡುತ್ತಲಿರುವ ಅನಾಥರ ಬಂಧುವಾದ, ಗಣಗಳ ಅಧಿನಾಯಕನಾದ ಗಣಪತಿಯನ್ನು ನಾನು ಉಷಃಕಾಲದಲ್ಲಿ ಸ್ಮರಿಸುವೆ.

**ಪ್ರಾತರ್ನಮಾಮಿ ಚತುರಾನನ ವಂದ್ಯಮಾನಂ । ಇಚ್ಛಾನುಕೂಲಮಖಿಲಂ ಚ ವರಂ ದದಾನಂ ॥ ತಂ ತುಂದಿಲಂ ದ್ವಿರಸನಾಧಿಪ ಯಜ್ಞಸೂತ್ರಂ । ಪುತ್ರಂ ವಿಲಾಸ ಚತುರಂ ಶಿವಯೋಃ ಶಿವಾಯ ॥2॥**

ಭಾವಾರ್ಥ - ಚತುರ್ಮುಖಬ್ರಹ್ಮನಿಂದ ನಮಸ್ಕರಿಸಲ್ಪಡುತ್ತಿರುವವನಾದ, ಇಚ್ಛಾನುಕೂಲಿಯಾದ, ಎಲ್ಲವನ್ನೂ ಕರುಣಿಸುವ, ಲಂಬೋದರನಾದ, ಎರಡು ನಾಲಿಗೆಯ ಹಾವನ್ನು ಉಪವೀತವನ್ನಾಗಿ ಧರಿಸಿದವನಾದ ಶಿವಪಾರ್ವತೀ ತನಯನಾದ ಲೀಲಾಜಾಣನಾದ ಶ್ರೀಮಹಾಗಣಪತಿಗೆ ಮಂಗಲದಾಯಕ ಶುಭಫಲಕ್ಕಾಗಿ ಪ್ರಾತಃಕಾಲದಲ್ಲಿ ನಾನು ನಮಿಸುವೆ.

**ಪ್ರಾತರ್ಭಜಾಮ್ಯಭಯದಂ ಖಲು ಭಕ್ತ ಶೋಕ- । ದಾವಾನಲಂ ಗಣವಿಭುಂ ವರಕುಂಜರಾಸ್ಯಂ ॥ ಅಜ್ಞಾನಕಾನನವಿನಾಶನ ಹವ್ಯವಾಹಂ । ಉತ್ಸಾಹವರ್ಧನಮಹಂ ಸುತಮೀಶ್ವರಸ್ಯ ॥3॥**

ಭಾವಾರ್ಥ - ಅಭಯಪ್ರದಾಯಕನಾದ, ಭಕ್ತರ ದುರಿತಗಳೆಂಬ ಕಾಡಿಗೆ ಬೆಂಕಿಯಂತಿರುವ, ಗಣಗಳ ಅಧಿಪತಿಯಾದ, ಶ್ರೇಷ್ಠವಾದ ಆನೆಯ ಮೊಗವುಳ್ಳ, ಅಜ್ಞಾನವೆನ್ನುವ ಅಡವಿಯನ್ನು ನಾಶಮಾಡುವ ಜ್ಞಾನಾಗ್ನಿಯಾಗಿರುವ, ಉತ್ಸಾಹವನ್ನು ವರ್ಧಿಸುವ ಈಶ್ವರತನಯನಾದ ಶ್ರೀಮನ್ಮಹಾಗಣಪತಿಯನ್ನು ನಾನು ಉಷಃಕಾಲದಲ್ಲಿ ಭಜಿಸುತ್ತೇನೆ.

**ಶ್ಲೋಕತ್ರಯಮಿದಂ ಪುಣ್ಯಂ ಸದಾ ಸಾಮ್ರಾಜ್ಯದಾಯಕಂ । ಪ್ರಾತರುತ್ಥಾಯ ಸತತಂ ಯಃ ಪಠೇತ್ ಪ್ರಯತಃ ಪುಮಾನ್ ॥4॥**

ಭಾವಾರ್ಥ - ಪುಣ್ಯದಾಯಕವಾಗಿರುವ ಈ ಮೂರು ಶ್ಲೋಕಗಳನ್ನು ಬೆಳಗ್ಗೆ ಉಷಃಕಾಲದಲ್ಲೆದ್ದು ಇಂದ್ರಿಯಗಳನ್ನು ನಿಗ್ರಹಿಸಿ ಯಾವಾತನು ಪಠಿಸುವನೋ ಅವನು ನೆಮ್ಮದಿಯ ಸಾಮ್ರಾಜ್ಯವನ್ನು ಪಡೆಯುವನು.

॥ ಇತಿ ಶ್ರೀ ಗಣೇಶ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 3.2 ಸಂತಾನ ಗಣಪತಿ ಸ್ತುತಿ

**ನಮೋಸ್ತು ಗಣನಾಥಾಯ ಸಿಧ್ಧಿ ಬುಧ್ಧಿಯುತಾಯ ಚ । ಸರ್ವ ಪ್ರದಾಯ ದೇವಾಯ ಪುತ್ರ ವೃಧ್ಧಿ ಪ್ರದಾಯಕ ॥1॥**

**ಗುರೂದರಾಯ ಗುರುವೇ ಗೋಪ್ತ್ರೇ ಗುಹ್ಯ ಸಿತಾತ ತೇ । ಗೋಪ್ಯಾಯ ಗೋಪ್ತಶೇಷ ಭುವನಾಯ ಸಿದಾತ್ಮನೇ ॥2॥**

**ವಿಶ್ವಮೂಲಾಯ ಭವ್ಯಾಯ ವಿಶ್ವಸೃಷ್ಠಿ ಕರಾಯತೇ । ನಮೋ ನಮಸ್ತೇ ಸತ್ಯಾಯ ಸತ್ಯ ಪೂರ್ಣಾಯ ಶುಂಡಿನೇ ॥3॥**

**ಏಕದಂತಾಯ ಶುಧ್ಧಾಯ ಸುಮುಖಾಯ ನಮೋನಮಃ । ಪ್ರಸನ್ನ ಜನಪಾಲಾಯ ಪ್ರಣತಾರ್ಥಿ ವಿನಾಶಿನೇ ॥4॥**

**ಶರಣಂ ಭವ ದೇವೇಶ ಸಂತತಿಂ ಸುಧೃಡಾಂ ಕುರು । ಭವಿಷ್ಯಂತಿ ಚ ಯೇ ಪುತ್ರಾಃ ಮತ್ಕುಲೇ ಗಣ ನಾಯಕಃ ॥5॥**

**ತೇ ಸರ್ವೇ ತವ ಪೂಜಾರ್ಥಂ ನಿರತಾಃ ಸ್ಯುಃ ವರೋಮತಃ । ಪುತ್ರ ಪ್ರದಮಿದಂ ಸ್ತೋತ್ರಂ ಸರ್ವ ಸಿಧ್ಧಿಪ್ರದಾಯಕಂ ॥6॥**

ಭಾವಾರ್ಥ - ಸಿದ್ಧಿ ಬುದ್ಧಿಯುಕ್ತನಾಗಿರುವ ಸಮಸ್ತವನ್ನೂ ದಯಪಾಲಿಸುವವನೂ, ದೇವನೂ, ಪುತ್ರ ಸಂತಾನ ವೃದ್ಧಿಯನ್ನು ಕರುಣಿಸುವವನೂ ಲಂಬೋಧರನೂ ಆಗಿರುವ ದೇವನೇ ನಿನಗೆ ನಮನಗಳು. ನಾನು ನಿನಗೆ ಶರಣಾಗಿದ್ದೇನೆ. ನನಗೆ ಧೃಢವಾದ ಸಂತತಿಯನ್ನು ಕರುಣಿಸು. ನನ್ನ ವಂಶದಲ್ಲಿ ಜನಿಸುವ ಪುತ್ರ ಸಂತತಿ ನಿನ್ನ ಆರಾಧನೆಯಲ್ಲಿ ಸದಾ ನಿರತರಾಗಿರುವಂತೆ ಕರುಣಿಸುವಂತವನಾಗು.

॥ ಇತಿ ಸಂತಾನ ಗಣಪತಿ ಸ್ತುತಿ ಸಂಪೂರ್ಣಂ ॥

## 3.3 ಶ್ರೀ ಮಹಾಗಣೇಶ ಪಂಚರತ್ನ ಸ್ತೋತ್ರಂ

**ಮುದಾಕರಾತ್ತ ಮೋದಕಂ ಸದಾ ವಿಮುಕ್ತಿಸಾಧಕಂ ಕಲಾಧರಾವತಂಸಕಂ ವಿಲಾಸಿ ಲೋಕ ರಕ್ಷಕಂ । ಅನಾಯಕೈಕನಾಯಕಂ ವಿನಾಶಿತೇಭದೈತ್ಯಕಂ ನತಾಶುಭಾಶುನಾಶಕಂ ನಮಾಮಿ ತಂ ವಿನಾಯಕಂ ॥1॥**

ಭಾವಾರ್ಥ - ಮಂದಹಾಸದಿಂದ ಕೂಡಿದವನಾಗಿ ಮೋದಕವನ್ನು ಕೈಯಲ್ಲಿ ಧರಿಸಿರುವ, ಸದಾ ಮೋಕ್ಷವನ್ನು ಕರುಣಿಸುವುದರಲ್ಲಿ ನಿರತನಾಗಿರುವ, ಶಿರದಲ್ಲಿ ಚಂದ್ರನನ್ನು ಆಭರಣೋಪಾದಿಯಲ್ಲಿ ಧರಿಸಿರುವ, ಭಕ್ತಿ ವಿಲಾಸದಲ್ಲಿ ತತ್ಪರರಾದವರನ್ನು ತನ್ನ ಲೀಲಾಮಾತ್ರದಿಂದಲೇ ಪೊರೆಯುವ, ಅನಾಥರ ಏಕಮಾತ್ರ ದಿಕ್ಕಾದ, ಲೋಕ ಕಂಠಕನಾದ ಇಭಾಸುರ ಸಂಹಾರಿಯಾದ, ಶರಣು ಹೊಕ್ಕವರ ಅಶುಭಗಳನ್ನು ತ್ವರಿತವಾಗಿ ನಾಶಗೊಳಿಸುವ ಆ ಸಿದ್ಧಿವಿನಾಯಕನಿಗೆ ನಾನು ನಮಸ್ಕರಿಸುತ್ತೇನೆ.

**ನತೇತರಾತಿಭೀಕರಂ ನವೋದಿತಾರ್ಕಭಾಸ್ವರಂ ನಮಸ್ಸುರಾರಿ ನಿರ್ಜರಂ ನತಾಧಿಕಾಪದುದ್ಧರಂ । ಸುರೇಶ್ವರಂ ನಿಧೀಶ್ವರಂ ಗಜೇಶ್ವರಂ ಗಣೇಶ್ವರಂ ಮಹೇಶ್ವರಂ ತಮಾಶ್ರಯೇ ಪರಾತ್ಪರಂ ನಿರಂತರಂ ॥2॥**

ಭಾವಾರ್ಥ - ದುರಹಂಕಾರಿಗಳಿಗೆ ಅತಿಭೀಕರನೂ, ಆಗತಾನೇ ಉದಯಿಸುತ್ತಿರುವ ಉದಯಸೂರ್ಯನ ಕಾಂತಿಯನ್ನು ಹೊಂದಿರುವ, ಶರಣಾಗತರಾದ ದೇವದಾನವರ ಘೋರಸಂಕಟಗಳವಿನಾಶಕನಾಗಿರುವ, ಸುರೇಶ್ವರನೂ, ನಿಧೀಶ್ವರನೂ, ಗಜೇಶ್ವರನೂ, ಗಣೇಶ್ವರನೂ, ಮಹೇಶ್ವರನೂ, ಪವಿತ್ರತಮನೂ ಆಗಿರುವ ಆ ಸಿದ್ಧಿದಾಯಕ ವಿನಾಯಕನನ್ನು ನಾನು ಸದಾ ಆಶ್ರಯಿಸುತ್ತೇನೆ.

**ಸಮಸ್ತಲೋಕ ಶಂಕರಂ ನಿರಸ್ತದೈತ್ಯಕುಂಜರಂ ದರೇತರೋದರಂ ವರಂ ವರೇಭವಕ್ತ್ರಮಕ್ಷರಂ । ಕೃಪಾಕರಂ ಕ್ಷಮಾಕರಂ ಮುದಾಕರಂ ಯಶಸ್ಕರಂ ಮನಸ್ಕರಂ ನಮಸ್ಕೃತಾಂ ನಮಸ್ಕರೋಮಿ ಭಾಸ್ವರಂ ॥3॥**

ಭಾವಾರ್ಥ - ಸಮಸ್ತ ಲೋಕಗಳಿಗೂ ಒಳಿತನ್ನು ಕರುಣಿಸುವವನೂ, ಗಜಾಸುರನನ್ನು ಸಂಹರಿಸಿದವನೂ, ವಿಸ್ತಾರವಾದ ಉದರವನ್ನು ಹೊಂದಿದವನೂ, ಸರ್ವೋನ್ನತವಾಗಿರುವ ಆನೆಯಮೊಗದವನೂ, ನಾಶರಹಿತನೂ, ಕ್ಷಮಾದಾಯಕನೂ, ಆನಂದದಾಯಕನೂ, ಯಶಸ್ಸನ್ನು ಕರುಣಿಸುವವನೂ, ಶರಣಾರ್ತಿಗಳಿಗೆ ಪರಿಶುದ್ಧ ಮನಸ್ಸನ್ನು ದಯಪಾಲಿಸುವವನೂ, ತೇಜೋವಂತನೂ ಆಗಿರುವ ಶ್ರೀಮಹಾಗಣಪತಿಗೆ ನಾನು ನಮಸ್ಕರಿಸುವೆ.

**ಅಂಕಿಚನಾರ್ತಿಮಾರ್ಜನಂ ಚಿರಂತನೋಕ್ತಿಭಾಜನಂ ಪುರಾರಿಪೂರ್ವನಂದನಂ ಸುರಾರಿಗರ್ವಚರ್ವಣಂ । ಪ್ರಪಂಚನಾಶಭೀಷಣಂ ಧನಂಜಯಾದಿ ಭೂಷಣಂ ಕಪೋಲದಾನವಾರಣಂ ಭಜೇ ಪುರಾಣವಾರಣಂ ॥4॥**

ಭಾವಾರ್ಥ - ಗತಿಹೀನರಾದ ಭಕ್ತರ ದುಃಖಗಳನ್ನು ಪರಿಹರಿಸುವ, ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ ತ್ರಿಪುರಾಸುರಾದಿ ರಕ್ಕಸರ ಗರ್ವವನ್ನು ಸಂಹರಿಸಿದ, ಶಂಕರನ ಪುತ್ರನಾದ, ಬ್ರಹ್ಮಾಂಡದ ಲಯಕಾರ್ಯದಲ್ಲಿ ಭಯಂಕರನಾದ, ಪ್ರಾಪಂಚಿಕ ದುಃಖಗಳ ಪರಿಹಾರಕನಾದ, ಅಗ್ನಿಯೇ ಮೊದಲಾದ ದೇವತಾ ಸಮೂಹಕ್ಕೆ ಭೂಷಣಪ್ರಾಯನಾದ, ಗಂಡಸ್ಥಳದಿಂದ ಗಲ್ಲದ ತನಕ ಸ್ರವಿಸುತ್ತಿರುವ ಬೆವರನ್ನು

ಒರೆಸಿಕೊಳ್ಳುತ್ತಲಿರುವ ಆದಿಪುರುಷನಾದ ಶ್ರೀ ಮಹಾಗಣಪತಿಗೆ ನಾನು ನಮಸ್ಕರಿಸುವೆನು.

**ನಿತಾಂತ ಕಾಂತ ದಂತ ಕಾಂತಿ ಮಂತ ಕಾಂತ ಕಾತ್ಮಜಂ ಅಚಿಂತ್ಯ ರೂಪ ಮಂತ ಹೀನ ಮಂತರಾಯ ಕೃಂತನಂ । ಹೃದಂತರೇ ನಿರಂತರಂ ವಸಂತಮೇವ ಯೋಗಿನಾಂ ತಮಂತಮೇಕಮೇವ ತಂ ವಿಚಿಂತಯಾಮಿ ಸಂತತಂ ॥5॥**

ಭಾವಾರ್ಥ - ವಿಶೇಷವಾಗಿಯೂ ಮನೋಹರವಾಗಿಯೂ ಹೊಳೆಯುತ್ತಲಿರುವ ದಂತಗಳನ್ನುಹೊಂದಿರುವವನಾದ ಯಮನಿಗೆ ಯಮನಾಗಿರುವ, ಶಿವತನಯನಾದ, ಚಿಂತನೆಗಳಿಗೆನಿಲುಕದ ಅಚಿಂತ್ಯರೂಪನಾದ, ವಿನಾಶವಿಲ್ಲದವನಾದ ವಿಘ್ನಗಳ ಧ್ವಂಸಕನಾಗಿರುವ, ಯೋಗಿಗಳ ಹೃದಯಸಿಂಹಾಸನದಲ್ಲಿ ನಿರಂತರ ನೆಲೆಯಾಗಿರುವ ಏಕದಂತನಾದ ಶ್ರೀ ಮಹಾಗಣಪತಿಗೆ ನಾನು ನಮಸ್ಕರಿಸುವೆ.

**ಮಹಾಗಣೇಷ ಪಂಚರತ್ನಮಾದರೇಣ ಯೋಽನ್ವಹಂ ಪ್ರಜಲ್ಪತಿ ಪ್ರಭಾತಕೇ ಹೃದಿ ಸ್ಮರನ್ ಗಣೇಶ್ವರಂ । ಅರೋಗತಾಮದೋಷತಾಂ ಸುಸಾಹಿತೀಂ ಸುಪುತ್ರತಾಂ ಸಮಾಹಿತಾಯುರಷ್ಟಭೂತಿಮಭ್ಯುಪೈತಿ ಸೋಽಚಿರಾತ್ ॥6॥**

ಭಾವಾರ್ಥ - ಅನುದಿನವೂ ಪ್ರಾತಃಕಾಲದಲ್ಲಿ ಮಹಾಗಣಪತಿಯನ್ನು ತನ್ನ ಹೃತ್ಕಮಲದಲ್ಲಿರಿಸಿ ಸ್ಮರಣೆಮಾಡಿ ಈ ಮಹಾಗಣೇಶ ಪಂಚರತ್ನ ಸ್ತೋತ್ರಗಳನ್ನು ಪಠನ ಮಾಡುವ ಮನುಜರಿಗೆ ನಿರೋಗತ್ವ, ನಿರ್ದೋಷತ್ವಗಳು ದೊರಕಿ, ಅವರಿಗೆ ಸನ್ಮಿತ್ರರ ಸಂಘದೊರಕಿ, ಸತ್ಪುತ್ರ, ಪೂರ್ಣಾಯುಷ್ಯಾದಿ ಸಕಲೈಶ್ವರ್ಯ ಸೌಭಾಗ್ಯಗಳನ್ನು ಶೀಘ್ರವಾಗಿ ಹೊಂದುತ್ತಾರೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಮಹಾಗಣೇಶ ಪಂಚರತ್ನ ಸ್ತೋತ್ರಂ ಸಂಪೂರ್ಣಂ ॥

## 3.4 ಶ್ರೀ ಗಣೇಶ ಕವಚ ಸ್ತೋತ್ರಂ

**ಏಷೋಽತಿ ಚಪಲೋದೈತ್ಯಾನ್ ಬಾಲ್ಯೇಽಪಿ ನಾಶಯತ್ಯಹೊ । ಅಗ್ರೇ ಕಿಂ ಕರ್ಮ ಕರ್ತೇತಿ ನ ಜಾನೇ ಮುನಿಸತ್ತಮ ॥1॥**

ಭಾವಾರ್ಥ - ಗೌರೀ ದೇವಿಯು ಕೇಳುವಳು- ಚಿಕ್ಕಂದಿನಲ್ಲಿಯೇ ಅತಿ ಚಪಲಿಗರಾಗಿರುವ ಈ ಅಸುರರನ್ನು ನಾಶಗೊಳಿಸಲು ಯಾವ ಕಾರ್ಯವನ್ನು ಮಾಡಬೇಕು ಮುನಿಪುಂಗವಾ?

**ದೈತ್ಯಾ ನಾನಾವಿಧಾ ದುಷ್ಟಾಃ ಸಾಧುದೇವ ದ್ರುಹಃ ಖಲಾಃ । ಅತೋಽಸ್ಯ ಕಂಠೆ ಕಿಂಚಿತ್ವಂ ರಕ್ಷಾರ್ಥಂ ಬದ್ಧುಮಹರ್ಸಿ ॥2॥**

ಭಾವಾರ್ಥ - ನಾನಾ ರೀತಿಯಲ್ಲಿ ದೈತ್ಯರು ಹಾಗೂ ದುಷ್ಟರು ಸಾಧುಗಳು ಮತ್ತು ದೇವತೆಗಳಿಗೆ ತಮ್ಮ ನೀಚಕಾರ್ಯಗಳಿಂದ ದ್ರೋಹವನ್ನು ಬಗೆಯುತ್ತಿದ್ದಾರೆ. ಅವರನ್ನು ರಕ್ಷಿಸಲು ನೀನು ತಕ್ಕವನಿರುವಿ. ಆದುದರಿಂದ ಸ್ವಲ್ಪ ಮಾರ್ಗದರ್ಶನವನ್ನು ಒದಗಿಸು ಮುನಿಪುಂಗವನೇ.

॥ **ಮುನಿರುವಾಚ** ॥ ಮುನಿಯು ಹೇಳಿದನುಃ-

**ಧ್ಯಾಯೇತ್ಸಿಂಹಗತಂ ವಿನಾಯಕಮಮುಂ ದಿಗ್ಬಾಹುಮಾಧ್ಯೇ ಯುಗೆ । ತ್ರೇತಾಯಂ ತು ಮಯೂರವಾಹನಮಮುಂ ಷಡ್ಬಾಹುಕಂ ಸಿದ್ಧಿದಂ ॥ ದ್ವಾಪರೇ ತು ಗಜಾನನಂ ಯುಗಭುಜಂ ರಕ್ತಾಂಗರಾಗಂ ವಿಭುಂ । ತುರ್ಯೆ ತು ದ್ವಿಭುಜಂ ಸಿತಾಂಗರುಚಿರಂ ಸರ್ವಾರ್ಥದಂ ಸರ್ವದಾ ॥3॥**

ಭಾವಾರ್ಥ - ಆದಿಯುಗದಲ್ಲಿ ಎಂದರೆ ಕೃತಯುಗದಲ್ಲಿ ಸಿಂಹವಾಹನನಾಗಿ, ದಿಕ್ಕುಗಳನ್ನು ಭುಜಗಳನ್ನಾಗಿಸಿಕೊಂಡವನಾದ ವಿನಾಯಕನು ತ್ರೇತಾಯುಗದಲ್ಲಿ ಮಯೂರವಾಹನಾಗಿ ಆರು ಭುಜಗಳನ್ನು ಹೊಂದಿ ಸಿದ್ಧಿ ಪ್ರದಾಯಕನೆನಿಸಿ, ದ್ವಾಪರಾಯುಗದಲ್ಲಿ ನಾಲ್ಕು ಭುಜಗಳನ್ನು ಹೊಂದಿ ಕೆಂಬಣ್ಣದವನಾಗಿ ಜಗದೊಡೆಯ ಗಜಾನನ ಎನಿಸಿ ಈ ಕಲಿ ಯುಗದಲ್ಲಿ ಎರಡು ಭುಜಗಳಿಂದ ಕೂಡಿದವನಾಗಿ ಬಿಳಿ ವರ್ಣದವನಾಗಿ ಸುಂದರ ರೂಪವುಳ್ಳವನಾದ ಸದಾ ಸಮಸ್ತ ಅರ್ಥಗಳನ್ನು ಕರುಣಿಸುವಂತಹಾ ಸರ್ವಾರ್ಥದನೆನಿಸಿರುವವನನ್ನು ಧ್ಯಾನಿಸಬೇಕು.

**ವಿನಾಯಕಃ ಶಿಖಾಂ ಪಾತು ಪರಮಾತ್ಮಾ ಪರಾತ್ಪರಃ । ಅತಿ ಸುಂದರ ಕಾಯಸ್ತು ಮಸ್ತಕಂ ಸುಮಹೋತ್ಕಟಃ ॥4॥**

ಭಾವಾರ್ಥ - ಪರಮಾತ್ಮನೂ ಪವಿತ್ರತಮನೂ ಆಗಿರುವ ವಿನಾಯಕನು ಚಂಡಿಕೆಯನ್ನೂ, ಅತಿ ಸುಂದರ ದೇಹದವನಾದ ಸುಮಹೋತ್ಕಟನು ಶಿರಸ್ಸನ್ನೂ ರಕ್ಷಿಸಲಿ.

**ಲಲಾಟಂ ಕಶ್ಯಪಃ ಪಾತು, ಭ್ರೂಯುಗಂ ತು ಮಹೋದರಃ । ನಯನೇ ಫಾಲಚಂದ್ರಸ್ತು ಗಜಾಸ್ಯಸ್ತ್ವೋಷ್ಠಪಲ್ಲವೌ ॥5॥**

ಭಾವಾರ್ಥ - ಲಲಾಟವನ್ನು ಕಶ್ಯಪನೂ, ಮಹೋದರನು ಎರಡೂ ಹುಬ್ಬುಗಳನ್ನೂ, ಕಣ್ಣುಗಳನ್ನು ಫಾಲಚಂದ್ರನೂ, ಚಿಗುರನ್ನು ಹೋಲುವ ತುಟಿಯನ್ನು ಗಜಾಸ್ಯನೂ ರಕ್ಷಿಸಲಿ.

**ಜಿಹ್ವಾಂ ಪಾತು ಗಣಕ್ರೀಡಶ್ಚಿಬುಕಂ ಗಿರಿಜಾಸುತಃ । ವಾಚಂ ವಿನಾಯಕಃ ಪಾತು ದಂತಾನ್ ರಕ್ಷತ್ ವಿಘ್ನಹಾ ॥6॥**

ಭಾವಾರ್ಥ - ಗಣಕ್ರೀಡನು ನಾಲಿಗೆಯನ್ನೂ, ಗಿರಿಜಾತನಯನು ಗಡ್ಡವನ್ನೂ, ವಿನಾಯಕನು ವಾಣಿಯನ್ನೂ, ಹಲ್ಲುಗಳನ್ನು ವಿಘ್ನಹಂತಾರನೂ ರಕ್ಷಿಸಲಿ.

**ಶ್ರವಣೌ ಪಾಶಪಾಣಿಸ್ತು ನಾಸಿಕಾಂ ಚಿಂತಿತಾರ್ಥದಃ । ಗಣೇಶಸ್ತು ಮುಖಂ ಕಂಠಂ ಪಾತು ದೇವೋ ಗಣಂಜಯಃ ॥7॥**

ಭಾವಾರ್ಥ - ಪಾಶವನ್ನು ಕೈಯಲ್ಲಿ ಹಿಡಿದವನು ಕಿವಿಗಳನ್ನೂ, ಇಷ್ಟಾರ್ಥಗಳನ್ನು ಪೂರೈಸುವ ಚಿಂತಿತಾರ್ಥದನು ಮೂಗನ್ನೂ, ಗಣಗಳನ್ನು ಗೆದ್ದವನಾದ ದೇವನು ಕಂಠವನ್ನೂ[ಕೊರಳನ್ನೂ] ರಕ್ಷಿಸಲಿ.

**ಸ್ಕಂಧೌ ಪಾತು ಗಜಸ್ಕಂಧಃ ಸ್ತನೌ ವಿಘ್ನ ವಿನಾಶನಃ । ಹೃದಯಂ ಗಣನಾಥಸ್ತು ಹೇರಂಭೋ ಜಠರಂ ಮಹಾನ್ ॥8॥**

ಭಾವಾರ್ಥ - ಗಜಸ್ಕಂಧನು ಹೆಗಲುಗಳನ್ನೂ ಸ್ತನಗಳನ್ನು ವಿಘ್ನ ವಿನಾಶಕನೂ, ಹೃದಯವನ್ನು ಗಣನಾಥನೂ, ಹೊಟ್ಟೆಯನ್ನು ಶ್ರೇಷ್ಠನಾದ ಹೇರಂಬನೂ ರಕ್ಷಿಸಲಿ.

**ಧರಾಧರಃ ಪಾತು ಪಾರ್ಶ್ವೌ ಪೃಷ್ಠಂ ವಿಘ್ನಹರಃ ಶುಭಃ । ಲಿಂಗಂಗುಹ್ಯಂ ಸದಾಪಾತು ವಕ್ರತುಂಡೊ ಮಹಾಬಲಃ ॥9॥**

ಭಾವಾರ್ಥ - ಎರಡೂ ಮಗ್ಗುಲುಗಳನ್ನು ಭೂಮಿಯನ್ನು ಧರಿಸಿದವನೂ ಹಿಂಬದಿಯನ್ನು ವಿಘ್ನವಿನಾಶಕನೂ ಶುಭನು ಲಿಂಗವನ್ನೂ ಹಾಗೂ ಗುಪ್ತಾಂಗವನ್ನು ವಕ್ರತುಂಡನೂ ಸದಾಕಾಲ ರಕ್ಷಿಸಲಿ.

**ಗಣಕ್ರೀಡೊ ಜಾನುಜಂಘೆ ಊರೂಮಂಗಲಮೂರ್ತಿಮಾನ್ । ಏಕದಂತೋ ಮಹಾಬುದ್ಧಿಃ ಪಾದೌ ಗುಲ್ಫೌ ಸದಾಽವತು ॥10॥**

ಭಾವಾರ್ಥ - ಮೊಣಕಾಲುಗಳನ್ನು ಮತ್ತು ಗಂಟುಗಳನ್ನು ಗಣಕ್ರೀಡನೂ ತೊಡೆಗಳನ್ನು ಮಂಗಲಮೂರ್ತಿಯೂ, ಪಾದ ಹಾಗೂ ಪಾದಗಳ ಮಣಿಗಂಟುಗಳನ್ನು ಮಹಾಬುದ್ಧಿಶಾಲಿಯಾದ ಏಕದಂತನೂ ಸದಾಕಾಲ ರಕ್ಷಿಸಲಿ.

**ಕ್ಷಿಪ್ರಪ್ರಸಾದನೋ ಬಾಹೂ ಪಾಣೀ ಆಶಾಪ್ರಪೂರಕಃ । ಅಂಗಲೀಶ್ಚ ನಖಾನ್ಪಾತು ಪದ್ಮ ಹಸ್ತೋಽರಿನಾಶನಃ ॥11॥**

ಭಾವಾರ್ಥ - ಭುಜಗಳನ್ನು ಕೂಡಲೇ ಪ್ರಸಾದವನ್ನು ಕೊಡುವವನೂ, ಕೈಗಳನ್ನು ಇಚ್ಛೆಗಳನ್ನು ಈಡೇರಿಸುವವನೂ, ಪದ್ಮಹಸ್ತವುಳ್ಳವನಾದ ವೈರಿನಾಶಕನು ಉಗುರು ಬೆರಳುಗಳನ್ನೂ ಸದಾ ಕಾಲ ರಕ್ಷಿಸಲಿ

**ಸರ್ವಾಂಗಾನಿ ಮಯೂರೇಶೋ ವಿಶ್ವವ್ಯಾಪಿ ಸದಾಽವತು । ಅನುಕ್ತಮಪಿ ಯತ್ ಸ್ಥಾನಂ ಧೂಮ್ರಕೇತುಃ ಸದಾಽವತು ॥12॥**

ಭಾವಾರ್ಥ - ವಿಶ್ವವ್ಯಾಪಿಯಾಗಿರುವ ಮಯೂರೇಶನು ಎಲ್ಲಾ ಅಂಗಗಳನ್ನೂ ಹಾಗೂ ಉಲ್ಲೇಕಿಸದಿರುವ ಸ್ಥಾನಗಳನ್ನು ಧೂಮ್ರಕೇತುವೂ ರಕ್ಷಿಸಲಿ.

**ಆಮೋದಸ್ತ್ವ ಗ್ರತಃ ಪಾತು ಪ್ರಮೋದಃ ಪೃಷ್ಟತೋಽವತು । ಪ್ರಾಚ್ಯಾಂ ರಕ್ಷತು ಬುದ್ಧೀಶಃ ಆಗ್ನೇಯ್ಯಾಂ ಸಿದ್ಧಿದಾಯಕಃ ॥13॥**

ಭಾವಾರ್ಥ - ಸುಖದಾಯಕನು ಮುಂಭಾಗವನ್ನೂ, ಆನಂದದಾಯಕನು ಹಿಂಭಾಗವನ್ನೂ ಪೂರ್ವದಿಗ್ಭಾಗದಲ್ಲಿ ಬುದ್ಧಿಪ್ರದಾಯಕನೂ, ಆಗ್ನೇಯದಲ್ಲಿ ಸಿದ್ಧಿಪ್ರದಾಯಕನೂ, . . . >

**ದಕ್ಷಿಣಸ್ಯಾಮುಮಾಪುತ್ರೋ ನೈಋತ್ಯಾಂ ತು ಗಣೇಶ್ವರಃ । ಪ್ರತೀಚ್ಯಾಂ ವಿಘ್ನಹರ್ತಾಽವ್ಯಾದ್ವಾಯವ್ಯಾಂ ಗಜಕರ್ಣಕಃ ॥14॥**

ಭಾವಾರ್ಥ - . . ದಕ್ಷಿಣದಲ್ಲಿ ಉಮಾತನಯನೂ, ನೈಋತ್ಯದಲ್ಲಿ ಗಣೇಶ್ವರನೂ, ಪಶ್ಚಿಮದಲ್ಲಿ ವಿಘ್ನವಿನಾಶಕನೂ ವಾಯವ್ಯದಲ್ಲಿ ಗಜಕರ್ಣಕನೂ ರಕ್ಷಿಸಲಿ.

**ಕೌಬೇರ್ಯಾಂ ನಿಧಿಪಃ ಪಾಯಾದೀಶಾನ್ಯಾ ಮೀಶನಂದನಃ । ದಿವಾಽವ್ಯಾ ದೇಕದಂತಸ್ತು ರಾತ್ರೌಸಂಧ್ಯಾಸು ವಿಘ್ನ ಹೃತ್ ॥15॥**

ಭಾವಾರ್ಥ - ನಿಧಿಪನು ಕುಬೇರ[ಉತ್ತರ]ದಿಕ್ಕಿನಲ್ಲಿಯೂ, ಈಶಾನ್ಯದಲ್ಲಿ ಈಶತನಯನೂ, ಹಗಲು ಏಕದಂತನೂ, ಸಂಧ್ಯಾ-ರಾತ್ರೆಗಳಲ್ಲಿ ವಿಘ್ನಹರ್ತನೂ ಕಾಪಾಡಲಿ.

**ರಾಕ್ಷಸಾಸುರ ವೇತಾಲ ಗ್ರಹ ಭೂತ ಪಿಶಾಚತಃ । ಪಾಶಾಂಕುಶಧರಃ ಪಾತು ರಜಃ ಸತ್ವತಮಃ ಸ್ಮೃತಿಃ ॥16॥**

ಭಾವಾರ್ಥ - ರಾಕ್ಷಸರು, ದೈತ್ಯರು, ಬೇತಾಳ, ದುಷ್ಟಗ್ರಹರು, ಭೂತ ಪಿಶಾಚಾದಿಗಳೆಲ್ಲವುಗಳಿಂದ ಸತ್ವ-ರಜ-ತಮ-ಸ್ಮೃತಿಗಳೊಡನೆ ಪಾಶಾಂಕುಶಧಾರಿಯು ಕಾಯಲಿ.

**ಜ್ಞಾನಂ ಧರ್ಮಂ ಚ ಲಕ್ಷ್ಮೀಂ ಚ ಲಜ್ಜಾಂ ಕೀರ್ತಿಂ ತಥಾ ಕುಲಂ । ವಪುರ್ಧನಂ ಚ ಧಾನ್ಯಂ ಚ ಗೃಹದಾರಾನ್ಸುತಾನ್ ॥17॥**

ಭಾವಾರ್ಥ - ಜ್ಞಾನ, ಧರ್ಮ, ಸಂಪತ್ತು, ಲಜ್ಜೆ, ಕೀರ್ತಿ, ಕುಲ, ದೇಹ, ವಿತ್ತ, ಧಾನ್ಯ, ಮನೆ, ಸತಿ, ಮಕ್ಕಳು, ಸಭ್ಯರೇ ಆದಿಯಾಗಿ ಎಲ್ಲರನ್ನೂ ಸರ್ವಾಯುಧವನ್ನು ಧರಿಸಿದವನು ರಕ್ಷಿಸಲಿ.

**ಸರ್ವಾಯುಧಧರಃ ಪೌತ್ರಾನ್ ಮಯೂರೇಶೋಽವತಾತ್ಸದಾ । ಕಪಿಲೋಽಜಾವಿಕಂ ಪಾತು ಗಜಾಶ್ವಾನ್ವಿಕಟೋಽವತು ॥18॥**

ಭಾವಾರ್ಥ - ಮೊಮ್ಮಕ್ಕಳನ್ನು ಮಯೂರೇಶನು ಸದಾ ರಕ್ಷಿಸಲಿ. ಆಜೀವನ ಪರ್ಯಂತ ಕಪಿಲನು ಕಾಪಾಡಲಿ. ವಿಕಟನು ಆನೆ-ಕುದುರೆ ಗಳನ್ನು ರಕ್ಷಿಸಲಿ.

**ಭೂರ್ಜಪತ್ರೇ ಲಿಖಿತ್ವೇದಂ ಯಃ ಕಂಠೇ ಧಾರಯೇತ್ಸುಧೀಃ । ನ ಭಯಂ ಜಾಯತೆ ತಸ್ಯ ಯಕ್ಷರಕ್ಷಃ ಪಿಶಾಚಜಃ ॥19॥**

ಭಾವಾರ್ಥ - ಯಾವನು ಇದನ್ನು ಭೂರ್ಜಪತ್ರದಲ್ಲಿ ಬರೆದು ಕೊರಳಲ್ಲಿ ಧಾರಣೆ ಮಾಡುವನೋ ಅವನು ಯಕ್ಷ, ರಾಕ್ಷಸ, ಪಿಶಾಚಾದಿಗಳ ಭಯವಿಲ್ಲದೆ ನಿರ್ಭಯನಾಗುವನು.

**ತ್ರಿಸಂಧ್ಯಂ ಜಪತೆ ಯಸ್ತು ವಜ್ರಸಾರತನುರ್ಭವೇತ್ । ಯಾತ್ರಾಕಾಲೇ ಪಠೇದ್ಯಸ್ತು ನಿರ್ವಿಘ್ನೇನ ಫಲಂ ಲಭೇತ್ ॥20॥**

ಭಾವಾರ್ಥ - ಮೂರು ಸಂಧ್ಯಾಕಾಲಗಳಲ್ಲಿ ಇದನ್ನು ಜಪಿಸುವವನು ವಜ್ರದೇಹಿಯಾಗುವನು. ಪ್ರಯಾಣಕಾಲದಲ್ಲಿ ಪಠಿಸುವವನು ಅಡೆತಡೆಗಳಿಲ್ಲದ ಫಲವನ್ನು ಹೊಂದುವವನಾಗುವನು.

**ಯುದ್ಧಕಾಲೇ ಪಠೇದ್ಯಸ್ತು ವಿಜಯಂ ಚಾಪ್ನುಯಾತ್ ಧ್ರುವಂ । ಮಾರಣೋಚ್ಚಾಟನಾಕರ್ಷ ಸ್ತಂಭಮೋಹನ ಕರ್ಮಣಿ ॥21॥**

ಭಾವಾರ್ಥ - ಯುದ್ಧದ ಸಮಯದಲ್ಲಿ ಇದನ್ನು ಪಠಿಸುವವರು ವಿಜಯಶಾಲಿಗಳಾಗುವುದರಲ್ಲಿ ಸಂಶಯವಿಲ್ಲ. ಮಾರಣ, ಉಚ್ಚಾಟನ, ಆಕರ್ಷಣ, ಸ್ತಂಬನ, ಮೋಹನ ಇತ್ಯಾದಿ ಮಾಂತ್ರಿಕ ಕರ್ಮಗಳಿಗೆ. . . >

**ಸಪ್ತವಾರಂ ಜಪೇತದ್ವಿನಾನಾಮೇಕ ವಿಂಶತಿಂ । ತತ್ತತ್ಫಲಮವಾಪ್ನೋತಿ ಸಾಧಕೋನಾತ್ರ ಸಂಶಯಃ ॥22॥**

ಭಾವಾರ್ಥ - . . ಪ್ರತಿದಿನವೂ ಏಳು ಸಲದಂತೆ ಇಪ್ಪತ್ತೊಂದು ದಿನ ಜಪಿಸುವ ಸಾಧಕನು ಸಂಶಯಾತೀತವಾಗಿ ಆಯಾಯ ಫಲಗಳನ್ನು ಪಡೆಯುವನು.

**ಏಕವಿಂಶತಿವಾರಂ ಚ ಪಠೇತ್ತಾವದ್ದಿನಾನಿ ಯಃ । ಕಾರಾಗೃಹಗತಂ ಸದ್ಯೋ ರಾಜ್ಞಾ ವಧ್ಯಂ ಚ ಮೋಚಯೇತ್ ॥23॥**

ಭಾವಾರ್ಥ - ಸೆರೆಮನೆಯಲ್ಲಿರುವ ವಧಾರ್ಹನು ಇಪ್ಪತ್ತೊಂದು ಸಲ ಇದನ್ನು ಪಠಿಸಿದಲ್ಲಿ ತತ್ಕ್ಷಣವೇ ಶಿಕ್ಷೆಯಿಂದ ಮುಕ್ತನಾಗುವನು.

**ರಾಜದರ್ಶನವೇಲಾಯಾಂ ಪಠೇದೇತತ್ರಿವಾರತಃ । ಸ ರಾಜಾನಾಂ ವಶಂ ನೀತ್ವಾ ಪ್ರಕೃತೀಶ್ಚ ಸಭಾಂ ಜಯೇತ್ ॥24॥**

ಭಾವಾರ್ಥ - ರಾಜದರ್ಶನಕ್ಕೆ ತೆರಳುವಾಗ ಇದನ್ನು ಮೂರು ಬಾರಿ ಪಠಿಸಿದ್ದೇ ಆದಲ್ಲಿ ರಾಜನನ್ನು ವಶಪಡಿಸಿಕೊಳ್ಳಬಹುದು. ಇದರ ಪಠನ ಮಾತ್ರದಿಂದ ಪ್ರಕೃತಿಯನ್ನೂ ಸಭೆಯನ್ನೂ ಗೆಲ್ಲಬಹುದು.

**ಇದಂ ಗಣೇಶ ಕವಚಂ ಕಶ್ಯಪೇನ ಸಮೀರಿತಂ । ಮುದ್ಗಲಾಯ ಚ ತೇ ನಾಥ ಮಾಂಡವ್ಯಾಯ ಮಹರ್ಷಯೇ ॥25॥**

ಭಾವಾರ್ಥ - ಈ ಗಣೇಶ ಕವಚವನ್ನು ಕಶ್ಯಪ ಮಹರ್ಷಿಯು ಮುದ್ಗಲನಿಗೂ ಆತನು ಮಾಂಡವ್ಯ ಮುನಿಗೂ ಹೇಳಿದ್ದಾಗಿದೆ.

**ಮಹ್ಯಂ ಸಪ್ರಾಹ ಕೃಪಯಾ ಕವಚಂ ಸರ್ವಸಿದ್ಧಿದಂ । ನದೇಯಂ ಭಕ್ತಿಹೀನಾಯ ದೇಯಂ ಶ್ರದ್ಧಾವತೇ ಶುಭಂ ॥26॥**

ಭಾವಾರ್ಥ - ಸರ್ವಸಿದ್ಧಿಪ್ರದವೂ ಶುಭಪ್ರದವೂ ಆಗಿರುವ ಈ ಕವಚವನ್ನು ಭಕ್ತಿಹೀನನಿಗೆ ನೀಡಲಾಗದು. ಶ್ರದ್ಧಾವಂತನಿಗೆ ನೀಡಬೇಕು.

**ಅನೇನಾಸ್ಯ ಕೃತಾ ರಕ್ಷಾ ನ ಬಾಧಾಽಸ್ಯ ಭವೇತ್ ಕ್ವಚಿತ್ । ರಾಕ್ಷಸಾಸುರ ವೇತಾಲ ದೈತ್ಯದಾನವ ಸಂಭವಾ ॥27॥**

ಭಾವಾರ್ಥ - ಈ ಕವಚವನ್ನು ರಕ್ಷೆಯಾಗಿಸಿಕೊಂಡವರಿಗೆ ಅಸುರ, ರಾಕ್ಷಸ, ದೈತ್ಯ ದಾನವ, ಬೇತಾಳಾದಿ ದುಷ್ಟ ಶಕ್ತಿಗಳಿಂದ ಉಂಟಾಗುವ ಬಾಧೆಗಳಿಂದ ರಕ್ಷಣೆ ದೊರಕುವುದು.

॥ ಇತಿ ಶ್ರೀ ಗಣೇಶ ಕವಚ ಸ್ತೋತ್ರಂ ಸಂಪೂರ್ಣಂ ॥

## 3.5 ಶ್ರೀ ಗಣೇಶ ಭುಜಂಗ ಪ್ರಯಾತಾಷ್ಟಕ ಸ್ತೋತ್ರಂ

**ರಣತ್ ಕ್ಷುದ್ರ ಘಂಟಾನಿನಾದಾಭಿರಾಮಂ । ಚಲತ್ತಾಂಡವೋದ್ದಂಡವತ್ ಪದ್ಮತಾಲಂ ॥ ಲಸತ್ತುಂದಿಲಾಂಗೋಪರಿ ವ್ಯಾಲಹಾರಂ । ಗಣಾಧೀಶಮೀಶಾನ ಸೂನುಂ ತಮೀಡೇ ॥1॥**

ಭಾವಾರ್ಥ - ಚಿಕ್ಕ ಘಂಟೆಯ ಮಂಜುಲ ಸದ್ದಿನಿಂದ ಶೋಭಿಸುತ್ತಿರುವವನೂ, ಪದ್ಮ ತಾಳದೊಂದಿಗೆ ತಾಂಡವ ನೃತ್ಯವನ್ನು ಮಾಡುತ್ತಾ ಚಲಿಸುತ್ತಿರುವವನೂ, ದೊಡ್ಡ ಉದರದ ಮೇಲೆ ಮಾಲೆಯಂತೆ ನಾಗನನ್ನು ಧರಿಸಿಕೊಂಡಿರುವವನೂ ಗಣಗಳ ಅಧಿಪತಿಯೂ ಈಶ್ವರನ ಪುತ್ರನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ಧ್ವನಿಧ್ವಂಸ ವೀಣಾಲಯೋಲ್ಲಾಸಿ ವಕ್ತ್ರಂ । ಸ್ಫುರಚ್ಛುಂಡ ದಂಡೋಲ್ಲ ಸದ್ಬೀಜ ಪೂರಂ ॥ ಗಲದ್ದರ್ಪ ಸೌಗಂಧ್ಯಲೋಲಾಲಿ ಮಾಲಂ । ಗಣಾಧೀಶಮೀಶಾನ ಸೂನುಂ ತಮೀಡೇ ॥2॥**

ಭಾವಾರ್ಥ - ವೀಣೆಯಿಂದ ಹೊಡುವ ಇಂಪಾದ ನಾದಲಯಗಳಿಗೆ ಅನುಗುಣವಾಗಿ ಪ್ರಕಾಶಿಸುವ ಉಲ್ಲಾಸಿತ ಮುಖದವನೂ, ಸೊಂಡಿಲಿನ ಅಗ್ರ ಭಾಗದಲ್ಲಿ ಸತ್ಫಲವನ್ನು ಹಿಡಿದುಕೊಂಡಿರುವವನೂ ಕೆನ್ನೆಯಪ್ರದೇಶದಿಂದ ಸುರಿಯುತ್ತಲಿರುವ ಮದೋದಕದ ಪರಿಮಳಕ್ಕೆ ಸುತ್ತುತ್ತಲಿರುವ ದುಂಬಿಗಳ ಗುಂಪಿನಿಂದ ಕೂಡಿರುವವನೂ ಆದ ಗಣಗಳ ಅಧಿಪತಿಯೂ ಈಶ್ವರನ ಪುತ್ರನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ಪ್ರಕಾಶಜ್ಜಪಾರಕ್ತ ರತ್ನ ಪ್ರಸೂನ । ಪ್ರವಾಲ ಪ್ರಭಾತಾರುಣ ಜ್ಯೋತಿರೇಕಂ ॥ ಪ್ರಲಂಬೋದರಂ ವಕ್ರತುಂಡೈಕದಂತಂ । ಗಣಾಧೀಶಮೀಶಾನ ಸೂನುಂ ತಮೀಡೇ ॥3॥**

ಭಾವಾರ್ಥ - ತೇಜೋಮಯವೂ ಶೋಭಾಯಮಾನವೂ ಆಗಿರುವ ಕೆಂಪು ವರ್ಣದ ದಾಸವಾಳದ ಪುಷ್ಪದಂತೆಯೂ, ಮಾಣಿಕ್ಯ, ಹವಳ ಹಾಗೂ ಉಷಃಕಾಲದ ಸೂರ್ಯನಂತೆಯೂ, ಲಂಬೋದರನೂ, ಡೊಂಕು ಮೋರೆಯವನೂ, ಏಕದಂತನೂ ಗಣಗಳ ಅಧಿಪತಿಯೂ ಈಶ್ವರನ ಪುತ್ರನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ವಿಚಿತ್ರಸ್ಫುರದ್ರತ್ನ ಮಾಲಾಕಿರೀಟಂ । ಕಿರೀಟೋಲ್ಲಸಚ್ಚಂದ್ರ ರೇಖಾ ವಿಭೂಷಂ ॥ ವಿಭೂಷೈಕಭೂಷಂ ಬವದ್ವಂಸ ಹೇತುಂ । ಗಣಾಧೀಶಮೀಶಾನ ಸೂನುಂ ತಮೀಡೇ ॥4॥**

ಭಾವಾರ್ಥ - ಕಂಠದಲ್ಲಿ ವಿಚಿತ್ರವಾಗಿ ಹೊಳೆಯುತ್ತಲಿರುವರತ್ನದ ಹಾರವುಳ್ಳವನೂ, ಶಿರದಲ್ಲಿ ರತ್ನಖಚಿತ ಕಿರೀಟವನ್ನು ಧರಿಸಿರುವವನೂ, ಕೀರೀಟದಲ್ಲಿ ಚಂದ್ರಕಲಾ ಶೋಭೆಯುಳ್ಳವನೂ, ಕೇವಲ ಭೂಷಣಕ್ಕಾಗಿ ಅಲಂಕರಿಸಿಕೊಂಡವನೂ, ಭಕ್ತರ ಸಾಂಸಾರಿಕ ದುಃಖಗಳನ್ನು ಪರಿಹರಿಸುವವನೂ, ಗಣಗಳ ಅಧಿಪತಿಯೂ ಈಶ್ವರನ ಪುತ್ರನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ಉದಂಚದ್ ಭುಜಾವಲ್ಲರೀ ದೃಶ್ಯಮೂಲೋ- । ಚಲದ್ ಭ್ರೂಲತಾ ವಿಭ್ರಮ ಭ್ರಾಜದಕ್ಷಂ ॥ ಮರುತ್ ಸುಂದರೀ ಚಾಮರೈಃ ಸೇವ್ಯಮಾನಂ । ಗಣಾಧೀಶಮೀಶಾನ ಸೂನುಂ ತಮೀಡೇ ॥5॥**

ಭಾವಾರ್ಥ - ಮೇಲೇಳುತ್ತಲಿರುವ ತೋಳ್ ಲತೆಯ ಬುಡದಲ್ಲಿ ಚಲಿಸುತ್ತಲಿರುವ ಹಗ್ಗದ ಆಕಾರದ ಹುಬ್ಬುಗಳಿಂದ ಪ್ರಕಾಶಿಸುತ್ತಿರುವ ಕಣ್ಣುಗಳುಳ್ಳವನೂ ಸುರಲೋಕದ ಅಪ್ಸರೆಯರ ಚಾಮರಗಳಿಂದ ಸೇವೆಯನ್ನು ಸ್ವೀಕರಿಸುತ್ತಲಿರುವವನೂ ಗಣಗಳ ಅಧಿಪತಿಯೂ ಈಶ್ವರನ ಪುತ್ರನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ಸ್ಫುರನ್ನಿಷ್ಠುರಾಲೋಲ ಪಿಂಗಾಕ್ಷಿತಾರಂ । ಕೃಪಾ ಕೋಮಲೋದಾರ ಲೀಲಾವತಾರಂ ॥ ಕಲಾಬಿಂದುಗಂ ಗೀಯತೇ ಯೋಗಿವರ್ಯೈ । ಗರ್ಣಾಧೀಶಮೀಶಾನ ಸೂನುಂ ತಮೀಡೇ ॥6॥**

ಭಾವಾರ್ಥ - ಹೊಳೆಯುತ್ತಲಿರುವ ಹಾಗೂ ಪೂರ್ಣತೆಯಿಂದ ಕೂಡಿ ಚಲಿಸುವ ಕಂದುಗೆಂಪಿನ ಕಣ್ಣಾಲಿಕೆಗಳುಳ್ಳವನೂ, ಕೃಪಾಮಯಿಯೂ, ತೇಜೋಮಯನೂ, ಚಂಚಲ ಹಾಗೂ ನಿಷ್ಠುರ ದೃಷ್ಟಿಯುಳ್ಳವನೂ, ಉದಾರ ಹಾಗೂ ಕೋಮಲವಾಗಿ ಲೀಲಾವತಾರವನ್ನು ತೋರಿದವನೂ ಕಲಾಬಿಂದುಗಳ ಅಂತ್ಯತಾಣವಾಗಿರುವವನೂ ಯೋಗಿ ಶ್ರೇಷ್ಠರುಗಳಿಂದ ಹೊಗಳಿಸಿಕೊಂಬವನೂ ಗಣಗಳ ಅಧಿಪತಿಯೂ ಈಶ್ವರನ ಪುತ್ರನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ಯಮೇಕಾಕ್ಷರಂ ನಿರ್ಮಲಂ ನಿರ್ವಿಕಲ್ಪಂ । ಗುಣಾತೀತಮಾನಂದಮಾಕಾರ ಶೂನ್ಯಂ ॥ ಪರಂ ಪಾರಮೋಂಕಾರಮಾಮ್ನಾಯ ಗರ್ಭಂ । ವದಂತಿ ಪ್ರಗಲ್ಭಂ ಪುರಾಣಂ ತಮೀಡೇ ॥7॥**

ಭಾವಾರ್ಥ - ಬ್ರಹ್ಮವನ್ನು ಪ್ರತಿನಿಧಿಸುವ ಒಂದೇ ಅಕ್ಷರದವನೂ, ವೇದವನ್ನು ತನ್ನ ಶರೀರದಲ್ಲಿರಿಸಿಕೊಂಡಿರುವವನೂ ಓಂಕಾರವಾಚ್ಯನೂ, ಉಪಾಧಿ ರಹಿತನೂ, ಕಲ್ಪರಹಿತನೂ, ಕೊಳೆಯಿಲ್ಲದವನೂ, ಸಂಶಯಾತೀತನೂ, ಗುಣಾಗುಣಗಳಿಗೆ ನಿಲುಕದವನೂ, ಆಕಾರರಹಿತನೂ, ಆನಂದಸ್ವರೂಪನೂ, ಸರ್ವ ಶ್ರೇಷ್ಠನೂ, ವಾಗ್ಮಿಯಾಗಿರುವ ಪುರಾಣ ಪುರುಷನೂ ಗಣಗಳ ಅಧೀಶನೂ ಈಶಪುತ್ರನೂ ಆಗಿರುವ ಗಣೇಶನನ್ನು ನಾನು ಸ್ತುತಿಸುವೆ.

**ಚಿದಾನಂದ ಸಾಂದ್ರಾಯ ಶಾಂತಾಯತುಭ್ಯಂ । ನಮೋ ವಿಶ್ವಕರ್ತ್ರೇ ಚ ಹರ್ತ್ರೇ ಚ ತುಭ್ಯಂ ॥ ನಮೋಽನಂತ ಲೀಲಾಯ ಕೈವಲ್ಯ ಭಾಸೇ । ನಮೋ ವಿಶ್ವಬೀಜಾಯ ಪ್ರಸೀದೇಶಸೂನೋ ॥8॥**

ಭಾವಾರ್ಥ - ಚಿದಾನಂದಮಯಿಯೂ, ಶಾಂತ ಸ್ವರೂಪಿಯೂ, ಬ್ರಹ್ಮಾಂಡದ ಉತ್ಪತ್ತಿಕಾರನೂ, ಲಯಕಾರಿಯೂ, ಅದ್ವಿತೀಯನೂ, ಅನಂತಲೀಲಾಮಯಿಯೂ, ತೇಜೋಮಯಿಯೂ, ಪ್ರಪಂಚದ ಬೀಜ ಸ್ವರೂಪನೂ ಆಗಿರುವ ಈಶ್ವರತನಯನೇ ಪ್ರಸನ್ನನಾಗು.

**ಇಮಂ ಸುಸ್ತವಂ ಪ್ರಾತರುತ್ಥಾಯ ಭಕ್ತ್ಯಾ । ಪಠೇದ್ಯಸ್ತು ಮರ್ತ್ಯೋರ್ಲಭೇತ್ಸರ್ವಕಾಮಾನ್ ॥ ಗಣೇಶ ಪ್ರಸಾದೇನ ಸಿಧ್ಯಂತಿ ವಾಚೋ । ಗಣೇಶೇ ವಿಭೌ ದುರ್ಲಭಂ ಕಿಂ ಪ್ರಸನ್ನೇ ॥9॥**

ಭಾವಾರ್ಥ - ಉತ್ತಮವಾಗಿರುವ ಈ ಸ್ತೋತ್ರವನ್ನು ಪ್ರತಿದಿನ ಉಷಕಾಲದಲ್ಲಿ ಎದ್ದು ಭಕ್ತಿಯಿಂದ ಪಠಿಸುವವನು ಸರ್ವ ಇಷ್ಟಾರ್ಥಗಳನ್ನೂ ಪಡೆಯುವನು. ಅಲ್ಲದೆ ಗಣೇಶನ ಪ್ರಸಾದದಿಂದ ಆತನಿಗೆ ವಾಕ್ಸಿದ್ಧಿಯಾಗುವುದು. ಸರ್ವ ವ್ಯಾಪಿಯಾಗಿರುವ ಶ್ರೀಗಣೇಶನು ಒಲಿದರೆ ದುರ್ಲಭವೆನಿಸುವುದು ಯಾವುದೂ ಇಲ್ಲ. ಸಮಸ್ತವೂ ಲಭಿಸುವುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಗಣೇಶ ಭುಜಂಗ ಪ್ರಯಾತಾಷ್ಟಕ ಸ್ತೋತ್ರಂ ಸಂಪೂರ್ಣಂ ॥

## 3.6 ಶ್ರೀ ಗಣೇಶ ಸ್ತೋತ್ರಮಾಲಾ

**ಅಜಂ ನಿರ್ವಿಕಲ್ಪಂ ನಿರಾಕಾರಮೇಕಂ । ನಿರಾನಂದಮಾನಂದ ಮದ್ವೈತ ಪೂರ್ಣಂ ॥**
**ಪರಂ ನಿರ್ಗುಣಂ ನಿರ್ವಿಶೇಷಂ ನಿರೀಹಂ । ಪರಬ್ರಹ್ಮರೂಪಂ ಗಣೇಶಂ ಭಜೇಮ ॥1॥**

ಭಾವಾರ್ಥ - ಅನಾದಿಯೂ, ಸಮಾಧಿಸ್ಥನೂ, ಆಕಾರರಹಿತನೂ, ಅದ್ವಿತೀಯನೂ, ಆನಂದರಹಿತನೂ, ಆನಂದಸ್ವರೂಪನೂ, ಸರಿಸಾಟಿಯಿಲ್ಲದವನೂ, ಪರಿಪೂರ್ಣನೂ, ಗುಣರಹಿತನೂ, ಅಂತರ ರಹಿತನೂ, ಇಚ್ಛಾರಹಿತನೂ, ಪರಬ್ರಹ್ಮ ಸ್ವರೂಪನೂ ಆಗಿರುವ ಗಣೇಶನನ್ನು ಭಜಿಸೋಣಾ.

**ಗುಣಾತೀತಮಾದ್ಯಂ ಚಿದಾನಂದರೂಪಂ । ಚಿದಾಭಾಸಕಂ ಸರ್ವಗಂ ಜ್ಞಾನಗಮ್ಯಂ ॥**
**ಮುನಿಧ್ಯೇಯ ಮಾಕಾಶ ರೂಪಂ ಪರೇಶಂ । ಪರಬ್ರಹ್ಮರೂಪಂ ಗಣೇಶಂ ಭಜೇಮ ॥2॥**

ಭಾವಾರ್ಥ - ಗುಣಗಳನ್ನು ಮೀರಿದವನೂ, ಚಿದಾನಂದ ಸ್ವರೂಪನೂ, ಆತ್ಮಸ್ವರೂಪನೂ, ಸಮಸ್ತರಿಗೂ ಜ್ಞಾನ ಪ್ರದಾಯಕನೂ, ಸರ್ವ ವ್ಯಾಪಿಯೂ,

ಮುನಿಗಳ ಧ್ಯಾನದ ಗುರಿಯಾಗಿರುವವನೂ, ಗಗನ ಸ್ವರೂಪನೂ, ಪರಮೇಶನೂ, ಪರಬ್ರಹ್ಮ ರೂಪನೂ ಆಗಿರುವ ಗಣೇಶನನ್ನು ಭಜಿಸೋಣಾ.

**ಜಗತ್ಕಾರಣಂ ಕಾರಣಜ್ಞಾನರೂಪಂ । ಸುರಾದಿಂಸುಖಾದಿಂ ಯುಗಾದಿಂ ಗಣೇಶಂ ॥ ಜಗದ್ವ್ಯಾಪಿನಂ ವಿಶ್ವ ವಂದ್ಯಂ ಸುರೇಶಂ । ಪರಬ್ರಹ್ಮರೂಪಂ ಗಣೇಶಂ ಭಜೇಮ ॥3॥**

ಭಾವಾರ್ಥ - ಜಗತ್ತಿನ ನಿಮಿತ್ತ ಸ್ವರೂಪನೂ, ಜ್ಞಾನ ರೂಪನೂ, ದೇವತೆಗಳಲ್ಲಿ ಮೊದಲಿಗನೂ, ಸುಖ ಮತ್ತು ಯುಗಗಳ ಆದಿ ರೂಪವೂ, ಬ್ರಹ್ಮಾಂಡವನ್ನು ವ್ಯಾಪಿಸಿ ವಂದಿಸಲ್ಪಡುವವನೂ, ಪ್ರಪಂಚದ ಅಸ್ಥಿತ್ವಕ್ಕೆ ಕಾರಣನಾದವನೂ, ದೇವತೆಗಳ ಒಡೆಯನೂ. ಪರಬ್ರಹ್ಮ ಸ್ವರೂಪನೂ ಆಗಿರುವ ಗಣೇಶನನ್ನು ಭಜಿಸೋಣಾ.

**ರಜೋಯೋಗತೋ ಬ್ರಹ್ಮರೂಪಂ ಶ್ರುತಿಜ್ಞಂ । ಸದಾ ಕಾರ್ಯಸಕ್ತಂ ಹೃದಾ ಚಿಂತ್ಯರೂಪಂ ॥ ಜಗತ್ಕಾರಣಂ ಸರ್ವವಿದ್ಯಾ ನಿಧಾನಂ । ಪರಬ್ರಹ್ಮರೂಪಂ ಗಣೇಶಂ ನತಾಸ್ಮಃ ॥4॥**

ಭಾವಾರ್ಥ - ರಜೋಗುಣ ನೈಪುಣ್ಯನೂ, ಪರಬ್ರಹ್ಬ ರೂಪನೂ, ವೇದಪರಾಯಣನೂ, ನಿರಂತರ ಕಾರ್ಯ ನಿರತನೂ, ಹೃದಯಲ್ಲಿ ಚಿಂತಿಸಲ್ಪಡುವ ಸ್ವರೂಪದವನೂ, ಜಗತ್ತಿನ ನಿಮಿತ್ತ ಸ್ವರೂಪನೂ, ಸಮಸ್ತ ವಿದ್ಯಾ ಪ್ರದಾಯಕನೂ ಪರಬ್ರಹ್ಮ ಸ್ವರೂಪನೂ ಆಗಿರುವ ಗಣೇಶನನ್ನು ಸ್ತುತಿಸುತ್ತೇನೆ.

**ಸದಾಸತ್ವ ಯೋಗಂ ಮುದ್ರಾಕ್ರೀಡಮಾನಂ । ಸುರಾರೀನ್ ಹರಂ ತ್ವಂ ಜಗತ್ಪಾಲಯಂತಂ ॥ ಅನೇಕಾವತಾರಂ ನಿಜ ಅಜ್ಞಾನಹಾರಂ । ಸದಾ ವಿಷ್ಣುರೂಪಂ ಗಣೇಶಂ ನಮಾಮಃ ॥5॥**

ಭಾವಾರ್ಥ - ಯಾವಾಗಲೂ ಸಾತ್ವಿಕ ಯೋಗ ಕ್ರಿಯೆಗಳಲ್ಲಿ ನಿರತನಾಗಿ ವಿನೋದಿಸುವವನೂ, ದೇವತೆಗಳ ವೈರಿಗಳನ್ನು ವಧಿಸುವವನೂ, ಜಗತ್ತಿನ ಪಾಲಕನೂ, ಅನೇಕ ರೂಪಗಳನ್ನು ತಾಳಿದವನೂ, ಅಜ್ಞಾನವನ್ನು ಪರಿಹರಿಸಿ ಜ್ಞಾನದಾಯಕನಾಗಿ

ಉದ್ಧರಿಸುವವನೂ, ಮಹಾವಿಷ್ಣು ಶಕ್ತಿ ಸ್ವರೂಪನೂ ಆಗಿರುವ ಗಣೇಶನಿಗೆ ನಾನು ನಮಿಸುವೆನು.

**ತಮೋ ಯೋಗಿನಂ ರುದ್ರರೂಪಂ ತ್ರಿನೇತ್ರಂ । ಜಗತ್ಕಾರಕಂ ತಾರಕಂ ಜ್ಞಾನ ಹೇತುಂ ॥ ಅನೇಕಾಗಮೈಃ ಸ್ವಜನಂ ಬೋಧಯಂತಂ । ಸದಾ ಶರ್ವರೂಪಂ ಗಣೇಶಂ ನಮಾಮಃ ॥6॥**

ಭಾವಾರ್ಥ - ಅಂಧಕಾರವನ್ನು ಜಯಿಸಿದ ಯೋಗಿಸ್ವರೂಪನೂ, ರುದ್ರ ಸ್ವರೂಪಿಯೂ, ತ್ರಿನಯನನೂ, ಜಗತ್ತಿನ ಒಡೆಯನೂ, ಜಗದ ಉದ್ಧಾರಕನೂ, ಜಗತ್ತಿನ ಜ್ಞಾನಕ್ಕೆ ಕಾರಣೀಭೂತನಾದವನೂ, ತನ್ನ ನೈಜ ಭಕ್ತರಿಗೆ ಅನೇಕ ಆಗಮಗಳನ್ನು ಭೋಧಿಸುವವನೂ, ಯಾವಾಗಲೂ ಪರಮೇಶ್ವರ ಸ್ವರೂಪನೂ ಆಗಿರುವ ಗಣೇಶನಿಗೆ ನಾನು ನಮಸ್ಕರಿಸುವೆನು.

**ತಮಸ್ತೋಮ ಹಾರಂ ಜನಜ್ಞಾನ ಹಾರಂ । ತ್ರಯೀ ವೇದಸಾರಂ ಪರಬ್ರಹ್ಮ ಪಾರಂ ॥ ಮುನಿಜ್ಞಾನಕಾರಂ ವಿದೂರೇ ವಿಕಾರಂ । ಸದಾ ಬ್ರಹ್ಮರೂಪಂ ಗಣೇಶಂ ನಮಾಮಃ ॥7॥**

ಭಾವಾರ್ಥ - ಜಗತ್ತಿನ ಅಂಧಕಾರವನ್ನು ನಿವಾರಿಸುವವನೂ, ಜನರ ಅಜ್ಞಾನಗಳನ್ನು ಹೋಗಲಾಡಿಸುವವನೂ, ವೇದಗಳ ಸಾರ ಸರ್ವಸ್ವವೂ, ಪರಬ್ರಹ್ಮದ ಎಲ್ಲೆಯೂ, ಮುನಿಗಳಿಗೆ ಜ್ಞಾನವನ್ನು ಕರುಣಿಸುವವನೂ, ಇಂದ್ರಿಯ ಚಾಪಲ್ಯಗಳಿಗೆ ಬಹಳ ದೂರದಲ್ಲಿರುವವನೂ, ಯಾವಾಗಲೂ ಬ್ರಹ್ಮ ಸ್ವರೂಪನೂ ಆಗಿರುವ ಆಗಿರುವ ಗಣೇಶನಿಗೆ ನಾನು ನಮಸ್ಕರಿಸುವೆನು.

**ನಿಜೈರೋಷಧೀಸ್ತರ್ಪಯಂತಂ ಕರಾಪ್ತೈಃ । ಸುರೋಘಾನ್ ಕಲಾಭೀಃ ಸುಧಾಸ್ರಾವಿಣೀಭೀಃ ॥ ದಿನೇಶಾಂಶು ಸಂತಾಪಹಾರಂ ದ್ವಿಜೇಶಂ । ಶಶಾಂಕ ಸ್ವರೂಪಂ ಗಣೇಶಂ ನಮಾಮಃ ॥8॥**

ಭಾವಾರ್ಥ - ಅರಿಷಡ್ವರ್ಗಗಳ ಸಂಹಾರಕನೂ, ದೇವತೆಗಳಲ್ಲಿರುವ ರಸವಿದ್ಯೆಗಳಿಗ ಅಮೃತಪ್ರಾಯನೂ, ಸೂರ್ಯನ ತಾಪವನ್ನು ಪರಿಹರಿಸುವವನೂ, ವಿಪ್ರರಿಗೆ

ಒಡೆಯನೂ, ಚಂದ್ರನಂತೆ ಮನೋಹರ ರೂಪವುಳ್ಳವನೂ ಆಗಿರುವ ಗಣೇಶನಿಗೆ ನಾನು ನಮಸ್ಕರಿಸುವೆನು.

**ಪ್ರಕಾಶ ಸ್ವರೂಪಂ ನಭೋ ವಾಯುರೂಪಂ । ವಿಕಾರಾದಿ ಹೇತುಂ ಕಲಾಕಾಲ ಭೂತಂ ॥ ಅನೇಕಾಕ್ರಿಯಾಽನೇಕ ಶಕ್ತಿ ಸ್ವರೂಪಂ । ಸದಾ ಶಕ್ತಿ ರೂಪಂ ಗಣೇಶಂ ನಮಾಮಃ ॥9॥**

ಭಾವಾರ್ಥ - ಸ್ವಯಂಪ್ರಕಾಶನೂ, ವಾಯ್ವಾಕಾಶ ರೂಪವುಳ್ಳವನೂ, ತಳಮಳಗಳಿಗೆ ನಿಮಿತ್ತನೂ, ಕಲಂಕಗಳಿಗೆ ಯಮ ಸ್ವರೂಪನೂ, ವಿಭಿನ್ನ ಚಟುವಟಿಕೆಗಳನ್ನು ಹೊಂದಿದವನೂ, ಸಮಸ್ತ ಶಕ್ತಿ ಸ್ವರೂಪನೂ, ಆಗಿರುವ ಮಹಾಗಣೇಶನಿಗೆ ನಾನು ನಮಸ್ಕರಿಸುವೆನು.

**ಪ್ರದಾನಂ ಸ್ವರೂಪಂ ಮಹತ್ತತ್ವರೂಪಂ । ಧರಾವಾರಿ ರೂಪಂ ದಿಗೀಶಾದಿ ರೂಪಂ ॥ ಅಸತ್ಸತ್ವರೂಪಂ ಜಗದ್ಧೇತು ಭೂತಂ । ಸದಾ ವಿಶ್ವರೂಪಂ ಗಣೇಶಂ ನತಾಸ್ಮಃ ॥10॥**

ಭಾವಾರ್ಥ - ಸಮಸ್ತರೂ ಮೆಚ್ಚುವಂತಹಾ ಸ್ವರೂಪವುಳ್ಳವನೂ, ಮಹಾ ತತ್ವ ಸ್ವರೂಪನೂ, ಭೂ-ಜಲಗಳ ಸ್ವರೂಪನೂ, ದಿಕ್ಕುಗಳಿಗೆ ಅಧಿಪತಿಯೂ, ಇಂದ್ರನ ಪ್ರಾಣ ಸ್ವರೂಪನೂ, ಜಗತ್ತಿನ ಆಗುಹೋಗುಗಳಿಗೆ ಕಾರಣನಾದವನೂ, ಸರ್ವಕಾಲಿಕಪ್ರಪಂಚ ಸ್ವರೂಪನೂ ಆಗಿರುವ ಮಹಾಗಣೇಶನಿಗೆ ನಾನು ನಮಸ್ಕರಿಸುವೆನು.

**ತ್ವದೀಯೇ ಮನಃ ಸ್ಥಾಪಯೇದಂಘ್ರಿಯುಗ್ಮೇ । ಜನೋ ವಿಘ್ನಸಂಘಾನ್ ನ ಪೀಡಾಂ ಲಭೇತ್ ॥ ಲಸತ್ಸೂರ್ಯ ಬಿಂಬೇ ವಿಶಾಲೇ ಸ್ಥಿತೇಽಯಂ । ಜನೋಧ್ವಾಂತ ಬಾಧಾಂ ಕಥಂ ವಾ ಲಭೇತ್ ॥11॥**

ಭಾವಾರ್ಥ - ಉಲ್ಲಸಿತನಾಗಿ ವಿಶಾಲವಾಗಿರುವ ಸೂರ್ಯಬಿಂಬದಲ್ಲಿ ನೆಲೆಯಾಗಿರುವ ಮಹಾಗಣೇಶನೇ, ನಿನ್ನ ಪಾವನವಾದ ಚರಣಾರವಿಂದಗಳನ್ನು ಮನಸ್ಸಿನಲ್ಲಿ ಸ್ಥಾಪಿಸಿ ಜನರು ವಿಘ್ನಗಳ ಸಮೂಹಗಳಿಂದುಂಟಾಗುವ ತೊಂದರೆಗಳನ್ನು

ನಿವಾರಿಸಿಕೊಳ್ಳಬಹುದಾಗಿದೆ. ಇಂತಿರುವಾಗ ಭಕ್ತಾದಿಗಳಿಗೆ ಇನ್ನೆಲ್ಲಿಯ ಭಾದೆ ಪೀಡಿಸಲು ಸಾಧ್ಯ?

**ವಯಂ ಭ್ರಾಮಿತಾಂ ಸರ್ವಥಾಽಜ್ಞಾನ ಯೋಗಾತ್ । ಅಲಬ್ಧಾಸ್ತ ವಾಂಘ್ರಿಂ ಬಹೂನ್ವರ್ಷ ಪೂಗಾನ್ ॥ ಇದಾನೀ ಮವಾಪ್ತಾಸ್ತ್ವವೈವ ಪ್ರಸಾದಾತ್ । ಪ್ರಸನ್ನಾನ್ಸದಾ ಪಾಹಿ ವಿಶ್ವಂಭರಾದ್ಯ ॥12॥**

ಭಾವಾರ್ಥ - ನಿಶ್ಚಯವಾಗಿಯೂ ಅಜ್ಞಾನದ ಮಂಕು ಕವಿದಿರುವ ನನಗೆ ಅನೇಕ ವರ್ಷಗಳಿಂದ ನಿನ್ನ ಪಾದಾರವಿಂದಗಳು ಲಭ್ಯವಾಗಲಿಲ್ಲ. ಈಗಲಾದರೂ ಈ ಸ್ತೋತ್ರಗಳನ್ನು ಪಠಿಸುತ್ತಿರುವುದರಿಂದ ವಿಶ್ವವನ್ನು ಸಂರಕ್ಷಿಸುವವನಾದ ನೀನು ಪ್ರಸನ್ನನಾಗಿ ನಮ್ಮೆಲ್ಲರನ್ನು ಕಾಪಾಡು ಮಹಾಗಣೇಶನೇ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಗಣೇಶ ಸ್ತೋತ್ರ ಮಾಲಾ ಸಂಪೂರ್ಣಂ ॥

## 3.7 ಶ್ರೀ ಗಣೇಶ ಮಂಗಲಾಷ್ಟಕ

**ಗಜಾನನಾಯ ಗಾಂಗೇಯ ಸಹಜಾಯ ಸದಾತ್ಮನೇ । ಗೌರಿ ಪ್ರಿಯ ತನೂಜಾಯ ಗಣೇಶಯಾಸ್ತು ಮಂಗಳಂ ॥1॥**

**ನಾಗ ಯಜ್ಞೋಪವೀತಾಯ ನತ ವಿಘ್ನ ವಿನಾಶಿನೇ । ನಂದ್ಯಾದಿ ಗಣನಾಥಾಯ ನಾಯಕಾಯಾಸ್ತು ಮಂಗಳಂ ॥2॥**

**ಇಭ ವಕ್ತ್ರಾಯ ಚ ಇಂದ್ರಾದಿ ವಂದಿತಾಯ ಚಿದಾತ್ಮನೇ । ಈಶಾನ ಪ್ರೇಮ ಪಾತ್ರಾಯ ಚೇಷ್ಟದಾಯಾಸ್ತು ಮಂಗಳಂ ॥3॥**

**ಸುಮುಖಾಯ ಸುಶುಂಡಾಗ್ರೋ ಕ್ಷಿಪ್ತಾಮೃತ ಘಟಾಯಚ । ಸುರ ಬೃಂದಕ ಸೇವ್ಯಾಯ ಸುಖದಾಯಾಸ್ತು ಮಂಗಳಂ ॥4॥**

**ಚತುರ್ಭುಜಾಯ ಚಂದ್ರಾರ್ಧ ವಿಲಸ್ಮಂತಕಾಯಚ । ಚರಣಾನನ ತಾನಂತ ತಾರಣಾಯಾಸ್ತು ಮಂಗಳಂ ॥5॥**

**ವಕ್ರತುಂಡಾಯ ವಟವೇ ವಂದ್ಯಾಯ ವರದಾಯಚ । ವಿರೂಪಾಕ್ಷ ಸುತಾಯಾಸ್ತು ವಿಘ್ನನಾಶಾಯ ಮಂಗಳಂ ॥6॥**

**ಪ್ರಮೋದಾ ಮೋದರೂಪಾಯ ಸಿಧ್ಧಿ ವಿಜ್ಞಾನ ರೂಪಿನೇ । ಪ್ರಕೃಷ್ಟ ಪಾಪ ನಾಶಾಯ ಫಲದಾಯಾಸ್ತು ಮಂಗಳಂ ॥7॥**

**ಮಂಗಳಂ ಗಣನಾಥಾಯಾ ಮಂಗಳಂ ಹರ ಸೂನವೇ । ಮಂಗಳಂ ವಿಘ್ನರಾಜಾಯ ವಿಘ್ನ ಹರೇಸ್ತು ಮಂಗಳಂ ॥8॥**

**ಶ್ಲೋಕಾಷ್ಟಕಮಿದಂ ಪುಣ್ಯಂ ಮಂಗಳ ಪ್ರದಮಾಚರೇತ್ । ಪಠಿತವ್ಯಂ ಪ್ರಯತ್ನೇನ ಸರ್ವ ವಿಘ್ನ ನಿವೃತ್ತಯೇ ॥9॥**

ಭಾವಾರ್ಥ - ಗಜಾನನನೂ, ಬಂಗಾರದ ವರ್ಣದವನೂ, ಸಹಜಸ್ವರೂಪುನೂ, ಸದಾತ್ಮಸ್ವರೂಪಿಯೂ, ಗೌರೀದೇವಿಯ ಪ್ರೀತಿಯ ಮಗನೂ ಆಗಿರುವ ಗಣೇಶನಿಗೆ ಮಂಗಲವಾಗಲಿ. ಸರ್ಪವನ್ನು ಯಜ್ಞೋಪವೀತವನ್ನಾಗಿ ಧರಿಸಿದವನೇ ಸಮಸ್ತ ವಿಘ್ನಗಳ ನಾಶಕನೇ ನಂದಿಯೇ ಆದಿಯಾದ ಗಣಗಳನಾಯಕನಾಗಿರುವವನಿಗೆ ಮಂಗಲವಾಗಲಿ. ಗಜಮುಖನೂ, ಇಂದ್ರಾದಿಗಳಿಂದ ವಂದಿಸಲ್ಪಡುವವನೂ, ಚಿದಾತ್ಮಸ್ವರೂಪನೂ, ಈಶ್ವರನ ಪ್ರೇಮ ಪಾತ್ರನೂ, ಹಾವಭಾವಗಳನ್ನು ಕರುಣಿಸುವವನೂ ಆಗಿರುವವಗೆ ಮಂಗಲವಾಗಲಿ. ಸುಂದರವಾದ ಮೊಗದವನೂ ಮುಖ್ಯವಾಗಿ ಆನೆಯಸೊಂಡಿಲನನ್ನು ಹೊಂದಿರುವವನೂ, ಅಮೃತಪಾತ್ರೆಯಿಂದ ಅಮೃತವನ್ನು ಚೆಲ್ಲುವವನೂ, ಸುರ ಸಮೂಹದಿಂದ ಸೇವೆಯನ್ನು ಸ್ವೀಕರಿಸುವವನೂ, ಸುಖವನು ಕರುಣಿಸುವವನೂ ಆಗಿರುವವಗೆ ಮಂಗಲವಾಗಲಿ. ಓರೆಯಾದ ಸೊಂಡಿಲಿನಿಂದ ಕೂಡಿರುವವನೂ, ಬ್ರಹ್ಮಚಾರಿಯೂ, ಸಕಲರ ವಂದನೆಗೆ ಪಾತ್ರನಾಗುವವನೂ ವಿರೂಪಾಕ್ಷನ ತನಯನೂ ಆಗಿರುವ ವಿಘ್ನ ವಿನಾಶಕನಿಗೆ ಮಂಗಲವಾಗಲಿ. ಸಂತಸಪ್ರದಾಯಕನೂ ಸಂತಸರೂಪನೂ ಸಿದ್ಧಿ ವಿದ್ಯಾ ಜ್ಞಾನ ಸ್ವರೂಪನೂ, ಪ್ರಧಾನವಾಗಿ ಸರ್ವ ಪಾಪ ವಿನಾಶಕನೂ ಆಗಿ ಉತ್ತಮ ಫಲಗಳನ್ನು ಕರುಣಿಸುವವಗೆ ಮಂಗಲವಾಗಲಿ. ಗಣಗಳ ಒಡೆಯನೇ ಮಂಗಲವು. ಹರನ ಪುತ್ರನೇ

ಮಂಗಲವು. ವಿಘ್ನಗಳ ಅರಸನೇ ಮಂಗಲವು. ವಿಘ್ನಗಳ ಪರಿಸುವವನೇ ಮಂಗಲವು. ಈ ಅಷ್ಟಕ ಶ್ಲೋಕಗಳು ಪುಣ್ಯದಾಯಕವೂ. ಮಂಗಲಪ್ರದವಾಗಿಯೂ ಇದ್ದು ಇವುಗಳನ್ನು ಪ್ರಯತ್ನ ಪೂರ್ವಕ ಪಠಿಸುವವರು ಸಮಸ್ತ ವಿಘ್ನಗಳಿಂದ ನಿವೃತ್ತಿ ಹೊಂದುವರು.

॥ ಇತಿ ಶ್ರೀ ಗಣೇಶ ಮಂಗಲಾಷ್ಟಕಂ ಸಂಪೂರ್ಣಂ ॥

----- ****** -----

# 4 ನವಗ್ರಹ ಸ್ತೋತ್ರಗಳು

## 4.1 ಶ್ರೀ ಸೂರ್ಯ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃಸ್ಮರಾಮಿ ಖಲು ತತ್ ಸವಿತುರ್ವರೇಣ್ಯಂ । ರೂಪಂ ಹಿ ಮಂಡಲಮೃಚೋಽಥ ತನುರ್ಯಜೂಂಷಿ ॥ ಸಾಮಾನಿ ಯಸ್ಯ ಕಿರಣಾಃ ಪ್ರಭವಾದಿ ಹೇತುಂ । ಬ್ರಹ್ಮಾಹರಾತ್ಮಕಮಲಕ್ಷ್ಯಮಚಿಂತ್ಯಹೇತುಂ ॥1॥**

ಭಾವಾರ್ಥ - ಋಗ್ವೇದದ ಮಂಡಲದೊಳಗೆ ಯಜುರ್ವೇದದ ದೇಹ ಧರಿಸಿ ಸಾಮವೇದದ ಶಲಾಕೆಗಳನ್ನು ಹೊಂದಿರುವ, ಸೃಷ್ಟಿಯೇ ಆದಿಯಾದ ಕಾರ್ಯಗಳಿಗೆ ಕಾರಣವಾಗಿರುವ, ಬ್ರಹ್ಮ ಹಾಗೂ ಈಶ್ವರನ ಸ್ವರೂಪವುಳ್ಳ, ಬರಿಕಣ್ಣಿಂದ ಕಾಣಲು ಅಸಾಧ್ಯವಾಗಿರುವ, ಲೆಕ್ಕಿಸಲು ಅಸದಳವಾಗಿರುವ ಸವಿತೃ ದೇವನ ಸ್ವರೂಪವನ್ನು ನಾನು ಉಷಃ ಕಾಲದಲ್ಲಿ ಸ್ಮರಿಸುವೆ.

**ಪ್ರಾತರ್ನಮಾಮಿ ತರಣಿಂ ತನುವಾಙ್ಮನೋಭಿಃ । ಬ್ರಹ್ಮೇಂದ್ರಪೂರ್ವಕ ಸುರೈರ್ನುತಮರ್ಚಿತಂ ಚ ॥ ವೃಷ್ಟಿ ಪ್ರಮೋಚನ ವಿನಿಗ್ರಹ ಹೇತುಭೂತಂ । ತ್ರೈಲೋಕ್ಯ ಪಾಲನಪರಂ ತ್ರಿಗುಣಾತ್ಮಕಂ ಚ ॥2॥**

ಭಾವಾರ್ಥ - ಇಂದ್ರ ಬ್ರಹ್ಮರೇ ಆದಿಯಾದ ದೇವದೇವತೆಯರಿಂದ ಸ್ತುತಿಸಲ್ಪಡುವ ಹಾಗೂ ಪೂಜಿಸಲ್ಪಡುವ ಅಲ್ಲದೆ ಮಳೆ ಸುರಿಯಲೂ ಸುರಿಯದಿರಲೂ ಕಾರಣೀ

ಭೂತನಾದ, ಸ್ವರ್ಗ, ಮರ್ತ್ಯ, ಪಾತಾಳಾದಿ ಮೂರ್ಲೋಕಗಳನ್ನು ರಕ್ಷಿಸುವ ಮತ್ತು ಸತ್ವ, ರಜ, ತಮೋ ಗುಣಗಳೆಂಬ ತ್ರಿಗುಣಗಳನ್ನು ಒಳಗೊಂಡಿರುವ ಸೂರ್ಯದೇವನನ್ನು ಮನೋವಾಕ್ಕಾಯಗಳಿಂದ ನಾನು ಉಷಃ ಕಾಲದಲ್ಲಿ ಸ್ಮರಿಸುವೆ.

**ಪ್ರಾತರ್ಭಜಾಮಿ ಸವಿತಾರಮನಂತ ಶಕ್ತಿಂ । ಪಾಪೌಘ ಶತ್ರು ಭಯರೋಗ ಹರಂ ಪರಂ ಚ ॥ ತಂ ಸರ್ವಲೋಕ ಕಲನಾತ್ಮಕ ಕಾಲಮೂರ್ತಿಂ । ಗೋಕಂಠ ಬಂಧನ ವಿಮೋಚನಮಾದಿದೇವಂ ॥3॥**

ಭಾವಾರ್ಥ - ದುರಿತಗಳ ಸಮೂಹವನ್ನು ಮತ್ತು ವೈರಿಗಳ ಬಗೆಗಿನ ಭೀತಿಯನ್ನು ಹೋಗಲಾಡಿಸುವ, ಸರ್ವ ರೋಗಗಳನ್ನು ನಿವಾರಿಸುವ, ಸಮಸ್ತ ಲೋಕವು ಗುರುತಿಸಿದ ಕಾಲಸ್ವರೂಪನಾಗಿರುವ, ಗೋವುಗಳನ್ನ್ನು ಬಂಧಿಸುವ ಅಥವಾ ಬಂಧ ವಿಮುಕ್ತಿಗೊಳಿಸುವ ಆದಿದೇವನಾದ ಅಂತ್ಯವಿರದ ಶಕ್ತಿಯ ಮೂಲನಾದ ಹಾಗೆಯೇ ಶ್ರೇಷ್ಠನಾದ ಸೂರ್ಯದೇವನನ್ನು ಮನೋವಾಕ್ಕಾಯಗಳಿಂದ ನಾನು ಉಷಃ ಕಾಲದಲ್ಲಿ ಸ್ಮರಿಸುವೆ.

**ಶ್ಲೋಕತ್ರಯಮಿದಂ ಭಾನೋಃ ಪ್ರಾತಃಕಾಲೇ ಪಠೇತ್ತುಯಃ । ಸರವ್ಯಾಧಿವಿನಿರ್ಮುಕ್ತಃ ಪರಂ ಸುಖಮಾಪುಯಾತ್ ॥4॥**

ಭಾವಾರ್ಥ - ಸೂರ್ಯನ ಕುರಿತಾಗಿರುವ ಈ ಮೂರು ಶ್ಲೋಕಗಳನ್ನು ಯಾವಾತನು ಉಷಃಕಾಲದಲ್ಲಿ ಪಠಿಸುವನೋ ಅವನು ಸಮಸ್ತ ರೋಗಗಳಿಂದ ವಿಮುಕ್ತನಾಗಿ ಶ್ರೇಷ್ಠವಾಅ ಸುಖವನ್ನು ಹೊಂದುವನು.

॥ ಇತಿ ಶೀ ಸೂರ್ಯ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 4.2 ಆದಿತ್ಯ ಹೃದಯಂ

**ತತೋ ಯುದ್ಧಪರಿಶ್ರಾಂತಂ ಸಮರೇ ಚಿಂತಯಾ ಸ್ಥಿತಂ ।**

**ರಾವಣಂ ಚಾಗ್ರತೋ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಂ ॥1॥**

**ದೈವತೈಶ್ಚ ಸಮಾಗಮ್ಯ ದ್ರಷ್ಟುಮಭ್ಯಾಗತೋ ರಣಂ ।**

**ಉಪಾಗಮ್ಯಾಬ್ರವೀದ್ರಾಮಗಸ್ತ್ಯೋ ಭಗವಾನ್ ಋಷಿಃ ॥2॥**

ಭಾವಾರ್ಥ - ದೇವಾದಿದೇವತೆಗಳೊಂದಿಗೆ ರಾಮ ರಾವಣರ ಯುದ್ಧವನ್ನು ವೀಕ್ಷಿಸಲು ಬಂದಂತಹಾ ಅಗಸ್ತ್ಯ ಮಹಾ ಮುನಿಗಳು ಯುದ್ಧದಲ್ಲಿ ದಣಿದಿದ್ದ ಶ್ರೀರಾಮ ಮುಂದೆ ಯುದ್ಧೋತ್ಸಾಹದಿಂದ ಯುದ್ಧಸನ್ನದ್ಧನಾಗಿ ನಿಂತಿರುವ ರಾವಣನನ್ನು ನೋಡಿ ಚಿಂತಾಕ್ರಾಂತನಾಗಿದ್ದ ಶ್ರೀರಾಮನನ್ನು ನೋಡಿ ಇಂತೆಂದು ನುಡಿದರು.

**ರಾಮ ರಾಮ ಮಹಾಬಾಹೋ ಶ್ರುಣು ಗುಹ್ಯಂ ಸನಾತಮನ್ ।**

**ಯೇನ ಸರ್ವಾನರೀನ್ ವತ್ಸ ಸಮರೇ ವಿಜಯಿಷ್ಯಸಿ ॥3॥**

ಭಾವಾರ್ಥ - ಹೇ! ರಾಮಾ, ಮಹಾಬಾಹುವುಳ್ಳವನೇ, ಯಾವುದರಿಂದ ನೀನು ಯುದ್ಧದಲ್ಲಿ ಎಲ್ಲ ಶತ್ರುಗಳನ್ನು ಜಯಿಸುವೆಯೋ ಆ ಶಕ್ತಿಯಲ್ಲಿಡಗಿದ ಪ್ರಾಚೀನ ರಹಸ್ಯವನ್ನು ತಿಳಿಯುವವನಾಗು.

**ಆದಿತ್ಯ ಹೃದಯಂ ಪುಣ್ಯಂ ಸರ್ವ ಶತ್ರು ವಿನಾಶನಂ ।**

**ಜಯಾವಹಂ ಜಪೇನ್ನಿತ್ಯಮಕ್ಷಯ್ಯಂ ಪರಮಂ ಶಿವಂ ॥4॥**

ಭಾವಾರ್ಥ - ಆದಿತ್ಯ ಹೃದಯವೆಂಬ ಈ ಪುಣ್ಯಕರವಾಗಿರುವ ಸ್ತುತಿಯನ್ನು ಪ್ರತಿದಿನವೂ ಜಪಿಸಿದರೆ ನಿನ್ನ ಎಲ್ಲಾ ಶತ್ರುಗಳೂ ವಿನಾಶ ಹೊಂದುವರು. ನಿನಗೆ ವಿಜಯ ಪ್ರಾಪ್ತವಾಗುವುದು. ಮತ್ತು ಎಂದಿಗೂ ಕೊನೆಯಿಲ್ಲದ ಉತ್ಕೃಷ್ಠವಾದ ಕಲ್ಯಾಣವಾಗುವುದು.

**ಸರ್ವ ಮಂಗಲಮಾಂಗಲ್ಯಂ ಸರ್ವಪಾಪ ಪ್ರಣಾಶನಂ ।**

**ಚಿಂತಾಶೋಕಪ್ರಶಮನಮಾಯುರ್ವರ್ಧನಮುತ್ತಮಂ ॥5॥**

ಭಾವಾರ್ಥ - ಈ ಮಂತ್ರವು ಸಮಸ್ತ ಕಾರ್ಯಗಳಲ್ಲೂ ಶುಭಕರವಾಗಿ ಕಲ್ಯಾಣಕಾರಿಯಾಗಿದೆ. ಎಲ್ಲಾ ಪಾಪಗಳನ್ನು ಕಳೆಯುವಂತಹುದಾಗಿದೆ. ಸಮಸ್ತ

ದುಃಖಗಳ, ಗಂಡಾಂತರಗಳ ಪರಿಹಾರದ ಹಾದಿಯಾಗಿದೆ. ಇದರ ಅನುಷ್ಠಾನದಿಂದ ಧೀರ್ಘಾಯುಷ್ಯವಂತನಾಗಬಹುದು.

**ರಶ್ಮಿಮಂತಂ ಸಮುದ್ಯಂತಂ ದೇವಾಸುರ ನಮಸ್ಕೃತಂ ।**
**ಪೂಜಯಸ್ವ ವಿವಸ್ವಂತಂ ಭಾಸ್ಕರಂ ಭುವನೇಶ್ವರಂ ॥6॥**

ಭಾವಾರ್ಥ - ದೇವಾಸುರರಿಂದ ನಮಸ್ಕರಿಸಲ್ಪಡುತ್ತಿರುವ, ಸ್ವಯಂಪ್ರಭೆಯಿಂದ ಕೂಡಿದ, ತನ್ನ ಪ್ರಕಾಶದಿಂದ ಇನ್ನಿತರ ಪ್ರಕಾಶಿಸುವ ವಸ್ತುಗಳನ್ನು ಕಳಾಹೀನಗೊಳಿಸುವ, ಜಗತ್ತಿಗೆ ದೊರೆಯಾದ ಉದಯರವಿಯನ್ನು ಆರಾಧಿಸು.

**ಸರ್ವದೇವಾತ್ಮಕೋ ಹ್ಯೇಷ ತೇಜಸ್ವೀ ರಶ್ಮಿ ಭಾವನಃ ।**
**ಏಷ ದೇವಾಸುರಗಣಾನ್ ಲೋಕಾನ್ ಪಾತು ಗಭಸ್ತಿಭಿಃ ॥7॥**

ಭಾವಾರ್ಥ - ಆ ರವಿಯು ಎಲ್ಲಾ ದೇವತೆಗಳನ್ನು ಪ್ರತಿನಿಧೀಕರಿಸುತ್ತಾನೆ. ಅವನು ಸ್ವಯಂ ಪ್ರಭೆಯುಳ್ಳವ. ಮತ್ತು ತನ್ನ ಕಿರಣಗಳ ಮೂಲಕ ಎಲ್ಲಾ ಜೀವಗಳನ್ನು ಪೋಷಿಸುತ್ತಿರುವವನು. ಅಲ್ಲದೆ ತನ್ನ ಬಲಯುತ ಕಿರಣಗಳಿಂದ ದೇವಾಸುರರನ್ನೂ ಸಮಸ್ತ ಬ್ರಹ್ಮಾಂಡವನ್ನೂ ಕಾಪಾಡುತ್ತಿರುವವನು.

**ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಃ ಸ್ಕಂದಃ ಪ್ರಜಾಪತಿಃ ।**
**ಮಹೇಂದ್ರೋ ಧನದಃ ಕಾಲೋ ಯಮಃ ಸೋಮೋ ಹ್ಯಪಾಂಪತಿಃ ॥8॥**

ಭಾವಾರ್ಥ - ಅವನೇ ಬ್ರಹ್ಮ,ವಿಷ್ಣು,ಸ್ಕಂದ,ಶಿವ,ಪ್ರಜಾಪತಿ, ಮತ್ತು ದೇವೇಂದರ್. ಅವನೇ ಕುಭೇರ, ಅವನು ಕಾಲಪುರುಷ ಯಮ. ಸೋಮ ಮತ್ತು ವರುಣನೂ ಅವನೇ ಆಗಿರುವನು.

**ಪಿತರೋ ವಸವಃ ಸಾಧ್ಯಾ ಹ್ಯಶ್ವಿನೌ ಮರುತೋ ಮನುಃ ।**
**ವಾಯುರ್ವಹ್ನಿಃ ಪ್ರಜಾಪ್ರಾಣ ಋತುಕರ್ತಾ ಪ್ರಭಾಕರಃ ॥9॥**

ಭಾವಾರ್ಥ - ಪಿತೃವೂ ಅವನೇ, ಅಷ್ಟವಸುಗಳೂ ಅವನೇ ಆಗಿದ್ದಾನೆ. ಸಿದ್ಧ ಸಾಧ್ಯರೂ, ಅಶ್ವಿನೀ ದೇವತೆಗಳೂ, ಮರುದ್ಗಣಗಳೂ ಅವನೇ ಆಗಿದ್ದಾನೆ. ಅವನು

ವಾಯು,ಅಗ್ನಿ, ಎಲ್ಲರ ಪ್ರಾಣಾಧಾರಶಕ್ತಿ. ಆರು ಋತುಗಳ ನಿರ್ವಾಹಕನಾಗಿರುವ ಅವನು ಪ್ರಭಾಕರನು.

**ಆದಿತ್ಯಃ ಸವಿತಾ ಸೂರ್ಯಃ ಖಗಃ ಪೂಷಾ ಗಭಸ್ತಿಮಾನ್ ।**
**ಸುವರ್ಣಸದೃಶೋ ಭಾನುರ್ಹಿರಣ್ಯರೇತಾ ದಿವಾಕರಃ ॥10॥**

ಭಾವಾರ್ಥ - ಅವನು ಅದಿತಿಪುತ್ರನು, ವಿಶ್ವಕರ್ತನು, ಕ್ರಿಯೆಗಳಿಗೆ ಉತ್ತೇಜಕಾರಕನು, ಆಕಾಶದಲ್ಲಿ ಸಂಚಾರಮಾಡುತ್ತಾ ಸಮಸ್ತ ದಿಶೆಗಳನ್ನೂ ಬೆಳಗುವಂತಹವನು. ಬಂಗಾರದ ಕಾಂತಿಯುಳ್ಳವನು. ಬ್ರಹ್ಮಾಂಡದ ಉತ್ಪತ್ತಿಯ ಮೂಲನೂ, ಹಗಲಿನ ಅಧಿಪತಿಯೂ ಆಗಿರುವನು.

**ಹರಿದಶ್ವಃ ಸಹಸ್ರಾರ್ಚಿಃ ಸಪ್ತಸಪ್ತಿರ್ಮರೀಚಿಮಾನ್ ।**
**ತಿಮಿರೋನ್ಮಥನಃ ಶಂಭುಸ್ತ್ವಷ್ಟಾಮಾರ್ತಾಂಡ ಅಂಶುಮಾನ್ ॥11॥**

ಭಾವಾರ್ಥ - ಅವನು ಹಸಿರು ಕುದುರೆಗಳನ್ನು ಹೊಂದಿದ ಸರ್ವ ವ್ಯಾಪೀ ಅಸಂಖ್ಯ ಕಿರಣಗಳ ಪ್ರಭಾಕರನು. ಸಪ್ತಾಶ್ವಾರೂಢನಾಗಿದ್ದು ಬ್ರಹ್ಮನ ಮಾನಸಪುತ್ರನೇ ಆಗಿರುವನು. ಜಗತ್ತಿನ ಅಂಧಕಾರವನ್ನು ತೊಲಗಿಸುವವನು. ಭಕ್ತರ ಅಶುಭಗಳನ್ನು ನಿವಾರಿಸುವವನು. ನಿರ್ಜೀವ ಜಗತ್ತಿಗೆ ಪ್ರಾಣದಾಯಕನು. ಮತ್ತು ತೇಜೋದಾಯಕನು.

**ಹಿರಣ್ಯಗರ್ಭಃ ಶಿಶಿರಸ್ತಪನೋ ಭಾಸ್ಕರೋ ರವಿಃ ।**
**ಅಗ್ನಿಗರ್ಭೋಽದಿತೇಃ ಪುತ್ರಃ ಶಂಖಃ ಶಿಶಿರ ನಾಶನಃ ॥12॥**

ಭಾವಾರ್ಥ - ಅವನು ಹಿರಣ್ಯಗರ್ಭನು, ಶೀತವನ್ನು ಹೋಗಲಾಡಿಸುವವನು,ಉಜ್ವಲ ಪ್ರಭೆಯಿಂದ ಕೂಡಿದ ಭಾಸ್ಕರನು, ಅಂತರ್ಯದೊಳಗೆ ಅಗ್ನಿಯನ್ನು ಧರಿಸಿದ ಅದಿತಿ ಪುತ್ರನೇ ಅವನು. ಜಗತ್ತಿಗೆ ಕಲ್ಯಾಣದಾಯಕನೂ, ಜಡತ್ವ ನಾಶಕನೂ ಆಗಿರುವಂತಹವನು.

**ವ್ಯೋಮನಾಥಸ್ತಮೋಭೇದೀ ಋಗ್ಯಜುಸ್ಸಾಮಪಾರಗಃ ।**
**ಘನವೃಷ್ಟಿರಪಾಂಮಿತ್ರೋ ವಿಂಧ್ಯವೀಥೀಪ್ಲವಂಗಮಃ ॥13॥**

ಭಾವಾರ್ಥ - ಆತನು ಆಕಾಶಕ್ಕೆ ದೊರೆಯಾಗಿರುವವನು. ಅಜ್ಞಾನವೆಂಬ ಕತ್ತಲಿನ ನಿವಾರಕನು, ಋಗ್ವೇದಾದಿಗಳಲ್ಲಿ ಪಾರಂಗತನು, ಮಳೆಯನ್ನು ಸುರಿಸುವವನು, ನೀರಿನ ಸ್ನೇಹಿತನು, ವಿಂಧ್ಯ ಪರ್ವತವನ್ನು ದಾಟಿದವನು.

**ಆತಪೀ ಮಂಡಲೀ ಮೃತ್ಯುಃ ಪಿಂಗಲಃ ಸರ್ವತಾಪನಃ ।**
**ಕವಿರ್ವಿಶ್ವೋ ಮಹಾತೇಜಾ ರಕ್ತಃ ಸರ್ವಭವೋದ್ಭವಃ ॥14॥**

ಭಾವಾರ್ಥ - ಆತನು ಯಾವಾಗಲೂ ಸೃಷ್ಟಿಕಾರ್ಯದಲ್ಲಿ ನಿರತನಾಗಿದ್ದಾನೆ. [=ಬ್ರಹ್ಮ], ಆತನು ಮಂಡಲಾಕಾರಿಯು [=ಕೌಸ್ತುಭ ಧಾರಿಯಾದ ವಿಷ್ಣು] ಮತ್ತು ಎಲ್ಲವನ್ನೂ ನಾಶಗೊಳಿಸುವವ[=ಶಿವ], ಆತನು ಪಿಂಗಳ ವರ್ಣನು, [=ಉದಯ ಸೂರ್ಯ], ಎಲ್ಲವನ್ನೂ ಸುಡುವವನು. ಅವನೇ ವಿಶ್ವರೂಪನಾದ ರವಿಯು, ಮಹಾ ತೇಜೋವಂತನು, ಸಕಲರಿಗೂ ಪ್ರಿಯನಾದವನು, ಹಾಗೂ ಎಲ್ಲಾಕ್ರಿಯೆಗಳಿಗೂ ಕಾರಣನು.

**ನಕ್ಷತ್ರಗ್ರಹತಾರಾಣಾಮಧಿಪೋ ವಿಶ್ವಭಾವನಃ ।**
**ತೇಜಸಾಮಪಿ ತೇಜಸ್ವೀ ದ್ವಾದಶಾತ್ಮನ್ನಮೋಸ್ತು ತೇ ॥15॥**

ಭಾವಾರ್ಥ - ಗ್ರಹ, ನಕ್ಷತ್ರ, ತಾರಾಗಣಗಳ ಅಧಿಪತಿಯು ಆತನೇ ಆಗಿದ್ದಾನೆ. ಬ್ರಹ್ಮಾಂಡದಲ್ಲಿರುವ ಎಲ್ಲಾ ಚರಾಚರ ವಸ್ತುಗಳಿಗೆ ಆತನೇ ಆದಿ ಪುರುಷ. ಎಲ್ಲಾ ಸತ್ವ ಗುಣಗಳಿಗೂ ಅವನೇ ಮೂಲಬಿಂದು. ದ್ವಾದಶಮೂರ್ತಿ ಸ್ವರೂಪದಲ್ಲಿ ಆವಿರ್ಭವಿಸಿರುವ ಉದಯರವಿಯೇ! ನಿನಗೆ ನನ್ನ ನಮಸ್ಕಾರಗಳು.

**ನಮಃ ಪೂರ್ವಾಯ ಗಿರಯೇ ಪಶ್ಚಿಮಾಯಾದ್ರಯೇ ನಮಃ ।**
**ಜ್ಯೋತಿರ್ಗಣಾನಾಂ ಪತಯೇ ದಿನಾದಿಪತಯೇ ನಮಃ ॥16॥**

ಭಾವಾರ್ಥ - ಪೂರ್ವಾಚಲ ದೇವತೇಯೇ ನಿನಗೆ ನನ್ನ ನಮಸ್ಕಾರ. ಪಶ್ಚಿಮಾಚಲ ದೇವತೆಯೇ ನಿನಗೆ ನನ್ನ ನಮಸ್ಕಾರ. ಜ್ಯೋತಿರ್ಗಣಗಳಿಗೆ ದೊರೆಯೂ ಹಗಲಿನ ಅಧಿಪತಿಯೂ ಆಗಿರುವ ಆದಿತ್ಯನೇ ನಿನಗೆ ನನ್ನ ನಮಸ್ಕಾರಗಳು.

**ಜಯಾಯ ಜಯಭದ್ರಾಯ ಹರ್ಯಶ್ವಾಯ ನಮೋನಮಃ ।**
**ನಮೋ ನಮಃ ಸಹಸ್ರಾಂಶೋ ಆದಿತ್ಯಾಯ ನಮೋ ನಮಃ ॥17॥**

ಭಾವಾರ್ಥ - ಮನೋಹರನೂ ಜಯವನ್ನುಂಟು ಮಾಡುವವನೂ ಐಶ್ವರ್ಯಪ್ರದಾತನೂ ಅರಸಿನವರ್ಣದ ಕುದುರೆಯನ್ನು ಹೊಂದಿದವನೂ ಅಗಿರುವವಗೆ ನನ್ನ ನಮಸ್ಕಾರಗಳು. ಅಸಂಖ್ಯಾತ ಕಿರಣಗಳನ್ನು ಹೊಂದಿರುವ ಆದಿತ್ಯನಿಗೆ ನನ್ನ ನಮಸ್ಕಾರಗಳು.

**ನಮ ಉಗ್ರಾಯ ವೀರಾಯ ಸಾರಂಗಾಯ ನಮೋ ನಮಃ ।**
**ನಮಃ ಪದ್ಮ ಪ್ರಭೋಧಾಯ ಮಾರ್ತಾಂಡಾಯ ನಮೋ ನಮಃ ॥18॥**

ಭಾವಾರ್ಥ - ಉಗ್ರನೂ ವೀರನೂ ಸಿಂಹ ಸ್ವರೂಪನಾಗಿ ವೇಗವಾದ ಚಲನೆಯುಳ್ಳವನೂ ತಾವರೆಯ ಅರಳುವಿಕೆಗೆ ಕಾರಣನೂ ಆತ್ಮಕಾರಕ ರವಿಯೂ ಆಗಿರುವ ನಿನಗೆ ನನ್ನ ನಮಸ್ಕಾರಗಳು.

**ಬ್ರಹ್ಮೇಶಾನಾಚ್ಯುತೇಶಾಯ ಸೂರ್ಯಾಯಾದಿತ್ಯ ವರ್ಚಸೇ ।**
**ಭಾಸ್ವತೇ ಸರ್ವಭಕ್ಷಾಯ ರೌದ್ರಾಯ ವಪುಷೇ ನಮಃ ॥19॥**

ಭಾವಾರ್ಥ - ಬ್ರಹ್ಮ ಶಿವ ವಿಷ್ಣುಶಕ್ತಿಗಳ ಒಡೆಯನಾಗಿರುವ ಸೂರ್ಯನಿಗೂ, ಸಮಸ್ತಲೋಕವನ್ನು ಬೆಳಗಿಸುವ ಹಾಗೂ ಕಾಲವನ್ನು ಭಕ್ಷಿಸುವ ಆದಿತ್ಯನ ಪ್ರಭಾಶಕ್ತಿಗೂ, ಭೀಕರದೇಹದವನೂ ಆಗಿರುವವಗೆ ನಮಸ್ಕಾರಗಳು.

**ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾಮಿತಾತ್ಮನೇ ।**
**ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂ ಪತಯೇ ನಮಃ ॥20॥**

ಭಾವಾರ್ಥ - ಕತ್ತಲೆಯನಾಶಕನೂ, ಶೀತನಾಶಕನೂ, ಶತ್ರು ನಾಶಕನೂ, ಸೀಮಾತೀತನೂ, ಕೃತಘ್ನರನ್ನು, ನಾಶಗೊಳಿಸುವವನೂ, ದೇವರಿಗೂ, ಬೆಳಕಿಗೂ ಒಡೆಯನಾದವನಿಗೂ ನನ್ನ ನಮಸ್ಕಾರಗಳು.

**ತಪ್ತಚಾಮೀಕರಾಭಯ ವಹ್ನಯೇ ವಿಶ್ವಕರ್ಮಣೇ ।**
**ನಮಸ್ತಮೋಽಭಿನಿಘ್ನಾಯ ರುಚಯೇ ಲೋಕಸಾಕ್ಷಿಣೇ ॥21॥**

ಭಾವಾರ್ಥ - ಪುಟಕ್ಕಿಟ್ಟ ಬಂಗಾರದಂತೆ ಬೆಳಗುತ್ತಿರುವವಗೂ, ಅಗ್ನಿ ಸ್ವರೂಪಗೂ, ವಿಶ್ವಕರ್ಮನಿಗೂ, ಅಂಧಕಾರವನ್ನು ಹೋಗಲಾಡಿಸುವವಗೂ, ಸಮಸ್ತ ಭೂಮಂಡಲವನ್ನು ಕಣ್ಣಾರೆ ಕಾಣುವ ಜ್ಯೋತಿರ್ಮಯ ಸ್ವರೂಪನಿಗೂ ನಮಸ್ಕಾರಗಳು.

**ನಾಶಯತ್ಯೇಷ ವೈ ಭೂತಂ ತದೇವ ಸೃಜತಿ ಪ್ರಭುಃ ।**
**ಪಾಯತ್ಯೇಷ ತಪತ್ಯೇಷ ವರ್ಷತ್ಯೇಷ ಗಭಸ್ತಿಭಿಃ ॥22॥**

ಭಾವಾರ್ಥ - ಸಮಸ್ತವನ್ನೂ ನಾಶ ಮಾಡುವವನೂ ಪುನಹಾ ಸೃಷ್ಟಿ ಮಾಡುವವನೂ ಅವನೇ ಆಗಿರುತ್ತಾನೆ. ಅವನೇ ತನ್ನ ಪ್ರಭಾಶಕ್ತಿಯಿಂದ ನೀರನ್ನು ತನ್ನತ್ತ ಸೆಳೆದುಕೊಂಡು, ಮತ್ತದನ್ನು ಬಿಸಿಯಾಗಿಸಿ ಮುಗಿಲಾಗಿ ಪರಿವರ್ತಿಸಿ ಮಳೆಯ ರೂಪದಲ್ಲಿ ಸುರಿಸುತ್ತಿರುವವನು.

**ಏಷ ಸುಪ್ತೇಷು ಜಾಗರ್ತಿ ಭೂತೇಷು ಪರಿನಿಷ್ಠಿತಃ ।**
**ಏಷ ಏವಾಗ್ನಿಹೋತ್ರಂ ಚ ಫಲಂ ಚೈವಾಗ್ನಿ ಹೋತ್ರಿಣಾಂ ॥23॥**

ಭಾವಾರ್ಥ - ಆತನು ಎಲ್ಲರ ಹೃದಯಲ್ಲಿ ವಾಸಮಾಡುತ್ತಿದ್ದು ಎಲ್ಲರೂ ನಿದ್ರಿಸುವಾಗ ಆತನು ಎಚ್ಚರಿರುತ್ತಾನೆ. ಅವನು ಯಜ್ಞಾಗ್ನಿಗೆ ಅರ್ಘ್ಯ ಪ್ರಧಾನ ಮಾಡುವವನೂ, ಯಜ್ಞಾಗ್ನಿಯನ್ನು ಕಾಪಾಡುವವವಗೆ ದೊರಕುವ ಫಲವೂ ಆಗಿದ್ದಾನೆ.

**ವೇದಾಶ್ಚ ಕ್ರತವಶ್ಚೈವ ಕ್ರತೂನಾಂ ಫಲಮೇವಚ ।**
**ಯಾನಿ ಕೃತ್ಯಾನಿ ಲೋಕೇಷು ಸರ್ವ ಏಷ ರವಿಃ ಪ್ರಭುಃ ॥24॥**

ಭಾವಾರ್ಥ - ಆತನು ವೇದಗಳಲ್ಲಿ ಇರುವವನು. ಸಮಸ್ತ ಕಾರ್ಯಗಳೂ ಹಾಗೂ ಅವುಗಳ ಫಲಸ್ವರೂಪನೂ ಆಗಿರುವನು. ವಿಶ್ವದಲ್ಲಿ ಜರಗುವ ಸಮಸ್ತ ಕ್ರಿಯೆಗಳಿಗೂ ಆತ ಒಡೆಯನೂ ಆಗಿರುವನು.

**॥ ಫಲ ಶ್ರುತಿಃ ॥**

**ಏವಮಾಪತ್ಸು ಕೃಚ್ಛ್ರೇಷು ಕಾಂತರೇಷು ಭಯೇಷು ಚ ।**
**ಕೀರ್ತಯನ್ ಪುರುಷಃ ಕಶ್ಚಿನ್ನಾವಸೀದತಿ ರಾಘವ ॥25॥**

ಭಾವಾರ್ಥ - ಹೇ! ರಾಘವನೇ, ಕಷ್ಟದ ಪರಿಸ್ಥಿತಿಯಲ್ಲಿ, ಸಂಕಷ್ಟದ ಸಮಯದಲ್ಲಿ, ಅರಣ್ಯದ ನಡುವೆ ಸಿಲುಕಿಕೊಂಡು ಭೀತಿಗೊಳಪಟ್ಟಾಗ, ಮಾನವನು ಈ ಸ್ತೋತ್ರವನ್ನು ಪಾರಾಯಣ ಮಾಡಿದರೆ ಆತನು ದುಃಖಪೀಡಿತನಾಗಲಾರನು.

**ಪೂಜಯಸ್ವೈನಮೇಕಾಗ್ರೋ ದೇವದೇವಂ ಜಗತ್ಪತಿಂ ।**
**ಏತತ್ ತ್ರಿಗುಣಿತಂ ಜಪ್ತ್ವಾ ಯುದ್ಧೇಷು ವಿಜಯಿಷ್ಯಸಿ ॥26॥**

ಭಾವಾರ್ಥ - ಎಲೈ ರಾಘವನೇ, ದೇವದೇವೋತ್ತಮನಾದ ಜಗತ್ತಿಗೆ ಒಡೆಯನಾದ ಸೂರ್ಯನನ್ನು ಈ ಮಂತ್ರ ಮುಖೇನ ಉಪಾಸಿಸು. ಮೂರು ಬಾರಿ ಇದನ್ನು ಜಪಿಸಿದಲ್ಲಿ ಯುದ್ಧದಲ್ಲಿ ನಿನಗೆ ಗೆಲುವು ಖಂಡಿತ.

**ಅಸ್ಮಿನ್ ಕ್ಷಣೇ ಮಹಾಬಾಹೋ ರಾವಣಂ ತ್ವಂ ವಧಿಷ್ಯಸಿ ।**
**ಏವಮುಕ್ತ್ವಾತದಾಗಸ್ತ್ಯೋ ಜಗಾಮ ಚ ಯಥಾಗತಂ ॥27॥**

ಭಾವಾರ್ಥ - ಹೇ ಮಹಾಬಾಹುವೇ, ತತ್ಕ್ಷಣವೇ ನೀನು ರಾವಣನನ್ನು ಕೊಲ್ಲಲು ಶಕ್ತನಾಗುವಿ ಎಂದು ತಿಳಿಹೇಳಿದ ಅಗಸ್ತ್ಯನು ಎಲ್ಲಿಂದ ಆಗಮಿಸಿದ್ದನೋ ಅಲ್ಲಿಗೆ ತೆರಳಿದನು.

**ಏತಚ್ಛ್ರುತ್ವಾ ಮಹಾತೇಜಾ ನಷ್ಟ ಶೋಕೋಽಸ್ವತ್ತದಾ ।**
**ಧಾರಯಾಮಾಸ ಸುಪ್ರೀತೋ ರಾಘವಃ ಪ್ರಯತಾತ್ಮವಾನ್ ॥28॥**

ಭಾವಾರ್ಥ - ಅಗಸ್ತ್ಯನ ಈ ನುಡಿಗಳನ್ನು ಆಲಿಸಿ ಮಹಾತೇಜಸ್ವಿಯಾದ ರಾಘವನು ಚಿಂತಾರಹಿತನಾದನು. ಪುನಃ ಸುಧಾರಿಸಿಕೊಂಡು ಅತಿ ಉತ್ಸಾಹವನಾಂತು ಸಂತೋಷಭರಿತನಾದನು.

**ಆದಿತ್ಯಂ ಪ್ರೇಕ್ಷ್ಯ ಜಪ್ತ್ವಾತು ಪರಂ ಹರ್ಷಮವಾಪ್ತವಾನ್ ।**
**ತ್ರಿರಾಚಮ್ಯ ಶುಚಿರ್ಭೂತ್ವಾ ಧನುರಾದಾಯ ವೀರ್ಯವಾನ್ ॥29॥**

ಭಾವಾರ್ಥ - ತದನಂತರ ರಾಘವನು ಆದಿತ್ಯನನ್ನೇ ನೋಡುತ್ತಾ ಜಪವನ್ನು ಮಾಡಿ ಹರ್ಷ ಪುಲಕಿತನಾದನು. ಮೂರುಬಾರಿ ಆಚಮನ ಮಾಡಿ ಶುಚಿರ್ಭೂತನಾದ ಶ್ರೀರಾಮನು ಸತ್ವಭರಿತನಾಗಿ ಧನುಸ್ಸನ್ನು ಎತ್ತಿ ಹಿಡಿದನು.

**ರಾವಣಂ ಪ್ರೇಕ್ಷ್ಯ ಹೃಷ್ಟಾತ್ಮಾ ಯುದ್ಧಾಯ ಸಮುಪಾಗಮತ್ ।**
**ಸರ್ವಯತ್ನೇನ ಮಹತಾ ವಧೇ ತಸ್ಯ ಧೃತೋಽಭವತ್ ॥30॥**

ಭಾವಾರ್ಥ - ರಾವಣನನ್ನು ನೋಡಿ ಸಂತುಷ್ಟನಾದ ರಾಘವನು ಯುದ್ಧಕ್ಕೆ ಮುಂದೆ ಬಂದು ಅವನನ್ನು ವಧಿಸುವ ನಿಶ್ಚಯದಿಂದ ಆ ದಿಸೆಯಲ್ಲಿ ಸರ್ವ ಪ್ರಯತ್ನವನ್ನು ಮಾಡತೊಡಗಿದನು.

**ಅಥ ರವಿರವದನ್ನಿರೀಕ್ಷ್ಯ ರಾಮಂ ಮುದಿತಾಮನಾಃ ಪರಮಂ ಪ್ರಹೃಷ್ಯಮಾಣ ।**
**ನಿಶಿಚರಪತಿಸಂಕ್ಷಯಂ ವಿದಿತ್ವಾ ಸುರಗಣಮಧ್ಯಗತೋ ವಚಸ್ತ್ವರೇತಿ ॥31॥**

ಭಾವಾರ್ಥ - ರಾಕ್ಷಸಾಧಿಪನ ಅಂತ್ಯವು ಸನ್ನಿಹಿತವಾಗಿರುವುದನ್ನು ಅರಿತವನಾದ ದೇವಗಣ ಮಧ್ಯದಲ್ಲಿದ್ದ ಆದಿತ್ಯನು ಆನಂದಭರಿತನಾಗಿ ರಾಮನನ್ನು ವೀಕ್ಷಿಸುತ್ತಾ " ಬೇಗ ಬೇಗ "ಎಂದು ರಾಮನನ್ನು ಪ್ರೋತ್ಸಾಹಿಸಿದನು.

॥ ಇತಿ ಶ್ರೀ ಅಗಸ್ತ್ಯ ಪ್ರೋಕ್ತ ಆದಿತ್ಯ ಹೃದಯಂ ಸಂಪೂರ್ಣಂ ॥

## 4.3 ನವಗ್ರಹ ಸ್ತೋತ್ರಂ

**ನಮಃ ಸೂರ್ಯಾಯ ಚಂದ್ರಾಯ ಮಂಗಳಾಯ ಬುಧಾಯಚ । ಗುರುಶುಕ್ರ ಶನಿಭ್ಯಶ್ಚ ರಾಹವೇ ಕೇತವೇ ನಮಃ ॥**

ಭಾವಾರ್ಥ - ನವಗ್ರಹರಾದ ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ರಾಹು ಮತ್ತು ಕೇತು ಗ್ರಹಗಳಿಗೆ ಪ್ರಣಾಮಗಳು.

**ಜಪಾಕುಸುಮಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಂ । ತಮೋರಿಂ ಸರ್ವ ಪಾಪಘ್ನಂ ಪ್ರಣತೋಸ್ಮಿ ದಿವಾಕರಂ ॥1॥**

ಭಾವಾರ್ಥ - ದಾಸವಾಳ ಪುಷ್ಪದ ಸಾದೃಶ್ಯವುಳ್ಳವನೂ, ಕಶ್ಯಪ ತನಯನೂ, ಮಹಾ ಕಾಂತಿಯಿಂದ ಕೂಡಿದವನೂ, ಕತ್ತಲಿನ ವೈರಿಯೂ, ಸರ್ವ ಪಾಪಗಳ ವಿನಾಶಕನೂ ಆಗಿರುವ ಸೂರ್ಯ ದೇವನಿಗೆ ನಮಸ್ಕರಿಸುವೆ.

**ದಧಿ ಶಂಖ ತುಷಾರಾಭಂ ಕ್ಷೀರೋದಾರ್ಣವ ಸಂಭವಂ । ನಮಾಮಿ ಶಶಿನಂ ಸೋಮಂ ಶಂಭೋರ್ಮುಕುಟ ಭೂಷಣಂ ॥2॥**

ಭಾವಾರ್ಥ - ಮೊಸರು, ಶಂಖ, ಹಾಗೂ ಮಂಜಿನಹನಿಗಳವರ್ಣವುಳ್ಳವನೂ, ಕ್ಷೀರಸಾಗರದಿಂದ ಉದ್ಭವಿಸಿದವನೂ, ಪರಶಿವನ ಶಿರೋಭೂಷಣನೂ ಆಗಿರುವ ಸೌಮ್ಯಸ್ವರೂಪಿಯಾಗಿರುವ ಚಂದ್ರನಿಗೆ ನಾನು ನಮಸ್ಕರಿಸುವೆ.

**ಧರಣೀಗರ್ಭ ಸಂಭೂತಂ ವಿದ್ಯುತ್ಕಾಂತಿ ಸಮಪ್ರಭಂ । ಕುಮಾರಂ ಶಕ್ತಿಹಸ್ತಂಚ ಮಂಗಲಂ ಪ್ರಣಮಾಮ್ಯಹಂ ॥3॥**

ಭಾವಾರ್ಥ - ಪೃಥ್ವಿಯ ಗರ್ಭ ಸಂಜಾತನೂ, ವಿದ್ಯುತ್ತಿನ ಪ್ರಕಾಶ ಸದೃಶವಾದ ಬೆಳಕನ್ನು ಹೊಂದಿರುವವನೂ, ಕುಮಾರನೂ ಶಕ್ತಿಹಸ್ತನೂ ಆಗಿರುವ ಮಂಗಲದಾಯಕನಾದ ಕುಜನಿಗೆ ನಾನು ನಮಸ್ಕರಿಸುವೆ.

**ಪ್ರಿಯಂಗುಕಲಿಕಾಶ್ಯಾಮಂ ರೂಪೇಣಾಪ್ರತಿಮಂ ಬುಧಂ । ಸೌಮ್ಯಂ ಸೌಮ್ಯಗುಣೋಪೇತಂ ತಂ ಬುಧಂ ಪ್ರಣಮಾಮ್ಯಹಂ ॥4॥**

ಭಾವಾರ್ಥ - ಹಿಪ್ಪಲಿಯ ಮೊಗ್ಗಿನಂತೆ ನೀಲವರ್ಣನೂ, ಅಪ್ರತಿಮರೂಪವುಳ್ಳವನೂ, ಸೌಮ್ಯ ಸ್ವಭಾವದವನೂ, ಶಾಸ್ತ್ರಗಳ ಬಗ್ಗೆ ಅಪಾರವಾದ ಜ್ಞಾನಿಯೂ, ಸೌಮ್ಯಮೂರುತಿಯೂ ಆಗಿರುವ ಬುಧನಿಗೆ ನಾನು ನಮಸ್ಕರಿಸುವೆ.

**ದೇವಾನಾಂ ಚ ಋಷೀಣಾಂ ಚ ಗುರುಂ ಕಾಂಚನಸನ್ನಿಭಂ । ಬುದ್ಧಿಭೂತಂ ತ್ರಿಲೋಕೇಶಂ ತಂ ನಮಾಮಿ ಬೃಹಸ್ಪತಿಂ ॥5॥**

ಭಾವಾರ್ಥ - ದೇವರುಗಳಿಗೂ ಋಷಿಮುನಿಗಳಿಗೂ ಗುರುವೂ, ಹೊಂಬಣ್ಣದ ಶರೀರವುಳ್ಳವನೂ, ಬುದ್ಧಿಸ್ವರೂಪನೂ, ಮೂರು ಲೋಕಗಳಿಗೆ ಒಡೆಯನೂ ಆಗಿರುವ ಆ ಗುರುಮೂರ್ತಿಗೆ ನಾನು ನಮಸ್ಕರಿಸುವೆ.

**ಹಿಮಕುಂದ ಮೃಣಾಲಾಭಂ ದೈತ್ಯಾನಾಂ ಪರಮಂ ಗುರುಂ । ಸರ್ವಶಾಸ್ತ್ರ ಪ್ರವಕ್ತಾರಂ ಭಾರ್ಗವಂ ಪ್ರಣಮಾಮ್ಯಹಂ ॥6॥**

ಭಾವಾರ್ಥ - ಮಂಜಿನಹನಿ ಬೀಳುವ ಕಾಲದ ಮಲ್ಲಿಗೆಯ ಮತ್ತು ಕಮಲ ನಾಳದ ವರ್ಣವನ್ನು ಹೊಂದಿರುವವನೂ, ಅಸುರರ ಗುರುವೂ, ಸಮಸ್ತ ಶಾಸ್ತ್ರಗಳ ಭೋಧಕನೂ ಆಗಿರುವ ಭಾರ್ಗವನೆಂಬ ನಾಮವುಳ್ಳ ಆ ಶುಕ್ರನಿಗೆ ನಾನು ನಮಸ್ಕರಿಸುವೆ.

**ನೀಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಂ । ಛಾಯಾಮಾರ್ತಾಂಡ ಸಂಭೂತಂ ತಂ ನಮಾಮಿ ಶನೈಶ್ಚರಂ ॥7॥**

ಭಾವಾರ್ಥ - ನೀಲ ಬಣ್ಣದ ಕಾಡಿಗೆಯ ಬಣ್ಣದವನೂ, ಸೂರ್ಯ ತನಯನೂ, ಯಮನ ಅಗ್ರಜನೂ, ಛಾಯೆಯಲ್ಲಿ ಸೂರ್ಯನಿಂದ ಪುತ್ರನಾಗಿ ಜನಿಸಿದವನೂ, ಆಗಿರುವ ಆ ಶನೈಶ್ಚರನಿಗೆ ನಾನು ನಮಸ್ಕರಿಸುವೆ.

**ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯ ವಿಮರ್ದನಂ । ಸಿಂಹಿಕಾ ಗರ್ಭಸಂಭೂತಂ ತಂ ರಾಹುಂ ಪ್ರಣಮಾಮ್ಯಹಂ ॥8॥**

ಭಾವಾರ್ಥ - ಅರ್ಧದೇಹವುಳ್ಳವನೂ, ಮಹಾ ಶಕ್ತಿಶಾಲಿಯೂ, ಚಂದ್ರ ಸೂರ್ಯರನ್ನು ಪೀಡಿಸುವವನೂ, ಸಿಂಹಿಕೆಯ ಗರ್ಭದಲ್ಲಿ ಜನಿಸಿದವನೂ ಆಗಿರುವ ರಾಹುವಿಗೆ ನಾನು ನಮಸ್ಕರಿಸುತ್ತೇನೆ.

**ಪಲಾಶ ಪುಷ್ಪ ಸಂಕಾಶಂ ತಾರಕಾಗ್ರಹ ಮಸ್ತಕಂ । ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಂ ॥9॥**

ಭಾವಾರ್ಥ - ಮುತ್ತುಗದ ಹೂವಿನ ವರ್ಣವುಳ್ಳವನೂ, ಗ್ರಹ ನಕ್ಷತ್ರಗಳ ಶಿರವಾಗಿರುವವನೂ, ರುದ್ರನೂ, ಕ್ರೋಧಾತ್ಮನೂ, ಘೋರನೂ ಆಗಿರುವ ಕೇತುವಿಗೆ ನಾನು ನಮಸ್ಕರಿಸುವೆ.

**ಇತಿ ವ್ಯಾಸ ಮುಖೋದ್ಗೀತಂ ಯಃ ಪಠೇತ್ಸುಸಮಾಹಿತಃ । ದಿವಾ ವಾ ಯದಿ ವಾ ರಾತ್ರೌ ವಿಘ್ನಶಾಂತಿರ್ಭವಿಷ್ಯತಿ ॥10॥**

ಭಾವಾರ್ಥ - ವ್ಯಾಸ ಮಹರ್ಷಿಗಳು ಸ್ತೋತ್ರ ಮಾಡಿದ ಈ ಗೀತಗಳನ್ನು ಶಾಂತ ಮನೋಭಾವದಿಂದ ಹಗಲು ಅಥವಾ ರಾತ್ರೆ ಓದುವವನ ವಿಘ್ನಾದಿ ಸಂಕಷ್ಟಗಳು ದೂರವಾಗುವವು.

**ನರ ನಾರೀ ನೃಪಾಣಾಂ ಚ ಭವೇದ್ದುಃ ಸ್ವಪ್ನನಾಶನಂ । ಐಶ್ವರ್ಯಮತುಲಂ ತೇಷಾಂ ಆರೋಗ್ಯಂ ಪುಷ್ಟಿವರ್ಧನಂ ॥11॥**

ಭಾವಾರ್ಥ - ಸ್ತ್ರೀಪುರುಷರಾದಿಯಾಗಿ ರಾಜರುಗಳೇ ಮೊದಲಾದ ಸಮಸ್ತರಿಗೂ ಉಂಟಾಗಿರುವ ಘೋರ ಸ್ವಪ್ನಗಳು ನಾಶವಾಗುವವು. ಅವರಿಗೆ ಹೋಲಿಕೆಗೆ ಅಸಾಧ್ಯವಾಗುವಂತಹಾ ಐಶ್ವರ್ಯ, ಆರೋಗ್ಯ, ದೇಹಪುಷ್ಟಿಯುಂಟಾಗಿ ಬೆಳೆಯುವರು.

**ಗ್ರಹ ನಕ್ಷತ್ರಜಾಃ ಪೀಡಾಸ್ತಸ್ಕರಾಗ್ನಿ ಸಮುದ್ಭವಾಃ । ತಾಃ ಸರ್ವಾಃ ಪ್ರಶಮಂ ಯಾಂತಿ ವ್ಯಾಸೋ ಬ್ರೂತೇ ನ ಸಂಶಯಃ ॥12॥**

ಭಾವಾರ್ಥ - ಗ್ರಹಗಳಿಂದ, ನಕ್ಷತ್ರಗಳಿಂದ, ಹಾಗೆಯೇ ಕಳ್ಳಕಾಕರಿಂದ, ಅಗ್ನಿ ಪೀಡಾದಿಗಳಿಂದ ಉಂಟಾಗುವ ಸಮಸ್ತ ಪೀಡೆಗಳು ಪರಿಹಾರವಾಗುವವು ಎಂಬ ವ್ಯಾಸಮಹರ್ಷಿಗಳ ಮಾತುಗಳಲ್ಲಿ ಯಾವ ಸಂದೇಹವಿಲ್ಲ.

॥ ಇತಿ ನವಗ್ರಹಸ್ತೋತ್ರಂ ಸಂಪೂರ್ಣಂ ॥

## 4.4 ಸೂರ್ಯಕವಚ ಸ್ತೋತ್ರಂ

**ಯಾಜ್ಞವಲ್ಕ್ಯ ಉವಾಚಃ-** ಯಾಜ್ಞವಲ್ಕ್ಯರುಹೇಳಿದರು

**ಶೃಣುಷ್ವ ಮುನಿಶಾರ್ದೂಲ ಸೂರ್ಯಸ್ಯ ಕವಚಂ ಶುಭಂ । ಶರೀರಾರೋಗ್ಯದಂ ದಿವ್ಯಂ ಸರ್ವ ಸೌಭಾಗ್ಯದಾಯಕಂ ॥1॥**

ಭಾವಾರ್ಥ - ಎಲೈ ಮುನಿಪುಂಗವನೇ!ಮಂಗಲದಾಯಕವೂ ಶ್ರೇಷ್ಠವೂ, ಶರೀರಾರೋಗ್ಯವನ್ನು ರಕ್ಷಿಸುವಂತಹದೂ, ಸಮಸ್ತ ಸೌಭಾಗ್ಯವನ್ನು ಒದಗಿಸಿಕೊಡುವಂತಹದೂ ಆಗಿರುವ ಸೂರ್ಯಕವಚವನ್ನು ನಿನಗೆ ಅರುಹುವವನಾಗಿದ್ದೇನೆ. ಕೇಳುವವನಾಗು.

**ದೇದೀಪ್ಯಮಾನ ಮುಕುಟಂ ಸ್ಫುರನ್ಮಕರ ಕುಂಡಲಂ । ಧ್ಯಾತ್ವಾ ಸಹಸ್ರಕಿರಣಂ ಸ್ತೋತ್ರಮೇತುದುದೀರಯೇತ್ ॥2॥**

ಭಾವಾರ್ಥ - ಅತ್ಯಂತ ಪ್ರಕಾಶಿಸುತ್ತಿರುವ ಕಿರೀಟವುಳ್ಳವನೂ, ರಂಜಿಸುತ್ತಿರುವ ಮೊಸಳೆಯಾಕಾರದ ಕಿವಿಯಾಭರಣಗಳನ್ನು ಧರಿಸಿದವನೂ, ಸಾವಿರಕಿರಣಗಳೂಳ್ಳವನೂ ಆಗಿರುವ ಸೂರ್ಯನನ್ನು ಧ್ಯಾನಿಸುತ್ತಾ ಈ ಸ್ತುತಿಯನ್ನು ಪಠಿಸಬೇಕು.

**ಶಿರೋಮೇ ಭಾಸ್ಕರಃ ಪಾತು ಲಲಾಟಂ ಮೇಽಮಿತದ್ಯುತಿಃ । ನೇತ್ರೇ ದಿನಮಣಿಃ ಪಾತು ಶ್ರವಣೇವಾಸರೇಶ್ವರಃ ॥3॥**

ಭಾವಾರ್ಥ - ನನ್ನ ತಲೆಯನ್ನು ಭಾಸ್ಕರನೂ, ಹಣೆಯನ್ನು ಮಿತಿಯಿಲ್ಲದಪ್ರಕಾಶವುಳ್ಳವನೂ ಕಾಪಾಡಲಿ. ದಿನಮಣಿಯು ನಯನಗಳನ್ನೂ, ದಿನಾಧಿಪತಿಯು ನನ್ನ ಕಿವಿಗಳನ್ನೂ ರಕ್ಷಿಸಲಿ.

**ಘ್ರಾಣಂ ಘರ್ಮಘೃಣಿಃ ಪಾತು ವದನಂ ವೇದವಾಹನಃ ।**

**ಜಿಹ್ವಾಂ ಮೇ ಮಾನವಃ ಪಾತು ಕಂಠಂ ಮೇ ಸುರವಂದಿತಃ ॥4॥**

ಭಾವಾರ್ಥ - ನಾಸಿಕವನ್ನು ಉಷ್ಣ ಕಿರಣನೂ, ಮುಖವನ್ನು ವೇದವಾಹನನೂ ಕಾಪಾಡಲಿ. ಹಾಗೆಯೇ ನನ್ನ ನಾಲಿಗೆಯನ್ನು ಗೌರವವನ್ನೊದಗಿಸುವವನೂ, ಕುತ್ತಿಗೆಯನ್ನು ಸುರರಿಂದ ನಮಿಸಲ್ಪಡುವವನೂ ಕಾಪಾಡಲಿ.

**ಸ್ಕಂಧೌ ಪ್ರಭಾಕರಃ ಪಾತು ವಕ್ಷಃ ಪಾತು ಜನಪ್ರಿಯಃ । ಪಾತು ಪಾದೌ ದ್ವಾದಶಾತ್ಮಾ ಸರ್ವಾಂಗಂ ಸಕಲೇಶ್ವರಃ ॥5॥**

ಭಾವಾರ್ಥ - ಪ್ರಭಾಕರನು ಹಗಲಿನಲ್ಲಿಯೂ, ಜನಪ್ರಿಯನು ಎದೆಯನ್ನೂ ಕಾಪಾಡಲಿ. ದ್ವಾದಶಾತ್ಮನು ಪಾದಗಳನ್ನೂ, ಸರ್ವಾಂಗಗಳನ್ನು ಸಕಲಾಧಿಪನೂ ಕಾಪಾಡಲಿ.

**ಸೂರ್ಯ ರಕ್ಷಾತ್ಮಕಂ ಸ್ತೋತ್ರಂ ಲಿಖಿತ್ವಾ ಭೂರ್ಜಪತ್ರಕೆ । ದಧಾತಿ ಯಃಕರೇತಸ್ಯ ವಶಗಾಃ ಸರ್ವಸಿದ್ಧಯಃ ॥6॥**

ಭಾವಾರ್ಥ - ಸೂರ್ಯನ ರಕ್ಷಣೆ ಪಡೆಯುವ ಈ ಸ್ತುತಿಯನ್ನು ಭುಜಪತ್ರಾವಳಿಯಲ್ಲಿ ಬರೆದು ಹಸ್ತದಲ್ಲಿ ಧರಿಸುಕೊಳ್ಳುವಾತನಿಗೆ ಸಮಸ್ತ ಇಷ್ಟಾರ್ಥಗಳು ಲಭಿಸುವವು.

**ಸುಸ್ನಾತೋ ಯೋ ಜಪೇತ್ಸಮ್ಯಗ್ಯೋಽಧೀತೇಸ್ವಸ್ಥಮಾನಸಃ । ಸ ರೋಗಮುಕ್ತೋ ಧೀರ್ಘಾಯುಃ ಸುಖಂ ಪುಷ್ಟಿಂ ಚ ವಿಂದತಿ ॥7॥**

ಭಾವಾರ್ಥ - ಸ್ನಾನವನ್ನು ಮಾಡಿ ಶಾಂತ ಮನಸ್ಸಿನಿಂದ ಉತ್ತಮವಾಗಿ ಜಪಿಸುವಾತನು ರೋಗ ಮುಕ್ತನಾಗಿ ಆರೋಗ್ಯಶಾಲಿಯಾಗುವನು. ಧೀರ್ಘಾಯುಶಾಲಿಯಾಗುವನು. ಸೌಖ್ಯವನ್ನೂ ಶರೀರ ಸಾಮರ್ಥ್ಯವಂತನಾಗುವನು.

॥ ಇತಿ ಸೂರ್ಯ ಕವಚ ಸ್ತೋತ್ರಂ ಸಂಪೂರ್ಣಂ ॥

## 4.5 ಶ್ರೀ ಸೂರ್ಯಾಷ್ಟಕಂ

**ಆದಿದೇವ ನಮಸ್ತುಭ್ಯಂ ಪ್ರಸೀದಮಮ ಭಾಸ್ಕರ । ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತು ತೇ ॥1॥**

ಭಾವಾರ್ಥ - ಹೇ!ಆದಿದೇವನಾಗಿರುವ ಭಾಸ್ಕರನೇ, ನಿನಗಿದೋ ಪ್ರಣಾಮಗಳು. ನೀನು ನನ್ನ ಬಗ್ಗೆ ಪ್ರಸನ್ನನಾಗು. ಹೇ! ದಿವಾಕರನೇ, ನಿನಗೆ ನನ್ನ ನಮಸ್ಕಾರಗಳು. ಎಲೈ ಪ್ರಭಾಕರನೇ, ನಿನಗೆ ನನ್ನ ನಮನಗಳು.

**ಸಪ್ತಾಶ್ವ ರಥಮಾರೂಢಂ ಪ್ರಚಂಡಂ ಕಶ್ಯಪಾತ್ಮಜಂ । ಶ್ವೇತಂ ಪದ್ಮಧರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥2॥**

ಭಾವಾರ್ಥ - ಏಳು ಕುದುರೆಗಳುಳ್ಳ ರಥವನ್ನೇರಿದವನೂ, ಅಪ್ರತಿಮ ತೇಜಸ್ವೀಯೂ, ಹಸ್ತದಲ್ಲಿ ಶ್ವೇತಕಮಲವನ್ನು ಧರಿಸಿರುವವನೂ, ಕಶ್ಯಪ ತನಯನೂ ಆಗಿರುವ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

**ಲೋಹಿತಂ ರಥಮಾರೂಢಂ ಸರ್ವಲೋಕ ಪಿತಾಮಹಂ । ಮಹಾಪಾಪಹರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥3॥**

ಭಾವಾರ್ಥ - ಕೆಂಬಣ್ಣದ ರಥವನ್ನೇರಿದನೂ, ಸಮಸ್ತ ಲೋಕಗಳ ಪಿತಾಮಹನೂ, ಮಹಾಪರಾಧಗಳನ್ನು ಪರಿಹರಿಸುವಾತನೂ, ಭಗವಂತನೂ ಆಗಿರುವ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

**ತ್ರೈಗುಣ್ಯಂ ಚ ಮಹಾಶೂರಂ ಬ್ರಹ್ಮವಿಷ್ಣುಮಹೇಶ್ವರಂ । ಮಹಾಪಾಪಹರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥4॥**

ಭಾವಾರ್ಥ - ಸತ್ವ, ರಜ, ತಮೋಗುಣಗಳೆಂಬ ಮೂರು ಗುಣಗಳುಳ್ಳಾತನೂ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿ ರೂಪನೂ, ಮಹಾಪರಾಧಗಳ ಪರಿಹಾರಕನೂ ಆಗಿರುವ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

**ಬೃಂಹಿಂತಂ ತೇಜಃ ಪುಂಜಂ ಚ ವಾಯುಮಾಕಾಶಮೇವ ಚ । ಪ್ರಭುಂ ಚ ಸರ್ವ ಲೋಕಾನಾಂ ತಂ ಸೂರ್ಯಂ ಪ್ರಣಮಾಮ್ಯಹಂ ॥5॥**

ಭಾವಾರ್ಥ - ಬೃಹತ್ತಾಗಿರುವ ಕಾಂತಿಯ ಸಮೂಹವೇ ಆಗಿರುವವನೂ, ವಾಯ್ವಾಕಾಶರೂಪಿಯೂ, ಸಮಸ್ತ ಲೋಕಾಧಿಪತಿಯೂ ಆಗಿರುವ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

**ಬಂಧೂಕ ಪುಷ್ಪಸಂಕಾಶಂ ಹಾರಕುಂಡಲ ಭೂಷಿತಂ । ಏಕ ಚಕ್ರಧರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥6॥**

ಭಾವಾರ್ಥ - ಕೆಂಬಣ್ಣದ ದಾಸವಾಳ ಪುಷ್ಪದಂತೆ ಪ್ರಕಾಶ ಹೊಂದಿರುವಾತನೂ, ಕಂಠಾಭರಣ, ಕಿವಿಯಾಭರಣಗಳಿಂದ ಅಲಂಕೃತಗೊಂಡವನೂ, ಏಕಚಕ್ರಧಾರಿಯೂ ಆಗಿರುವ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

**ತಂ ಸೂರ್ಯಂ ಜಗತ್ಕರ್ತಾರಂ ಮಹಾತೇಜಃ ಪ್ರದೀಪನಂ । ಮಹಾಪಾಪಹರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥7॥**

ಭಾವಾರ್ಥ - ಜಗತ್ತಿನ ನಿರ್ಮಾಪಕನೂ ಬೃಹತ್ತಾಗಿರುವ ತೇಜೋ ರಾಶಿಯಿಂದ ಪ್ರಕಾಶಿಸುತ್ತಿರುವವನೂ, ಮಹಾಪರಾಧಗಳ ಪರಿಹಾರಕನೂ ಆಗಿರುವ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

**ತಂ ಸೂರ್ಯ ಜಗತಾಂ ನಾಥಂ ಜ್ಞಾನವಿಜ್ಞಾನ ಮೋಕ್ಷದಂ । ಮಹಾಪಾಪಹರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥8॥**

ಭಾವಾರ್ಥ - ಆ ಸೂರ್ಯನು ವಿಶ್ವಕ್ಕೆ ಅಧಿಪತಿಯು. ಜ್ಞಾನ-ವಿಜ್ಞಾನ-ಮೋಕ್ಷಗಳನ್ನು ದಯಪಾಲಿಸುವವನೂ ಮಹಾಪರಾಧಗಳ ಪರಿಹಾರಕನೂ ಆಗಿರುವವನು. ಅಂತಹಾ ಸೂರ್ಯದೇವನಿಗೆ ನಾನು ನಮಸ್ಕರಿಸುವೆನು.

॥ ಇತಿ ಶ್ರೀ ಸೂರ್ಯಾಷ್ಟಕಂ ಸಂಪೂರ್ಣಂ ॥

## 4.6 ತ್ರೈಲೋಕ್ಯ ಮಂಗಲ ಸೂರ್ಯಕವಚಂ

**ಸಾಂಬ ಸಾಂಬ ಮಹಾಬಾಹೋ ಶೃಣು ಮೇ ಕವಚಂ ಶುಭಂ । ತ್ರೈಲೋಕ್ಯಮಂಗಲಂ ನಾಮ ಕವಚಂ ಪರಮಾದ್ಭುತಂ ॥1॥**

ಭಾವಾರ್ಥ - ಹೇ!ಮಹಾಬಾಹುವಾಗಿರುವ ಸಾಂಬನೇ, ಶಿವನೇ, ಮೂರು ಲೋಕಗಳಿಗೆ ಮಂಗಲದಾಯಕವಾಗಿರುವ ಅತ್ಯದ್ಭುತವಾದಂತಹಾ ಕ್ಷೇಮವನ್ನುಂಟುಮಾಡುವ ನನ್ನ ಈ ಕವಚವನ್ನು ಅರುಹುವೆನಾಗುವೆನು. ಕೇಳುವಂತವನಾಗು.

**ಯದ್ ಜ್ಞಾತ್ವಾ ಮಂತ್ರವಿತ್ಸಮ್ಯಕ್ ಫಲಂ ಪ್ರಾಪ್ನೋತಿ ನಿಶ್ಚಿತಂ । ಯದ್ ಧೃತ್ವಾ ಚ ಮಹಾದೇವೋ ಗಣಾನಾಮಧಿಪೋಽಭವತ್ ॥2॥**

ಭಾವರ್ಥಃ- ಮಂತ್ರಗಳನ್ನು ಅರಿತವರು ಇದನ್ನು ಸರಿಯಾಗಿ ತಿಳಿದು ಖಚಿತವಾದ ಫಲವನ್ನು ಪಡೆಯುವನು. ಹಾಗೂ ಇದನ್ನು ಧರಿಸಿದ ಕಾರಣದಿಂದ ಮಹಾದೇವನು ಗಣಗಳಿಗೆ ಅಧಿಪತಿಯೆನಿಸಿದನು.

**ಪಠನಾದ್ಧಾರಣಾದ್ವಿಷ್ಣುಃ ಸರ್ವೇಷಾಂ ಪಾಲಕಃ ಸದಾ । ಏವಮಿಂದ್ರಾದಯಃ ಸರ್ವೇವೈಶ್ವರ್ಯಮವಾಪ್ನುವನ್ ॥3॥**

ಭಾವಾರ್ಥ - ಮಹಾವಿಷ್ಣುವು ತಾನು ಪಠಿಸಿದ ಮಾತ್ರದಿಂದ ಸಮಸ್ತ ಜಗತ್ಪಾಲಕನಾದನು. ಅಂತಯೇ ಮಾಡಿದ ಇಂದ್ರಾದಿದೇವತೆಯರು ಸಮಸ್ತ ಬಗೆಯ ಸಂಪದವನ್ನು ಪಡೆದರು.

**ಕವಚಸ್ಯ ಋಷಿರ್ಬ್ರಹ್ಮಾ ಛಂಧೋನುಷ್ಟುಬುದಾಹೃತಃ । ಶ್ರೀ ಸೂರ್ಯೋ ದೇವತಾ ಚಾತ್ರ ಸರ್ವದೇವನಮಸ್ಕೃತಃ ॥4॥**

ಭಾವಾರ್ಥ - ಈ ಕವಚಕ್ಕೆ ಬ್ರಹ್ಮನು ಋಷಿ. ಇದು ಅನುಷ್ಟುಪ್ ಛಂಧಸ್ಸಿನಲ್ಲಿದೆ. ಇದಕ್ಕೆ ಸಮಸ್ತ ದೇವರ್ಕಳಿಂದ ನಮಸ್ಕರಿಸಲ್ಪಡುವ ಶ್ರೀ ಸೂರ್ಯನು ದೇವತೆಯಾಗಿರುವನು.

**ಯಶ ಆರೋಗ್ಯ ಮೋಕ್ಷೇಷು ವಿನಿಯೋಗಃ ಪ್ರಕೀರ್ತಿತಃ । ಪ್ರಣವೋ ಮೇ ಶಿರಃಪಾತು ಘೃಣಿರ್ಮೇ ಪಾತು ಭಾಲಕಂ ॥5॥**

ಭಾವಾರ್ಥ - ಯಶಸ್ಸು, ಆರೋಗ್ಯ, ಮೋಕ್ಷಗಳಲ್ಲಿ ಈ ಕವಚದ ವಿನಿಯೋಗವು ಎಂದು ತಿಳಿಸಲ್ಪಟ್ಟಿದೆ. ಓಂ ಕಾರವು ನನ್ನ ತಲೆಯನ್ನೂ, ಕಿರಣವುಳ್ಳಾತನು ನನ್ನ ಹಣೆಯನ್ನೂ ಕಾಪಾಡಲಿ.

**ಸೂರ್ಯೋಽವ್ಯಾನ್ನಯನದ್ವಂದ್ವಮಾದಿತ್ಯಃ ಕರ್ಣಯುಗ್ಮಕಂ । ಅಷ್ಟಾಕ್ಷರೋ ಮಹಾಮಂತ್ರಃ ಸರ್ವಾಭೀಷ್ಟ ಫಲಪ್ರದಃ ॥6॥**

ಭಾವಾರ್ಥ - ಸೂರ್ಯನು ನಯನಗಳನ್ನೂ, ಆದಿತ್ಯನು ಕಿವಿಗಳನ್ನೂ ರಕ್ಷಿಸಲಿ. ಅಷ್ಟಾಕ್ಷರ ಮಹಾಮಂತ್ರವು ಸಮಸ್ತಾಭೀಷ್ಟಗಳನ್ನೂ ಈಡೇರಿಸಲಿ.

**ಹ್ರೀಂ ಬೀಜಂ ಮೇಮುಖಂ ಪಾತು ಹೃದಯಂ ಭುವನೇಶ್ವರಿ । ಚಂದ್ರಬೀಜಂ ವಿಂಶದಾದ್ಯಂ ಪಾತು ಮೇ ಗುಹ್ಯದೇಶಿಕಂ ॥7॥**

ಭಾವಾರ್ಥ - "ಹ್ರೀಂ"ಎನ್ನುವ ಬೀಜಾಕ್ಷರವು ಮುಖವನ್ನೂ, ಹೃದಯವನ್ನು ಭುವನೇಶ್ವರಿಯೂ ಕಾಪಾಡಲಿ. ಇಪ್ಪತ್ತರಲ್ಲಿ ಆದಿಯದಾದ ಚಂದ್ರಬಿಂಬವು ನನ್ನ ಗುಹ್ಯಪ್ರದೇಶವನ್ನೂ ಕಾಪಾಡಲಿ.

**ಅಕ್ಷರೋಽಸೌ ಮಹಾಮಂತ್ರಃ ಸರ್ವ ತಂತ್ರೇಷು ಗೋಪಿತಃ । ಶಿವೋ ವಹ್ನಿಸಮಾಯುಕ್ತೋ ವಾಮಾಕ್ಷೀಬಿಂದು ಭೂಷಿತಃ ॥8॥**

ಭಾವಾರ್ಥ - ಈ ಅಕ್ಷರವು ಮಹಾಮಂತ್ರವಾಗಿದ್ದು ಸಮಸ್ತ ತಂತ್ರಗಳಲ್ಲಿ ಗುಪ್ತವಾದದ್ದಾಗಿದೆ. ಇದು ಮಂಗಲದಾಯಕವಾಗಿದ್ದು ಅಗ್ನಿಯಿಂದ ಕೂಡಿರುವುದಾಗಿದೆ. ಹಾಗೂ ಎಡಗಣ್ಣಿನ ಬಿಂದುವಿಗಿಂತ ಉತ್ತಮವಾಗಿದೆ.

**ಏಕಾಕ್ಷರೋ ಮಹಾಮಂತ್ರಃ ಶ್ರೀಸೂರ್ಯಸ್ಯ ಪ್ರಕೀರ್ತಿತಃ । ಗುಹ್ಯಾದ್ಗುಹ್ಯತರೋ ಮಂತ್ರೋ ವಾಂಛಾಚಿಂತಾಮಣಿಸ್ಮೃತಃ ॥9॥**

ಭಾವಾರ್ಥ - ಶ್ರೀ ಸೂರ್ಯನಿಂದ ಅರುಹಲ್ಪಟ್ಟಂತಹಾ ಈ ಏಕಾಕ್ಷರವು ಶ್ರೇಷ್ಟ ಮಂತ್ರವಾಗಿದ್ದು ಅತಿ ಗುಪ್ತವಾದುದಾಗಿದೆ. ಇದು ಕಾಮನೆಗಳನ್ನು ಪೂರೈಸುವ ಚಿಂತಾಮಣಿಯೆನಿಸಿದೆ.

**ಶೀರ್ಷಾದಿ ಪಾದಪರ್ಯಂತಂ ಸದಾಪಾತು ಮನೂತ್ತಮಃ । ಇತಿ ತೇ ಕಥಿತಂ ದಿವ್ಯಂ ತ್ರಿಷುಲೋಕೇಷು ದುರ್ಲಭಂ ॥10॥**

ಭಾವಾರ್ಥ - ಶಿರದಿಂದ ಪಾದದ ತನಕ ಸಮಸ್ತ ದೇಹವನ್ನು ಮನು ವಂಶದ ಶ್ರೇಷ್ಟನು ರಕ್ಷಿಸಲಿ. ಈ ತೆರನಾಗಿ ಮೂರು ಲೋಕಂಗಳಲ್ಲಿಯೂ ದೊರಕಿಸಲಸಾಧ್ಯವಾಗಿರುವಂತಹ ಮತ್ತು ಪಾವನವಾಗಿರುವುದನ್ನು ನಿನಗರುಹಿರುವೆನು.

**ಶ್ರೀಪದಂ ಕಾಂತಿದಂ ನಿತ್ಯಂ ಧನಾರೋಗ್ಯವಿವರ್ಧನಂ । ಕುಷ್ಠಾದಿ ರೋಗಶಮನಂ ಮಹಾವ್ಯಾಧಿವಿನಾಶನಂ ॥11॥**

ಭಾವಾರ್ಥ - ಶ್ರೀಪದವು ಸೌಂದರ್ಯವನ್ನೂ, ಅನುದಿನವೂ ಆರೋಗ್ಯಾದಿಸಂಪದಗಳನ್ನೂ ಹೆಚ್ಚಿಸುವುದು. ಕುಷ್ಟಾದಿ ಮಹಾರೋಗಗಳನ್ನು ನಿವಾರಿಸುವುದರೊಡನೆ ಮಹಾವ್ಯಾಧಿಗಳನ್ನು ನಾಶಗೊಳಿಸುವಂತಹದಾಗಿದೆ.

**ತ್ರಿಸಂಧ್ಯಂ ಯಃ ಪಠೇನ್ನಿತ್ಯಮರೋಗೀ ಬಲವಾನ್ಭವೇತ್ । ಬಹುನಾಕಿಮಿಹೋಕ್ತೇನ ಯದ್ಯನ್ಮಸಿವರ್ತತೇ ॥।12॥**

ಭಾವಾರ್ಥ - ಪ್ರತ್ತಿದಿನವೂ ದಿನದ ಮೂರು ಸಂಧ್ಯಾಕಾಲಗಳಲ್ಲಿ ಇಅದನ್ನು ಪಠಿಸುವವನು ರೋಗಮುಕ್ತನಾಗಿ ಸಾಮರ್ಥ್ಯವಂತನಾಗುವನು.

**ತತ್ಸರ್ವಂ ಭವೇತ್ತಸ್ಯ ಕವಚಸ್ಯ ಚ ಧಾರಣಾತ್ । ಭೂತ ಪ್ರೇತ ಪಿಶಾಚಾಶ್ಚ ಯಕ್ಷ ಗಂಧರ್ವರಾಕ್ಷಸಾಃ ॥13॥**

ಭಾವಾರ್ಥ - ಹೆಚ್ಚು ಮಾತೇಕೆ? ಈ ಕವಚವನ್ನು ಧರಿಸುವುದರಿಂದ ಮನದ ಸಮಸ್ತ ಇಷ್ಟಾರ್ಥಗಳೆಲ್ಲ ಈಡೇರುವವು. ಭೂತ, ಪ್ರೇತ, ಪಿಶಾಚಿಗಳು, ಯಕ್ಷರು, ಗಂಧರ್ವರು, ರಕ್ಕಸರು ಸಮೀಪಕ್ಕೂ ಬರಲಾರವು.

**ಬ್ರಹ್ಮರಾಕ್ಷಸವೇತಾಲಾ ನ ದೃಷ್ಟುಮಪಿ ತಂ ಕ್ಷಮಾಃ । ದೂರಾದೇವ ಪಲಾಯಂತೇ ತಸ್ಯ ಸಂಕೀರ್ತನಾದಪಿ ॥14॥**

ಭಾವಾರ್ಥ - ಬ್ರಹ್ಮರಾಕ್ಷಸರು, ಬೇತಾಳಗಳು ಅವನನ್ನು ನೋಡದೆ ಹೋಗುವವು. ಇದನ್ನು ಸ್ತುತಿಸುವುದರಿಂದ ದೂರದಿಂದಲೇ ಪಲಾಯನ ಗೈಯುವವು.

**ಭೂರ್ಜಪತ್ರೇ ಸಮಾಲಿಖ್ಯ ರೋಚನಾಗರು ಕುಂಕುಮೈಃ । ರವಿವಾರೇ ಚ ಸಂಕ್ರಾಂತ್ಯಾಂ ಸಪ್ತಮ್ಯಾಂ ಚ ವಿಶೇಷತಃ ॥15॥**

ಭಾವಾರ್ಥ - ಗೋರೋಚನ, ಶ್ರೀಗಂಧ, ಕುಂಕುಮಗಳಿಂದ ಭುಜಪತ್ರಾವಳಿಯಲ್ಲಿ ಈ ಮಂತ್ರವನ್ನು ಬರೆದು ಭಾನುವಾರ ಸಂಕ್ರಮಣಕಾಲದಲ್ಲಿ ಸಪ್ತಮಿ ದಿವಸ ಧರಿಸುವುದು ವಿಶೇಷ ಫಲದಾಯಕವಾಗಿದೆ.

**ಧಾರಯೇತ್ಸಾಧಕಶ್ರೇಷ್ಠಃ ಶ್ರೀ ಸೂರ್ಯಸ್ಯ ಪ್ರಿಯೋ ಭವೇತ್ । ತ್ರಿಲೋಹ ಮಧ್ಯಗಂ ಕೃತ್ವಾ ಧಾರದ್ದಕ್ಷಿಣೇ ಕರೇ ॥16॥**

ಭಾವಾರ್ಥ - ಈ ರೀತಿಯಾಗಿ ಅನುಷ್ಠಾನ ಕೈಗೊಳ್ಳುವ ಸಾಧಕ ಶ್ರೇಷ್ಠನು ಶ್ರೀ ಸೂರ್ಯನಿಗೆ ಪ್ರೀತಿಯವನಾಗುವನು. ಮೂರು ಲೋಹಗಳನ್ನೊಳಗೊಂಡ ತಾಯಿತದಲ್ಲಿ ಇದನ್ನು ಅಳವಡಿಸಿ ಬಲಹಸ್ತದಲ್ಲಿ ಧರಿಕೊಳ್ಳಬೇಕು.

**ಶಿಖಾಯಾಮಥವಾ ಕಂಠೇ ಸೋಽಪಿ ಸೂರ್ಯೋ ನ ಸಂಶಯಃ । ಇತಿ ತೇ ಕಥಿತಂ ಸಾಂಬ ತ್ರೈಲೋಕ್ಯಮಂಗಲಾಭಿದಂ ॥17॥**

ಭಾವಾರ್ಥ - ಶಿಖೆ ಅಥವಾ ಕುತ್ತಿಗೆಯಲ್ಲಿ ಧರಿಸಿದಲ್ಲಿ ಆತನು ಸಂಶಯಾತೀತನಾನಿ ಸ್ಯನೇ ಆಗುವನು. ಈ ತ್ರೈಲೋಕ್ಯ ಮಂಗಲದಾಯಕವಾದ ಕವಚವು ಪ್ರಪಂಚದಲ್ಲಿ ದುರ್ಲಭವಾಗಿದೆ.

**ಕವಚಂ ದುರ್ಲಭಂ ಲೋಕೇ ತವ ಸ್ನೇಹಾತ್ಪ್ರಕಾಶಿತಂ । ಅಜ್ಞಾತ್ವಾ ಕವಚಂ ದಿವ್ಯಂ ಯೋ ಜಪೇತ್ಸೂರ್ಯಮುತ್ತಮಂ ॥18॥**

ಭಾವಾರ್ಥ - ಎಂಬುದಾಗಿ ಸಾಂಬ ಸದಾಶಿವನಿಗೆ ಅರುಹಿ ತನ್ನ ಸ್ನೇಹವನ್ನು ಪ್ರಕಟಗೊಳಿಸಿದನು. ಹುದುಗಿಕೊಂಡಿರುವಈ ಕವಚವು ಸೂರ್ಯನಿಗೆ ಶ್ರೇಷ್ಠವಾದುದಾಗಿದೆ.

**ಸಿದ್ಧಿರ್ನ ಜಾಯತೇ ತಸ್ಯ ಕಲ್ಪಕೋಟಿ ಶತೈರಪಿ ॥19॥**

ಭಾವಾರ್ಥ - ಇದನ್ನು ಕ್ರಮವರಿಯದೆ ಜಪಿಸುವಾತನಿಗೆ ಶತಕೋಟಿಕಲ್ಪಗಳಾದಾಗ್ಯೂ ಸಿದ್ಧಿಯುಂಟಾಗದು.

॥ ಇತಿ ಶ್ರೀ ತ್ರೈಲೋಕ್ಯ ಮಂಗಲ ಸೂರ್ಯಕವಚಂ ಸಂಪೂರ್ಣಂ ॥

## 4.7 ಶ್ರೀ ಶನಿ ಸ್ತೋತ್ರಂ

**ಅಸ್ಯ ಶ್ರೀ ಶನೈಶ್ಚರ ಸ್ತೋತ್ರಸ್ಯ । ದಶರಥ ಋಷಿಃ । ಶನೈಶ್ಚರೋ ದೇವತಾ । ತ್ರಿಷ್ಟುಪ್ ಛಂದಃ । ಶನೈಶ್ಚರ ಪ್ರೀತ್ಯರ್ಥಂ ಜಪೇ ವಿನಿಯೋಗಃ ॥**

ಭಾವಾರ್ಥ - ಈ ಶನೈಶ್ಚರ ಸ್ತೋತ್ರಕ್ಕೆ ದಶರಥ ಋಷಿಯಾಗಿದ್ದು ಶನೈಶ್ಚರನು ದೇವತೆಯೂ ಆಗಿದ್ದು ಇದು ತ್ರಿಷ್ಟುಪ್ ಛಂದಸ್ಸಿನಲ್ಲಿದೆ. ಶನೈಶ್ಚರನ ಪ್ರೀತ್ಯರ್ಥಕ್ಕಾಗಿ ಜಪದಲ್ಲಿ ಇದನ್ನು ವಿನಿಯೋಗವಾಗಿದೆ.

ದಶರಥ ಉವಾಚಃ- ದಶರಥನು ಹೇಳಿದ್ದು,

**ಕೋಣೋಂತಕೋ ರೌದ್ರಯಮೋಽಥ ಬಭ್ರುಃ । ಕೃಷ್ಣಃ ಶನಿಃ ಪಿಂಗಲ ಮಂದ ಸೌರಿ ॥ ನಿತ್ಯಂ ಸ್ಮೃತೋಯೋ ಹರತೇ ಚ ಪೀಡಾಂ । ತಸ್ಮೈನಮಃ ಶ್ರೀ ರವಿನಂದನಾಯ ॥1॥**

ಭಾವಾರ್ಥ - ಕೋಣ, ಅಂತಕ, ರೌದ್ರ, ಯಮ, ಬಭ್ರು, ಕೃಷ್ಣ, ಶನಿ, ಪಿಂಗಲ, ಮಂದ, ಸೌರಿ ಎಂಬುದಾಗಿ ಅನುದಿನವೂ ಸ್ಮರಿಸಿದಾಗ ಯಾರು ಪೀಡೆಗಳನ್ನು ಪರಿಹರಿಸುವನೋ ಅಂತಹಾ ರವಿತನಯನಿಗೆ ನನ್ನ ನಮಸ್ಕಾರಗಳು.

**ಸುರಾಸುರಾಃ ಕಿಂ ಪುರುಷೋರಗೇಂದ್ರಾ । ಗಂಧರ್ವ ವಿದ್ಯಾಧರ ಪನ್ನಗಾಶ್ಚ ॥ ಪೀಡ್ಯಂತಿ ಸರ್ವೆ ವಿಷಮಸ್ಥಿತೇನ । ತಸ್ಮೈ ನಮಃ ಶ್ರೀರವಿನಂದನಾಯ ॥2॥**

ಭಾವಾರ್ಥ - ದೇವತೆಗಳು, ಅಸುರರು, ಕಿಂಪುರುಷರು, ನಾಗೇಂದ್ರರು, ಗಂಧರ್ವ ವಿದ್ಯಾಧರರು, ಪನ್ನಗರೇ ಆದಿಯಾಗಿ ಎಲ್ಲರೂ ವಿಷಮಸ್ಥಾನಸ್ಥಿತನಾಗಿರುವ ಇವನಿಂದ ಪೀಡಿಸಲ್ಪಡುವರು. ಅಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ನರಾನರೇಂದ್ರಾಃ ಪಶವೋಮೃಗೇಂದ್ರಾ । ವನ್ಯಾಶ್ಚಯೇ ಕೀಟ ಪತಂಗ ಭೃಂಗಾಃ ॥**
**ಪೀಡ್ಯಂತಿ ಸರ್ವೆ ವಿಷಮಸ್ಥಿತೇನ । ತಸ್ಮೈ ನಮಃ ಶ್ರೀರವಿನಂದನಾಯ ॥3॥**

ಭಾವಾರ್ಥ - ಮನುಜರು, ರಾಜರುಗಳು, ಪಶುಗಳು, ಕಾನನದಲ್ಲಿರುವ ಮೃಗರಾಜನಾಗಿರುವ ಸಿಂಹ ಹಾಗೆಯೇ ಕೀಟಗಳು, ಪತಂಗಗಳು, ಭ್ರುಮರಗಳು ಕೂಡಾ ವಿಷಮಸ್ಥಾನಸ್ಥಿತನಾಗಿರುವ ಇವನಿಂದ ಪೀಡಿಸಲ್ಪಡುವರು. ಅಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ದೇಶಾಶ್ಚ ದುರ್ಗಾಣಿ ವನಾನಿಯತ್ರ । ಸೇನಾನಿವೇಶಾಃ ಪುರಪತ್ತನಾನಿ ॥ ಪೀಡ್ಯಂತಿ ಸರ್ವೆ ವಿಷಮಸ್ಥಿತೇನ । ತಸ್ಮೈ ನಮಃ ಶ್ರೀರವಿನಂದನಾಯ ॥4॥**

ಭಾವಾರ್ಥ - ದೇಶಗಳು, ಕೋಟೆಕೊತ್ತಳಗಳು, ವನಗಳು, ಸೈನಿಕರ ನೆಲೆಗಳು, ನಗರ ಪಟ್ಟಣಗಳು ಇವೆಲ್ಲವೂ ವಿಷಮಸ್ಥಾನಸ್ಥಿತನಾಗಿರುವ ಇವನಿಂದ ಪೀಡಿಸಲ್ಪಡುವರು. ಅಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ತಿಲೈರ್ಯವೈರ್ಮಾಷ ಗುಡಾನ್ನ ದಾನೈ । ಲೋರ್ಹೇನ ನೀಲಾಂಬರದಾನತೋ ವಾ ॥ ಪ್ರೀಣಾತಿ ಮಂತ್ರೈರ್ನಿಜವಾಸರೇ ಚ । ತಸ್ಮೈ ನಮಃ ಶ್ರೀರವಿನಂದನಾಯ ॥5॥**

ಭಾವಾರ್ಥ - ಶನೈಶ್ಚರನವಾರವಾಗಿರುವ ಶನಿವಾರದಂದು ಎಳ್ಳು, ಗೋದಿ, ಉದ್ದು, ಬೆಲ್ಲ, ಅನ್ನದಾನದಿಂದ ಹಾಗೂ ಕಬ್ಬಿಣ, ನೀಲವರ್ಣದ ವಸ್ತ್ರಗಳನ್ನು ದಾನ ಮಾಡುವುದರಿಂದ ಮತ್ತು ಶನೈಶ್ಚರನ ಮಂತ್ರಗಳಿಂದ ಆತನು ಸುಪ್ರೀತನಾಗುವನು. ಅಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ಪ್ರಯಾಗ ಕೂಲೇ ಯಮುನಾತಟೇ ಚ । ಸರಸ್ವತಿ ಪುಣ್ಯ ಜಲೇ ಗುಹಾಯಾಂ ॥ ಯೋ ಯೋಗೀನಾಂ ಧ್ಯಾನಗತೋಽಪಿ ಸೂಕ್ಷ್ಮ । ಸ್ತಸ್ಮೈ ನಮಃ ಶ್ರೀರವಿನಂದನಾಯ ॥6॥**

ಭಾವಾರ್ಥ - ಪ್ರಯಾಗದ ದಂಡೆಯಯಮೇಲೆ, ಯಮುನಾ ನದಿಯ ತಟಾಕಿನಲ್ಲಿ, ಸರಸ್ವತಿ ನದಿಯ ಪುಣ್ಯ ಜಲದಲ್ಲಿ ಮತ್ತು ಗುಹೆಗಳಲ್ಲಿ ಮಹಾಯೋಗಿಗಳ ಧ್ಯಾನದ

ಸೂಕ್ಷ್ಮರೂಪಿಯಾಗಿ ಯಾರು ಅಂತರ್ಗತರಾಗುವನೋ ಅಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ಅನ್ಯ ಪ್ರದೇಶಾತ್ ಸ್ವಗ್ರಹಂ ಪ್ರವಿಷ್ಟ । ಸ್ತದೀಯ ವಾರೇಸ ನರಃ ಸುಖೀಸ್ಯಾತ್ ॥**
**ಗ್ರಹಾದ್ಗತೋಯೋನ ಪುನಃ ಪ್ರಯಾತಿ । ತಸ್ಮೈ ನಮಃ ಶ್ರೀರವಿನಂದನಾಯ ॥7॥**

ಭಾವಾರ್ಥ - ಶನಿವರದಂದು ಬೇರೆ ಊರಿನಿಂದ ತನ್ನ ಸ್ವಗೃಹಕ್ಕೆ ಬರುವ ಮನುಜನು ಸುಖಿಯಾಗುವನು. ಆ ದಿನ ಮನೆಯಿಂದ ಹೊರಗೆ ಹೋದವನು ಮತ್ತೆ ಬರಲಾರನು. ಅಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ಸೃಷ್ಟ್ವಾ ಸ್ವಯಂ ಭೂರ್ಭುವನತ್ರಯಸ್ಯ । ತ್ರಾತಾ ಹರೀಶೋ ಹರಿತೇ ಪಿನಾಕಿ ॥**
**ಏಕಸ್ತ್ರಿಧಾ ಋಗ್ಯಜುಃ ಸಾಮಮೂರ್ತಿ । ಸ್ತಸ್ಮೈ ನಮಃ ಶ್ರೀರವಿನಂದನಾಯ ॥8॥**

ಭಾವಾರ್ಥ - ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರ್ಲೋಕಗಳನ್ನು ಸೃಷ್ಟಿಸಿದ ಬ್ರಹ್ಮ, ಪಾಲಕನಾದ ಶ್ರೀಹರಿ, ಲಯಕಾರಕನಾಗಿರುವ ಹರ ಮತ್ತು ಋಗ್ ಯಜು ಸಾಮಗಳೆಂಬ ವೇದತ್ರಯಗಳ ಸ್ವರೂಪವಾಗಿರುವಂತಹಾ ರವಿಪುತ್ರನಿಗೆ ನನ್ನ ನಮಸ್ಕಾರಗಳು.

**ಶನ್ಯಷ್ಟಕಂ ಯಃ ಪ್ರಯತಃ ಪ್ರಭಾತೇ । ನಿತ್ಯಂ ಸುಪುತ್ರೈಃ ಪಶು ಬಾಂಧವೈಶ್ಚ ॥**
**ಪಠೇತ್ತು ಸೌಖ್ಯಂ ಭುವಿಭೋಗಯುಕ್ತಃ । ಪ್ರಾಪ್ನೋತಿ ನಿರ್ವಾಣ ಪದಂ ತದಂತೇ ॥9॥**

ಭಾವಾರ್ಥ - ಶನೈಶ್ಚರನ ಈ ಅಷ್ಟಕ ಸ್ತೋತ್ರಗಳನ್ನು ಯಾರು ಪ್ರತಿದಿನವೂ ಉಷಃಕಾಲದಲ್ಲಿ ಪಠಿಸುವರೋ ಅವರು ಸದ್ಗುಣಯುತ ಪುತ್ರರು, ಪಶುಗಳು, ಬಾಂಧವರುಗಳಿಂದ ಕೂಡಿ ಭೂಮಿಯಲ್ಲಿರುವ ಸಮಸ್ತ ಭೋಗಗಳನ್ನೂ ಕೂಡಿ ಸುಖಸೌಖ್ಯಾದಿಗಳನ್ನೂ ಅನುಭವಿಸುವರು ಮಾತ್ರವಲ್ಲದೆ ಮರಣಾನಂತರ ಮೋಕ್ಷವನ್ನು ಹೊಂದುವರು.

**ಕೋಣಸ್ಥಃ ಪಿಂಗಲೋ ಬಭ್ರುಃ । ಕೃಷ್ಣೋರೌದ್ರೋಂತಕೋ ಯಮಃ ॥**
**ಸೌರಿಃ ಶನೈಶ್ಚರೋ ಮಂದಃ । ಪಿಪ್ಪಲಾದೇನ ಸಂಸ್ತುತಃ ॥10॥**

ಭಾವಾರ್ಥ - ಕೋಣಸ್ಥ, ಪಿಂಗಲ, ಬಭ್ರು, ಕೃಷ್ಣ, ರೌದ್ರ, ಅಂತಕ, ಯಮ, ಸೌರಿ, ಶನೈಶ್ಚರ, ಮಂದ ಎಂಬೀ ಹೆಸರುಗಳು ಪಿಪ್ಪಲಾದ ಮುನಿಯಿಂದ ಸ್ತುತಿಸಲ್ಪಟ್ಟಿರುವುದಾಗಿದೆ.

**ಏತಾನಿ ದಶನಾಮಾನಿ । ಪ್ರಾತರುತ್ಥಾಯ ಯಃ ಪಠೇತ್ ॥ ಶನೈಶ್ಚರ ಕೃತಾಪೀಡಾ ।**
**ನ ಕದಾಚಿತ್ ಭವಿಷ್ಯತಿ ॥11॥**

ಭಾವಾರ್ಥ - ಉಷಃಕಾಲದಲ್ಲಿ ಎದ್ದು ಶನೈಶ್ಚರನ ಈ ಹತ್ತು ಹೆಸರುಗಳನ್ನು ಪಠಿಸುವಾತನಿಗೆ ಶನೈಶ್ಚರನಿಂದ ಉಂಟಾಗಬಹುದಾದ ಅನಿಷ್ಟಗಳು ಎಂದಿಗೂ ಉಂಟಾಗಲಾರವು.

॥ ಶ್ರೀ ಶನಿ ಸ್ತೋತ್ರಂ ಸಂಪೂರ್ಣಂ ॥

## 4.8 ಋಣಮೋಚಕ ಮಂಗಳ ಸ್ತೋತ್ರಂ

**ಮಂಗಲೋ ಭೂಮಿಪುತ್ರಶ್ಚ ಋಣಹರ್ತಾ ಧನಪ್ರದಃ । ಸ್ಥಿರಾಸನೋ ಮಹಾಕಾಯಃ**
**ಸರ್ವ ಕರ್ಮಾವರೋಧಕಃ ॥1॥**

ಭಾವಾರ್ಥ - ಮಂಗಳ, ಭೂಮಿಪುತ್ರ, ಋಣನಾಶಕ, ಧನದಾಯಿ, ಸ್ಥಿರಾಸನ, ಮಹಾಕಾಯ, ಸರ್ವಕರ್ಮಗಳಿಗೆ ತಡೆಯನ್ನುಂಟುಮಾಡುವವ, . .

**ಲೋಹಿತೋ ಲೋಹಿತಾಕ್ಷಶ್ಚ ಸಾಮಗಾನಾಂ ಕೃಪಾಕರಃ । ಧರಾತ್ಮಜಃ ಕುಜೋ**
**ಭೌಮೋ ಭೂತಿದೋ ಭೂಮಿ ನಂದನಃ ॥2॥**

ಭಾವಾರ್ಥ - ಲೋಹಿತ, ಲೋಹಿತಾಕ್ಷ, ಸಾಮವೇದ ಗಾಯಕರಿಗೆ ಕರುಣೆಯನ್ನು ತೋರುವವ, ಭೂಮಿತನಯ, ಕುಜ, ಭೌಮ, ಅಭ್ಯುದಯಕಾರಕ, ಭೂಮಿಗೆ ಸಂತಸವನ್ನು ದಯಪಾಲಿಸುವವ.

**ಅಂಗಾರಕೋ ಯಮಶ್ಚೈವ ಸರ್ವರೋಗಾಪಹಾರಕಃ । ವೃಷ್ಟೇಃ ಕರ್ತಾಽಪಹರ್ತಾಚ ಸರ್ವಕಾಮ ಫಲಪ್ರದಃ ॥3॥**

ಭಾವಾರ್ಥ - ಅಂಗಾರಕ, ಯಮ, ಸರ್ವರೋಗವಿನಾಶಕ, ವೃಷ್ಟಿ[ಮಳೆ]ಕಾರಕ, ವೃಷ್ಟ್ಯಾಪ ಹಾರಕ, ಸಮಸ್ತ ಕಾಮನೆಗಳ ಫಲದಾಯಕ. .

**ಏತಾನಿ ಕುಜನಾಮಾನಿ ನಿತ್ಯಂ ಯಃ ಶ್ರದ್ಧಯಾ ಪಠೇತ್ । ಋಣಂ ನ ಜಾಯತೇ ತಸ್ಯ ಧನಂ ಶೀಘ್ರ ಮವಾಪ್ನುಯಾತ್ ॥4॥**

ಭಾವಾರ್ಥ - ಕುಜನ ಕುರಿತಾದ ಈ ಹೆಸರುಗಳನ್ನು ಅನುದಿನವೂ ಶ್ರದ್ಧಾಯುಕ್ತನಾಗಿ ಯಾವಾತನು ಪಠಿಸುವನೋ ಅವನಿಗೆ ಸಾಲಾದಿ ಋಣಗಳು ಬಾಧಿಸುವುದಿಲ್ಲ. ಅಂತಹವನು ಶೀಘ್ರವಾಗಿ ಧನವಂತನಾಗುವನು.

**ಧರಣೀಗರ್ಭ ಸಂಭೂತಂ ವಿದ್ಯುತ್ಕಾಂತಿ ಸಮಪ್ರಭಂ । ಕುಮಾರಂ ಶಕ್ತಿ ಹಸ್ತಂಚ ಮಂಗಲಂ ಪ್ರಣಮಾಮ್ಯಹಂ ॥5॥**

ಭಾವಾರ್ಥ - ಭೂದೇವಿಯ ಗರ್ಭದಿಂದುದಿಸಿದವನೂ, ವಿದ್ಯುತ್ತಿನ ಪ್ರಕಾಶದಂತೆ ಬೆಳಗುತ್ತಲಿರುವವನೂ, ಕುಮಾರನೂ, ಶಕ್ತಿಹಸ್ತನೂ ಆಗಿರುವ ಮಂಗಳನಿಗೆ ನಾನು ನಮಿಸುವೆನು.

**ಸ್ತೋತ್ರಮಂಗಾರಕಸ್ಯೈ ತತ್ಪಠನೀಯಂ ಸದಾನೃಭಿಃ । ನ ತೇಷಾಂ ಭೌಮಜಾ ಪೀಡಾ ಸ್ವಲ್ಪಾಪಿ ಭವತಿಕ್ವಚಿತ್ ॥6॥**

ಭಾವಾರ್ಥ - ಅಂಗಾರಕನೆಂಬ ಹೆಸರಿನ ಈ ಕುಜ ಸ್ತೋತ್ರವು ಮನುಜರಿಂದ ಯಾವಾಗಲೂ ಪಠಣ ಮಾಡತಕ್ಕದ್ದಾಗಿದೆ. ಆದರಿಂದ ಕುಜನ ಅನಿಷ್ಟಗಳು ಅತ್ಯಂತ ವಿರಳವಾಗಿ ಕೂಡಾ ಕಿಂಚಿತ್ತೂ ಬಾಧಿಸದು.

**ಅಂಗಾರಕ ಮಹಾಭಾಗ ಭಗವನ್ ಭಕ್ತವತ್ಸಲ । ತ್ವಾಂ ನಮಾಮಿ ಮಮಾಶೇಷ ಮೃಣಮಾಶು ವಿನಾಶಯ ॥7॥**

ಭಾವಾರ್ಥ - ಹೇ ಭಕ್ತವತ್ಸಲನೇ! ಸುಪ್ರಸಿದ್ಧನಾಗಿರುವ ಭಗವದ್ಸ್ವರೂಪೀ ಕುಜನೇ, ನಿನಗಾನು ನಮಿಸುವೆನು. ನನ್ನ ಸಮಸ್ತ ರಿಣದ ಹಂಗಿನಿಂದ ನಿಃಶೇಷವಾಗಿ ಮುಕ್ತಗೊಳಿಸು.

**ಋಣರೋಗಾದಿ ದಾರಿದ್ರ್ಯಂ ಯೇ ಚಾನ್ಯೇಹ್ಯಪಮೃತ್ಯವಃ । ಭಯಕ್ಲೇಷ ಮನಸ್ತಾಪಾನಶ್ಯಂತು ಮಮ ಸರ್ವದಾ ॥8॥**

ಭಾವಾರ್ಥ - ಹಂಗು[ಸಾಲದಋಣ], ಅನಾರೋಗ್ಯಾದಿ ಅನಿಷ್ಟಗಳು, ದರಿದ್ರತೆ, ಹಾಗೆಯೇ ಅಪಮೃತ್ಯು, ಭೀತಿ, ದುಃಖ, ಮನೋವ್ಯಥೆ, ಸೇಡು ಇತ್ಯಾದಿ ಅನ್ಯ ಬಾಧೆಗಳು ಸದಾ ನಾಶವಾಗಲಿ.

**ಅತಿವಕ್ರ ದುರಾರಾಧ್ಯ ಭೋಗಮುಕ್ತಾ ಜಿತಾತ್ಮನಃ । ತುಷ್ಟೋದದಾಸಿ ಸಾಮ್ರಾಜ್ಯಂ ರುಷ್ಟೋಹರಸಿ ತತ್ಕ್ಷಣಾತ್ ॥9॥**

ಭಾವಾರ್ಥ - ಹೇ ಕುಜನೇ! ನೀನು ಶ್ರೇಷ್ಠನಾಗಿರುವ ಮಂಗಳ ಗ್ರಹವಾಗಿರುವೆ. ಆರಾಧನೆಗೆ ಎಟಕದವನು. ಸುಖಾನುಭವಗಳಿಂದ ವಿರಕ್ತನಾದವನು. ಆತ್ಮವನ್ನು ಜಯಿಸಿದಾತನು. ನೀನು ತೃಪ್ತಿಹೊಂದಿದವನಾದರೆ ಸಾಮ್ರಾಜ್ಯವನ್ನು ದಯಪಾಲಿಸುವೆ. ಅಸಂತುಷ್ಟನಾದರೆ ಆ ಕ್ಷಣವೇ ಅದನ್ನು ಅಪಹರಿಸುವೆ.

**ವಿರಿಂಚಿಶಕ್ರವಿಷ್ಣೂಣಾಂ ಮನುಷ್ಯಾಣಾಂತು ಕಾ ಕಥಾ । ತೇನತ್ವಂಸರ್ವ ಸತ್ವೇನ ಗ್ರಹರಾಜೋ ಮಹಾಬಲಃ ॥10॥**

ಭಾವಾರ್ಥ - ಗ್ರಹಗಳ ಒಡೆಯನಾದ ನೀನು ಸಮಸ್ತ ಬಗೆಯ ಜೀವಿಗಳಲ್ಲಿ ಅತಿಬಲಿಷ್ಟನು. ನಿನ್ನೆದುರು ಬ್ರಹ್ಮ, ಇಂದ್ರ, ವಿಷ್ಣು, ಹಾಗೂ ಮನುಷ್ಯರ ಚರಿತ್ರೆ ಎಲ್ಲಿಹುದು?

**ಪುತ್ರಾನ್ ದೇಹಿ ಧನಂದೇಹಿ ತ್ವಾಮಸ್ಮಿ ಶರಣಂಗತಃ । ಋಣ ದಾರಿದ್ರ್ಯ ದುಃಖೇನ ಶತ್ರೂಣಾಂ ಚ ಭಯಾತ್ತತಃ ॥11॥**

ಭಾವಾರ್ಥ - ಸ್ವಾಮಿಯೇ ನಿನಗನು ಶರಣಾಗಿರುವೆ. ನನಗೆ ಸಂತತಿಯನ್ನು ಅನುಗ್ರಹಿಸು. ಸಂಪತ್ತನ್ನು ದಯಪಾಲಿಸು. ಸಾಲ, ದರಿದ್ರತೆ, ಸಂತಾಪ, ಮತ್ತು ಶತ್ರುಗಳ ಭೀತಿಯಿಂದ ನನ್ನನ್ನು ರಕ್ಷಿಸುವವನಾಗು.

**ಏಭಿರ್ದ್ವಾದಶಭಿಃ ಶ್ಲೋಕೈರ್ಯಃ ಸ್ತೌತಿ ಚ ಧರಾಸುತಂ । ಮಹತೀಂ**
**ಶ್ರಿಯಮಾಪ್ನೋತಿಹ್ಯಪರೋ ಧನದೋಯುವಾ ॥12॥**

ಭಾವಾರ್ಥ - ಶ್ರೇಷ್ಠನೂ ಧನದಾಯಿಯೂ ತರುಣನೂ ಆಗಿರುವ ಮಂಗಳನನ್ನು ಈ ಹನ್ನೆರಡು ಶ್ಲೋಕಗಳಿಂದ ಸ್ತುತಿಸುವವನು ಮಹಾ ಸಂಪದಗಳನ್ನು ಹೊಂದುವನು.

॥ ಇತಿ ಋಣ ಮೋಚಕ ಮಂಗಳ ಸ್ತೋತ್ರಂ ಸಂಪೂರ್ಣಂ ॥

----- ****** -----

# 5 ಶ್ರೀ ದೇವೀ ಸ್ತೋತ್ರಗಳು

## 5.1 ಶ್ರೀ ದೇವೀ ಪ್ರಾತಃ ಸ್ಮರಣಂ

**ಪ್ರಾತಃ ಸ್ಮರಾಮಿ ಶರದಿಂದುಕರೋಜ್ಜ್ವಲಾಭಾಂ ಸದ್ರತ್ನವನ್ಮಕರಕುಂಡಲ**
**ಹಾರಭೂಷಾಂ । ದಿವ್ಯಾಯುಧೋರ್ಜಿತ ಸುನೀಲ ಸಹಸ್ರ ಹಸ್ತಾಂ ರಕ್ತೋತ್ಪಲಾಭ**
**ಚರಣಾಂ ಭವತೀ ಪರೇಶಾಂ ॥1॥**

ಭಾವಾರ್ಥ - ಶರದೃತುವಿನ ಚಂದ್ರನ ಪ್ರಕಾಶದಂತೆ ಬೆಳಗುತ್ತಲಿರುವ, ಉತ್ತಮವಾದ ಮಣಿರತ್ನಗಳಿಂದ ಶೋಭಿಸುತ್ತಿರುವ, ಮಕರಕುಂಡಲ, ಹಾರಾದಿ ಆಭರಣಗಳನ್ನು ಧರಿಸಿರುವ, ಶ್ರೇಷ್ಠವಾದ ಆಯುಧಗಳನ್ನು ಹಿಡಿದಿರುವ ಕಪ್ಪಗಿನ ಸಾವಿರ ಹಸ್ತಂಗಳನ್ನು ಹೊಂದಿರುವ, ಕೆಂದಾವರೆಯನ್ನು ಹೋಲುವ ಪಾದಗಳ ಒಡತಿಯೂ ಆಗಿರುವ ನಿನ್ನನ್ನು ಉಷಃಕಾಲದಲ್ಲಿ ಸ್ಮರಿಸುತ್ತಿದ್ದೇನೆ.

**ಪ್ರಾತರ್ನಮಾಮಿ ಮಹಿಷಾಸುರ ಚಂಡ ಮುಂಡ- ಶುಂಭಾಸುರ ಪ್ರಮುಖ ದೈತ್ಯವಿನಾಶ ದಕ್ಷಾಂ । ಬ್ರಹ್ಮೇಂದ್ರರುದ್ರಮುನಿ ಮೋಹನ ಶೀಲಲೀಲಾಂ ಚಂಡೀಂ ಸಮಸ್ತ ಸುರಮೂರ್ತಿಮನೇಕ ರೂಪಾಂ ॥2॥**

ಭಾವಾರ್ಥ - ಮಹಿಷಾಸುರ, ಚಂಡ, ಮುಂಡ, ಶುಂಭ-ನಿಶುಂಭಾದಿ ಅಸುರರನ್ನು ನಾಶಮಾಡುವುದರಲ್ಲಿ ಸಮರ್ಥಳಾದ, ಬ್ರಹ್ಮ-ರುದ್ರ-ಇಂದ್ರ-ಮುನಿಗಳನ್ನು ಕೂಡಾ ಮೋಹಾಪಾಶಕ್ಕೆ ಸಿಲುಕಿಸುವ ಲೀಲೆಯುಳ್ಳವಳಾಗಿರುವ, ಸಮಸ್ತ ದೇವತೆಗಳ ರೂಪವನ್ನು ತಾಳುವ ಮತ್ತು ಅದರಿಂದಲೇ ಅನೇಕಾನೇಕ ರೂಪಗಳನ್ನು ಹೊಂದಿರುವ ತಾಯಿ ಚಂಡಿಕಾದೇವಿಗೆ ನಾನು ಮುಂಜಾವದಲ್ಲಿ ನಮಸ್ಕರಿಸುತ್ತಿದ್ದೇನೆ.

**ಪ್ರಾತರ್ಭಜಾಮಿ ಭಜತಾಮಭಿಲಾಷದಾತ್ರೀಂ ಧಾತ್ರೀಂ ಸಮಸ್ತ ಜಗತಾಂ ದುರಿತಾಪಹಂತ್ರೀಂ । ಸಂಸಾರಬಂಧನ ವಿಮೋಚನ ಹೇತುಭೂತಾಂ ಮಾಯಾಂ ಪರಾಂ ಸಮಧಿಗಮ್ಯ ಪರಸ್ಯ ವಿಷ್ಣೋಃ ॥3॥**

ಭಾವಾರ್ಥ - ಭಜಿಸುವ ಭಕ್ತರಿಗೆ ಇಷ್ಟಾರ್ಥದಾಯಕಳಾಗಿರುವ, ಸಮಸ್ತ ಲೋಕಗಳ ಪೋಷಕಿಯಾಗಿ ದುರಿತಗಳನ್ನು ಪರಿಹರಿಸುವ, ಸಾಂಸಾರಿಕ ಬಂಧನಗಳನ್ನು ಕಳೆಯಲು ಮಾರ್ಗದರ್ಶಕಳಾಗಿರುವ, ಮಹಾವಿಷ್ಣುವಿನ ಉತ್ತಮವಾದ ಮಾಯಾರೂಪವೇ ನೀನು ಎಂಬುದಾಗಿ ನಂಬಿಕೊಳ್ಳುತ್ತಾ ಪ್ರಾತಃಕಾಲದಲ್ಲಿ ಶ್ರೀದೇವಿಯನ್ನು ನಾನು ಭಜಿಸುತ್ತಿದ್ದೇನೆ.

**ಶ್ಲೋಕತ್ರಯಮಿದಂ ದೇವ್ಯಾಶ್ಚಂಡಿಕಾಯಾಃ ಪಠೇನ್ನರಃ । ಸರ್ವಾನ್ ಕಾಮನವಾಪ್ನೋತಿ ವಿಷ್ಣು ಲೋಕೇ ಮಹೀಯತೇ ॥4॥**

ಭಾವಾರ್ಥ - ಚಂಡಿಕಾ ದೇವಿಯ ಈ ಮೂರು ಶ್ಲೋಕಗಳನ್ನು ಯಾವ ಮನುಷ್ಯನು ಪಠಿಸುತ್ತಾನೋ ಅವನು ಬಯಸಿದ್ದನ್ನೆಲ್ಲಾ ಪಡೆದು ವಿಷ್ಣು ಸಾಯುಜ್ಯವನ್ನು ಹೊಂದುವನು.

॥ ಇತಿ ಶ್ರೀದೇವೀ ಪ್ರಾತಃ ಸ್ಮರಣಂ ಸಂಪೂರ್ಣಂ ॥

## 5.2 ಶ್ರೀ ಲಲಿತಾ ಪಂಚರತ್ನ ಸ್ತೋತ್ರಂ

**ಪ್ರಾತಃ ಸ್ಮರಾಮಿ ಲಲಿತಾ ವದನಾರವಿಂದಂ ಬಿಂಬಾಧರಂ ಪೃಥುಲ ಮೌಕ್ತಿಕ ಶೋಭಿನಾಸಂ । ಆಕರ್ಣ ಧೀರ್ಘ ನಯನಂ ಮಣಿಕುಂಡಲಾಢ್ಯಂ ಮಂದಸ್ಮಿತಂ ಮೃಗಮದೋಜ್ವಲ ಭಾಲದೇಶಂ ॥1॥**

ಭಾವಾರ್ಥ - ತೊಂಡೆಯ ಹಣ್ಣನ್ನು ಹೋಲುವ ತುಟಿ, ದೊಡ್ಡ ಮುತ್ತಿನ ಮೂಗುತಿಯನ್ನು ಧರಿಸಿ ಶೋಭಿಸುವ ಮೂಗು, ಕಿವಿಯತನಕ ವಿಸ್ತರಿಸಿರುವ ವಿಶಾಲವಾಗಿರುವ ನಯನ ದ್ವಯಗಳು, ಕಿವಿಯಲ್ಲಿ ಮಣಿ ಕುಂಡಲಗಳು, ಮಂದಹಾಸವನ್ನು ಬೀರುತ್ತಿರುವ ತುಟಿಗಳು, ಹಾಗೂ ಹಣೆಯಲ್ಲಿ ಉಜ್ವಲವಾಗಿ ಬೆಳಗುತ್ತಿರುವ ಕಸ್ತೂರಿಯ ತಿಲಕ, ಇವುಗಳಿಂದೊಪ್ಪುವ ಲಲಿತಾ ಮಾತೆಯ ಮುಖಕಮಲವನ್ನು ನಾನು ಉಷಃ ಕಾಲದಲ್ಲಿ ಸ್ಮರಿಸುತ್ತಿದ್ದೇನೆ.

**ಪ್ರಾತರ್ಭಜಾಮಿ ಲಲಿತಾ ಭುಜಕಲ್ಪವಲ್ಲೀಂ ರಕ್ತಾಂಗುಲೀಯ ಲಸದಂಗುಲಿ ಪಲ್ಲವಾಢ್ಯಾಂ । ಮಾಣಿಕ್ಯ ಹೇಮ ವಲಯಾಂಗದ ಶೋಭಮಾನಾಂ ಪುಂಡ್ರೇಕ್ಷುಚಾಪ ಕುಸುಮೇಷು ಸೃಣೀರ್ದಧಾನಂ ॥2॥**

ಭಾವಾರ್ಥ - ಕೆಂಪು ಹರಳಿನ ಉಂಗುರವ ಧರಿಸಿ ಹೊಳೆಯುವ ಬೆರಳೆನ್ನುವ ಚಿಗುರುಗಳಿಂದ ಕೂಡಿದವಳೂ, ಮಾಣಿಕ್ಯದ ಬಳೆಗಳು ಹಾಗೂ ತೋಳ್ಬಂದಿಗಳಿಂದ ಶೋಭಾಯಮಾನಳಾಗಿರುವ ನಾಮ ಕಬ್ಬನ್ನು ಬಿಲ್ಲನ್ನಾಗಿಸಿ ಹೂವುಗಳನ್ನು ಬಾಣಗಳನ್ನಾಗಿಸಿ ತುಂಬಿರುವ ಬತ್ತಳಿಕೆಯನ್ನು ಹಿಡಿದಿರುವ ಲಲಿತಾಮಾತೆಯ ತೋಳುಗಳೆಂಬ ಕಲ್ಪಲತೆಯನ್ನು ನಾನು ಬೆಳಗ್ಗೆ ಭಜಿಸುತ್ತೇನೆ.

**ಪ್ರಾತರ್ನಮಾಮಿ ಲಲಿತಾ ಚರಣಾರವಿಂದಂ ಭಕ್ತೇಷ್ಟ ದಾನ ನಿರತಂ ಭವ ಸಿಂಧು ಪೋತಂ । ಪದ್ಮಾಸನಾದಿ ಸುರನಾಯಕ ಪೂಜನೀಯಂ ಪದ್ಮಾಂಕುಶ ಧ್ವಜ ಸುದರ್ಶನ ಲಾಂಛನಾಢ್ಯಂ ॥3॥**

ಭಾವಾರ್ಥ - ಭಕ್ತರು ಅಪೇಕ್ಷಿಸುವ ಇಷ್ಟ ಫಲಗಳನ್ನು ಕರುಣಿಸುವುದರಲ್ಲಿ ತೊಡಗಿಸಿಕೊಂಡಿರುವವಳೂ,ಸಂಸಾರವೆನ್ನುವ ಸಾಗರವನ್ನು ದಾಟಲು

ಹರಿಗೋಲಾಗಿರುವವಳೂ, ಬ್ರಹ್ಮಾದಿ ದೇವತಾವರೇಣ್ಯರಿಗೆ ಪೂಜನೀಯವಾಗಿರುವವಳೂ, ಕಮಲ, ಅಂಕುಶ, ಧ್ವಜ, ಸುದರ್ಶನ ಚಕ್ರ ಮೊದಲಾದ ಗುರುತುಗಳನ್ನು ಹೊಂದಿರುವವಳೂ ಆದ ಲಲಿತಾ ಮಾತೆಯ ಪಾದ ಕಮಲಗಳಿಗೆ ನಾನು ಉಷಃ ಕಾಲದಲ್ಲಿ ನಮಸ್ಕರಿಸುತ್ತೇನೆ.

**ಪ್ರಾತಃ ಸ್ತುವೇ ಪರಶಿವಾಂ ಲಲಿತಾಂ ಭವಾನೀಂ ತ್ರಯಂತ ವೇದ್ಯ ವಿಭವಾಂ ಕರುಣಾನವದ್ಯಾಂ । ವಿಶ್ವಸ್ಯ ಸೃಷ್ಟಿ ವಿಲಯ ಸ್ಥಿತಿ ಹೇತುಭೂತಾಂ ವಿದ್ಯೇಶ್ವರೀಂ ನಿಗಮಮ ವಾಙ್ಮನಸಾತಿ ದೂರಾಂ ॥4॥**

ಭಾವಾರ್ಥ - ವೇದಾಂತಗಳಿಂದ ತಿಳಿದುಬರುವ ವೈಭವವನ್ನು ಹೊಂದಿರುವವಳೂ,ದಯಾನಿಧಿಯಾಗಿ ಶ್ಲಾಘನೀಯಳಾದವಳೂ, ಜಗದ ಉತ್ಪತ್ತಿ, ಪಾಲನೆ, ನಾಶಕ್ಕೆ ಕಾರಣೀ ಭೂತವಾಗಿರುವ ಶ್ರೀವಿದ್ಯಾ ಮಂತ್ರಕ್ಕೆ ದೇವತಾ ಸ್ವರೂಪಿಯೂ, ವೇದಗಳಿಗೆ ನಿಲುಕದವಳೂ, ಮಾತು, ಮತ್ತು ಮನಸ್ಸಿಗೆ ಸಿಗದವಳೂ,ಪರಮೇಶ್ವರನ ಒಡತಿಯೂ, ಜಗನ್ಮಾತೆಯೂ ಆಗಿರುವ ಲಲಿತಾ ಮಾತೆಯನ್ನು ನಾನು ಪ್ರಾತಃಕಾಲದಲ್ಲಿ ಸ್ತುತಿಸುತ್ತೇನೆ.

**ಪ್ರಾತರ್ವದಾಮಿ ಲಲಿತೇ ತವ ಪುಣ್ಯ ನಾಮ ಕಾಮೇಶ್ವರೀತಿ ಕಮಲೇತಿ ಮಹೇಶ್ವರೀತಿ । ಶ್ರೀ ಶಾಂಭವೀತಿ ಜಗತಾಂ ಜನನೀ ಪರೇತಿ ವಾಗ್ದೇವತೇತಿ ವಚಸಾ ತ್ರಿಪುರೇಶ್ವರೀತಿ ॥5॥**

ಭಾವಾರ್ಥ - ಕಾಮೇಶ್ವರಿ,ಕಮಲೆ,ಮಹೇಶ್ವರಿ,ಶಾಂಭವಿ,ಶ್ರೇಷ್ಠಳಾಗಿರುವ ಜಗಜ್ಜನನಿ, ವಾಗ್ದೇವಿ, ತ್ರಿಪುರೇಶ್ವರಿ ಎಂಬುದಾಗಿ ನಿನ್ನ ಪುಣ್ಯ ನಾಮಗಳನ್ನು ಲಲಿತಾ ಮಾತೆಯೇ ನಾನು ಬೆಳಗ್ಗಿನ ಹೊತ್ತು ಜಪಿಸುತ್ತೇನೆ.

**ಯಃ ಶ್ಲೋಕ ಪಂಚಕಮಿದಂ ಲಲಿತಾಂಬಿಕಾಯಾಃ ಸೌಭಾಗ್ಯದಂ ಸುಲಲಿತಂ ಪಠತಿ ಪ್ರಭಾತೇ । ತಸ್ಮೈ ದದಾತಿ ಲಲಿತಾ ಝಟಿತಿ ಪ್ರಸನ್ನಾ ವಿದ್ಯಾಂ ಶ್ರಿಯಂ ವಿಮಲ ಸೌಖ್ಯಮನಂತ ಕೀರ್ತಿಂ ॥6 ॥**

ಭಾವಾರ್ಥ - ಯಾವಾತನು ಸೌಭಾಗ್ಯವನ್ನು ಒದಗಿಸುವ ಸುಂದರವಾದ ಹಾಗೂ ಸುಲಭವಾಗಿರುವ ಲಲಿತಾಂಬಿಕೆಯ ಈ ಐದು ಶ್ಲೋಕಗಳನ್ನು ಉಷಃಕಾಲದಲ್ಲಿ ಪಠಿಸುವನೋ ಅವನಿಗೆ ತತ್ಕ್ಷಣ ಪ್ರಸನ್ನಳಾಗುವ ಲಲಿತಾ ಮಾತೆಯು ಸಂತೋಷದಿಂದ ವಿದ್ಯೆ, ಸಂಪತ್ತು, ಶೋಭೆ, ನಿರ್ಮಲವಾದ ಸೌಖ್ಯ, ಹಾಗೂ ಅಂತ್ಯವಿಲ್ಲದ್ದ ಕೀರ್ತಿಯನ್ನು ದಯಪಾಲಿಸುತ್ತಾಳೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಲಲಿತಾ ಪಂಚರತ್ನ ಸ್ತೋತ್ರಂ ಸಂಪೂರ್ಣಂ ॥

## 5.3 ಶ್ರೀ ಗಾಯತ್ರೀ ಸ್ತೋತ್ರಂ

**ನಮಸ್ತೇ ದೇವಿ ಗಾಯತ್ರಿ ಸಾವಿತ್ರಿ ತ್ರಿಪದೇಸ್ಕ್ಷರೇ । ಅಜರೇ ಅಮರೇ ಮಾತತ್ರಾಹಿ ಮಾಂ ಭವಸಾಗರಾತ್ ॥1॥**

ಭಾವಾರ್ಥ - ಹೇ! ತಾಯೇ, ಈ ಭವ ಸಾಗರದಿಂದ ನನ್ನನ್ನು ಕಾಪಾಡು. ಮೂರು ಅಕ್ಷರಗಳಿರುವ ನೀನು ಗಾಯತ್ರಿಯೂ, ಸಾವಿತ್ರಿಯೂ ಆಗಿದ್ದು ಮುಪ್ಪಿಲ್ಲದವಳೂ ಆಗಿರುವುದಲ್ಲದೆ ಅಮರಳೂ ಆಗಿರುವೆ. ಮಾತೆಯೇ ನಿನಗಿದೋ ಪ್ರಣಾಮಗಳು.

**ನಮಸ್ತೇ ಸೂರ್ಯಸಂಕಾಶೇ ಸೂರ್ಯಸಾವಿತ್ರಿಕೆಮಾತೃಕೇ । ಬ್ರಹ್ಮವಿದ್ಯೆ ಮಹಾವಿದ್ಯೆ ವೇದಮಾತೇನಮೋಸ್ತುತೇ ॥2॥**

ಭಾವಾರ್ಥ - ತಾಯಿಯೇ,ವೇದಮಾತೆಯೇ, ಮಹಾವಿದ್ಯಾಪ್ರದಾಯಿನಿ ಯೇ, ಬ್ರಹ್ಮ ವಿದ್ಯಾಪಾರಂಗತಳೇ, ಸೂರ್ಯನೊಡನೆ ಸದಾ ಇರುವ ಮಾತೆಯೇ ನಿನಗಿದೋ ಪ್ರಣಾಮಗಳು.

**ಅನಂತಕೋಟಿ ಬ್ರಹ್ಮಾಂಡವ್ಯಾಪಿನಿ ಬ್ರಹ್ಮಚಾರಿಣಿ । ನಿತ್ಯಾನಂದೇ ಮಹಾಮಾಯೇ ಪರೇಶಾನಿ ನಮೋಸ್ತುತೇ ॥3॥**

ಭಾವಾರ್ಥ - ಹೇ! ಅಮ್ಮಾ, ಬ್ರಹ್ಮಚಾರಿಣಿಯೇ, ಬ್ರಹ್ಮಾಂಡವನ್ನು ವ್ಯಾಪಿಸಿರುವವಳೇ, ನಿರಂತರ ಆನಂದ ದಾಯಕಿಯಾಗಿ ಮಾಯಾಸ್ವರೂಪಿಣಿಯೂ ಆಗಿರುವ ಮಾತೆಯೇ, ನಿನಗಿದೋ ಪ್ರಣಾಮಗಳು.

**ತ್ವಂ ಬ್ರಹ್ಮಾ ತ್ವಂ ಹರಿಃ ಸಾಕ್ಷಾದ್ ರುದ್ರಸ್ತ್ವಮಿಂದ್ರ ದೇವತಾ । ಮಿತ್ರಸ್ತ್ವಂ ವರುಣಸ್ತ್ವಂ ಚ ತ್ವಂ ಅಗ್ನಿರಶ್ವಿನೌ ಭಗಃ ॥4॥**

ಭಾವಾರ್ಥ - ಹೇ! ಅಮ್ಮಾ, ನೀನು ಬ್ರಹ್ಮ ಸ್ವರೂಪಿಯು. ನೀನು ಹರಿ ಸ್ವರೂಪಳು. ಸಾಕ್ಷಾತ್ ರುದ್ರ ಸ್ವರೂಪಿಣಿಯೂ ಇಂದ್ರ ದೇವತೆಯೂ ಆಗಿರುವೆ. ನೀನೇ ಸೂರ್ಯ, ಚಂದ್ರ, ಅಗ್ನಿ, ವರುಣ, ಅಶ್ವಿನೀ ದೇವತೆಯರೂ ಆಗಿರುವೆ. ತಾಯಿಯೇ ನಿನಗಿದೋ ಪ್ರಣಾಮಗಳು.

**ಪೂಷಾರ್ಯಮಾ ಮರುತ್ವಾಂಶ್ಚ ಋಷಯೋಸ್ಪಿ ಮುನೀಶ್ವರಾಃ । ಪಿತರೋ ನಾಗಾ ಯಕ್ಷಾಂಶ್ಚ ಗಂಧರ್ವಾಪ್ಸರಾಂ ಗಣಾಃ ॥5॥**

ಭಾವಾರ್ಥ - ನೀನೇ ಸೂರ್ಯ, ನೀನೇ ಪಾರ್ವತೀಮಾತೆ, ನೀನೇ ಮರುತ್ ದೇವತೆಯರ ಸ್ವರೂಪಿಣಿಯಾಗಿರುವಿ. ಋಷಿಗಳ ಸ್ವರೂಪವೂ ನಿನ್ನದೇ ಆಗಿದೆ. ನಾಗ, ಯಕ್ಷ, ಗಂಧರ್ವ, ಅಪ್ಸರಗಣಾದಿಗಳಿಗೆ ನೀನೇ ಮಾತಾಸ್ವರೂಪಿಣಿಯಾಗಿರುವಿ.

**ರಕ್ಷೋ ಭೂತ ಪಿಶಾಚಾಶ್ಚ ತ್ವಮೇವ ಪರಮೇಶ್ವರೀ । ಋಗ್ ಯಜುಃ ಸಾಮ ವಿದ್ಯಾಶ್ಚ ಅಥರ್ವಾಂಗೀರಸಾನಿ ॥6॥**

ಭಾವಾರ್ಥ - ಹೇ!ಪರಮೇಶ್ವರೀ, ನನ್ನನ್ನು ಭೂತ ಪಿಶಾಚಾದಿಗಳಿಂದ ನೀನೇ ರಕ್ಷಿಸುವುದಾಗಿದೆ. ಅಲ್ಲದೇ ಚತುರ್ವೇದಗಳಾದ ಋಗ್, ಯಜು, ಸಾಮಾರ್ಥವಣಗಳು ನಿನ್ನಿಂದಲೇ ರಕ್ಷಿಸಲ್ಪಡುವುದಾಗಿದೆ.

**ತ್ವಮೇವ ಸರ್ವ ಶಾಸ್ತ್ರಾಣಿ ತ್ವಮೇವ ಸರ್ವ ಸಂಹಿತಾಃ । ಪುರಾಣಿ ಚ ತಂತ್ರಾಣಿ ಮಹಾಗಮಮತಾನಿ ಚ ॥7॥**

ಭಾವಾರ್ಥ - ಅಮ್ಮಾ! ನೀನು ಸಮಸ್ತ ಶಾಸ್ತ್ರಗಳ ಸ್ವರೂಪಿಣಿಯೇ ಆಗಿರುವಿ. ಅಲ್ಲದೆ ಮಂತ್ರ ಸಂಹಿತೆಗಳ, ತಂತ್ರಾಮಗಮಾದಿ ಪುರಾಣಗಳ ಸ್ವರೂಪಿಣಿಯೂ ಆಗಿರುವೆ.

**ತ್ವಮೇವ ಪಂಚಭೂತಾನಿ ತತ್ವಾನಿ ಜಗದೀಶ್ವರಿ । ಬ್ರಾಹ್ಮೀ ಸರಸ್ವತೀ ಸಂಧ್ಯಾ ತುರೀಯಾ ತ್ವಂ ಮಹೇಶ್ವರೀ ॥8॥**

ಭಾವಾರ್ಥ - ತಾಯಿಯೇ!ನೀನೇ ಪೃಥ್ವೀ, ಅಪ್, ತೇಜೋ, ವಾಯು, ಆಕಾಶಗಳೆಂಬ ಪಂಚ ಮಹಾಭೂತಾತ್ಮಿಕೆಯಾಗಿರುವೆ. ಸಮಸ್ತ ತತ್ವಗಳೂ ನೀನೇ ಆಗಿರುವಿ. ನೀನು ಬ್ರಾಹ್ಮೀ ಕಾಲದಲ್ಲಿ ಸರಸ್ವತಿಯಾಗಿಯೂ ಸಾಯಂಕಾಲ, ನಿಶಃಕಾಲಗಳಲ್ಲಿ ಮಹೇಶ್ವರಿಯೂ ಆಗಿರುವಿ.

**ತತ್ವಂ ಸದ್ ಬ್ರಹ್ಮಸ್ವರೂಪಾ ಕಿಂಚಿದ್ ಸದಸದಾತ್ಮಿಕಾ । ಪರಾತ್ ಪರೇಶಿ ಗಾಯತ್ರಿ ನಮಸ್ತೇ ಮಾತರಂಬಿಕೇ ॥9॥**

ಭಾವಾರ್ಥ - ಅಮ್ಮ! ಮಾತೆಯೇ!! ಅಂಬಿಕೆಯೇ ನೀನು ಸಾಕ್ಷಾತ್ ಬ್ರಹ್ಮಸ್ವರೂಪಿಣಿಯೇ ಆಗಿರುವೆ. ಸತ್ಯಾತ್ಮಳೂ ಸತ್ಯ ರೂಪಿಣಿಯೂ, ಶ್ರೇಷ್ಠಳೂ, ಪರಮಾತ್ಮಳೂ ಆಗಿರುವ ಗಾಯತ್ರಿಯೂ ನೀನೇ ಆಗಿರುವೆ. ಆಂತಹಾ ಮಾತೆಯೇ ನಿನಗಿದೋ ಪ್ರಣಾಮಗಳು.

**ಚಂದ್ರೇ ಕಲಾತ್ಮಿಕೇ ನಿತ್ಯೇ ಕಾಲರಾತ್ರಿ ಸ್ವಧೇ ಸ್ವರೇ । ಸ್ವಾಹಾಕಾರೆಸ್ಗ್ನಿವಕ್ತ್ರೇ ತ್ವಾಂ ನಮಾಮಿ ಜಗದೀಶ್ವರಿ ॥10॥**

ಭಾವಾರ್ಥ - ಅನುದಿನವೂ ಚಂದ್ರನಲ್ಲಿ ಕಾಣಬಹುದಾದ ಕಲೆಗಳ ನಿರ್ಮಾತೃ ನೀನೇ ಆಗಿರುವೆ. ಕಾಲರಾತ್ರಿಯಾಗಿಯೂ, ಸ್ವಾಹಾಕಾರದ ಅಗ್ನಿಮುಖಳೂ ನೀನೇ ಇರುವೆ. ಹೇ! ಗಾಯತ್ರಿ ಮಾತೆಯೇ, ಜಗದೀಶ್ವರೀಯೂ ಆಗಿರುವ ನಿನಗೆ ನನ್ನ ಪ್ರಣಾಮಗಳು.

**ನಮೋ ನಮಸ್ತೇ ಗಾಯತ್ರಿ ಸಾವಿತ್ರಿ ತ್ವಾಂ ನಮಾಮ್ಯಹಂ । ಸರಸ್ವತಿ ನಮಸ್ತುಭ್ಯಂ ತುರೀಯೇ ಬ್ರಹ್ಮರೂಪಿಣಿ ॥11॥**

ಭಾವಾರ್ಥ - ಗಾಯತ್ರಿ ಮಾತೆಯೇ ನಿನಗಿದೋ ನನ್ನ ಪ್ರಣಾಮಗಳು. ಸಾವಿತ್ರಿ ಮಾತೆಯೇ ನಿನಗಿದೋ ನನ್ನ ನಮನಗಳು. ಸರಸ್ವತಿಯೂ ಬ್ರಹ್ಮ ಸ್ವರೂಪಿಣಿಯೂ ಆಗಿರುವ ಮಹಾಮಾತೆಯೇ ನಿನಗಿದೋ ಎನ್ನ ಪ್ರಣಾಮಗಳು.

**ಅಪರಾಧ ಸಹಸ್ರಾಣಿ ತ್ವಸತ್ ಕರ್ಮ ಶತಾನಿ ಚ । ಮತ್ತೋ ಜಾತಾನಿ ದೇವೇಶಿ ತ್ವಂ ಕ್ಷಮಸ್ವ ದಿನೇ ದಿನೇ ॥12॥**

ಭಾವಾರ್ಥ - ಅಮ್ಮಾ! ತಾಯಿಯೇ,ಅನುದಿನವೂ ನನ್ನಿಂದ ಸಾವಿರಾರು ಅಪರಾಧಗಳು ಸಂಭವಿಸುತ್ತಲೇ ಇರುತ್ತವೆ. ನಿನ್ನಿಂದ ನೂರಾರು ಸಂಖ್ಯೆಯಲ್ಲಿ ಪ್ರಶಸ್ತ ಕಾರ್ಯಗಳು ಜರಗುತ್ತಲೇ ಇರುತ್ತವೆ. ಹೇ! ಜಗನ್ಮಾತೆಯೇ, ಸತ್ಯವನ್ನು ಅರಿತವಳಾದ ನೀನು ಅನುದಿನವೂ ನನ್ನಿಂದಾಗುವ ಅಪರಾಧಗಳನ್ನು ಮನ್ನಿಸು ತಾಯೇ!!

॥ ಇತಿ ಗಾಯತ್ರಿ ಸ್ತೋತ್ರಂ ಸಂಪೂರ್ಣಂ ॥

## 5.4 ವೇದ ಮಾತಾ ಗಾಯತ್ರೀ ಧ್ಯಾನ ಶ್ಲೋಕಂ

**ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

ಭಾವಾರ್ಥ - ಯಾವ ಸವಿತಾ ಸೂರ್ಯ ದೇವನು ನಮಗೆ ಭೇದ ಭಾವವಿಲ್ಲದೆ ಭಗವಂತನಲ್ಲಿ ಒಂದಾಗಲು ಯೋಗ್ಯವಾದ, ಅವಿದ್ಯಾನಾಶಕವಾದ, ಪರಮಾತ್ಮನ ದರ್ಶನ ಪ್ರಾಪ್ತಿ ಮಾಡಿಕೊಳ್ಳಲು ಆ ಸವಿತೃ ದೇವನತೇಜಸ್ಸನ್ನು ತಿಳಿಯಲು ಪ್ರೇರಿಪಿಸಲಿ. ಶ್ರೀಮನ್ನಾರಾಯಣನು, ಲೋಕ ಪ್ರಸಿದ್ಧನು, ಬುದ್ಧಿ ಪ್ರೇರಕನು, ಮಹಾತೇಜಸ್ವಿಯು, ದಿವ್ಯ ಪ್ರಭೆಯನ್ನು ಬೀರುವವನು, ಕ್ರೀಡಾತ್ಮಕನು, ಆಹ್ಲಾದಕರನು, ಪರಂಜ್ಯೋತಿಯು ಆದ ಪರಮಾತ್ಮನನ್ನು ಧ್ಯಾನರೂಪಲ್ಲಿ ಧಾರಣೆ ಮಾಡುತ್ತೇನೆ. ಸನ್ಮಾರ್ಗದಲ್ಲಿ ಸದಾ ಪ್ರೇರೆಪಿಸುತ್ತಿರಲಿ.

**ಮುಕ್ತಾ ವಿದ್ರುಮ ಹೇಮ ನೀಲ ಧವಲಚ್ಛಾಯೈರ್ಮುಖೈಸ್ತ್ರೀಕ್ಷಣೈಃ ಯುಕ್ತಾಮಿಂದುಕಲಾನಿಬದ್ಧರತ್ನಮಕುಟಾಂ ತತ್ತ್ವಾರ್ಥ ವರ್ಣಾತ್ಮಿಕಾಂ । ಗಾಯತ್ರೀಂ ವರದಾಭಯಾಂಕುಶಕಶಾಃ ಶುಭ್ರಂ ಕಪಾಲಂಗುಣಂ ಶಂಖಂ ಚಕ್ರಮಥಾರವಿಂದಯುಗಲಂ ಹಸ್ತೈರ್ವಹಂತೀಂ ಭಜೇ ॥1॥** [-ಶಾರದಾ ತಿಲಕ]

ಭಾವಾರ್ಥ - ಮುತ್ತಿನ ಹಾಗೆ ಸ್ವಚ್ಛ ಬಿಳಿಯಾದ, ಹವಳದ ಹಾಗೆ ಕೆಂಪಗಿನ, ಬಂಗಾರದ ಹಳದಿಯ, ನೀಲ ಹಾಗೂ ಹಾಲು ಬಿಳಿ ವರ್ಣದ ಪಂಚವದನದವಳಾಗಿ ಪ್ರತಿಯೊಂದು ಮೊಗದಲ್ಲಿ ಮೂರು ಕಣ್ಣುಗಳನ್ನು ಹೊಂದಿದವಳಾಗಿ ಚಂದ್ರಕಲೆಯ ಕಿರೀಟದಿಂದ ಶೋಭಿತಳಾಗಿ,ಪಂಚ ತತ್ವಗಳ ಅರ್ಥವನ್ನು ಸಾರುತ್ತಾ ಇಪ್ಪತ್ತನಾಲ್ಕು ಅಕ್ಷರಗಳನ್ನು ಒಳಗೊಂಡು ಕೈಗಳಲ್ಲಿ ವರದ ಮತ್ತು ಅಭಯ ಮುದ್ರೆಗಳನ್ನು ಹಾಗೂ ಅಂಕುಶ, ಪಾಶ, ಚಕ್ರ, ಶುಭ್ರವಾದ ಕಪಾಲ, ಅಲ್ಲದೆ ಎರಡು ತಾವರೆಗಳನ್ನು ಧರಿಸಿರುವ ವೇದ ಮಾತಾ ಗಾಯತ್ರಿ ದೇವಿಯನ್ನು ನಾನು ಭಜಿಸುತ್ತೇನೆ.

**ಶ್ರೀಮದ್ ವೇದಾಂತವಾಕ್ಯೈರ್ಮುನಿಗಣ ಕಥಿತೈಃ ಸ್ತೂಯಮಾನಾಂ ಪ್ರಸನ್ನಾಂ ಗಾಯತ್ರೀಂ ವೇದಗರ್ಭಾಂ ನಿಖಿಲಮನುಮಯೀಂ ಸರ್ವ ಯಂತ್ರಾಧಿವಾಸಾಂ । ಸಂಧ್ಯಾರೂಪಾಂ ತ್ರಿನೇತ್ರಾಂ ಭಜಕ ಸುಖಕರೀಂ ಸರ್ವ ಸಂಪತ್ ಪ್ರದಾತ್ರೀಂ ಬ್ರಹ್ಮಾದ್ಯೈರ್ವಂದ್ಯಮಾನಾಂ ಭವ ಭಯ ಶಮನೀಂ ಭಾರತೀ ತಾಂ ನಮಾಮಿ ॥2॥**

ಭಾವಾರ್ಥ - ಮಹಾನ್ ಋಷಿಮುನಿಗಳ ಸಮೂಹವು ಅರುಹಿದ ವೇದೋಪನಿಷತ್ತುಗಳಿಂದ ಸ್ತುತಿಸಲ್ಪಟ್ಟು ಪ್ರಸನ್ನಳಾದ, ಜಪಿಸುವವರನ್ನು ಪೊರೆಯುವ, ವೇದಮಾತೆಯೆಂದು ಮಾನ್ಯಳಾಗಿರುವ, ಎಲ್ಲಾ ಯಂತ್ರಗಳಲ್ಲೂ ನೆಲೆಯಾಗಿರುವ, ಸಂಧ್ಯಾಧಿದೇವತೆಯ ಸ್ವರೂಪಿಯಾಗಿರುವ, ಮುಕ್ಕಣ್ಣಳಾದ, ಭಜಿಸುವವರಿಗೆ ಸುಖದಾತಳಾಗಿರುವ, ಸರ್ವ ಸಂಪತ್ ಪ್ರದಾಯಕಳಾಗಿರುವ, ಸಂಸಾರದ ಭೀತಿಯನ್ನು ನಾಶಗೊಳಿಸುವ, ಬ್ರಹ್ಮಾದಿ ದೇವ ದೇವತೆಗಳಿಂದ ನಮಸ್ಕರಿಸಲ್ಪಡುತ್ತಿರುವ ವಾಕ್ಕಿನ ಅಧಿದೇವತೆಯಾಗಿರುವ ಮಹಾಮಾತೆ ಗಾಯತ್ರೀ ದೇವಿಗೆ ನಾನು ನಮಸ್ಕರಿಸುತ್ತೇನೆ.

**ಪಂಚವಕ್ತ್ರಾಂ ದಶಭುಜಾಂ ಸೂರ್ಯಕೋಟಿಸಮಪ್ರಭಾಂ । ಸಾವಿತ್ರೀಂ ಬ್ರಹ್ಮವರದಾಂ ಚಂದ್ರಕೋಟಿ ಸುಶೀತಲಾಂ ॥ ತ್ರಿನೇತ್ರಾಂ ಸ್ಮಿತವಕ್ತ್ರಾಂ ಚ ಮುಕ್ತಾಹಾರ ವಿರಾಜಿತಾಂ । ವರಾಭಯಾಂಕುಶಕಶಾ ಹೇಮಪಾತ್ರಾಕ್ಷಮಾಲಿಕಾಃ ॥ ಶಂಖಚಕ್ರಾಬ್ಜಯುಗಲಂ ಕರಾಭ್ಯಾಂ ದಧತೀಂ ಪರಾಂ । ಸಿತಪಂಕಜ ಸಂಸ್ಥಾ ಚ ಹಂಸಾರೂಢಾಂ ಸುಖಸ್ಮಿತಾಂ ॥3॥**

**ಧ್ಯಾತ್ವೈವಂ ಮಾನಸಾಂಭೋಜೇ ಗಾಯತ್ರೀಕವಚಂ ಪಠೇತ್ ॥4॥**

ಭಾವಾರ್ಥ - ಐದು ಮುಖಗಳನ್ನು ಹೊಂದಿ, ಹತ್ತು ಬಾಹುಗಳಿಂದ ಕೂಡಿ, ಕೋಟಿ ಸೂರ್ಯರಿಗೆ ಸಮಾನವಾದ ಪ್ರಭೆಯುಳ್ಳವಳಾಗಿ, ಸವಿತೃ ದೇವತೆಗೆ ಸಂಬಂಧಿಸಿದ, ಜಪಿಸುವವರಿಗೆ ವೇದ ಜ್ಞಾನವನ್ನು ಕರುಣಿಸುವ, ಕೋಟಿ ಚಂದ್ರರಿಗೆ ಸಮಾನವಾಗಿ ಶೀತಳಾಗಿರುವ, ಮುಕ್ಕಣ್ಣಳಾಗಿ ನಗು ಮೊಗವನ್ನು ಹೊಂದಿರುವ, ಮುತ್ತಿನ ಹಾರದಿಂದ ಶೋಭಿಸುವ, ವರಾಭಯಮುದ್ರೆಗಳನ್ನು ತನ್ನ ಎರಡೂ ಕೈಗಳಿಂದಲೂ, ಅಂಕುಶ, ಚಾಟಿ, ಬಂಗಾರದ ಪಾತ್ರೆ, ಜಪಮಾಲೆ, ಶಂಖ ಚಕ್ರಗಳನ್ನು ಮತ್ತೆರಡು ಕೈಗಳಿಂದಲೂ, ಇನ್ನೆರಡು ಕೈಗಳಲ್ಲಿ ಎರಡು ತಾವರೆ ಪುಷ್ಪಗಳನ್ನೂ ಧರಿಸಿದವಳಾಗಿ ಶ್ರೇಷ್ಠವೆನಿಸಿರುವ ಬಿಳಿ ಕಮಲದಮೇಲೆ ಅಥವಾ ಹಂಸದ ಮೇಲೆ ಕುಳಿತು ಮುಗುಳ್ನಗುತ್ತಿರುವ ಕರುಣಾ ಸಾಗರಿಯಾದ ಆ ಗಾಯತ್ರೀ ಮಾತೆಯನ್ನು ಹೃತ್ಕಮಲದಲ್ಲಿ ಧ್ಯಾನಿಸಿ ತದನಂತರ ಗಾಯತ್ರೀ ಕವಚವನ್ನು ಪಠಿಸಬೇಕು.

**ಶ್ವೇತವರ್ಣಾ ಸಮುದ್ದಿಷ್ಟಾ ಕೌಶೇಯವಸನಾ ತಥಾ । ಶ್ವೇತೈರ್ವಿಲೇಪನೈಃ ಪುಷ್ಪೈರಲಂಕಾರೈಶ್ಚ ಭೂಷಿತಾ ॥ ಆದಿತ್ಯಮಂಡಲಾಂತಸ್ಥಾ ಬ್ರಹ್ಮಲೋಕ ಗತಾಸ್ಥವಾ । ಅಕ್ಷಸೂತ್ರಧರಾ ದೇವೀ ಪದ್ಮಾಸನಗತಾ ಶುಭಾ ॥5॥** [-ಬ್ರಾಹ್ಮಣ ಸರ್ವಸ್ವ]

ಭಾವಾರ್ಥ - ಗಾಯತ್ರಿದೇವಿಯು ಶ್ವೇತ ವರ್ಣದಳು, ಬಿಳಿಯ ರೇಶ್ಮೆ ವಸನವನ್ನುಟ್ಟು ಬಿಳಿವರ್ಣದ ಲೇಪನ ಮತ್ತು ಪುಷ್ಪ, ಹಾಗೂ ವಿವಿಧ ಅಲಂಕಾರಗಳಿಂದ ವಿಭೂಷಿತಳಾಗಿರುವಳು. ಕೈಯಲ್ಲಿ ಜಪಮಾಲೆಯನ್ನು ಹಿಡಿದು ಪದ್ಮಾಸನಸ್ಥಳಾಗಿ

ಲೋಕಕ್ಕೆ ಹಿತವನ್ನು ಕರುಣಿಸುವ ಆಕೆಯನ್ನು ಸೂರ್ಯ ಮಂಡಲದೊಳಗೆ ಅಥವಾ ಬ್ರಹ್ಮ ಲೋಕದಲ್ಲಿ ಇರುವವಳೆಂದು ಧ್ಯಾನ ಮಾಡಬೇಕು.

**ಮಂದಾರಾಹ್ವಯರೋಚನಾಂಜನ ಜಪಾಚ್ಛಾಭೈರಿಂದುಮದ್-**
**ರತ್ನೋದ್ಯನ್ಮಕುಟಾಂಗ ಸಂತತಚತುರ್ವಿಂಶಾರ್ಣಚಿತ್ರಾ ತನುಃ । ಅಬ್ಜೇ ಚಾರಿ**
**ಗದಾಹ್ವಯೌ ಗುಣಕಪಾಲಾಖ್ಯೌ ಚ ಪಾಶಾಂಕುಶೇ- ಷ್ಟಾಭೀರ್ತಿದರ್ಧತೀ ಭವೇದ್**
**ಭವದಭೀಷ್ಟೋದ್ಭಾವಿನೀ ತಾರಿಣೀ ॥6॥**

[-ಪ್ರಪಂಚ ಸಾರ]

ಭಾವಾರ್ಥ - ಮಂದಾರಪುಷ್ಪದ ತೆರನಾದ ಬಿಳಿ, ಗೋರೋಚನದಂತೆ ಹಳದಿ, ಅಂಜನೋಪಾದಿಯ ಕಪ್ಪು, ದಾಸವಾಳದ ರೀತಿಯ ಕೆಂಪು ಹಾಗೂ ಸ್ಪಟಿಕದಷ್ಟು ಸ್ವಚ್ಛ, ಈ ಬಗೆಯ ಐದು ಮೊಗಗಳಿಂದಲೂ, ಚಂದ್ರಕಲಾಶೋಭಿತೆಯಾಗಿ ರತ್ನಮಯ ಕಿರೀಟಾಂಕೃತಳಾಗಿ ಇಪ್ಪತ್ತನಾಲ್ಕು ಅಕ್ಷರಗಳನ್ನು ತನ್ನ ಅವಯವಗಳಲ್ಲಿ ಅಳವಡಿಸಿಕೊಂಡಿರುವ ವಿಚಿತ್ರವಾದ ದೇಹ, ತನ್ನ ಎರಡು ಕೈಗಳಲ್ಲಿ ಎರಡು ಕಮಲ ಪುಷ್ಪಗಳನ್ನು ಹಿಡಿದು, ಮತ್ತೆರಡು ಹಸ್ತಗಳಲ್ಲಿ ಚಾಟಿ, ಚಕ್ರ, ಗದೆ, ಪಾಶ, ಕಪಾಲ, ಅಂಕುಶಗಳನ್ನೂ, ಇನ್ನೆರಡು ಕೈಗಳಲ್ಲಿ ಅಭಯ ಹಾಗೂ ವರದ ಮುದ್ರೆಗಳನ್ನು ಧರಿಸಿದ ಗಾಯತ್ರೀ ದೇವಿಯು ಸರ್ವಾಭೀಷ್ಟಗಳನ್ನು ಕರುಣಿಸಿ ಸಂಸಾರ ಚಕ್ರದಿಂದೆಮ್ಮ ಪಾರುಮಾಡಲಿ.

॥ ಇತಿ ವೇದ ಮಾತಾ ಗಾಯತ್ರೀ ಧ್ಯಾನ ಶ್ಲೋಕಂ ಸಂಪೂರ್ಣಂ ॥

## 5.5 ಜಗದ್ಧಾತ್ರೀ ಸ್ತೋತ್ರಂ

**ಆಧಾರಭೂತೇ ಚಾಧೇಯೇ ಧೃತಿರೂಪೇ ಧುರಂಧರೇ । ಧ್ರುವೇ ಧ್ರುವಪದೇ ಧೀರೇ**
**ಜಗದ್ಧಾತ್ರೀ ನಮೋಸ್ತುತೇ ॥1॥**

ಭಾವಾರ್ಥ - ಜಗತ್ತಿಗೆಲ್ಲಾ ಆಧಾರಭೂತಳಾಗಿರುವವಳು ನೀನು. ಆಧೇಯಳೂ ನೀನೇ ಆಗಿರುವೆ. ಧಾರಣಾ ಶಕ್ತಿ ಸ್ವರೂಪಳೂ ಸರ್ವೋತ್ತಮಳೂ ಶಾಶ್ವತಳೂ ನೀನೇ

ಆಗಿರುವೆ. ಶಾಶ್ವತ ಸ್ಥಾನಳೂ ಅಚಲ ಸ್ವಭಾವವನ್ನು ಹೊಂದಿರುವವಳೂ ಧೈರ್ಯವತಿಯೂ ಆಗಿರುವ ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಶವಾಕಾರೇ ಶಕ್ತಿರೂಪೇ ಶಕ್ತಿಸ್ಥೇ ಶಕ್ತಿವಿಗ್ರಹೇ । ಶಾಕ್ತಾಚಾರ ಪ್ರಿಯೇ ದೇವಿ ಜಗದ್ಧಾತ್ರೀ ನಮೋಸ್ತುತೇ ॥2॥**

ಭಾವಾರ್ಥ - ಹೇ ದೇವೀ!ನೀನು ನಿರ್ಗುಣ ಶಿವ ಸ್ವರೂಪಳೂ, ಶವಾಕಾರಳೂ, ಚೈತನ್ಯಮಯಿಯೂ ಆಗಿ ಸಮಸ್ತ ಶಕ್ತಿಗಳ ಚೈತನ್ಯದಾಯಕಳೂ, ಸರ್ವ ಶಕ್ತಿಗಳಲ್ಲಿ ನೆಲೆಯಾಗಿರುವ ವಿಗ್ರಹಸ್ವರೂಪದವಳೂ, ಶಾಕ್ತೇಯ ಸಂಪ್ರದಾಯದ ಆಚಾರದಿಂದ ಸಂತಸ ಹೊಂದುವವಳೂ ಆಗಿರುವೆ. ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಜಯದೇ ಜಗದಾನಂದೇ ಜಗದೇಕ ಪ್ರಪೂಜಿತೇ । ಜಯ ಸರ್ವಗತೇ ದೇವಿ ಜಗದ್ಧಾತ್ರೀ ನಮೋಸ್ತುತೇ ॥3॥**

ಭಾವಾರ್ಥ - ಹೇ!ದುರ್ಗಾಮಾತೇಯೇ! ನೀನು ಜಯ ಪ್ರದಾಯಕಳು. ಜಗದ ಆನಂದ ಸ್ವರೂಪಳು. ಜಗತ್ತಿನಲ್ಲಿ ನೀನು ಮಾತ್ರಾ ಸರಿಯಾದ ಕ್ರಮದಲ್ಲಿ ಅರ್ಚಿಸಲ್ಪಡುವವಳು. ಸಮಸ್ತ ಬ್ರಹ್ಮಾಂಡವನ್ನು ವ್ಯಾಪಿಸಿಕೊಂಡಿರುವ ದುರ್ಗಾ ದೇವಿಯೇ! ನಿನಗೆ ಜಯವಾಗಲಿ. ಜಗತ್ತನ್ನು ಪೊರೆಯುವ ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಪರಮಾಣು ಸ್ವರೂಪೇ ಚ ದ್ವ್ಯಣುಕಾದಿ ಸ್ವರೂಪಿಣಿ । ಸೂಕ್ಷ್ಮಾತಿಸೂಕ್ಷ್ಮ ರೂಪೇ ಚ ಜಗದ್ಧಾತ್ರೀ ನಮೋಸ್ತುತೇ ॥4॥**

ಭಾವಾರ್ಥ - ಪರಮಾಣು ಹಾಗೂ ಅವುಗಳ ಬೆರೆಯುವಿಕೆಯಿಂದಾದ ಅತಿಸೂಕ್ಷ್ಮಾಣುಗಳ ಸ್ವರೂಪಿಣಿಯು ನೀನಾಗಿರುವೆ. ಸೂಕ್ಷ್ಮಾತಿ ಸೂಕ್ಷ್ಮಕ್ಕಿಂತಲೂ ಅತಿ ಸೂಕ್ಷ್ಮಳಾಗಿರುವವಳು ನೀನು. ತಾಯೀ, ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಸೂಕ್ಷ್ಮಾತಿ ಸೂಕ್ಷ್ಮ ರೂಪೇಚ ಪ್ರಾಣಾಪಾನಾದಿರೂಪಿಣಿ । ಭಾವಾಭಾವ ಸ್ವರೂಪೇ ಚ ಜಗದ್ಧಾತ್ರೀ ನಮೋಸ್ತುತೇ ॥5॥**

ಭಾವಾರ್ಥ - ಸೂಕ್ಷ್ಮಾತಿ ಸೂಕ್ಷ್ಮ ರೂಪಳಾಗಿ ಜಗತ್ತಿನ ಸಮಸ್ತ ಜೀವರಾಶಿಗಳ ಪ್ರಾಣ ಹಾಗೂ ಅಪಾನಾದಿ ವಾಯು ಸ್ವರೂಪಳು ನೀನೇ ಆಗಿರುವೆ. ಸಮಸ್ತ ವಸ್ತುಗಳ ಇರುವಿಕೆ ಮತ್ತು ಇಲ್ಲದಿರುವಿಕೆಯ ಸ್ವರೂಪಳೂ ನೀನಾಗಿರುವೆ. ಅಂತಹಾ ವಿಶ್ವಮಾತೆಯೇ!ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಕಾಲಾದಿರೂಪೇ ಕಾಲೇಶೇ ಕಾಲಾಕಾಲವಿಭೇಧಿನಿ । ಸರ್ವ ಸ್ವರೂಪೇ ಸರ್ವಜ್ಞೇ ಜಗದ್ಧಾತ್ರೀ ನಮೋಸ್ತುತೇ ॥6॥**

ಭಾವಾರ್ಥ - ತಾಯೇ! ನೀನು ಕಾಲವೇ ಮೊದಲಾದ ಸೃಷ್ಟಿಯ ದ್ರವ್ಯ ಸ್ವರೂಪಳು. ಹಾಗೆಯೆ ಕಾಲಕ್ಕೆ ಈಶ್ವರೀ ಶಕ್ತಿಯಾದ ಒಡತಿ. ಕಾಲ ಮತ್ತು ಕಾಲಾತೀತವೆನ್ನುವ ಭೇಧ ಸ್ವರೂಪಕ್ಕೆ ಕಾರಣಳು. ಸಮಸ್ತವನ್ನೂ ಧರಿಸಿಕೊಂಡಿರುವ ಆದಿಶಕ್ತಿಯೇ! ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಮಹಾವಿಘ್ನೇ ಮಹೋತ್ಸಾಹೇ ಮಹಾಮಾಯೇ ವರಪ್ರದೇ । ಪ್ರಪಂಚಸಾರೇ ಸಾಧ್ವೀಶೇ ಜಗದ್ಧಾತ್ರೀ ನಮೋಸ್ತುತೇ ॥7॥**

ಭಾವಾರ್ಥ - ಮಹಾ ವಿಘ್ನ ಸ್ವರೂಪಳೂ, ಸಮಸ್ತ ಜೀವಿಗಳ ಉತ್ಸಾಹಕ್ಕೆ ಕಾರಣೀಭೂತಳೂ, ಮಹಾಮಾಯೆಯೂ, ವರಪ್ರದಾತಳೂ, ಜಗತ್ತಿನ ಸಾರಾಸಾರ ಸ್ವರೂಪಳೂ, ಸಾಧುಜನರೊಡತಿಯೂ ಆಗಿರುವ ಲೋಕಮಾತೆಯೇ! ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಅಗಮ್ಯೇ ಜಗತಾಮಾದ್ಯೇ ಮಾಹೇಶ್ವರೀ ವರಾಂಗನೇ । ಅಶೇಷರೂಪೇ ರೂಪಸ್ಥೇ ಜಗದ್ಧಾತ್ರೀ ನಮೋಸ್ತುತೇ ॥8॥**

ಭಾವಾರ್ಥ - ಅಮ್ಮಾ! ನೀನು ಯಾರಿಂದಲೂ ತಲಪಲು ಅಸಾಧ್ಯವಾಗಿರುವವಳು. ಹಾಗೆಯೇ ತಿಳಿದುಕೊಳ್ಳಲೂ ಅಸಾಧ್ಯವಾಗಿರುವವಳು. ವಿಶ್ವಕ್ಕೆ ಆದಿಕಾರಣಳು ನೀನು.

ಮಹೇಶ್ವರನ ಮನದನ್ನೆಯಾಗಿ ಅತ್ಯಂತ ಶ್ರೇಷ್ಠಳಾದವಳು ನೀನು. ಅಖಿಲ ಸೌಂದರ್ಯ ಸ್ವರೂಪಳಾದ ಸಮಸ್ತ ರೂಪವನ್ನು ಧರಿಸಿರುವ ಜಗದಾದಿ ಮಾತೆ ನೀನು. ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ದ್ವಿಸಪ್ತ ಕೋಟಿಮಂತ್ರಾಣಾಂ ಶಕ್ತಿರೂಪೇ ಸನಾತನಿ । ಸರ್ವ ಶಕ್ತಿ ಸ್ವರೂಪೇ ಚ ಜಗದ್ಧಾತ್ರೀ ನಮೋಸ್ತುತೇ ॥9॥**

ಭಾವಾರ್ಥ - ಹದಿನಾಲ್ಕು ಕೋಟಿ ಮಂತ್ರಗಳ ಶಕ್ತಿ ಸ್ವರೂಪಿಣಿ ನೀನು. ಸನಾತಳೂ ನೀನೇ. ಸರ್ವ ಶಕ್ತಿಗಳ ರೂಪಿಣಿಯೂ ನೀನೇ ಆಗಿರುವೆ. ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ತೀರ್ಥ ಯಜ್ಞ ತಪೋದಾನ ಯೋಗಸಾರೇ ಜಗನ್ಮಯೀ । ತ್ವಮೇವ ಸರ್ವಂ ಸರ್ವಸ್ಥೇ ಜಗದ್ಧಾತ್ರೀ ನಮೋಸ್ತುತೇ ॥10॥**

ಭಾವಾರ್ಥ - ತೀರ್ಥ, ಯಜ್ಞ, ತಪಸ್ಸು, ದಾನ, ಯೋಗ ಇವುಗಳ ಸಾರವೇ ನೀನಾಗಿರುವೆ. ನೀನು ಜಗನ್ಮಯಿ, ಎಲ್ಲವೂ ನೀನೇ ಆಗಿರುವೆ, ಎಲ್ಲದರಲ್ಲೂ ನೀನೇ ಇರುವೆ. ಅಂತಹಾ ಲೋಕಮಾತೆಯೇ! ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ದಯಾರೂಪೇ ದಯಾ ದೃಷ್ಟೇ ದಯಾರ್ದ್ರೇ ದುಃಖಮೋಚನೀ । ಸರ್ವಾಪತ್ತಾರಿಕೇ ದುರ್ಗೇ ಜಗದ್ಧಾತ್ರೀ ನಮೋಸ್ತುತೇ ॥11॥**

ಭಾವಾರ್ಥ - ಹೇ! ದುರ್ಗಾ ಮಾತೆಯೇ, ನೀನು ದಯಾಸ್ವರೂಪಳು. ದಯಾ ದೃಷ್ಟಿಯನ್ನು ಹೊಂದಿರುವವಳು. ನೀನು ದಯಾದ್ರ್ರ ಹೃದಯವುಳ್ಳವಳು. ದುಃಖವನ್ನು ಪರಿಹರಿಸುವ ಶಕ್ತಿದಾಯಿನಿಯು. ಸಮಸ್ತ ಆಪತ್ತು-ವಿಪತ್ತುಗಳಿಂದ ಸಂರಕ್ಷಿಸುವ ತಾಯಿ. ಎಲ್ಲರ ದುರ್ಗತಿಯನ್ನು ನಾಶ ಮಾಡುವ ಅಮ್ಮಾ! ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

**ಅಗಮ್ಯಧಾಮಧಾಮಸ್ಥೇ ಮಹಾಯೋಗೀಶಹೃತ್ಪುರೇ । ಅಮೇಯ ಭಾವಕೂಟಸ್ಥೇ ಜಗದ್ಧಾತ್ರೀ ನಮೋಸ್ತುತೇ ॥12॥**

ಭಾವಾರ್ಥ - ತಾಯೇ! ನೀನು ಯಾರೂ ತಲಪಲು ಅಸಾಧ್ಯವಾಗಿರುವಂತಹಾ ಪ್ರಕಾಶಮಾನರೂಪದ ನಿಲಯದಲ್ಲಿ ನೆಲಸಿರುವೆ. ಅದೇ ತೆರನಾಗಿ ಶ್ರೇಷ್ಠರಾಗಿರುವ ಮಹಾಮುನಿಗಳ ಹೃದಯವೆಂಬ ಪಟ್ಟಣದಲ್ಲಿ ನೆಲಸಿರುವೆ. ನೀನು ಅಳತೆಗೆ ಸಿಲುಕದ ಭಾವ ರಾಶಿಗಳಲ್ಲಿ ನೆಲೆಯಾಗಿರುವವಳು. ಹೀಗಿರುವ ಆದಿಶಕ್ತಿ ಮಹಾಮಾತೆಯೇ!ಹೇ! ಜಗದ್ಧಾತ್ರಿಯೇ ನಿನಗಿದೋ ನನ್ನ ನಮಸ್ಕಾರಗಳು.

॥ ಇತಿ ಶ್ರೀ ಜಗದ್ಧಾತ್ರೀ ಸ್ತೋತ್ರಂ ಸಂಪೂರ್ಣಂ ॥

## 5.6 ಶ್ರೀ ರಾಜರಾಜೇಶ್ವರೀ ಸ್ತೋತ್ರಂ

**ಕಲ್ಯಾಣಾಯತ ಪೂರ್ಣಚಂದ್ರವದನಾ ಪ್ರಾಣೇಶ್ವರಾನಂದಿನೀ ಪೂರ್ಣಾಪೂರ್ಣತರಾ ಪರೇಶಮಹಿಷೀ ಪೂರ್ಣಾಮೃತಾಸ್ವಾದಿನೀ । ಸಂಪೂರ್ಣಾ ಪರಮೋತ್ತಮಾಮೃತಕಲಾ ವಿದ್ಯಾವತೀ ಭಾರತೀ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥1॥**

ಭಾವಾರ್ಥ - ಮಂಗಲಮಯವಾದ ಪೌರ್ಣಿಮೆಯ ಚಂದಿರನಂತೆ ಆಕರ್ಶಕವಾದ ಮೊಗವನ್ನು ಹೊಂದಿದವಳಾಗಿರುವ, ಪತಿಯಾಗಿರುವ ಈಶ್ವರಗೆ ಸಂತಸವನ್ನು ಉಂಟುಮಾಡುವ, ಪರಿಪೂರ್ಣಳಾದ, ಪರಮೇಶ್ವರನ ಪಟ್ಟದ ಮಹಿಷಿಯಾಗಿ ಅಮೃತರಸವನ್ನು ಪೂರ್ಣವಾಗಿ ಸವಿಯುತ್ತಿರುವ, ಹದಿನಾರು ಕಲಾ ಶಕ್ತಿಗಳನ್ನು ಹೊಂದಿರುವ, ಶ್ರೇಷ್ಠವಾದ ಅಮೃತಾತ್ಮಕಲಾ ಸ್ವರೂಪಿಯಾಗಿರುವ ವಿದ್ಯಾವತಿಯೂ, ವಿದ್ವಾಂಸಳೂ ಆಗಿ ಶ್ರೀ ಚಕ್ರದ ಮಧ್ಯಬಿಂದುವಿನಲ್ಲಿ ತೃಪ್ತಿಯಿಂದ ಶ್ರೀ ರಾಜರಾಜೇಶ್ವರಿಯು ಸಂಚರಿಸುತ್ತಿರುವಳು

**ಏಕಾರಾದಿ ಸಮಸ್ತವರ್ಣ ವಿವಿಧಾರ್ರೈಕ ಚಿದ್ರೂಪಿಣೀ ಚೈತನ್ಯಾತ್ಮಕ ಚಕ್ರರಾಜ ನಿಲಯಾ ಚಕ್ರಾಂತ ಸಂಚಾರಿಣೀ । ಭಾವಾ ಭಾವ ವಿಭಾವಿನೀ ಭವಪರಾ ಸದ್ಭಕ್ತಿ ಚಿಂತಾಮಣೀ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥2॥**

ಭಾವಾರ್ಥ - ಏ ಕಾರದಿಂದ ಆರಂಭವಾದ ಎಲ್ಲ ಅಕ್ಷರಗಳ ವಿವಿಧ ಸ್ವರೂಪವನ್ನು ಹೊದಿದ್ದರೂ ಒಂದೇ ಜ್ಞಾನ ಸ್ವರೂಪಳಾದ, ಶ್ರೀಚಕ್ರದಲ್ಲಿ ಚೈತನ್ಯವನ್ನೊಳಗೊಂಡು ನೆಲೆಯಾಗಿರುವುದಲ್ಲದೆ ಶ್ರೀಚಕ್ರದೊಳಗೆ ಅಂತರ್ಮಯಿಯಾಗಿ ವಿಹರಿಸುವ, ಸೃಷ್ಟಿ ಹಾಗೂ ಲಯ ಕರ್ತೃವಾಗಿರುವ, ಶಿವನ್ನಲ್ಲಿ ತಲ್ಲೀನಳಾಗಿರುವ ಶ್ರೇಷ್ಠತಮ ಭಕ್ತಿಗೆ ಚಿಂತಾಮಣಿಯಂತೆ ಇಷ್ಟಾರ್ಥದಾಯಕಳಾಗಿರುವ, ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಈಹಾಧಿಕ್ ಪರಯೋಗಿವೃಂದ ವಿದಿತಾ ಸ್ವಾನಂದಭೂತಾಪರಾ ಪಶ್ಯಂತೀ**
**ತನುಮಧ್ಯಮಾ ವಿಲಸಿನೀ ಶ್ರೀ ವೈಖರೀ ರೂಪಿಣೀ । ಆತ್ಮಾನಾತ್ಮವಿಚಾರಿಣೀ**
**ವಿವರಗಾ ವಿದ್ಯಾ ತ್ರಿಬೀಜಾತ್ಮಿಕಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ**
**ಶ್ರೀರಾಜರಾಜೇಶ್ವರೀ ॥3॥**

ಭಾವಾರ್ಥ - ಸಂಸಾರದ ಆಶೆಯಿಂದ ವಿರಹಿತಳಾಗಿ ಶ್ರೇಷ್ಠ ಮುನಿವೃಂದವರಿಂದ ಅರಿತುಕೊಳ್ಳಲು ಸಾಧ್ಯವಾಗುವಂತಹಾ ಆತ್ಮಾನಂದರೂಪೆಯಾಗಿರುವ, ಯಾವುದೇ ಮಾತು ಆರಂಭವಾಗುವ ಮುನ್ನ ನಾಭಿಯಿಂದ ಆರಂಭವಾಗುವ "ಪರಾ" ಮತ್ತು ಹೃದಯದ ಸಮೀಪವರ್ತಿಯಾದಾಗ ಪಶ್ಯಂತೀ "ಕಂಠದ ಸಮೀಪ ತಲುಪಿದಾಗ "ಮಧ್ಯಮಾ " ಎಂಬ ಅವ್ಯಕ್ತ ವಾಕ್ಕಿನ ಮೂರು ರೀತಿಯ ರೂಪಗಳಲ್ಲಿ ಸಂಚರಿಸುವ ಅದೇ ರೀತಿ ಗಂಟಲಿನಿಂದ ಹೊರ ಹೊಮ್ಮುವ "ವೈಖರೀ"" ಎಂಬ ಸ್ವಷ್ಟವಾದ ಮಾತಿನರೂಪದಲ್ಲಿ ನೆಲೆಯಾಗಿ ಆತ್ಮ ಹಾಗೂ ಆತ್ಮವಲ್ಲದ ವಸ್ತುಗಳನ್ನು ವಿಮರ್ಶಿಸುವ ಬುದ್ಧಿಮತ್ತೆಯ ವಿದ್ಯಾರೂಪಿಣಿಯಾದ ತ್ರಿಗುಣಾತ್ಮ ಬೀಜರೂಪೆಯಾಗಿರುವ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಲಕ್ಷ್ಯಾಲಕ್ಷ್ಯ ನಿರೀಕ್ಷಣಾ ನಿರುಪಮಾ ರುದ್ರಾಕ್ಷ ಮಾಲಾಧರಾ ತ್ರ್ಯಕ್ಷಾರ್ಧಾಕೃತಿ**
**ದಕ್ಷವಂಶಕಲಿಕಾ ದೀರ್ಘಾಕ್ಷಿ ದೀರ್ಘಸ್ವರಾ । ಭದ್ರಾ ಭದ್ರವರಪ್ರದಾ ಭಗವತೀ**
**ಭದ್ರೇಶ್ವರೀ ಮುದ್ರಿಣೀ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ**
**॥4॥**

ಭಾವಾರ್ಥ - ಲಕ್ಷಿಸಬೇಕಾದ ಹಾಗೂ ಅಲಕ್ಷಿಸಬೇಕಾದ ವಸ್ತುಗಳ ಬಗ್ಗೆ ಅರಿತು ನೋಡುವ ಮತ್ತು ತನ್ನನ್ನು ಹೋಲುವ ಇನ್ನೊಂದು ವಸ್ತುವೇ ಇಲ್ಲದ, ರುದ್ರಾಕ್ಷಿ ಮಾಲೆಯನ್ನು ಧರಿಸಿರುವ, ಮುಕ್ಕಣ್ಣನಿಗೆ ಅರ್ಧ ಶರೀರಿಯಾಗಿ ದಕ್ಷವಂಶದ ಕುಡಿಯಾಗಿರುವ, ವಿಶಾಲವಾದ ನಯನಗಳನ್ನು ಹೊಂದಿರುವ, ಧೀರ್ಘವಾದ ಸ್ವರದ ಆಲಾಪನೆಯಲ್ಲಿ ನಿರತಳಾಗಿರುವ, ಮಂಗಲಮಯವಾಗಿರುವ ಶುಭವರದಾಯಿಕೆಯಾಗಿರುವ, ಐಶ್ವರ್ಯ, ಧೈರ್ಯ, ಯಶಸ್ಸು, ಸಂಪತ್ತು, ಜ್ಞಾನ, ಮತ್ತು ವೈರಾಗ್ಯಗಳೆಂಬ ಆರು ಸಂಪತ್ತುಗಳನ್ನು ಹೊಂದಿದವಳಾಗಿ ಮಂಗಲಮಯವಸ್ತುಗಳಿಗೆಲ್ಲಾ ಒಡತಿಯಾಗಿ ಜ್ಞಾನಮುದ್ರೆಯನ್ನು ಹಿಡಿದುಕೊಂಡು ಬ್ರಹ್ಮಾಂಡದ ಚಕ್ರವರ್ತಿಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಹ್ರೀಂ ಬೀಜಾಗತ ನಾದಬಿಂದು ಭರಿತಾ ಓಂಕಾರ ನಾದಾತ್ಮಿಕಾ ಬ್ರಹ್ಮಾನಂದ ಘನೋದರೀ ಗುಣವತೀ ಜ್ಞಾನೇಶ್ವರೀ ಜ್ಞಾನದಾ । ಇಚ್ಛಾಜ್ಞಾನಕೃತೀ ಮಹೀಂಗತವತೀ ಗಂಧರ್ವ ಸಂಸೇವಿತಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥5॥**

ಭಾವಾರ್ಥ - "ಹ್ರೀಂ" ಎಂಬ ಬೀಜಾಕ್ಷರದಿಂದ ಮೂಡುವ ನಾದಬಿಂದುವಿನಲ್ಲಿ ವ್ಯಾಪಿಸಿರುವ ಓಂಕಾರದ ನಾದವನ್ನು ಒಳಗೊಂಡು ಶ್ರೇಷ್ಠವಾಗಿರುವ ಬ್ರಹ್ಮಾನಂದವನ್ನು ತನ್ನೊಡಲಲ್ಲಿ ಇರಿಸಿಕೊಂಡು ಸದ್ಗುಣಭರಿತಳಾಗಿ ಸಕಲ ಜ್ಞಾನಗಳ ಒಡತಿಯಾಗಿ ಜ್ಞಾನವನ್ನು ಕರುಣಿಸುವ,ಇಚ್ಛಾಶಕ್ತಿ,ಜ್ಞಾನಶಕ್ತಿ,ಕ್ರಿಯಾಶಕ್ತಿಗಳ ಸ್ವರೂಪಳಾಗಿರುವ ಭುವಿಗಿಳಿದು ಬಂದು ಗಂಧರ್ವಾದಿಗಳಿಂದ ಸೇವೆಯನ್ನು ಸ್ವೀಕರಿಸುತ್ತಾ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಹರ್ಷೋನ್ಮತ್ತ ಸುವರ್ಣ ಪಾತ್ರ ಭರಿತಾ ಪೀನೋನ್ನತಾ ಘೂರ್ಣಿತಾ ಹುಂಕಾರಪ್ರಿಯ ಶಬ್ದಜಾಲ ನಿರತಾ ಸಾರಸ್ವತೋಲ್ಲಾಸಿನೀ । ಸಾರಾಸಾರ ವಿಚಾರ ಚಾರುಚತುರಾ**

**ವರ್ಣಾಶ್ರಮಾಕಾರಿಣೀ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥6॥**

ಭಾವಾರ್ಥ - ಉನ್ಮಾದಭರಿತ ಆತ್ಮಾನಂದದ ಸಾರವನ್ನು ಬಂಗಾರದ ಪಾತ್ರೆಯಲ್ಲಿ ತುಂಬಿಸಿ ತನ್ನ ಕೈಯಲ್ಲಿ ಹಿಡಿದುಕೊಂಡು ಎದೆಯುಬ್ಬಿಸಿ ಸಂಸಾರದ ಚಕ್ರವನ್ನು ತಿರುಗಿಸುತ್ತಾ ತನಗೆ ಪ್ರಿಯವಾದ ಹುಂಕಾರ ಶಬ್ದದ ಅಲೆಗಳ ಸಮೂಹದಲ್ಲಿ ತನ್ನನ್ನು ತೊಡಗಿಸಿಕೊಂಡು ವೇದಗಳಲ್ಲಿ ವಿಹರಿಸುತ್ತಾ ಸಂಸಾರದ ಸಾರಾಸಾರ ವಸ್ತುಗಳ ಬಗ್ಗೆ ಸಮರ್ಪಕವಾಗಿ ವಿಚಾರ ಮಾಡುವದರಲ್ಲಿ ನೈಪುಣ್ಯತೆ ಹೊಂದಿದವಳಾಗಿ ಚತುರ್ವರ್ಣಾಶ್ರಮಗಳನ್ನು ನಿರ್ಮಿಸಿ ಅವುಗಳ ನೀತಿ-ನಿಯಮಗಳನ್ನು ರೂಪಿಸಿ ಬ್ರಹ್ಮಾಂಡದ ಚಕ್ರವರ್ತಿನಿಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಸರ್ವೇಶಾಂಗ ವಿಹಾರಿಣೀ ಸಕರುಣಾ ಸನ್ನಾದಿನೀ ನಾದಿನೀ ಸಂಯೋಗಪ್ರಿಯ ರೂಪಿಣೀ ಪ್ರಿಯವತೀ ಪ್ರೀತಾ ಪ್ರತಾಪೋನ್ನತಾ । ಸರ್ವಾಂತರ್ಗತ ಶಾಲಿನೀ ಶಿವತನೂ ಸಂದೀಪಿನೀ ದೀಪಿನೀ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥7॥**

ಭಾವಾರ್ಥ - ಸರ್ವೇಶ್ವರನಾಗಿರುವ ಶಿವನ ಅರ್ಧಾಂಗಿಯಾಗಿ ಆತನ ದೇಹದಲ್ಲಿ ಸಂಚರಿಸುತ್ತಿರುವ ಕರುಣಾಸಾಗರಳಾಗಿ ಸದಾತ್ಮಸ್ವರೂಪದ ಅರ್ಥವನ್ನು ವಿವರಿಸುವ ಓಂಕಾರ ನಾದರೂಪಿಣಿ,ಶಬ್ದಬ್ರಹ್ಮರೂಪಿಣಿ,ಕಾಂತನಾದ ಶಿವನಲ್ಲಿ ಸಂಯೋಗಗೊಂಡು ರೂಪ ಸಂಪನ್ನೆಯಾಗಿ, ಪ್ರೀತಾತ್ಮಸ್ವರೂಪೆಯಾಗಿ, ಭಕ್ತಜನಪ್ರಿಯಳಾಗಿ,ಅತಿ ಪರಾಕ್ರಮಿಯಾಗಿ ಶಿವನ ಶರೀರವನ್ನು ಬೆಳಗಿಸುವ, ಸ್ವಯಂಜ್ಯೋತಿಯೂ ಅಂತರ್ಯಾಮಿಯೂ ಆಗಿ ಚಕ್ರವರ್ತಿಯಾದ ಶಿವನ ಅರಸಿಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಕರ್ಮಾಕರ್ಮ ವಿವರ್ಜಿತಾ ಕುಲವತೀ ಕರ್ಮಪ್ರದಾ ಕೌಲಿನೀ ಕಾರುಣ್ಯಾಂಬುಧಿ ಸರ್ವಕಾಮ ನಿರತಾ ಸಿಂಧುಪ್ರಿಯೋಲ್ಲಾಸಿನೀ । ಪಂಚಬ್ರಹ್ಮ ಸನಾತನಾಸನಗತಾ**

**ಗೇಯಾ ಸುಯೋಗಾನ್ವಿತಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥8॥**

ಭಾವಾರ್ಥ - ಕರ್ಮಾಕರ್ಮಗಳ ವಿಧಿ ನಿಯಯುಗಳನ್ನು ಮೀರಿದವಳಾಗಿ, ಸತ್ಕುಲವತಿಯಾಗಿ ಜನಿಸಿ, ಸಕಲಜೀವಿಗಳಿಗೆ ಕರ್ಮಫಲವನ್ನು ನೀಡುವ, ಶಾಕ್ತೇಯ ಪಂಥದವರಿಂದ ಆರಾಧಿಸಲ್ಪಡುತ್ತಿರುವ, ಕರುಣಾಸಾಗರಿಯಾಗಿ ಭಕ್ತರ ಸಮಸ್ತ ಆಕಾಂಕ್ಷೆಗಳನ್ನು ಪೂರೈಸುತ್ತಾ, ಸಾಗರವನ್ನು ಪ್ರೀತಿಸುತ್ತಾ ಅಲ್ಲಿ ಉಲ್ಲಾಸದಿಂದ ವಿಹರಿಸುತ್ತಾ ಪಂಚಬ್ರಹ್ಮಾಂತರ್ಗತ ಪಂಚಕೋಶಗಳನ್ನು ತನ್ನ ಶಾಶ್ವತವಾದ ಆಸನವನ್ನಾಗಿಸಿಕೊಂಡು, ಮತ್ತು ಅದರ ಮೇಲೆ ವಿರಾಜಮಾನಳಾಗಿ ವೇದಗಳಿಂದ ಸ್ತುತಿಸಲ್ಪಡುತ್ತಿರುವವಳಾಗಿ, ಶ್ರೇಷ್ಠವಾದ ಧ್ಯಾನದಲ್ಲಿ ನಿರತಳಾಗಿದ್ದು ಆದಿಮಾಯೆಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಹಸ್ತ್ಯುತ್ಕುಂಭ ನಿಭ ಸ್ತನದ್ವತಯತಃ ಪೀನೋನ್ನತಾ ದಾನತಾ ಹಾರಾದ್ಯಾಭರಣಾ ಸುರೇಂದ್ರವಿನುತಾ ಶೃಂಗಾರಪೀಠಾಲಯಾ । ಯೋನ್ಯಾಕಾರಕ ಯೋನಿ ಮುದ್ರಿತ ಕರಾ ನಿತ್ಯಾ ನವಾರ್ಣಾತ್ಮಿಕಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥9॥**

ಭಾವಾರ್ಥ - ಅನೆಯಶಿರದಂತೆ ಉಬ್ಬಿಕೊಂಡಿರುವ ಸ್ತನದ್ವಯಗಳಿಂದ ದೇಹದಲ್ಲಿ ಎತ್ತರ ತಗ್ಗುಗಳನ್ನು ನಿರ್ಮಿಸಿಕೊಂಡು, ಹಾರಾದಿ ಆಭರಣಗಳಿಂದ ಅಲಂಕೃತಳಾಗಿ, ಸಿಂಗಾರಗೊಂಡಿರುವ ಸಿಂಹಾಸನದಲ್ಲಿ ಆರೂಢಳಾಗಿ ಉತ್ಪತ್ತಿ ಸ್ಥಾನದ ಆಕಾರದಲ್ಲಿರುವ ಆ ಯೋನಿಮುದ್ರೆಯನ್ನು ಕೈಯಲ್ಲಿ ಹಿಡಿದುಕೊಂಡು, ಶಾಶ್ವತಳಾಗಿರುವ, ನವಾಕ್ಷರ ಮಂತ್ರಸ್ವರೂಪಿಣಿಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಲಕ್ಷ್ಮೀಲಕ್ಷಣಪೂರ್ಣ ಭಕ್ತವರದಾ ಲೀಲಾ ವಿನೋದಸ್ಥಿತಾ ಲಾಕ್ಷಾರಂಜಿತ ಪಾದಪದ್ಮಯುಗಲಾ ಬ್ರಹ್ಮೇಂದ್ರ ಸಂಸೇವಿತಾ । ಲೋಕಾಲೋಕಿತ ಲೋಕಕಾಮ**

**ಜನನೀ ಲೋಕಾಶ್ರಯಾಂಕಸ್ಥಿತಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥10॥**

ಭಾವಾರ್ಥ - ಸಂಪತ್ತಿನ ಅಧಿದೇವತೆಯಾಗಿ ಲಕ್ಷ್ಮೀರೂಪಿಣಿಯಾಗಿ ಭಕ್ತಿಯ ಎಲ್ಲಾ ಲಕ್ಷಣಗಳನ್ನು ಹೊಂದಿ ಭಕ್ತರಿಗೆ ವರದಾಯಿನಿಯಾಗಿ ಜಗತ್ತಿನಲ್ಲಿ ತನ್ನ ಲೀಲಾವಿನೋದಗಳಿಂದ ಆಟವಾಡುತ್ತಿರುವ, ಆರಗಿನ ಕೆಂಬಣ್ಣದಿಂದ ಶೋಭಿಸುತ್ತಿರುವ ಪಾದಕಮಲದ್ವಯಗಳನ್ನು ಹೊಂದಿರುವ ಬ್ರಹ್ಮಾದಿಇಂದ್ರರಿಂದ ಸೇವೆಯನ್ನು ಮಾಡಿಸಿಕೊಳ್ಳುತ್ತಿರುವ ಲೋಕದ ಸಮಸ್ತ ಜನರೆಲ್ಲಾ ಗೌರವದಿಂದ ಕಾಣುವ ಸುಂದರನಾದ ಮನ್ಮಥನಿಗೆ ಮರುಜೀವ ಕರುಣಿಸಿದ ತಾಯಿಯಾಗಿ ಹಾಗೂ ಮೂರು ಲೋಕಗಳಿಗೂ ಆಶ್ರಯದಾತನಾಗಿರುವ ದೇವದೇವನಾದ ಮಹಾದೇವನ ಎಡತೊಡೆಯಮೇಲೆ ಆಸೀನಳಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಹ್ರೀಂಕಾರಾಶ್ರಿತ ಶಂಕರ ಪ್ರಿಯತನುಃ ಶ್ರೀಯೋಗಪೀಠೇಶ್ವರೀ ಮಾಂಗಲ್ಯಾಯತ ಪಂಕಜಾಭನಯನಾ ಮಾಂಗಲ್ಯಸಿದ್ಧಿಪ್ರದಾ । ತಾರುಣ್ಯೇನ ವಿಶೇಷಿತಾಂಗ ಸುಮಹಾಲಾವಣ್ಯ ಸಂಶೋಭಿತಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥11॥**

ಭಾವಾರ್ಥ - "ಹ್ರೀಂ"ಕಾರವನ್ನು ಆಶ್ರಯದ ನೆಲೆಯನ್ನಾಗಿಸಿ ಹಾಗೂ ಶಂಕರನಿಗೆ ಮೆಚ್ಚುಗೆಯಾದ ಶರೀರವನ್ನು ಹೊಂದಿ ಶ್ರೀಯೋಗಪೀಠಾಧಿಕಾರಿಣಿಯಾಗಿ ಮತ್ತು ಮಾಂಗಲ್ಯಕ್ಕೆ ಸ್ಥಾನವಾದಂತಹಾ ಕಮಲದ ಕಣ್ಣುಗಳನ್ನು ಹೊಂದಿ ಮಾಂಗಲ್ಯ ಸಿದ್ಧಿದಾಯಕಳಾಗಿದ್ದು ತಾರುಣ್ಯಭರಿತ ವಿಶೇಷಾಂಗಗಳಿಂದ ಕೂಡಿ ಅತಿ ಸೌಂದರ್ಯವತಿಯಾಗಿ ಶೋಭಿಸುತ್ತಾ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಸರ್ವಜ್ಞಾನ ಕಲಾವತೀ ಸಕರುಣಾ ಸರ್ವೇಶ್ವರೀ ಸರ್ವಗಾ ಸತ್ಯಾ ಸರ್ವಮಯೀ ಸಹಸ್ರದಲಜಾ ಸತ್ವಾರ್ಣವೋಪಸ್ಥಿತಾ । ಸಂಗಾಸಂಗ ವಿವರ್ಜಿತಾ ಸುಖಕರೀ**

**ಬಾಲಾರ್ಕ ಕೋಟಿಪ್ರಭಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥12॥**

ಭಾವಾರ್ಥ - ಸಮಸ್ತ ಜ್ಞಾನ ಮತ್ತು ಕಲೆಗಳಿಂದ ಕೂಡಿದವಳಾಗಿ ಕರುಣಾನಿಧಿಯಾಗಿ, ಸರ್ವ ವ್ಯಾಪೀ ಸತ್ಯಸ್ವರೂಪಿಣಿಯಾಗಿ, ಸಮಸ್ತವೂ ತಾನೇ ಆಗಿ, ಸಹಸ್ರದಳ ಕಮಲದಲ್ಲಿ ಉಪಸ್ಥಿತಳಾಗಿ, ಸಾತ್ವಿಕಗುಣ ಸಾಗರದಲ್ಲಿ ನೆಲೆಯಾಗಿದ್ದುಕೊಂಡು, ಸಂಗಾಸಂಗಗಳನ್ನು ಮೀರಿ ನಿಂತು, ಸುಖದಾಯಿನಿಯಾಗಿ ಕೋಟಿಸೂರ್ಯಪ್ರಭೆಯಿಂದ ಪ್ರಕಾಶಿಸುತ್ತಾ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಕಾದಿಕ್ಷಾಂತ ಸುವರ್ಣಬಿಂದು ಸುತನುಃ ಸರ್ವಾಂಗ ಸಂಶೋಭಿತಾ ನಾನಾವರ್ಣ ವಿಚಿತ್ರ ಚಿತ್ರ ಚರಿತಾ ಚಾತುರ್ಯ ಚಿಂತಾಮಣೀ । ಚಿತ್ರಾನಂದ ವಿಧಾಯಿನೀ ಸುಚಪಲಾ ಕೂಟತ್ರಯಾಕಾರಿಣೀ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥13॥**

ಭಾವಾರ್ಥ - "ಕ"ಕಾರಾದಿ "ಕ್ಷ"ಕಾರಾಂತ್ಯದ ತನಕದ ಎಲ್ಲಾ ಅಕ್ಷರಗಳನ್ನು ಹಾಗೂ ಬಿಂದುವನ್ನು ತನ್ನ ದೇಹವನ್ನಾಗಿಸಿ ಎಲ್ಲಾ ಅವಯವಗಳನ್ನೂ ಪರಿಪೂರ್ಣತೆಯಿಂದ ಪ್ರಮಾಣಬದ್ಧವಾಗಿರಿಸಿ ಶೋಭಿತಳಾಗಿದ್ದು ವಿವಿಧ ಭೀಜಾಕ್ಷರಗಳ ಸ್ವರೂಪಿಣಿಯಾಗಿ ಆಶ್ಚರ್ಯಾದ್ಭುತ ಕಾರ್ಯಗಳನ್ನು ಮಾಡಿದ ಚರಿತ್ರೆಯನ್ನು ಹೊಂದಿರುವ ಚಿತ್ರವಿಚಿತ್ರಾನಂದದಾಯಿನಿಯಾಗಿದ್ದುಕೊಂಡು ಚಂಚಲೆಯಾದ ಲಕ್ಷ್ಮಿಯೂ ತಾನಾಗಿ ಸೂಕ್ಷ್ಮರೂಪದ ಪಂಚದಶಾಕ್ಷರೀ ಮಂತ್ರದ ವಾಗ್ಭವಕೂಟ, ಕಾಮಕೂಟ, ಶಕ್ತಿಕೂಟಗಳೆಂಬ ಕೂಟತ್ರಯಗಳ ಆಕಾರರೂಪಿಣಿಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಲಕ್ಷ್ಮೀಶಾನ ವಿಧೀಂದ್ರ ಚಂದ್ರ ಮಕುಟಾದ್ಯಷ್ಟಾಂಗ ಪೀಠಾಶ್ರಿತಾ ಸೂರ್ಯೇಂದ್ವಗ್ನಿಮಯೈಕ ಪೀಠನಿಲಯಾ ತ್ರಿಸ್ಥಾ ತ್ರಿಕೋಣೇಶ್ವರೀ ।**

**ಗೋಪ್ತ್ರೀಗರ್ವನಿಗರ್ವಿತಾ ಗಗನಗಾ ಗಂಗಾ ಗಣೇಶಪ್ರಿಯಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥14॥**

ಭಾವಾರ್ಥ - ಲಕ್ಷ್ಮೀಕಾಂತನಾದ ವಿಷ್ಣು, ಬ್ರಹ್ಮ, ಇಂದ್ರ, ಹಾಗೂ ಚಂದ್ರಶೇಖರನಾಗಿರುವ ಶಿವನೇ ಮೊದಲಾದವರನ್ನು ತನ್ನ ಎಂಟು ಅಂಶಗಳಾಗಿರುವ ಪೀಠಗಳಲ್ಲಿ ನೆಲೆಯಾಗಿಸಿ ಜಾಗ್ರತ್, ಸ್ವಪ್ನ, ಸುಶುಪ್ತಿಗಳೆಂಬ ಅವಸ್ಥಾತ್ರಯಗಳಲ್ಲಿ ಅಥವಾ ಸತ್ವ, ರಜ, ತಮಗಳೆಂಬ ತ್ರಿಗುಣಾತ್ಮಿಕಳಾಗಿ ಇರುತ್ತಾ ಶ್ರೀಚಕ್ರ ಮಧ್ಯದ ತ್ರಿಕೋಣದ ಒಡತಿಯಾಗಿ ರಹಸ್ಯಳಾಗಿರುವ ಹಾಗೂ ದುಷ್ಟರ ಗರ್ವನಾಶಕಳಾಗಿ ಹೃದಯಾಕಾಶಗಳಲ್ಲಿ ಇರುತ್ತಾ ಗಂಗಾ ಗಣಪತಿಯರನ್ನು ಇಷ್ಟಪಡುತ್ತಾ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಿರುತ್ತಾಳೆ.

**ಹ್ರೀಂ ಕೂಟತ್ರಯ ರೂಪಿಣೀ ಸಮಯಿನೀ ಸಂಸಾರಿಣೀ ಹಂಸಿನೀ ವಾಮಾಚಾರ ಪರಾಯಣೀ ಸುಕುಲಜಾ ಬೀಜಾವತೀ ಮುದ್ರಿಣೀ । ಕಾಮಾಕ್ಷೀ ಕರುಣಾರ್ದ್ರ ಚಿತ್ತ ಸಹಿತಾ ಶ್ರೀಂ ಶ್ರೀಂ ತ್ರಿಮೂರ್ತ್ಯಂಬಿಕಾ ಶ್ರೀ ಚಕ್ರಪ್ರಿಯ ಬಿಂದುತರ್ಪಣಪರಾ ಶ್ರೀರಾಜರಾಜೇಶ್ವರೀ ॥15॥**

ಭಾವಾರ್ಥ - "ಹ್ರೀಂ"ಕಾರಕೂಟತ್ರಯಗಳ ಶಿಖರದಲ್ಲಿರುವ ಪಂಚದಶಾಕ್ಷರೀ ಮಂತ್ರವನ್ನೇ ತನ್ನ ಸೂಕ್ಷ್ಮ ರೂಪವನ್ನಾಗಿಸಿಕೊಂಡು, ಹೃದಯಾಕಾಶದಲ್ಲಿರುವ ಶ್ರೀಚಕ್ರಕ್ಕೆ ಮಾನಸಿಕವಾಗಿ ಮಾಡುವ "ಸಮಯನೀ" ಎಂಬ ಪೂಜಾವಿಧಾನವನ್ನು ಹೊಂದಿರುವ, ಸಂಸಾರದಲ್ಲಿ ಇದ್ದೂ ಸಂನ್ಯಾಸಿನಿಯಂತೆ ವಿರಾಗಿಣಿಯಾಗಿದ್ದು ತಾಂತ್ರಿಕ ವಾಮಾಚಾರ ಪೂಜಾವಿಧಾನದಲ್ಲಿ ನೈಪುಣ್ಯತೆಯುಳ್ಳ ಸತ್ಕುಲಸಂಜಾತೆಯಾಗಿ ಬೀಜಾಕ್ಷರಮಂತ್ರ ಮಂತ್ರಾಧಿದೇವತೆಯಾಗಿ ಜ್ಞಾನಮುದ್ರೆ ಹಾಗೂ ಯೋನಿ ಮುದ್ರೆಯೇ ಮೊದಲಾದ ಹತ್ತಾರು ಮುದ್ರೆಗಳ ಮೂಲಕ ಆರಾಧಿಸಲ್ಪಡುತ್ತಿರುವ ಮನೋಹರವಾದ ಕಣ್ಣುಗಳನ್ನು ಹೊಂದಿರುವುದಲ್ಲದೆ ದಯಾರಸದಿಂದ ಒದ್ದೆಯಾದ ಮನಸ್ಸುಳ್ಳವಳಾಗಿ ಸಂಪತ್ತಿನ ಅಧಿದೇವತೆಯಾಗಿ ಮಹಾಲಕ್ಷ್ಮಿ ರೂಪಿಣಿಯಾಗಿ ಬ್ರಹ್ಮ, ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳ

ತಾಯಿಯಾಗಿ ಶ್ರೀಚಕ್ರದಲ್ಲಿ ಇಷ್ಟವಾದ ಬಿಂದುವಿನಲ್ಲಿ ಸಂತೃಪ್ತಿಯಿಂದ ರಾಜರಾಜೇಶ್ವರಿಯು ಸಂಚರಿಸುತ್ತಾ ಇರುತ್ತಾಳೆ.

**ಯಾ ವಿದ್ಯಾ ಶಿವಕೇಶವಾದಿ ಜನನೀ ಯಾ ವೈ ಜಗನ್ಮೋಹಿನೀ ಯಾ ಬ್ರಹ್ಮಾದಿ ಪಿಪೀಲಿಕಾಂತ ಜಗದಾನಂದೈಕ ಸಂದಾಯಿನೀ । ಯಾ ಪಂಚಪ್ರಣವ ದ್ವಿರೇಫ ನಲಿನೀ ಯಾ ಚಿತ್ಕಲಾಮಾಲಿನೀ ಸಾ ಪಾಯಾತ್ ಪರದೇವತಾ ಭಗವತೀ ಶ್ರೀ ರಾಜರಾಜೇಶ್ವರೀ ॥16॥**

ಭಾವಾರ್ಥ - ಯಾವಾಕೆ ಜ್ಞಾನಸ್ವರೂಪಿಣಿಯೋ,ಯಾರು ಶಿವ ಕೇಶವಾದಿಯರ ಮಾತೆಯೋ,ಯಾರು ಜಗತ್ತನ್ನು ಮೋಹಗೊಳಿಸುವ ಸೌಂದರ್ಯವತಿಯೋ,ಯಾವಾಕೆ ಬ್ರಹ್ಮಾದಿಗಳಿಂದ ಪ್ರಾರಂಭಿಸಿ ಇರುವೆಯ ತನಕದ ಬ್ರಹ್ಮಾಂಡದ ಜೀವ ಜಗತ್ತಿಗೆ ಆನಂದದಾಯಕಿಯಾಗಿರುವವರೋ, ಯಾರು ಐದು ಪ್ರಣವ ಮಂತ್ರಗಳ ಅಧಿಷ್ಠಾನ ದೇವತೆಯೋ ಯಾವಾಕೆ ಜ್ಞಾನದ ಶಕ್ತಿರೂಪವನ್ನು ಹಾರವನ್ನಾಗಿ ಧರಿಸಿರುವಳೋ ಅಂತಹಾ ಶ್ರೇಷ್ಠ ದೇವಿಯಾಗಿರುವ ಪರಮ ಪಾವನೆಯಾದ ಪೂಜನೀಯಳಾಗಿರುವ ಶ್ರೀ ರಾಜರಾಜೇಶ್ವರೀ ದೇವಿಯು ಸಮಸ್ತರನ್ನೂ ರಕ್ಷಿಸಲಿ.

॥ ಇತಿ ಶ್ರೀ ರಾಜರಾಜೇಶ್ವರೀ ಸ್ತೋತ್ರಂ ಸಂಪೂರ್ಣಂ ॥

## 5.7 ಶ್ರೀ ಸರಸ್ವತೀ ಪ್ರಾತಃಸ್ಮರಣಂ

**ಪ್ರಾತಃಸ್ಮರಾಮಿ ಮಹನೀಯ ಗುಣಾವತಂಸಂ ಕಾರುಣ್ಯಪೂರ ಕಮನೀಯ ರಸಪ್ರಸಾರಂ । ಜಿಹ್ವಾಂಚಲ ಪ್ರವಿಲಸನ್ ನಿಜರೂಪದೀಪಂ ವಾಣೀ ಮನೋಹರ ವರಾಂಗಮಪಾಂಗ ತುಂಗಂ ॥1॥**

ಭಾವಾರ್ಥ - ಉನ್ನತವಾಗಿರುವ ಗುಣಗಳನ್ನು ಶಿರಸ್ಸಿನಲ್ಲಿ ಭೂಷಣವಾಗಿ ಧರಿಸಿಕೊಂಡಿರುವ, ಕರುಣಾ ಪ್ರವಾಹದಲ್ಲಿ ಆಕರ್ಷಕವಾಗಿರುವ ರಸವನ್ನು ಪಸರಿಸುವ, ನಾಲಗೆಯ ತುದಿಯಲ್ಲಿ ದೀಪರೂಪದಿಂದ ಶೋಭಿಸುತ್ತಾ, ತನ್ನ ಕಡೆಗಣ್ಣಿನ ನೋಟದಿಂದ ಎದ್ದು ಕಾಣುವ ವಾಗ್ದೇವಿಯ ಮನೋಹರ ಮುಖಾರವಿಂದವನ್ನು ಉಷಃ ಕಾಲದಲ್ಲಿ ನಾನು ಸ್ಮರಿಸುತ್ತೇನೆ.

**ಪ್ರಾತಃಸ್ಮರಾಮಿ ವಚಸಾಮಧಿನಾಯಿಕಾಖ್ಯಂ ಸೃಷ್ಟಿ ಸ್ವರೂಪ ವಿಧಿ ಭೋಧನ ಪಾರವಶ್ಯಂ । ಶಬ್ದಾರ್ಥ ರೂಪಮತಿಶಾಯಿತ ವತ್ಸಲತ್ವಂ ವಾಣೀ ಮನೋಹರ ವರಾಂಗಮಪಾಂಗ ತುಂಗಂ ॥2॥**

ಭಾವಾರ್ಥ - ಮಾತುಗಳ ಅಧಿನಾಯಕಿಯಾಗಿ ವಾಗಧೀಶ್ವರೀ ಎಂಬುದಾಗಿ, ಸೃಷ್ಟಿಯ ಸ್ವರೂಪಹಾಗೂ ವಿಧಾನವನ್ನು ಭೋಧಿಸುವುದರಲ್ಲಿ ತಲ್ಲೀನಳಾಗಿ ಶಬ್ದ ಮತ್ತು ಅರ್ಥರೂಪದ ಹೆಚ್ಚಿನ ವಾತ್ಸಲ್ಯಭರಿತಳಾಗಿ ಎತ್ತರವಾಗಿರುವ ಕಡೆಗಣ್ಣಿನ ನೋಟದಿಂದ ಕೂಡಿರುವ ವಾಗ್ದೇವಿಯ ಮನೋಹರ ಮುಖಾರವಿಂದವನ್ನು ಉಷಃ ಕಾಲದಲ್ಲಿ ನಾನು ಸ್ಮರಿಸುತ್ತೇನೆ.

**ಪ್ರಾತಃಸ್ಮರಾಮಿ ಮನುರಾಜ ಮಹಿಮ್ನ ರೂಪಂ ಮರ್ತ್ಯಾಮರಾಸುರ ಗಣಾರ್ಚಿತ ಪಾದಪದ್ಮಂ । ಪದ್ಮಾಸನಾತ್ಮ ಸದನಾಯತನಾಧಿವಾಸಂ ವಾಣೀ ಮನೋಹರ ವರಾಂಗಮಪಾಂಗ ತುಂಗಂ ॥3॥**

ಭಾವಾರ್ಥ - ಉನ್ನತವಾಗಿರುವ ಮಂತ್ರಗಳ ಮಹಿಮಾನ್ವಿತರೂಪವನ್ನು ಹೊಂದಿ, ಮನುಜರು, ದೇವತೆಗಳು, ಹಾಗೂ ದೈತ್ಯರ ಸಮೂಹಗಳಿಂದ ಪೂಜಿತವಾಗುವ ಚರಣಕಮಲಗಳಿಂದ ಕೂಡಿ, ಬ್ರಹ್ಮನ ಆತ್ಮ ಸದನದಲ್ಲಿ ವಾಸವಾಗಿದ್ದುಕೊಂಡು, ಕಡೆಗಣ್ಣಿನ ನೋಟದಿಂದ ಕೂಡಿರುವ ವಾಗ್ದೇವಿಯ ಮನೋಹರ ಮುಖಾರವಿಂದವನ್ನು ಉಷಃ ಕಾಲದಲ್ಲಿ ನಾನು ಸ್ಮರಿಸುತ್ತೇನೆ.

**ಪ್ರಾತಃಸ್ಮರಾಮಿ ಮನಸಾ ವಚಸಾ ಸುಭಕ್ತ್ಯಾ ಭಾಷಾಮಯಿ ಪ್ರಬಲಧಾರಣ ಕಾರಣಾಂತಂ । ವಿದ್ಯಾ ಯಶಃಶ್ರಿಯಮುದಾರತಯಾ ಪ್ರಸನ್ನಂ ವಾಣೀ ಮನೋಹರ ವರಾಂಗಮಪಾಂಗ ತುಂಗಂ ॥4॥**

ಭಾವಾರ್ಥ - ವಾಕ್ ರೂಪದ ಪ್ರಬಲ ಧಾರಣೆಗೆ ಕಾರಣವಾಗಿರುವ ಮತ್ತು ವಿದ್ಯೆ, ಕೀರ್ತಿ, ಹಾಗೂ ಸಂಪತ್ ಸ್ವರೂಪದ, ಜನತೆಯ ಮೇಲಿನ ಕರುಣೆಯಿಂದ ಪ್ರಸನ್ನಳಾಗಿ ಅಪಾಂಗದಿಂದ ಎದ್ದು ಕಾಣುವ ವಾಗ್ದೇವಿಯ ಮನೋಹರವಾದ

ಮುಖಾರವಿಂದವನ್ನು ಶ್ರದ್ಧಾಭಕ್ತಿ ಪುರಸ್ಸರವಾಗಿ ಉಷಃ ಕಾಲದಲ್ಲಿ ಮಾತಿನಿಂದಲೂ ಮನಸ್ಸಿನಿಂದಲೂ ನಾನು ಸ್ಮರಿಸುತ್ತೇನೆ.

**ಪ್ರಾತಃಸ್ಮರಾಮಿ ಜಮದುತ್ತರಣಾಂಘ್ರಿಯುಗ್ಮಂ ವೇದಾದಿಗಮ್ಯ ಪರತತ್ವ ಪದಾರ್ಥ ಬೋಧಂ । ನಾದ ಪ್ರಿಯಾಮರತರುಂ ಶ್ರಿತಪಾರಿಜಾತಂ ವಾಣೀ ಮನೋಹರ ವರಾಂಗಮಪಾಂಗ ತುಂಗಂ ॥5॥**

ಭಾವಾರ್ಥ - ಆಹಾರಸೇವನೆಯನ್ನೊಳಗೊಂಡ ಈ ಸಂಸಾರವನ್ನು ದಾಟಿಸುವ ಎರಡು ಚರಣಂಗಳನ್ನು ಹೊಂದಿರುವ ವೇದಗಳಿಂದ ಅರಿತುಕೊಳ್ಳಬೇಕಾಗಿರುವ ಪರಮಾತ್ಮನ ತತ್ವದ ಬಗ್ಗೆ ಅರ್ಥಜ್ಞಾನವನ್ನು ಹೊಂದಿರುವ ಓಂಕಾರನಾದವನ್ನು ಮೆಚ್ಚುವ ದೇವ ವೃಕ್ಷವಾಗಿ ಶರಣಾಗತರಿಗೆ ಕಲ್ಪತರುವಾಗಿ ಕಡೆಗಣ್ಣಿನ ನೋಟದಿಂದ ಎದ್ದು ಕಾಣುವ ವಾಕ್ಕಿನ ಅಧಿದೇವತೆಯಾಗಿರುವ ವಿದ್ಯಾಧಿಮಾತೆ ಶ್ರೀ ಸರಸ್ವತೀ ದೇವಿಯ ದಿವ್ಯ ಮನೋಹರ ಮುಖಾರವಿಂದವನ್ನು ಉಷಃ ಕಾಲದಲ್ಲಿ ನಾನು ಸ್ಮರಿಸುತ್ತೇನೆ.

॥ ಇತಿ ಶ್ರೀ ಸರಸ್ವತೀ ಪ್ರಾತಃಸ್ಮರಣಂ ಸಂಪೂರ್ಣಂ ॥

## 5.8 ಶ್ರೀ ಸರಸ್ವತೀ ಸ್ತೋತ್ರಂ - 1

**ಸರಸ್ವತಿ ನಮಸ್ತುಭ್ಯಂ ವರದೇ ಕಾಮರೂಪಿಣಿ । ವಿದ್ಯಾರಂಭಂ ಕರಿಷ್ಯಾಮಿ ಸಿದ್ಧಿರ್ಭವತು ಮೇ ಸದಾ ॥1॥**

ಭಾವಾರ್ಥ - ಹೇ! ಸರಸ್ವತಿಯೇ, ವರದಾಯಿನಿಯೇ, ಇಷ್ಟ ಪಟ್ಟ ರೂಪವನ್ನು ಧರಿಸಬಲ್ಲವಳೇ, ನಿನಗಿದೋ ನನ್ನ ನಮಸ್ಕಾರ. ನಾನು ವಿದ್ಯಾರಂಭವನ್ನು ಮಾಡುತ್ತಲಿರುವೆನು. ನನಗೆ ಯಾವಾಗಲೂ ವಿದ್ಯೆಯು ಸಿದ್ಧಿಸಲಿ.

**ಸರಸ್ವತಿ ಮಹಾಭಾಗೇ ವಿದ್ಯೇ ಕಮಲಲೋಚನೇ । ವಿಶ್ವರೂಪೇ ವಿಶಾಲಾಕ್ಷಿ ವಿದ್ಯಾಂ ಬುದ್ಧಿಂ ಚ ದೇಹಿಮೇ ॥2॥**

ಭಾವಾರ್ಥ - ಸರಸ್ವತಿಯೆ, ಮಹಾತ್ಮಳೇ, ವಿದ್ಯೆಯೇ, ಕಮಲವನ್ನು ಹೋಲುವ ಕಣ್ಣುಗಳನ್ನು ಹೊಂದಿರುವವಳೇ, ವಿಶಾಲವಾಗಿರುವ ದೃಷ್ಟಿಯನ್ನು ಹೊಂದಿರುವವಳೇ, ನನಗೆ ವಿದ್ಯೆ ಹಾಗೂ ಬುದ್ಧಿಯನ್ನು ದಯಪಾಲಿಸು.

**ಸಾ ಮೇ ವಸತು ಜಿಹ್ವಾಯಾಂ ವೀಣಾಪುಸ್ತಕಧಾರಿಣೀ । ವಿಧಾತೃವಲ್ಲಭಾ ದೇವೀ ಸರ್ವ ಶುಕ್ಲಾ ಸರಸ್ವತೀ ॥3॥**

ಭಾವಾರ್ಥ - ವೀಣಾ ಪುಸ್ತಕಗಳನ್ನು ಧರಿಸಿದವಳಾಗಿರುವ ಬ್ರಹ್ಮನ ಮಡದಿಯಾಗಿರುವ, ಪೂರ್ಣವಾಗಿ ಬಿಳಿ ಬಣ್ಣವನ್ನು ಹೊಂದಿರುವ ದೇವಿ ಸರಸ್ವತಿಯು ನನ್ನ ನಾಲಗೆಯ ಮೇಲೆ ನೆಲೆಯಾಗಿರಲಿ.

**ಪದ್ಮಪತ್ರ ವಿಶಾಲಾಕ್ಷೀ ಪದ್ಮಕೇಸರವರ್ಣಿನೀ । ನಿತ್ಯಂ ಪದ್ಮಾಲಯಾ ದೇವೀ ಸಾ ಮಾಂ ಪಾತು ಸರಸ್ವತೀ ॥4॥**

ಭಾವಾರ್ಥ - ಕಮಲದ ಎಸಳಿನ ತೆರನಾಗಿ ವಿಶಾಲವಾಗಿರುವ ಕಣ್ಣುಗಳನ್ನು ಹೊಂದಿರುವ, ತಾವರೆಯ ಕೇಸರದಂತಹಾ ಮೈಬಣ್ಣ ಹೊಂದಿ, ಸದಾಕಾಲ ಕಮಲದಲ್ಲೇ ವಾಸವಾಗಿರುವ ದೇವಿ ಸರಸ್ವತಿಯು ನನ್ನ ಸದಾ ರಕ್ಷಿಸಲಿ.

**ಸರಸ್ವತಿ ಮಹಾಭಾಗೇ ವಿದ್ಯೇ ಕಮಲಲೋಚನೇ । ವಿಶ್ವರೂಪೇ ವಿರೂಪಾಕ್ಷಿ ವಿದ್ಯಾಂ ದೇಹಿ ನಮೋಸ್ತುತೇ ॥5॥**

ಭಾವಾರ್ಥ - ಹೇ! ಸರಸ್ವತೀಯೇ, ಮಹಾಭಾಗ್ಯವಂತಳೇ, ವಿದ್ಯಾ ಸ್ವರೂಪಿಣೀ, ಕಮಲವನ್ನು ಹೋಲುವ ಕಣ್ಣುಗಳುಳ್ಳವಳೇ, ವಿಶ್ವರೂಪಿಣಿಯೇ, ವಿಶಾಲಾಕ್ಷಿಯೇ ನನಗೆ ವಿದ್ಯೆಯನ್ನು ಅನುಗ್ರಹಿಸು ತಾಯಿ. ನಿನಗಿದೋ ನನ್ನ ನಮಸ್ಕಾರಗಳು.

**ಸುರಾಸುರಾಸೇವಿತಪಾದಪಂಕಜಾ ಕರೇ ವಿರಾಜತ್ ಕಮನೀಯಪುಸ್ತಕಾ । ವಿರಿಂಚಿಪತ್ನೀ ಕಮಲಾಸನಸ್ಥಿತಾ ಸರಸ್ವತೀ ನೃತ್ಯತು ವಾಚಿ ಮೇಸದಾ ॥6॥**

ಭಾವಾರ್ಥ - ದೇವತೆಗಳೂ ದೈತ್ಯರೂ ಭಕ್ತಿಯಿಂದ ಸರಸ್ವತಿಯ ಪಾದಕಮಲಗಳನ್ನು ಭಜಿಸುವರು. ಅಂತಹಾ, ಕೈಯಲ್ಲಿ ಪುಸ್ತಕವನ್ನು ಧರಿಸಿದ ಕಮಲಾಸನದಲ್ಲಿ

ಆರೂಢನಾಗಿರುವ ಬ್ರಹ್ಮನರಗಿಣಿಯಾಗಿರುವ ತಾಯಿ ಸರಸ್ವತಿಯು ನನ್ನ ನಾಲಿಗೆಯಲ್ಲಿ ಸದಾ ನರ್ತಿಸುತ್ತಿರಲಿ.

**ಭವತಿ ಯದನುಭಾವಾ ದೇಡಮೂಕೋಽಪ್ಪಿ ವಾಗ್ಮೀ ಜಡಮಪಿರಪಿಜಂತುಃ ಜಾಯತೇ ಪ್ರಾಜ್ಞಮೌಲೀ । ಸಕಲ ವಚನ ಚೇತೋ ದೇವತಾ ಭಾರತೀ ಸಾ ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥7॥**

ಭಾವಾರ್ಥ - ಯಾವ ವಾಗ್ದೇವಿಯ ಕೃಪೆಯಿಂದ ಹುಟ್ಟು ಮೂಗನೂ ವಾಗ್ಮಿಯಾಗುವನೋ, ಮಂದಮತಿಯೂ ವಿದ್ವಾಂಸನಾಗುವನೋ, ಎಲ್ಲಾ ನುಡಿಗಳ ಜೀವಶಕ್ತಿಯು ಯಾರಾಗಿರುವರೋ ಅಂತಹಾ ಸರಸ್ವತಿಯು ಯಾವಾಗಲೂ ತನ್ನ ಸನ್ನಿಧಿಯನ್ನು ನನ್ನ ಮಾತು ಮತ್ತು ಮನಸ್ಸುಗಳಲ್ಲಿ ಸ್ಥಿರಗೊಳಿಸಲಿ.

**ಯಾದೇವೀ ಸ್ತೂಯತೇ ನಿತ್ಯಂ ಬ್ರಹ್ಮೇಂದ್ರ ಸುರ ಕಿನ್ನರೈಃ । ಸಾ ಮಾಮ್ಮೈವಾಸ್ತು ಜಿಹ್ವಾಗ್ರೇ ಪದ್ಮಹಸ್ತಾ ಸರಸ್ವತೀ ॥8॥**

ಭಾವಾರ್ಥ - ಯಾವ ದೇವಿಯನ್ನು ಸದಾ ಬ್ರಹ್ಮಾದಿ ದೇವತೆಗಳೂ ಸ್ತೋತ್ರ ಮಾಡುವರೋ ಅಂತಹಾ ಪದ್ಮಹಸ್ತೆಯಾದ ತಾಯಿ ಸರಸ್ವತಿಯು ನನ್ನ ನಾಲಗೆಯ ತುದಿಯಲ್ಲಿ ಸದಾ ಸ್ಥಿರವಾಗಿರಲಿ.

**ಯಾ ವೇದಾಂತಾರ್ಥತತ್ತ್ವೈಕ ಸ್ವರೂಪಾ ಪರಮಾರ್ಥತಃ । ನಾಮರೂಪಾನಾ ವ್ಯಕ್ತಾ ಸಾ ಮಾಂ ಸರಸ್ವತೀ ॥9॥**

ಭಾವಾರ್ಥ - ಯಾರು ನೈಜವಾಗಿ ವೇದಾಂತಾರ್ಥ-ತತ್ವದ ಏಕ ಸ್ವರೂಪಳೂ, ಯಾರು ಇಲ್ಲಿ ನಾಮರೂಪಗಳಲ್ಲಿ ವ್ಯಕ್ತಳಿರುವಳೋ, ಆ ಸರಸ್ವತಿಯು ನನ್ನನ್ನು ಸದಾ ರಕ್ಷಿಸಲಿ.

**ಯಾ ಸಾಂಗೋಪಾಂಗವೇದೇಷು ಚತುರ್ಷ್ವೇಕೈವ ಗೀಯತೇ । ಅದ್ವೈತಾ ಬ್ರಹ್ಮಣಃ ಶಕ್ತಿಃ ಸಾಮಾಂ ಪಾತು ಸರಸ್ವತೀ ॥10॥**

ಭಾವಾರ್ಥ - ಯಾವಾಕೆ ತನ್ನ ಅಂಗ, ಉಪಾಂಗಗಳಿಂದ ಕೂಡಿದ ನಾಲ್ಕು ವೇದಗಳಲ್ಲಿ ಸ್ತುತಿಸಲ್ಪಟ್ಟಿರುವಳೋ, ಯಾರು ಅದ್ವಿತೀಯಳೋ, ಮತ್ತು ಬ್ರಹ್ಮನ ಶಕ್ತಿರೂಪಳೊ ಅಂತಹಾ ಸರಸ್ವತಿಯು ನನ್ನನ್ನು ಸದಾ ರಕ್ಷಿಸಲಿ.

**ಯಾ ವರ್ಣಪದವಾಕ್ಯಾರ್ಥಸ್ವರೂಪೇಣೈವವರ್ತತೇ । ಅನಾದಿ ನಿಧನಾಸ್ನಂತಾ ಸಾ ಮಾಂ ಪಾತು ಸರಸ್ವತೀ ॥11॥**

ಭಾವಾರ್ಥ - ಯಾವಾಕೆ ವರ್ಣ, ಪದ, ವಾಕ್ಯ, ಅರ್ಥ, ಇವುಗಳ ಸ್ವರೂಪಿಣಿಯೋ, ಯಾರಿಗೆ ಆದಿ ಅಂತ್ಯಗಳಿಲ್ಲವೋ,ಅಂತಹಾ ಸರಸ್ವತಿಯು ನನ್ನನ್ನು ಸದಾ ರಕ್ಷಿಸಲಿ.

**ಯಾಂ ವಿದಿತ್ವಾಖಿಲಂ ಬಂಧಂ ನಿರ್ಮಥ್ಯಾಖಿಲವತ್ಮರ್ನಾ । ಯೋಗೀ ಯಾತಿ ಪರಂ ಸ್ಥಾನಂ ಸಾ ಮಾಂ ಪಾತು ಸರಸ್ವತೀ ॥12॥**

ಭಾವಾರ್ಥ - ಯೋಗಿಗಳು ಯಾರನ್ನು ತಿಳಿದು ಬಂಧಗಳೆಲ್ಲವುಗಳಿಂದ ಬಿಡುಗಡೆ ಹೊಂದಿ ಮುಕ್ತಿಯ ಹಾದಿಯ ಮೂಲಕ ಪರಮಪದವನ್ನು ಪಡೆಯುವರೋ ಅಂತಹಾ ಸರಸ್ವತಿಯು ನನ್ನನ್ನು ಸದಾ ರಕ್ಷಿಸಲಿ.

**ಅಕ್ಷಸೂತ್ರಾಂಕುಶಧರಾ ಪಾಶಪುಸ್ತಕಧಾರಿಣೀ । ಮುಕ್ತಾಹಾರ ಸಮಾಯುಕ್ತಾ ವಾಚಿ ತಿಷ್ಟತು ಮೇ ಸದಾ ॥13॥**

ಭಾವಾರ್ಥ - ಜಪಮಾಲೆ, ಅಂಕುಶ, ಪಾಶ, ಪುಸ್ತಕ ಇವುಗಳನ್ನು ಹಿಡಿದುಕೊಂಡು ಕಂಠದಲ್ಲಿ ಮುತ್ತಿನ ಹಾರವನ್ನು ಧರಿಸಿರುವ ವಾಗ್ದೇವಿ ಸರಸ್ವತಿಯು ನನ್ನ ವಾಗ್ಶಕ್ತಿಯಲ್ಲಿ ಸದಾ ನೆಲೆಸಿರಲಿ.

**ಸ್ತೋತ್ರೇಣಾನೇನ ತಾಂ ದೇವೀಂ ಜಗದ್ಧಾತ್ರೀಂ ಸರಸ್ವತೀಂ । ಯೇ ಸ್ತುವಂತಿ ತ್ರಿಕಾಲೇಷು ಸರ್ವ ವಿದ್ಯಾಂ ಲಭಂತಿ ತೇ ॥14॥**

ಭಾವಾರ್ಥ - ಈ ಸ್ತೋತ್ರಗಳಿಂದ ಯಾರು ತ್ರಿಕಾಲಗಳಲ್ಲಿಯೂ ಆ ತಾಯಿ ಸರಸ್ವತಿಯನ್ನು ಆರಾಧಿಸುವರೋ ಅವರಿಗೆ ಸಮಸ್ತ ವಿದ್ಯೆಗಳೂ ಲಭಿಸುತ್ತವೆ.

॥ ಇತಿ ಸರಸ್ವತೀ ಸ್ತೋತ್ರಂ ಸಂಪೂರ್ಣಂ ॥

## 5.9 ಶ್ರೀ ಸರಸ್ವತೀ ಸ್ತೋತ್ರಂ - 2

**ನಮಸ್ತೇ ಶಾರದಾ ದೇವಿ ಕಾಶ್ಮೀರ ಪುರವಾಸಿನಿ । ತ್ವಾಮಹಂ ಪ್ರಾರ್ಥಯೇ ನಿತ್ಯಂ ವಿದ್ಯಾದಾನಂ ಚ ದೇಹಿಮೇ ॥1॥**

ಭಾವಾರ್ಥ - ಕಾಶ್ಮೀರದ ಪಟ್ಟಣದಲ್ಲಿ ವಾಸವಾಗಿರುವ ದೇವಿ ಶಾರದೆಯೇ, ನಿನಗಿದೋ ನಾನು ನಮಸ್ಕರಿಸುತ್ತಿರುವೆ. ನಾನು ನಿನ್ನನ್ನು ಅನುದಿನವೂ ಪ್ರಾರ್ಥಿಸುವೆ. ನನಗೆ ವಿದ್ಯೆಯನ್ನು ಸ್ವೀಕರಿಸುವ ಶಕ್ತಿಯನ್ನು ಅನುಗ್ರಹಿಸು.

**ಯಾ ಕುಂದೇಂದುತುಷಾರಹಾರಧವಲಾ ಯಾ ಶುಭ್ರವಸ್ತ್ರಾನ್ವಿತಾ ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತಪದ್ಮಾಸನಾ । ಯಾ ಬ್ರಹ್ಮಾಚ್ಯುತ ಶಂಕರಪ್ರಭೃತಿಭಿರ್ದೇವೈಃ ಸದಾ ಪೂಜಿತಾ ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶ್ಯೇಷ ಜಾಡ್ಯಾಪಹಾ ॥2॥**

ಭಾವಾರ್ಥ - ಯಾವಾತಳು ಮಲ್ಲಿಗೆಯ ಹೂ, ಚಂದ್ರ, ಮಂಜಿನ ಹನಿ, ಮುತ್ತಿನಮಾಲೆಗಳ ಬಣ್ಣದಂತೆ ಬಿಳುಪಾಗಿರುವಳೋ, ಯಾವಾಕೆ ಸ್ವಚ್ಛವಾದ ವಸ್ತ್ರವನ್ನು ಧರಿಸಿರುವಳೋ, ಯಾವಾಕೆಯ ಹಸ್ತವು ವೀಣೆಯೆನ್ನುವ ವರದಂಡದಿಂದ ಅಲಂಕೃತವಾಗಿರುವುದೋ, ಯಾವಾತಳು ಬಿಳಿಯ ತಾವರೆಯ ಮೇಲೆ ಆರೂಢಳಾಗಿರುವಳೋ,ಯಾವಾಕೆ ಬ್ರಹ್ಮ, ವಿಷ್ಣು, ಮಹೇಶ್ವರರೇ ಮೊದಲಾದ ದೇವಾನುದೇವತೆಗಳಿಂದ ಸದಾ ಪೂಜಿಸಲ್ಪಡುವಳೋ, ಯಾವಾತಳು ಜಡತ್ವವನ್ನು ಶೇಷರಹಿತವನ್ನಾಗಿಸುವಳೋ ಅಂತಹಾ ಭಗವತಿಯಾದ ಸರಸ್ವತಿಯು ನಮ್ಮೆಲ್ಲರನ್ನು ಕಾಪಾಡಲಿ.

**ಶ್ವೇತ ಪದ್ಮಾಸನಾ ದೇವೀ ಶ್ವೇತ ಪುಷ್ಪೋಪಶೋಭಿತಾ । ಶ್ವೇತಾಂಬರಧರಾ ನಿತ್ಯಾ ಶ್ವೇತ ಗಂಧಾನುಲೇಪನಾ ॥3॥**

ಭಾವಾರ್ಥ - ಶಾಶ್ವತಳಾಗಿರುವ ಸರಸ್ವತೀ ದೇವಿ ಬಿಳಿಯ ತಾವರೆ ಮೇಲೆ ಆಸೀನಳಾಗಿ, ಬಿಳಿಯ ಹೂವುಗಳಿಂದ ಅಲಂಕರಿಸಲ್ಪಟ್ಟವಳಾಗಿ, ಬಿಳಿಯ ವಸನಧಾರಿಣಿಯಾಗಿ, ಬಿಳಿಯ ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡಿರುವಳು.

**ಶ್ವೇತಾಕ್ಷಸೂತ್ರ ಹಸ್ತಾ ಚ ಶ್ವೇತಚಂದನಚರ್ಚಿತಾ । ಶ್ವೇತ ವೀಣಾಧರಾ ಶುಭ್ರಾ ಶ್ವೇತಾಲಂಕಾರಭೂಷಿತಾ ॥4॥**

ಭಾವಾರ್ಥ - ಸರಸ್ವತಿಯ ಕೈಯಲ್ಲಿ ಬಿಳಿಯ ಜಪಮಾಲೆಯಿದೆ. ಆಕೆ ಬಿಳುಪಾದ ಶ್ರೀಗಂಧವನ್ನು ಲೇಪಿಸಿಕೊಂಡಿರುತ್ತಾಳೆ. ಕೈಯಲ್ಲಿ ಬಿಳಿದಾದ ವೀಣೆಯನ್ನು ಹಿಡಿದವಳಾಗಿದ್ದಾಳೆ. ಆಕೆ ಶುಭ್ರಳಾಗಿ ಬಿಳಿಯ ವಸ್ತುಗಳಿಂದ ಅಲಂಕಾರಗಳಿಂದ ಭೂಷಿತಳಾಗಿದ್ದಾಳೆ.

**ವಂದಿತಾ ಸಿದ್ಧಗಂಧರ್ವೈರರ್ಚಿತಾ ಸುರದಾನವೈಃ । ಪೂಜಿತಾ ಮುನಿಭಿಃ ಸರ್ವೈಃ ಋಷಿಭಿಃ ಸ್ತೂಯತೇ ಸದಾ ॥5॥**

ಭಾವಾರ್ಥ - ಸರಸ್ವತಿಯು ಸಿದ್ಧ-ಗಂಧರ್ವರಿಂದ ವಂದಿಸಲ್ಪಡುವವಳು. ಸುರದಾನವರು ಕೂಡಾ ಅವಳನ್ನು ಅರ್ಚಿಸುತ್ತಾಳೆ. ಸಕಲ ಮುನಿಗಳೂ ಸಹಾ ಆಕೆಯನ್ನು ಪೂಜಿಸುತ್ತಾರೆ. ಋಷಿಗಳು ಆಕೆಯನ್ನು ಸ್ತುತಿಸುತ್ತಿರುತ್ತಾರೆ.

**ಯಾ ಶ್ರದ್ಧಾ ಧಾರಣಾ ಮೇಧಾ ವಾಗ್ದೇವೀ ವಿಧಿವಲ್ಲಭಾ । ಭಕ್ತಜಿಹ್ವಾಗ್ರಸದನಾ ಶಮಾದಿ ಗುಣದಾಯಿನೀ ॥6॥**

ಯಾವಾತಳು ಭಕ್ತರ ಶ್ರದ್ಧೆಯನ್ನು ಧರಿಸುತ್ತಾಳೋ,ಮೇಧಾ ಶಕ್ತಿ ರೂಪಳೋ, ವಾಗ್ದೇವಿಯೂ ಬ್ರಹ್ಮನ ಸತಿಯೂ ಆಗಿರುವಳೋಭಕ್ತ ಜನಾದಿಗಳ ನಾಲಗೆಯ ತುದಿಯಲ್ಲಿ ವಾಸವಾಗಿರುವಳೋ, ಶಮದಮಾದಿಗುಣಗಳನ್ನು ಕರುಣಿಸುವಳೋ ಆ ತಾಯಿ ಸರಸ್ವತಿಯು ನನ್ನ ವಾಕ್ಕಿನಲ್ಲಿ ನೆಲೆಯಾಗಿರಲಿ.

**ನಮಾಮಿ ಯಾಮಿನೀಂ ನಾಥಲೇಖಾಲಂಕೃತಕುಂತಲಾಂ । ಭವಾನೀಂ ಭವ ಸಂತಾಪನಿರ್ವಾಪಣ ಸುಧಾನದೀಂ ॥7॥**

ಚಂದ್ರನ ಕಲೆಯಂತೆ ಶೋಭಾಯಮಾನವಾಗಿರುವ ಕೂದಲುಗಳನ್ನು ಹೊಂದಿರುವವಳೇ, ಭಕ್ತ ಜನಾದಿಗಳ ಭವ ಸಂತಾಪವನ್ನು ಶಾಂತಗೊಳಿಸುವವಳೇ, ರಕ್ಷಕಳಾಗಿರುವ ತಾಯಿಯೇ, ಜಗನ್ಮಾತೆಯಾಗಿರುವ ನಿನಗಿದೋ ನನ್ನ ಪ್ರಣಾಮಂಗಳು.

**ಭದ್ರಕಾಲ್ಯೈ ನಮೋ ನಿತ್ಯಂ ಸರಸ್ವತ್ಯೈ ನಮೋ ನಮಃ ।**
**ವೇದವೇದಾಂಗವೇದಾಂತವಿದ್ಯಾಸ್ಥಾನೇಭ್ಯ ಏವಚ ॥8॥**

ಭದ್ರಕಾಳಿಯೇ, ನಿನಗಿದೋ ನನ್ನ ನಮಸ್ಕಾರಗಳು. ಸರಸ್ವತಿಯೇ ನಿನಗಿದೋ ನನ್ನ ನಮಸ್ಕಾರಗಳು. ವೇದೋಪನಿಷತ್ತುಗಳಲ್ಲಿಯ ವೇದಾಂತ ವಿದ್ಯಾಸ್ಥಾನದಲ್ಲಿರುವ ವಾಗ್ದೇವಿ ಸರಸ್ವತಿಯೇ, ನಿನಗಿದೋ ಪುನಃಪುನಃ ನಮಸ್ಕಾರಗಳು.

**ಬ್ರಹ್ಮಸ್ವರೂಪಾ ಪರಮಾ ಜ್ಯೋತಿರೂಪಾ ಸನಾತನೀ । ಸರ್ವ ವಿದ್ಯಾಧಿದೇವೀ ಯಾ ತಸ್ಯೈ ವಾಣ್ಯೈ ನಮೋ ನಮಃ ॥9॥**

ಭಾವಾರ್ಥ - ಸನಾತಳೂ, ಪರಂಜ್ಯೋತಿರೂಪಿಣಿಯೂ, ಬ್ರಹ್ಮಸ್ವರೂಪಳೂ, ಸರ್ವ ವಿದ್ಯೆಗಳಿಗೆ ಅಧಿದೇವತೆಯೂ ಆಗಿರುವ ಆ ವಾಣಿಗೆ ಪುನಃ ಪುನಃ ನನ್ನ ನಮಸ್ಕಾರಗಳು.

**ಯಯಾ ವಿನಾ ಜಗತ್ಸರ್ವಂ ಶಶ್ವಜ್ಜೀವನ್ಮೃತಂ ಭವೇತ್ । ಜ್ಞಾನಾಧಿದೇವೀ ಯಾ ತಸ್ಯೈ ಸರಸ್ವತ್ಯೈ ನಮೋ ನಮಃ ॥10॥**

ಭಾವಾರ್ಥ - ಯಾವಾಕೆಯು ಇಲ್ಲದೆ ಜಗತ್ತಿನ ಸರ್ವ ಜೀವ ರಾಶಿಯು ಶಾಶ್ವತವಾಗಿರುವ ಸಾವನ್ನು ಹೊಂದಲಾರದೋ, ಅಂತಹಾ ಜ್ಞಾನಕ್ಕೆ ಅಧಿದೇವತೆಯಾಗಿರುವ ಮಾತೆ ಸರಸ್ವತಿಗೆ ಇದೋ ನಾನು ಪುನಃಪುನಃ ನಮಸ್ಕರಿಸುವೆ.

**ಯಯಾ ವಿನಾ ಜಗತ್ಸರ್ವಂ ಮೂಕಮುನ್ಮತ್ತವತ್ಸದಾ । ಯಾ ದೇವೀ ವಾಗಧಿಷ್ಠಾತ್ರೀ ತಸ್ಯೈ ವಾಣ್ಯೈ ನಮೋ ನಮಃ ॥11॥**

ಭಾವಾರ್ಥ - ಯಾವಳ ಹೊರತಾಗಿ ಸರ್ವ ಜಗತ್ತು ಯಾವಾಗಲೂ ಮೂಕವೂ, ಉನ್ಮತ್ತವೂ ಆಗುವುದೋ, ಯಾವ ದೇವಿಯು ವಾಕ್ಕಿಗೆ ಅಧಿದೇವತೆಯೋ ಅಂತಹಾ ವಾಣೀ ದೇವಿಗೆ ಪುನಃಪುನಃ ನನ್ನ ನಮಸ್ಕಾರಗಳು.

**ಸ್ತೋತ್ರೇಣಾನೇನ ತಾಂ ದೇವೀಂ ಜಗದ್ಧಾತ್ರೀಂ ಸರಸ್ವತೀಂ । ಯೇ ಸ್ಮರಂತಿ ತ್ರಿಸಂಧ್ಯಾಯಾಂ ಸುವಿದ್ಯಾಂ ಪ್ರಾಪ್ನುವಂತಿತೇ ॥12॥**

ಭಾವಾರ್ಥ - ಜಗದ್ಧಾತ್ರಿಯಾಗಿರುವ ಸರಸ್ವತೀ ದೇವಿಯನ್ನು ಯಾರು ಮೂರೂ ಸಂಧ್ಯಾ ಸಮಯಗಳಲ್ಲಿ [ತ್ರಿ ಸಂಧ್ಯಾ ಕಾಲಗಳಲ್ಲಿ] ಸ್ಮರಿಸುತ್ತಾರೋ ಅವರು ಉತ್ತಮ ವಿದ್ಯೆಯನ್ನು ಪಡೆಯುತ್ತಾರೆ.

॥ ಇತಿ ಸರಸ್ವತೀ ಸ್ತೋತ್ರಂ ಸಂಪೂರ್ಣಂ ॥

## 5.10 ಶ್ರೀ ಸರಸ್ವತೀ ದ್ವಾದಶ ನಾಮ ಸ್ತೋತ್ರಂ

**ವಾಗ್ ವಾಣೀ ಭಾರತೀ ಬ್ರಾಹ್ಮೀ ಭಾಷಾ ಗೀಃ ಶಾರದಾ ಸ್ವರಾ । ಸರಸ್ವತೀ ಕಾಮಧೇನುಃ ವೇದಗರ್ಭಾ, ಅಕ್ಷರಾತ್ಮಿಕಾ ॥1॥**

ಭಾವಾರ್ಥ - ವಾಕ್ಕು, ವಾಣಿ, ಭಾರತಿ, ಬ್ರಾಹ್ಮಿ, ಭಾಷಾ, ಗೀಃ, ಶಾರದೆ, ಸ್ವರ, ಸರಸ್ವತಿ, ಕಾಮಧೇನು, ವೇದಗರ್ಭೆ, ಅಕ್ಷರಾತ್ಮಿಕೆ. .

**ದ್ವಾದಶೈತಾನಿ ನಾಮಾನಿ ಸರಸ್ವತ್ಯಾಸ್ತ್ರಿಸಂಧಿಷುಃ । ಜಪನ್ ಸರ್ವಜ್ಞತಾಂ ಮೇಧಾಂ ವಾಕ್ಪಟುತ್ವಂ ಲಭೇದ್ ಧ್ರುವಂ ॥2॥**

ಭಾವಾರ್ಥ - ಸರಸ್ವತಿಯ ಈ ರೀತಿಯಾಗಿರುವ ಹನ್ನೆರಡು ಹೆಸರುಗಳನ್ನು ಉಷಃಕಾಲದಲ್ಲಿ, ಮಧ್ಯಾಹ್ನ, ಸಾಯಂಕಾಲ ಯಾರು ಜಪಿಸುತ್ತಾರೋ ಅವರು ಸರ್ವಜ್ಞರ ಮೇಧಾ ಶಕ್ತಿಯನ್ನೂ ಹಾಗೂ ಮಾತಿನ ನೈಪುಣ್ಯತೆಯನ್ನೂ ಪಡೆಯುವರು.

**ಷಣ್ಮಾಸಂ ನಿಸ್ಪೃಹೋ ಜಪ್ತ್ವಾ ಲಭೇ ಜ್ಞಾನಂ ವಿಮುಕ್ತಿದಂ । ಅಷ್ಟೋತ್ತರ ಶತಂ ಜಪ್ತ್ವಾ ವಿದ್ಯಾಂ ಪ್ರಾಪ್ನೋತಿ ಮಾನವಃ ॥3॥**

ಭಾವಾರ್ಥ - ಯಾವಾತ ಯಾವುದೇ ಇಷ್ಟಕಾಮನೆಗಳನ್ನು ಇರಿಸಿಕೊಳ್ಳದೆ ಆರು ಮಾಸಗಳ ಕಾಲ ಶ್ರದ್ಧಾಭಕ್ತಿಪುರಸ್ಸರವಾಗಿ ಜಪಿಸುವನೋ ಆತನು ಮೋಕ್ಷಜ್ಞಾನವನ್ನು ಪಡೆಯುವನು. ಅನುದಿನವೂ 108 ಸಲ ಜಪಿಸುವ ಮನುಜರು ಸಕಲ ವಿದ್ಯೆಯನ್ನು ಹೊಂದುವರು.

॥ ಇತಿ ಸರಸ್ವತೀ ದ್ವಾದಶ ನಾಮ ಸ್ತೋತ್ರಂ ಸಂಪೂರ್ಣಂ ॥

## 5.11 ಬ್ರಹ್ಮ ಕೃತ ಸರಸ್ವತೀ ಸ್ತೋತ್ರಂ

**ಐಂ ಐಂ ಐಂ ಇಷ್ಟ ಮಂತ್ರೇ ಕಮಲಭವಮುಖಾಂಭೋಜಭೂತಿಸ್ವರೂಪೇ ರೂಪಾರೂಪಪ್ರಕಾಶೇ ಸಕಲಗುಣಮಯೇ ನಿರ್ಗುಣೇ ನಿರ್ವಿಕಾರೇ । ನ ಸ್ಥೂಲೇ ನವ್ಯ ಸೂಕ್ಷ್ಮೇಸ್ಪ್ಯವಿದಿತವಿಷಯೇ ನಾಪಿ ವಿಜ್ಞಾತ ತತ್ವೇ ವಿಶ್ವೇ ವಿಶ್ವಾಂತರಾತ್ಮೇ ಸುರವರ ನಮಿತೇ ನಿಷ್ಕಲೇ ನಿತ್ಯಶುದ್ಧೇ ॥1॥**

ಭಾವಾರ್ಥ - ಐಂ ಐಂ ಐಂ ಎಂಬ ಬೀಜ ಮಂತ್ರಾಕ್ಷರಗಳು ಇಷ್ಟ ಮಂತ್ರವಾಗಿ ಇರುವ ಮತ್ತು ಬ್ರಹ್ಮನ ಮುಖಕಮಲಕ್ಕೆ ಸಂಪತ್ಸ್ವರೂಪಳಾಗಿರುವ ಹೇ ತಾಯಿಯೇ, ಸಾಕಾರ ಹಾಗೂ ನಿರಾಕಾರ ಸ್ವರೂಪಳು ನೀನಾಗಿ ಪ್ರಕಾಶಿಸುತ್ತಿರುವೆ. ಸಕಲ ಗುಣ ಪರಿಪೂರ್ಣಳೂ ನೀನಾಗಿರುವೆ. ನೀನು ನಿರ್ಗುಣತ್ವವನ್ನೂ ಹೊಂದಿರುವೆ. ನೀನು ಸ್ಥೂಲರೂಪಿಣಿಯೂ ಅಲ್ಲ, ಸೂಕ್ಷ್ಮ ರೂಪಿಣಿಯೂ ಅಲ್ಲ. ನಿನ್ನನ್ನು ತಿಳಿದು ಕೊಳ್ಳಲು ಅಸಾಧ್ಯವಿದೆ. ತಿಳಿದಿರಬಹುದಾದ ತತ್ವಗಳಿಗೂ ನೀನು ಹೊರತಾಗಿರುವವಳು. ಸಮಸ್ತ ಬ್ರಹ್ಮಾಂಡವೂ ನೀನೇ ಆಗಿರುವೆ. ಈ ಜೀವ ಜಗತ್ತಿಗೆ ಅಂತರಾತ್ಮ ಸ್ವರೂಪಳು ನೀನು. ದೇವತೆಗಳ ಒಡೆಯನ ಪ್ರಣಾಮಗಳಿಗೆ ಪಾತ್ರಳಾದವಳೂ ನೀನಾಗಿರುವೆ. ನೀನು ಅಖಂಡಳು ಮತ್ತು ನಿತ್ಯಶುದ್ಧಳು.

**ಹ್ರೀಂ ಹ್ರೀಂ ಹ್ರೀಂ ಜಾಪ್ಯತುಷ್ಟೇ ಹಿಮರುಚಿ ಮುಕುಟೇ ವಲ್ಲಕೀ ವ್ಯಗ್ರ ಹಸ್ತೇ ಮಾತರ್ಮಾತರ್ನಮಸ್ತೇ ದಹ ದಹ ಜಡತಾಂ ದೇಹಿ ಬುದ್ಧಿಂ ಪ್ರಶಾಂತಾಂ । ವಿದ್ಯೇ ವೇದಾಂತವೇದ್ಯೇ ಪರಿಣತಪಠಿತೇ ಮೋಕ್ಷದೇ ಮುಕ್ತಿಮಾರ್ಗೇ ಮಾರ್ಗಾತೀತ ಸ್ವರೂಪೇ ಭವ ಮಮ ವರದಾ ಶಾರದೇ ಶುಭ್ರಹಾರೇ ॥2॥**

ಭಾವಾರ್ಥ - ಅಮ್ಮಾ!ತಾಯಿಯೇ!ಹ್ರೀಂ ಹ್ರೀಂ ಹ್ರೀಂ ಎಂಬೀ ಬೀಜ ಮಂತ್ರಗಳಿಂದಲೇ ನೀನು ಸಂತಸವನ್ನು ಹೊಂದುವವಳಾಗುವೆ. ನಿನ್ನ ಕಿರೀಟವದು ಹಿಮದಂತೆ ಶುಭ್ರವಾಗಿದೆ. ಸದಾ ಕೈಗಳಿಂದ ವೀಣೆಯನ್ನು ನುಡಿಸುವುದರಲ್ಲಿ ನೀನು ಮಗ್ನವಾಗಿರುವೆ. ವಿದ್ಯಾ ಸ್ವರೂಪೆಯಾಗಿರುವವಳೂ ನೀನೇ. ವೇದಾಂತಗಳಿಂದ ವೇದ್ಯಳಾಗುವವಳೂ ನೀನು. ಪರಮ ಜ್ಞಾನಿಗಳಾಗಿರುವ ಮಹಾತ್ಮರು ನಿನ್ನ ಅಪರಿಮಿತ ಮಹಾತ್ಮ್ಯೆಯನ್ನು ಹೊಗಳುವರು. ಮೋಕ್ಷ ಮಾರ್ಗ ರೂಪಿಣಿಯಾಗಿರುವ ನೀನು

ಮೋಕ್ಷದಾಯಕಳೂ ಹೌದು. ಅಂತೆಯೇ ನೀನು ಮುಕ್ತಿ ಮಾರ್ಗಕ್ಕೂ ಮೀರಿರುವವಳು. ಶುಭ್ರವಾಗಿರುವ ಮಾಲೆಯನ್ನು ಧರಿಸಿರುವ ತಾಯಿ ಶಾರದೆಯೇ, ನನಗೆ ವರವನ್ನು ಕರುಣಿಸುವವಳಾಗು. ಮಾತೆಯೇ ನಿನಗಿದೋ ನನ್ನ ನಮನಗಳು. ನನ್ನ ಔದಾಸಿನ್ಯವನ್ನು ನಾಶಗೊಳಿಸಿ ಪ್ರಶಸ್ತವಾದ ಸದ್ಬುದ್ಧಿಯನ್ನು ಕರುಣಿಸು.

॥ ಇತಿ ಬ್ರಹ್ಮ ಕೃತ ಸರಸ್ವತೀ ಸ್ತೋತ್ರಂ ಸಂಪೂರ್ಣಂ ॥

## 5.12 ಪುರಾಣೋಕ್ತ ಶ್ರೀ ಸರಸ್ವತೀ ಸ್ತೋತ್ರಂ

**ಜ್ಞಾನಂ ದೇಹಿ ಸ್ಮೃತಿಂ ದೇಹಿ ವಿದ್ಯಾಂ ವಿದ್ಯಾಧಿ ದೇವತೇ । ಪ್ರತಿಷ್ಠಾಂ ಕವಿತಾಂ ದೇಹಿ ಶಕ್ತಿಂ ಶಿಷ್ಯ ಪ್ರಭೋಧಿಕಾಂ ॥ ಸ್ಮೃತಿಶಕ್ತಿಃ ಜ್ಞಾನಶಕ್ತಿಃ ಬುದ್ಧಿಶಕ್ತಿಃ ಸ್ವರೂಪಿಣೀ । ಪ್ರತಿಭಾ ಕಲ್ಪನಾಶಕ್ತಿಃ ಯಾ ಚ ತಸ್ಯೈ ನಮೋ ನಮಃ ॥1॥**

[-ಬ್ರಹ್ಮ ವೈವರ್ತ ಪುರಾಣ, 2, 4]

ಭಾವಾರ್ಥ - ಹೇ! ವಿದ್ಯಾಧಿಮಾತೆಯೇ, ನನಗೆ ಜ್ಞಾನವನ್ನು ಕರುಣಿಸು. ನೆನಪಿನ ಶಕ್ತಿಯನ್ನು ಅನುಗ್ರಹಿಸು. ವಿದ್ಯೆ, ಕವಿತಾಶಕ್ತಿ, ಕೀರ್ತಿ, ಶಿಷ್ಯರಲ್ಲಿ ಅರಿವು ಮೂಡಿಸುವ ಶಕ್ತಿ, ಇವೆಗಳೆಲ್ಲವನ್ನೂ ದಯಪಾಲಿಸು. ತಾಯಿಯೇ! ಯಾರು ಸ್ಮೃತಿಶಕ್ತಿಯೋ, ಯಾರು ಜ್ಞಾನ ಶಕ್ತಿಯೋ, ಬುದ್ಧಿಶಕ್ತಿಯೋ, ಪ್ರತಿಭಾಶಕ್ತಿಯೋ, ಕಲ್ಪನಾ ಶಕ್ತಿಯೋ ಅಂತಹಾ ಮಹಾಮಾತೆ ಶಾರದೆಗೆ ಪುನಃಪುನಃ ನನ್ನ ನಮಸ್ಕಾರಗಳು.

**ಮನೋ ವೃತ್ತಿರಸ್ತು ಸ್ಮೃತಿಸ್ತೇ ಸಮಸ್ತಾ ತಥಾ ವಾಕ್ಪ್ರವೃತ್ತಿಃ ಸ್ತುತಿಸ್ಸ್ಯಾನ್ಮಹೇಶಿ । ಶರೀರಪ್ರವೃತ್ತಿಃ ಪ್ರಣಾಮಕ್ರಿಯಾ ಸ್ಯಾತ್ ಪ್ರಸೀದ ಕ್ಷಮಸ್ವ ಪ್ರಭೋ ಸಂತತಂ ಮೇ ॥2॥**

[-ಪ್ರಪಂಚ ಸಾರತಂತ್ರ 6, 7,]

ಭಾವಾರ್ಥ - ಹೇ! ಮಹೇಷಿ, ನನ್ನ ಮನೋವೃತ್ತಿಗಳೆಲ್ಲವೂ ನಿನ್ನ ಸ್ಮೃತಿಗಳಾಗಲಿ. ನನ್ನ ಮಾತಿನ ಒಲವುಗಳೆಲ್ಲವೂ ನಿನ್ನದೇ ಸ್ತುತಿಗಳಾಗಲಿ. ನನ್ನ ಶರೀರದ

ಸ್ವಭಾವಗಳೆಲ್ಲವೂ ನಿನಗೆನ್ನ ಪ್ರಣಾಮಗಳಾಗಲಿ. ಹೇ! ಮಾತೆ ಮಹೇಶ್ವರಿಯೇ, ಪ್ರಸನ್ನಳಾಗು. ನನ್ನನ್ನು ಸದಾ ಕ್ಷಮಿಸುವವಳಾಗು.

**ಅಮಲ ಕಮಲಾಧಿವಾಸಿನಿ ಮನಸೋ ವೈಮಲ್ಯದಾಯಿನಿ ಮನೋಜ್ಞೇ । ಸುಂದರಗಾತ್ರಿ ಸುಶೀಲೇ ತವ ಚರಣಾಂಭೋರುಹಂ ನಮಾಮಿ ಸದಾ ॥3॥**

[- ವಾಗೀಶ್ವರೀ ಸ್ತೋತ್ರ]

ಭಾವಾರ್ಥ - ನಿರ್ಮಲವಾಗಿರುವ ತಾವರೆಯಲ್ಲಿ ನೆಲೆಸಿರುವ ಸರಸ್ವತಿಯೇ, ನನ್ನ ಮನಸ್ಸಿಗೆ ನಿರ್ಮಲತ್ವವನ್ನು ಕರುಣಿಸುವ ಮನೋಜ್ಞರೂಪಿಣಿಯೇ, ಸುಶೀಲಳೂ ಸುಂದರಿಯೂ ಆಗಿರುವ ದೇವಿ ಸರಸ್ವತಿಯೇ, ನಾನು ಸದಾ ನಿನ್ನ ಅಡಿದಾವರೆಗಳಿಗೆ ನಮಸ್ಕರಿಸುತ್ತೇನೆ.

ಪದ್ಮ ಪುರಾಣೋಕ್ತಂ -> ।

{ದೇವಗುರುವಾಗಿರುವ ಬೃಹಸ್ಪತಿಯು ವಾಗ್ದೇವಿ ಶಾರದೆಯನ್ನು ತನ್ನ ವಾಕ್ಸಿದ್ಧಿಗೋಸ್ಕರವಾಗಿ ಸ್ತುತಿಸುವ ಮೂಲಕ ಒಲಿಸಿಕೊಂಡನೆಂಬ ಕಥಾನಕವು ಪದ್ಮಪುರಾಣದಲ್ಲಿದೆ. ಇದೇ ಸ್ತೋತ್ರವು ಕೆಲವು ಪಾಠಾಂತರಗಳಲ್ಲಿ ಶಿವ-ಪಾರ್ವತಿ ಸಂವಾದ ಕಥಾನಕವುಳ್ಳ ರುದ್ರಯಾಮಳದಲ್ಲಿಯೂ ಇದೆ. ಇಲ್ಲಿ ಕಾಣಿಸಲಾಗಿರುವುದು ಪದ್ಮ ಪುರಾಣದಲ್ಲಿನ ಪಠ್ಯ}

ಬೃಹಸ್ಪತಿರುವಾಚ---- ಬೃಹಸ್ಪತಿಯು ನುಡಿಯುತ್ತಾನೆ

**ಸರಸ್ವತೀಂ ನಮಸ್ಯಾಮಿ ಚೇತನಾನಾಂ ಹೃದಿ ಸ್ಥಿತಾಂ । ಕಂಠಸ್ಥಾಂ ಪದ್ಮಯೋನೇಸ್ತು ಹಿಮಾಕರ ಪ್ರಿಯಾಂ ಸದಾ ॥1॥**

ಭಾವಾರ್ಥ - ಸಮಸ್ತ ಜೀವಿಗಳಲ್ಲಿಯೂ ನೆಲೆಸಿರುವ ವಾಗ್ದೇವಿ ಸರಸ್ವತಿಗೆ ನಾನು ನಮಸ್ಕರಿಸುವೆ. ಬ್ರಹ್ಮನ ಕಂಠ ಪ್ರದೇಶದಲ್ಲಿ ತಂಪಾದಕಿರಣಗಳುಳ್ಳುವಳಾದ ಆಕೆಯು ಪ್ರೀತಿಯುಳ್ಳವಳಾಗಿಸದಾ ನೆಲೆಸಿರುತ್ತಾಳೆ.

**ಮತಿದಾಂ ವರದಾಂ ಶುದ್ಧಾಂ ವೀಣಾಹಸ್ತ ವರಪ್ರದಾಂ । ಐಂ ಐಂ ಮಂತ್ರ ಪ್ರಿಯಾಂ ಹ್ರೀಂ ಹ್ರಾಂ ಕುಮತಿಧ್ವಂಸಕಾರಿಣೀಂ ॥2॥**

ಭಾವಾರ್ಥ - ಸಮಸ್ತರಿಗೂ ಸನ್ಮತಿಯನ್ನು ಈಯುವ, ವರದಾಯಿನಿಯಾಗಿ, ಪರಮಪವಿತ್ರಳೂ ಆಗಿ, ವೀಣೆಯನ್ನು ಕೈಯಲ್ಲಿ ಧರಿಸಿ, ಐಂ, ಬೀಜಾಕ್ಷರದ ಮೂಲಕ ಸಿದ್ಧಿಯನ್ನು ಕರುಣಿಸುತ್ತಾ ಹ್ರೀಂ ಹಾಗೂ ಹ್ರಾಂ ಬೀಜಾಕ್ಷರ ಮಂತ್ರಗಳಿಂದ ಮನುಜರ ಕುಬುದ್ಧಿಯನ್ನು ನಾಶಗೊಳಿಸುತ್ತಾ ಇರುವ ಸರಸ್ವತೀ ದೇವಿಗೆ ಪ್ರಣಾಮಗಳು.

**ಸುಪ್ರಕಾಶಾಂ ನಿರಾಲಂಬಾಂ ಅಜ್ಞಾನ ತಿಮಿರಾಪಹಾಂ । ಶುಕ್ಲಾಂ ಮೋಕ್ಷಪ್ರದಾಂ ರಮ್ಯಾಂ ಶುಭಾಂಗಾಂ ಶೋಭನಪ್ರದಾಂ ॥3॥**

ಭಾವಾರ್ಥ - ಅಜ್ಞಾನವನ್ನು ದೂರೀಕರಿಸಿ, ಜ್ಞಾನದ ಬೆಳಕನ್ನು ಒದಗಿಸುವ ಬಿಳಿಯವರ್ಣದಿಂದ ಕೂಡಿ ಮೋಕ್ಷದಾಯಕಳಾಗಿಯೂ, ಮನೋಹರವಾಗಿರುವ ಸುಂದರವಾದ ಶರೀರವನ್ನು ಹೊಂದಿದಶುಭಪ್ರದಾಯಳಾಗಿರುವ ಸರಸ್ವತಿಗೆ ನಾನು ನಮಸ್ಕರಿಸುವೆ.

**ಪದ್ಮೋಪವಿಷ್ಟಾಂ ಕುಂಡಲಿನೀಂ ಶುಕ್ಲವರ್ಣಾಂ ಮನೋರಮಾಂ ಆದಿತ್ಯಮಂಡಲೇ ಲೀನಾಂ ಪ್ರಣಮಾಮಿ ಹರಿ ಪ್ರಿಯಾಂ ॥4॥**

ಭಾವಾರ್ಥ - ಪದ್ಮಾಸನೆಯಾಗಿ, ಕುಂಡಲಿನೀ ಶಕ್ತಿಯನ್ನು ಹೊಂದಿ, ಬಿಳಿಯ ವರ್ಣವನಾಂತು, ಮನಸ್ಸಿಗೆ ಆನಂದವನ್ನು ಒದಗಿಸುತ್ತಾ, ಸೂರ್ಯಮಂಡಲವಾಸಿಯಾಗಿ, ಮಹಾವಿಷ್ಣುವಿಗೆ ಪ್ರಿಯಳಾದವಳಾಗಿರುವ ಸರಸ್ವತೀದೇವಿಗೆ ನನ್ನ ಪ್ರಣಾಮಗಳು.

**ಇತಿ ಮಾಸಂ ಸ್ತುತಾಸ್ನೇನ ವಾಗೀಶೇನ ಮಹಾತ್ಮನಾ । ಆತ್ಮಾನಂ ದರ್ಶಯಾ ಮಾಸ ಶರದಿಂದು ಸಮ ಪ್ರಭಾಂ ॥5॥**

ಭಾವಾರ್ಥ - ಈ ರೀತಿಯಾಗಿ ಶ್ರೀಸರಸ್ವತೀದೇವಿಯನ್ನು ಒಂದು ತಿಂಗಳ ಕಾಲ ಪ್ರಾರ್ಥನೆಯನ್ನು ಮಾಡಿದ ನಂತರ ಬೃಹಸ್ಪತಿಗೆ ವಾಗ್ದೇವಿಯು ಸಂತಸಗೊಂಡು ಒಲಿದು ಪ್ರತ್ಯಕ್ಷಳಾಗಿ ತನ್ನ ಅತ್ಯದ್ಭುತ ರೂಪವನ್ನು ಕಾಣಿಸಿದಳು.

**ಸರಸ್ವತ್ಯುವಾಚ-- ವರಂ ವೃಣೀಷ್ವ ಭದ್ರಂ ತೇ ಯಸ್ತೇ ಮನಸಿ ವರ್ತತೇ ॥**

**ಬೃಹಸ್ಪತಿರುವಾಚ-- ವರದಾ ಯದಿ ಮೇ ದೇವಿ ಸಮ್ಯಕ್ ಜ್ಞಾನಂ ಪ್ರಯಚ್ಛಮೇ ॥6॥**

ಸರಸ್ವತಿಯು ಹೇಳುವಳು "ಮಗೂ, ನಿನಗೇನು ಬೇಕಾಗಿದೆ, ಬೇಡಿಕೊ" ಬೃಹಸ್ಪತಿ ಅನ್ನುತ್ತಾನೆ "ನನಗೆ ಪರಿಪೂರ್ಣವಾದಂತಹಾ ಜ್ಞಾನವನ್ನು ಅನುಗ್ರಹಿಸುವವಳಾಗು"

**ಸರಸ್ವತ್ಯುವಾಚ-- ಇದಂ ತೇ ನಿರ್ಮಲಂ ಜ್ಞಾನಂ ಅಜ್ಞಾನ ತಿಮಿರಾಪಹಂ ।**
**ಸ್ತೋತ್ರೇಣಾನೇನ ಮಾಂ ಸ್ತೌತಿ ಸಮ್ಯಗ್ವೇದವಿದೋ ನರಃ ಲಭತೇ ಪರಮಂ ಜ್ಞಾನಂ ಮಮ ತುಲ್ಯ ಪರಾಕ್ರಮಂ ॥7॥**

ಸರಸ್ವತಿಯು ಅನ್ನುವಳು--- ಇದೋ ನೀನು ಬೇಡಿಕೊಂಡಂತೆ ನಿನಗೆ ಪರಿಪೂರ್ಣವಾಗಿರುವ ಜ್ಞಾನವನ್ನು ಅನುಗ್ರಹಿಸುತ್ತಿರುವೆ. ಈ ಜ್ಞಾನವನ್ನು ಪಡೆದವನಾದ ನೀನು ನನಗೆ ಸರಿಸಾಟಿಯಾದ ಜ್ಞಾನಿಯಾಗುವೆ.

**ತ್ರಿ ಸಂಧ್ಯಂ ಯಃ ಪಠೇನ್ನಿತ್ಯಂ ಯಸ್ತ್ವಿದಂ ಜಪತೇ ಸದಾ । ತೇಷಾಂ ಕಂಠೇ ಸದಾ ವಾಸಂ ಕರಿಷ್ಯಾಮಿ ನ ಸಂಶಯಃ ॥8॥**

ಭಾವಾರ್ಥ - ಯಾರು ನೀನು ಮಾಡುವ ಸ್ತೋತ್ರವನ್ನು ದಿನದ ಮೂರು ಸಂಧ್ಯಾಕಾಲಗಳಲ್ಲಿಯೂ ಶ್ರದ್ಧಾಭಕ್ತಿಯಿಂದ ಪಠಿಸುತ್ತಾರೋ, ಜಪಿಸುತ್ತಾರೋ ಅಂತಹವರ ಕಂಠದಲ್ಲಿ ನಾನು ಸದಾ ನೆಲೆಸಿರುತ್ತೇನೆ. ಇದು ನಿಸ್ಸಂಶಯ ಎಂಬುದಾಗಿ ಬೃಹಸ್ಪತಿಗೆ ವಚನವನ್ನಿತ್ತಳು.

॥ ಇತಿ ಪುರಾಣೋಕ್ತ ಶ್ರೀ ಸರಸ್ವತೀ ಸ್ತೋತ್ರಂ ಸಂಪೂರ್ಣಂ ॥

## 5.13 ಶ್ರೀ ಶಾರದಾ ಭುಜಂಗ ಪ್ರಯಾತಾಷ್ಟಕಂ

**ಸುವಕ್ಷೋಜಕುಂಭಾಂ ಸುಧಾಪೂರ್ಣಕುಂಭಾಂ ಪ್ರಸಾದಾವಲಂಬಾಂ ಪ್ರಪುಣ್ಯಾವಲಂಬಾಂ । ಸವಾಸ್ಯೇಂದುಬಿಂಬಾಂ ಸದಾನೋಷ್ಟಬಿಂಬಾಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥1॥**

ಭಾವಾರ್ಥ - ಅಮೃತಭರಿತವಾಗಿರುವ ಕಲಶದೋಪಾದಿಯಲ್ಲಿ ಶ್ರೇಷ್ಠವಾಗಿರುವ ಸ್ತನಗಳನ್ನು ಹೊಂದಿರುವ ಪರಮ ಪರಿಶುದ್ಧಳೂ ಪವಿತ್ರಳೂ ಆಗಿರುವ, ಪೌರ್ಣಮೆಯ ಚಂದಿರನೋಪಾದಿಯಲ್ಲಿ ಸುಂದರವದನದವಳಾಗಿ ತೊಂಡೆಯ ಹಣ್ಣಿನಂತೆ ಹೋಲುವ ತುಟಿಯಿಂದ ಶೋಭಿಸುವ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಕಟಾಕ್ಷೇ ದಯಾರ್ದ್ರಾಂ ಕರೇ ಜ್ಞಾನಮುದ್ರಾಂ ಕಲಾಭಿರ್ವಿನಿದ್ರಾಂ ಕಲಾಪೈಃ ಸುಭದ್ರಾಂ । ಪುರಸ್ತ್ರೀಂ ವಿನಿದ್ರಾಂ ಪುರಸ್ತುಂಗಭದ್ರಾಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥2॥**

ಭಾವಾರ್ಥ - ಕರುಣಾಪೂರ್ಣ ದೃಷ್ಟಿಯುಳ್ಳವಳಾದ, ಜ್ಞಾನಮುದ್ರೆಯ ಹಸ್ತವನ್ನು ಹೊಂದಿ, ದೋಷವಿರಹಿತವಾಗಿರುವ ಲಲಿತವಿದ್ಯೆಗಳನ್ನು ಹೊಂದಿರುವವಳಾದ, ಸೊಂಟದ ಪಟ್ಟಿಯಿಂದ ಶೋಭಿತಳಾಗಿ, ಜಡತ್ವ ವಿರಹಿತಳಾಗಿರುವ ಮಾನಿನಿಯಾಗಿ, ಎದುರಲ್ಲಿ ತುಂಗಭದ್ರಾನದಿಯುಳ್ಳವಳಾಗಿರುವ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಲಲಾಮಾಂಕಫಾಲಾಂ ಲಸದ್ಗಾನಲೋಲಾಂ ಸ್ವಭಕ್ತೈಕಪಾಲಾಂ ಯಶಃಶ್ರೀಕಪೋಲಾಂ । ಕರೇತ್ವಕ್ಷಮಾಲಾಂ ಕನತ್ಪ್ರತ್ನಲೋಲಾಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥3॥**

ಭಾವಾರ್ಥ - ತಿಲಕದಿಂದ ಶೋಭಿಸುತ್ತಿರುವ ಹಣೆಯುಳ್ಳವಳಾದ, ಉತ್ತಮವಾಗಿರುವ ಸಂಗೀತದಲ್ಲಿ ಆಸಕ್ತಳಾಗಿರುವವಳಾದ, ತನ್ನ ಭಕ್ತರನ್ನು ರಕ್ಷಿಸುತ್ತಿರುವ, ಕೀರ್ತಿ ಲಕ್ಷ್ಮಿಯನ್ನು ತನ್ನ ಕಪೋಲದಲ್ಲಿ ಗುರುತಿಸಿಕೊಂಡು ಕೈಯಲ್ಲಿ ಅಕ್ಷಮಾಲೆಯನ್ನು

ಹಿಡಿದಿರುವ, ಹೊಳೆಯುತ್ತಲಿರುವ ಕರ್ಣಾಭರಣಗಳಿಂದ ಮೆರೆಯುತ್ತಿರುವ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಸುಸೀಮಂತವೇಣೀಂ ದೃಶಾ ನಿರ್ಜಿತೈಣೀಂ ರಮತ್ಕೀರವಾಣೀಂ ನಮದ್ವಜ್ರಪಾಣಿಂ । ಸುಧಾಮಂಥರಾಸ್ಯಾಂ ಮುದಾ ಚಿಂತ್ಯವೇಣೀಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥4॥**

ಭಾವಾರ್ಥ - ಚೆನ್ನಾಗಿ ಬೈತಲೆ ಮಾಡಿಕೊಂಡು ಜಡೆ ಹೆಣೆದುಕೊಂಡು ಹರಿಣದ ದೃಷ್ಟಿಯನ್ನು ಮೀರಿಸಿರುವ ಕಣ್ಣುಗಳನ್ನು ಹೊಂದಿರುವ, ಗಿಣಿಯಂತೆ ಮುದ್ದುಮಾತಿನಿಂದ ಮನೋಹರಳಾಗಿರುವವಳಾದ, ವಜ್ರಾಯುಧಧಾರಿಯಾಗಿರುವ ದೇವೇಂದ್ರನಿಂದ ವಂದಿಸಲ್ಪಡುತ್ತಿರುವ, ಅಮೃತಪಾನ ಮಾಡಿ ಅಲಸಿಕೆಗೊಂಡಿರುವ ಮೊಗದವಳಾದ, ಭಕ್ತರು ಸಂತಸದಿಂದ ಧ್ಯಾನಿಸುವ ಜಡೆಯನ್ನು ಹೊಂದಿದ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಸುಶಾಂತಾಂ ಸುದೇಹಾಂ ದೃಗಂತೇ ಕಚಾಂ ತಾಂ ಲಸತ್ಸಲ್ಲತಾಂಗೀಮನಂತಾಮಚಿಂತ್ಯಾಂ । ಸ್ಮೃತಾಂ ತಾಪಸ್ಯೈಃ ಸರ್ಗಪೂರ್ವಸ್ಥಿತಾಂ ತಾಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥5॥**

ಭಾವಾರ್ಥ - ಅತ್ಯಂತ ಶಾಂತಲೂ, ಸುಂದರ ಶರೀರಿಯೂ, ಕುಡಿಗಣ್ಣುಗಳನ್ನು ತಲಪುತ್ತಲಿರುವ ಮುಂಗುರುಳು ಉಳ್ಳವಳಾದ, ಬೆಳ್ಳಿಯಂತೆ ಮಿನುಗುವ ಕಾಯದವಳಾಗಿ, ನಾಶರಹಿತಳೂ, ಊಹಾತೀತಳಾಗಿರುವವಳೂ ಆಗಿರುವ ತಪಸ್ವೀಗಳಿಂದ ಸ್ತುತಿಸಲ್ಪಡುತ್ತಿರುವ, ಬ್ರಹ್ಮಾಂಡದ ಸೃಷ್ಟಿಯ ಮೊದಲೇ ಇರುವವಳಾದಂತಹಾ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಕುರಂಗೇ ತುರಂಗೇ ಮೃಗೇಂದ್ರೇ ಖಗೇಂದ್ರೇ ಮರಾಲೇ ಮದೇಭೇ ಮಹೋಕ್ಷೇಸ್ಥಿರೂಢಾಂ । ಮಹತ್ಯಾಂ ನವಮ್ಯಾಂ ಸದಾ ಸಾಮರೂಪಾಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥6॥**

ಭಾವಾರ್ಥ - ಮಹಾನವಮಿ ಉತ್ಸವಗಳಲ್ಲಿ ಜಿಂಕೆ, ಕುದುರೆ, ಸಿಂಹ, ಗರುಢ, ಹಂಸ, ಮದವೇರಿದ ಆನೆ, ಮಹಾ ವೃಷಭ ವಾಹಿನಿಯಾಗಿ ಸಂಭ್ರಮಿಸುವ, ಯಾವತ್ತೂ ಸಾಮರೂಪಿಣಿಯಾಗಿರುವ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಜ್ವಲತ್ಕಾಂತಿವಹ್ನಿಂ ಜಗನ್ಮೋಹನಾಂಗೀಂ ಭಜನ್ಮಾನಸಾಂಭೋಜಸುಭ್ರಾಂತಭೃಂಗೀಂ । ನಿಜಸ್ತೋತ್ರ ಸಂಗೀತ ನೃತ್ಯಪ್ರಭಾಂಗೀಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥7॥**

ಭಾವಾರ್ಥ - ಹೊಳೆಯುತ್ತಲಿರುವ ಅಗ್ನಿಯಂತೆ ಕಾಂತಿಯುಕ್ತಳಾಗಿ, ಭಜಕರ ಮನಸ್ಸೆಂಬ ತಾವರೆಯಲ್ಲಿ ಸುಳಿದಾಡುತ್ತಲಿರುವ ದುಂಬಿಯಾಗಿ, ತನ್ನ ಸ್ತುತಿಗಳ ಗಾಯನಕ್ಕೆ ನರ್ತಿಸುತ್ತಿರುವ ಮಿನುಗುವ ಶರೀರದ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

**ಭವಾಂಭೋಜನೇತ್ರಾಜಸಂಪೂಜ್ಯಮಾನಾಂ ಲಸನ್ಮಂದಹಾಸಪ್ರಭಾ ವಕ್ತ್ರ ಚಿನ್ಹಾಂ । ಚಲಚ್ಚಂಚಲಾಚಾರುತಾಟಂಕ ಕರ್ಣಾಂ ಭಜೇ ಶಾರದಾಂಬಾಮಜಸ್ರಂಮದಂಬಾಂ ॥8॥**

ಭಾವಾರ್ಥ - ಬ್ರಹ್ಮ-ವಿಷ್ಣು-ಮಹೇಶ್ವರಾದಿ ದೇವದೇವರ್ಕಳಿಂದ ಪೂಜಿಸಲ್ಪಡುತ್ತಳಿರುವ, ಮಂದಹಾಸದ ಮೊಗದಿಂದ ಶೋಭಿಸುತ್ತಿರುವ ಮನೋಹರವಾಗಿ ಓಲಾಡುತ್ತಲಿರುವ ಕರ್ಣಾಭರಣಗಳಿಂದ ಭೂಷಿತಳಾಗಿರುವ ನನ್ನ ಆರಾಧ್ಯ ತಾಯಿ ಶಾರದಾಂಬೆಯನ್ನು ನಾನು ಸದಾ ಭಜಿಸುತ್ತೇನೆ.

॥ ಇತಿ ಶ್ರೀ ಶಾರದಾ ಭುಜಂಗ ಪ್ರಯಾತಾಷ್ಟಕಂ ಸಂಪೂರ್ಣಂ ॥

## 5.14 ಶ್ರೀ ಶಾರದಾ ಸ್ತುತಿ ಸಪ್ತಕಂ

**ಯಾ ಮಾತಾ ಮಹಿತಾ ಮಹಾಜಲನಿಧೇರ್ಲಕ್ಷ್ಮೀತಿ ಸಂಗೀಯತೇ ಯಾ ಮಾತಾ ಮಹಿತಾ ಮಹಾಹಿಮಗಿರೇರ್ಗೌರೀತಿ ಚಾಖ್ಯಾಯತೇ । ಯಾ ವಾಣೀ ವಿಮಲಾ ವಿರಿಂಚಿಮುಖತೋ ನಿರ್ಗತ್ಯ ರಾರಾಜತೇ ಸಾ ಮಾಂ ರಕ್ಷತು ಶಾರದಾ ಸುಮತಿದಾ ಶ್ರೀ ರಾಮಚಂದ್ರಾತ್ಮಜಾ ॥1॥**

ಭಾವಾರ್ಥ - ಜಗನ್ಮಾತೆಯೆನಿಸಿರುವ ಯಾವ ಮಾತೆಯು ಪಾಲ್ಗಡಲ ತನಯೆಯಾಗಿ ಹುಟ್ಟಿ ಮಹಾಲಕ್ಷ್ಮಿಯೆಂದು ಕರೆಯಲ್ಪಟ್ಟಳೋ, ಜಗನ್ಮಾತೆಯೆನಿಸಿರುವ ಯಾವ ಮಾತೆಯು ಹಿಮವಂತನ ಪುತ್ರಿಯಾಗಿ ಹುಟ್ಟಿ ಮಹಾಗೌರಿ ಎಂಬುದಾಗಿ ತಿಳಿಸಲ್ಪಟ್ಟಳೋ, ಚತುರ್ಮುಖ ಬ್ರಹ್ಮನ ಮುಖದಿಂದ ಪವಿತ್ರಳಾಗಿರುವ ಯಾವ ಸರಸ್ವತಿಯು ವೇದಸ್ವರೂಪದವಳಾಗಿ ಪ್ರಕಟವಾಗಿ ವಿರಾಜಮಾನಳಾಗಿರುವಳೋ, ಶ್ರೀರಾಮಚಂದ್ರನ ಆತ್ಮ ಸಂಭೂತೆಯಾಗಿ ಹುಟ್ಟಿ, ಜ್ಞಾನಗುಣವನ್ನು ಕರುಣಿಸುವವಳಾದ ಆ ಶಾರದೆಯು ನನ್ನನ್ನು ಪರಿಪಾಲಿಸಲಿ.

**ಯಾ ಲೀಲಾ ಸಹಚಾರಿಣೀ ನರಗುರೋಃ ಶ್ರೀರಾಮಕೃಷ್ಣಸ್ಯಯಾ ವಿಶ್ವೇಷಾಂ ಚ ದಿವೌಕಸಾಂ ಪ್ರಣಮತಾಮಿಷ್ಟಾರ್ಥಸಿದ್ಧಿಪ್ರದಾ । ಯಾಮಾರಾಧ್ಯ ಹಿ ಸರ್ವಯೋಗಿಮುನಯಃ ಪ್ರಾಪ್ತಾವಿಮುಕ್ತಿಂ ಸ್ಥಿರಾಂ ತಾಮಂಬಾಂ ನ ಉಪಾಸ್ಮಹೇ ತ್ರಿಜಗತಾಮೇಕಾಶ್ರಯಾಂ ಶಾರದಾಂ ॥2॥**

ಭಾವಾರ್ಥ - ಯಾವಾಕೆ ಜಗದ್ಗುರುವೆನಿಸಿದ ಶ್ರೀರಾಮಕೃಷ್ಣ ಪರಮಹಂಸರ ಲಹರಿಗಳಿಗೆ ನೆರವು ನೀಡುವವಳಾಗಿ ಅವತರಿಸಿದಳೋ, ಯಾವಾಕೆ ಬಾಗಿ ನಮಿಸುವ ಸಮಸ್ತ ದೇವರ್ಕಳಿಗೆ ಅವರವರ ಮನದಬಯಕೆಗಳನ್ನು ಈಡೇರಿಸುವಳೋ, ಯಾವಾಕೆಯನ್ನು ಆರಾಧಿಸಿ ಎಲ್ಲಾ ಮುನಿ ಯೋಗಿಗಳು ಸ್ಥಿರವಾ ಮೋಕ್ಷವನ್ನು ಪಡೆವರೋ, ಅಂತಹಾ ಮೂರ್ಲೋಕಂಗಳಿಗೂ ಅದ್ವಿತೀಯ ಆಶ್ರಯವಾಗಿರುವ ಶಾರದಾಮಾತೆಯನ್ನು ಸೇವೆಗೈಯುತ್ತೇನೆ.

**ಭವಾಗ್ನೌ ಸಂದಗ್ಧೈರ್ದುರಿತನಿಹತೈರ್ದುಃಖಭರಿತೈಃ ಹರೇರ್ಹೃತ್ಪದ್ಮಂ ಯದ್ಧ್ಯಹಹ ಮುಕುಲೀಭೂತಸುದಲಂ । ಧ್ರುವಂ ತತ್ವ್ರೀಡಾಯಾಸ್ತ್ರಿದಿವಮಧುಗಂಗೇವ ಗಲಿತಾ ದಯಾ ಯಾ ಮಾತಾಽಭೂದವತು ದಯಯಾ ಮಾಂ ಜಯತು ಸಾತಿ ॥3॥**

ಭಾವಾರ್ಥ - ಸಂಸಾರದ ಬೇಗೆಯಲ್ಲಿ ಬೆಂದು ಸಂಕಷ್ಟಗಳ ಹೊಡೆತಕ್ಕೆ ಸಿಲುಕಿ ದುಃಖಿಸುವವರನ್ನು ಗಮನಿಸಿದ ಮಹಾವಿಷ್ಣುವಿನ ಹೃತ್ಕಮಲವು "ಅಯ್ಯೋ" ಎಂದು ಮರೆಯಾಯಿತಂತೆ. ಇದನ್ನು ಹೋಗಲಾಡಿಸುವಿಕೆಗಾಗಿ ಸವಿಯಾಗಿರುವ ಜೇನಿನಂತೆ

ಮತ್ತು ಸ್ವರ್ಗಲೋಕದ ಗಂಗೆಯ ತರಹದ ಪಾವನಮಯವಾದ ಶ್ರೀಹರಿಯ ಕರುಣೆಯು ಶ್ರೀಶಾರದಾಮಾತೆಯರೂಪದಲ್ಲಿ ಪ್ರಕಟವಾಯಿತು. ಅಂತಹಾ ಶ್ರೀಮಾತೆ ಶಾರದೆಯು ನನ್ನನ್ನು ಕೃಪಾದೃಷ್ಟಿಯಿಂದ ಕಾಪಾಡುವಂತಹವಳಾಗಲಿ. ಆಕೆಗೆ ಜಯವು ದೊರಕಲಿ.

**ಶಾಖಾಪಲ್ಲವಪತ್ರಪುಷ್ಪಭರಿತಃ ಕಶ್ಚಿನ್ಮಹಾವಿದ್ರುಮಃ ಛಾಯಾಂ ಯಚ್ಛತಿ ಶೀತಲಾಮತಿಹಿತಾಂ ಪೌಷ್ಪಂ ಚ ವರ್ಷಂ ಸುಖಂ । ಆತ್ಮಾ ನಂ ನನು ವೃಶ್ಚತೇಽಪಿ ಸ ಯಥಾ ಮಾತಾ ತಥಾ ಪೀಡನಂ ಬಂಧೂನಾಂ ಸತತಂ ಕುಶಿಷ್ಯಚರಿತಂ ಸೋಢ್ವಾ ವರಾನ್ಯಚ್ಛತಿ ॥4॥**

ಭಾವಾರ್ಥ - ಎಲೆ, ಚಿಗುರು, ರೆಂಬೆ, ಪುಷ್ಪಗಳಿಂದ ತುಂಬಿ ಹೋಗಿರುವ ಮಹಾವೃಕ್ಷವು ತನ್ನನ್ನು ತುಂಡರಿಸುವವನಿಗೆ ಸಹಾ ತಂಪಾದ ಹಾಗೂ ಹೆಚ್ಚು ಕ್ಷೇಮದಾಯಕವಾಗುವ ನೆರಳನ್ನು ಒದಗಿಸುವುದಲ್ಲದೆ ಅವನ ಮೇಲೆ ಸೌಖ್ಯವನ್ನೊದಗಿಸುವ ಪುಷ್ಪಗಳ ಮಳೆಗರೆಯುವಂತೆ, ಆ ಶ್ರೀಮಾತೆಯು ಕೂಡಾ ತನ್ನ ಬಂಧುಗಳ ಮತ್ತು ಕೆಟ್ಟ ಶಿಷ್ಯರ ಹಿಂಸೆಗಳನ್ನು ನಿತ್ಯವೂ ಸಹಿಸಿಕೊಂಡು ಅವರಿಗೆ ಅನುಗ್ರಹವನ್ನು ಮಾಡುವಳು.

**ಸರ್ವವೇದಶಾಸ್ತ್ರಶಿಲ್ಪಸಾರಬೋಧದಾಯಿನೀಂ**
**ಶರ್ವಧಾತೃವಿಷ್ಣುರೂಪಸರ್ವದೇವವಿಗ್ರಹಾಂ ।**
**ಸರ್ವಲೋಕಸರ್ವಜೀವಸರ್ವಭೂತಧಾರಿಣೀಂ ಸರ್ವತಾಪಹಾರಿಣೀಂ ಸದಾ ನಮಾಮಿ ಶಾರದಾಂ ॥5॥**

ಭಾವಾರ್ಥ - ಸಮಸ್ತ ವೇದ ಶಾಸ್ತ್ರಗಳ ಮತ್ತು ಶಿಲ್ಪ ಶಾಸ್ತ್ರಾದಿ ಮತ್ತಿತರ ಜ್ಞಾನಗಳ ಸಾರವನ್ನು ಅನುಗ್ರಹಿಸುವ, ಹರಿ ಹರ ಬ್ರಹ್ಮಾದಿ ಸಮಸ್ತ ದೇವತಾ ಸ್ವರೂಪಿಯಾಗಿರುವ, ಸಮಗ್ರ ಲೋಕಗಳ ಜೀವಿಗಳ ಹಾಗೂ ಭೂತಗಳಿಗಾಧಾರವಾಗಿರುವ ಹಾಗೂ ಸಮಸ್ತ ಬೇಗುದಿಗಳನ್ನು ನಿವಾರಿಸುವ ಆ ಶಾರದಾ ಮಾತೆಗೆ ನಾನು ಅನವರತ ನಮಿಸುವೆನು.

**ಪರದೋಷಾನನ್ವೇಷ್ಟುಂ ಯಚ್ಛೀಲಂ ತವ ಸೂನೋ ತದ್ವಿತ್ವಾ ಪರಮೇಶೇ ಭಕ್ತಿಂ ವ್ಯೈ ಕುರು ಸತತಂ । ಇತ್ಯುಕ್ತ್ವಾ ಮೃತಿಕಾಲೇ ಪರಮೇಶಂ ಪ್ರಾಪ್ತಾ ಯಾ ಸಾಽಪಾಯಾತ್ ಪಾಯಾನ್ಮಾಂ ಮೃತಿಭೀತಂ ಸುಖದಾಸಂ ॥6॥**

ಭಾವಾರ್ಥ - ಮಗನೇ! ಇತರರಲ್ಲಿ ದೋಷಗಳನ್ನು ಶೋಧನೆ ಮಾಡುವ ನಿನ್ನ ಅಭ್ಯಾಸವನ್ನು ತ್ಯಜಿಸಿ ಭಗವಂತನಾದ ಪರಮೇಶ್ವರನಲ್ಲಿ ಭಕ್ತಿಯುಳ್ಳವನಾಗು ಎಂದು ತನ್ನ ಅವಸಾನಕಾಲದಲ್ಲಿ ಉಪದೇಶಮಾಡಿ ಭಗವಂತನಲ್ಲಿ ನೆಲೆಯಾದ ಆಕೆ ಮರಣ ಭೀತಿಗೊಳಗಾದ ಮತ್ತು ಪ್ರಾಪಂಚಿಕ ಸೌಖ್ಯಗಳಿಗೆ ದಾಸನಾಗಿರುವ ನನ್ನನ್ನು ಸರ್ವದಾ ಅಪಾಯಗಳಿಂದ ರಕ್ಷಿಸಲಿ.

**ಮಾತಾ ಮೇ ಪರಮಾ ಶಕ್ತಿಃ ಶಾರದೇತಿ ಪ್ರಥಾಂ ಗತಾ । ಸ್ಥಿತೇ ಚೈವಂ ಜನೇರ್ಮೃತ್ಯೋಃ ಸ್ಸಂಕಷ್ಟಾನ್ಮೇ ಭಯಂ ಕುತಃ ॥7॥**

ಭಾವಾರ್ಥ - ಶಾರದೆಯೆಂದು ಪ್ರಸಿದ್ಧಿ ಪಡೆದಿರುವ ಆ ಪರಾಶಕ್ತಿಯು ನನ್ನ ಜನನಿಯಾಗಿರಲು ನನಗೆ ಹುಟ್ಟು-ಸಾವುಗಳೆನ್ನುವ ಆಪತ್ತುಗಳ ಭೀತಿಯು ಎಂದಿಗೂ ಬರಲಾರದು.

॥ ಇತಿ ಶ್ರೀ ಶಾರದಾ ಸ್ತುತಿ ಸಪ್ತಕಂ ಸಂಪೂರ್ಣಂ ॥

## 5.15 ಶ್ರೀ ಭವಾನೀ ಅಷ್ಟಕಂ

**ನ ತಾತೋ ನ ಮಾತಾ ನ ಬಂಧುರ್ನ ದಾತಾ ನ ಪುತ್ರೋ ನ ಪುತ್ರೀ ನ ಭೃತ್ಯೋ ನ ಭರ್ತಾ । ನ ಜಾಯಾ ನ ವಿದ್ಯಾ ನ ವೃತ್ತಿರ್ಮಮೈವ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥1॥**

ಭಾವಾರ್ಥ - ಅಮ್ಮಾ!ಹೇ ಭವಾನೀ, ನನಗೆತಂದೆಯಿಲ್ಲ, ತಾಯಿಯಿಲ್ಲ, ಬಂಧುವಿಲ್ಲ, ಬಳಗವಿಲ್ಲ, ಕೊಡುವವನಿಲ್ಲ, ಮಗನಿಲ್ಲ, ಮಗಳಿಲ್ಲ, ಪತಿಯಿಲ್ಲ, ಸತಿಯಿಲ್ಲ, ವಿದ್ಯೆಯಿಲ್ಲ, ಬುದ್ಧಿಯಿಲ್ಲ, ನನ್ನದೆಂಬ ವೃತ್ತಿಯಿಲ್ಲ, ನೀನೊಬ್ಬಳೇ ಗತಿಯೆನಗೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ಭವಾಬ್ಧಾವಪಾರೇ ಮಹಾದುಃಖಭೀರುಃ ಪಪಾತ ಪ್ರಕಾಮಿ ಪ್ರಲೋಭೀ ಪ್ರಮತ್ತಃ । ಕುಸಂಸಾರಪಾಶಪ್ರಬದ್ಧಃ ಸದಾಹಂ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥2॥**

ಭಾವಾರ್ಥ - ಅನಂತವಾಗಿರುವ ಈ ಭವ ಸಾಗರದಲ್ಲಿ ಮಹಾದುಃಖಗಳ ಭೀತಿಗೊಳಪಟ್ಟು ಸಿಲುಕಿಕೊಂಡಿರುವೆನು. ಕಾಮುಕ, ಜಿಪುಣ, ಕರ್ತವ್ಯ ಭ್ರಷ್ಟನು ನಾನಾಗಿರುವೆ. ಹೇ! ಭವಾನಿಯೇ, ಸಂಸಾರಬಂದನದೊಳಗೆ ಯಾವಾಗಲೂ ಸುತ್ತುವರಿಯಲ್ಪಟ್ಟಿರುವ ನನಗೆ ನೀನೊಬ್ಬಳೇ ಗತಿಯಾಗಿರುವೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ನ ಜಾನಾಮಿ ದಾನಂ ನ ಚ ಧ್ಯಾನಯೋಗಂ ನ ಜಾನಾಮಿ ತಂತ್ರಂ ನ ಚ ಸ್ತೋತ್ರಮಂತ್ರಂ । ನ ಜಾನಾಮಿ ಪೂಜಾಂ ನ ಚ ನ್ಯಾಸಯೋಗಂ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥3॥**

ಭಾವಾರ್ಥ - ದಾನವೆಂಬುದೇನೆಂಬುದ ನಾನರಿಯೆನು ತಾಯೇ, ಧ್ಯಾನಯೋಗದ ಬಗ್ಗೆಯಾಗಲೀ, ತಂತ್ರ ಸ್ತೋತ್ರಗಳ ಬಗೆಗಾಗಲೀ ನನಗೆ ಅರಿವಿಲ್ಲ. ಮಂತ್ರಗಳ ಬಗೆಗಿನ ಜ್ಞಾನವೇ ಎನಗಿಲ್ಲ. ಪೂಜಾ ನ್ಯಾಸಯೋಗಗಳೇನೆಂಬುದೇ ನನಗೆ ತಿಳಿಯದು. ಅಮ್ಮಾ, ಭವಾನಿಯೇ, ನೀನೊಬ್ಬಳೇ ಗತಿಯೆನಗೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ನ ಜಾನಾಮಿ ಪುಣ್ಯಂ ನ ಜಾನಾಮಿ ತೀರ್ಥಂ ನ ಜಾನಾಮಿ ಮುಕ್ತಿಂ ಲಯಂ ವಾ ಕದಾಚಿತ್ । ನ ಜಾನಾಮಿ ಭಕ್ತಿಂ ವ್ರತಂ ವಾಪಿ ಮಾತ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥4॥**

ಭಾವಾರ್ಥ - ಪುಣ್ಯದ ಬಗ್ಗೆ ನನಗೆ ತಿಳಿಯದು. ತೀರ್ಥಗಳ ಬಗ್ಗೆ ನನಗೆ ಗೊತ್ತೇ ಇಲ್ಲಾ. ಮುಕ್ತಿಯ ಜ್ಞಾನವೆನಗಿನಿತಿಲ್ಲ. ಲಯದ ಕುರಿತಾಗಿಯೂ ಜ್ಞಾನವಿಲ್ಲ. ಭಕ್ತಿಯಾಗಲೀ ವ್ರತದ ಕುರಿತಾಗಿಯಾಗಲೀ ನನಗೆ ತಿಳಿಯದು. ನಾನು ನಂಬಿರುವುದು ಇಷ್ಟೇ ತಾಯೇ, ನೀನೊಬ್ಬಳೇ ಗತಿಯೆನಗೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ಕುಕರ್ಮೀ ಕುಸಂಗೀ ಕುಬುದ್ಧಿಃ ಕುದಾಸಂ ಕುಲಾಚಾರಹೀನಃ ಕದಾಚಾರಲೀನಃ । ಕುದೃಷ್ಟಿಃ ಕುವಾಕ್ಯಪ್ರಬಂಧಃ ಸದಾಸ್ಹಂ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥5॥**

ಭಾವಾರ್ಥ - ದುಷ್ಟ ಕಾರ್ಯಗಳನ್ನು ಮಾಡಿದವನು ನಾನು. ದುರ್ಜನ ಸಂಘದಲ್ಲಿಯೇ ಯಾವಾಗಲೂ ಇದ್ದವನು ನಾನು. ದುರ್ಬುದ್ಧಿಯವರ ಸೇವೆಗೈದವನು ನಾನು. ನಾನೆಂದೂ ಆಚಾರಗಳಲ್ಲಿ ಮಗ್ನನಾದವನಲ್ಲ. ಎಲ್ಲರನ್ನೂ ತುಚ್ಛವಾಗಿ ಕಂಡವನು ನಾನು. ದುರ್ವಚನಗಳ ಪ್ರಯೋಗದಲ್ಲಿ ನಿರತನಾಗಿದ್ದವನು ನಾನು. ಹೀಗಿರುತ್ತಾ ಭವಾನಿ ತಾಯಿಯೇ ನೀನೊಬ್ಬಳೇ ಗತಿಯೆನಗೆ, ನನ್ನನ್ನು ಕ್ಷಮಿಸು ಅಮ್ಮಾ. ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ಪ್ರಜೇಶಂ ರಮೇಶಂ ಮಹೇಶಂ ಸುರೇಶಂ ದಿನೇಶಂ ನಿಶೀಥೇಶ್ವರಂ ವಾ ಕದಾಚಿತ್ । ನ ಜಾನಾಮಿ ಚಾನ್ಯತ್ ಸದಾಸ್ಹಂ ಶರಣ್ಯೇ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥6॥**

ಭಾವಾರ್ಥ - ಹೇ! ಭವಾನೀ, ಪ್ರಜಾಪತಿ ಬ್ರಹ್ಮನಾಗಲೀ, ರಮಾಕಾಂತ ವಿಷ್ಣುವಾಗಲೀ, ಲಯಕರ್ತ ಶಿವನಾಗಲೀ, ಅಮರೇಶ ಇಂದ್ರನಾಗಲೀ, ಸೂರ್ಯ-ಚಂದ್ರರಾಗಲೀ ನನಗೆ ಎಂದಿಗೂ ತಿಳಿಯದು. ಹಾಗಾಗಿ ನಾನು ನಿನಗೆ ಶರಣು ಬಂದಿರುವೆ. ನೀನೊಬ್ಬಳೇ ಗತಿಯೆನಗೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ವಿವಾದೇ ವಿಷಾದೇ ಪ್ರಮಾದೇ ಪ್ರವಾಸೇ ಜಲೇ ಚಾನಲೇ ಪರ್ವತೇ ಶತ್ರುಮಧ್ಯೇ । ಅರಣ್ಯೇ ಶರಣ್ಯೇ ಸದಾ ಮಾ ಪ್ರಪಾಹಿ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥7॥**

ಭಾವಾರ್ಥ - ತಾಯಿ ಭವಾನಿಯೇ, ಶರಣು ಬಂದಿರುವ ನನ್ನನ್ನು ವಿವಾದಾತೀತನನ್ನಾಗಿಸು. ದುಃಖದ ಕಾಲದಲ್ಲಿ, ಪ್ರಮಾದಗಳುಂಟಾದಾಗ, ಪ್ರವಾಸದ ಸಮಯದಲ್ಲಿ, ಜಲ, ಅಗ್ನಿ, ಪರ್ವತ ಪ್ರದೇಶಗಳಲ್ಲಿ ನಾನಿರುವಾಗ ನೀನೇ ನನ್ನನ್ನು

ಕಾಪಾಡುವವಳು. ಅಮ್ಮಾ, ನೀನೊಬ್ಬಳೇ ಗತಿಯೆನಗೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

**ಅನಾಥೋ ದರಿದ್ರೋ ಜರಾರೋಗಯುಕ್ತೋ ಮಹಾಕ್ಷೀಣದೀನಃ ಸದಾ ಜಾಡ್ಯವಕ್ತ್ರಃ । ವಿಪತ್ತೌ ಪ್ರವಿಷ್ಟಃ ಪ್ರನಷ್ಟಃ ಸದಾಸ್ಹಂ ಗತಿಸ್ತ್ವಂ ಗತಿಸ್ತ್ವಂ ತ್ವಮೇಕಾ ಭವಾನೀ ॥8॥**

ಭಾವಾರ್ಥ - ಅಮ್ಮಾ ನಾನು ಯಾವತ್ತೂ ಅನಾಥನೇ ಆಗಿರುವೆ. ದರಿದ್ರನೂ ನಾನಾಗಿದ್ದೇನೆ. ಮುಪ್ಪು ಬೇನೆಗಳಿಗೆ ಸಿಲುಕಿದವನು. ಅತ್ಯಂತ ದೀನನು ನಾನು. ನಾನು ಆಲಸ್ಯನು. ಶಕ್ತಿಹೀನನು. ವಿಪತ್ತುಗಳು ಸದಾ ನನ್ನಲ್ಲಿ ಒಳಹೊಕ್ಕಿಕೊಂಡಿವೆ. ಇದರಿಂದಾಗಿ ನಷ್ಟದಲ್ಲಿ ನಾನು ಮುಳುಗಿ ಹೋಗಿರುವೆನು. ತಾಯಿ ಭವಾನೀ, ನೀನೋಬ್ಬಳೇ ಗತಿಯೆನಗೆ, ಹೇ! ಭವಾನಿಯೇ ನನಗೆ ಏಕ ಮಾತ್ರ ದಿಕ್ಕು ನೀನಾಗಿರುವೆ. ತಾಯಿಯೇ ನಿನಗೆ ಸದಾ ನನ್ನ ಪ್ರಣಾಮಗಳು.

॥ ಇತಿ ಶ್ರೀ ಭವಾನೀ ಅಷ್ಟಕಂ ಸಂಪೂರ್ಣಂ ॥

## 5.16 ದೇವ್ಯಪರಾಧಕ್ಷಮಾಪಣ ಸ್ತೋತ್ರಂ

**ನ ಮಂತ್ರಂ ನೋ ಯಂತ್ರಂ ತದಪಿ ಚ ನ ಜಾನೇ ಸ್ತುತಿಮಹೋ ನ ಚಾಹ್ವಾನಂ ಧ್ಯಾನಂ ತದಪಿ ಚ ನ ಜಾನೇ ಸ್ತುತಿಕಥಾಃ । ನ ಜಾನೇ ಮುದ್ರಾಸ್ತೇ ತದಪಿ ಚ ನ ಜಾನೇ ವಿಲಪನಂ ಪರಂ ಜಾನೇ ಮಾತಸ್ತ್ವದನುಸರಣಂ ಕ್ಲೇಶಹರಣಂ ॥1॥**

ಭಾವಾರ್ಥ - ಅಮ್ಮಾ! ನನಗೆ ನಿನ್ನ ಮಂತ್ರವಾಗಲೀ ಯಂತ್ರವಾಗಲೀ ಸ್ತುತಿಯಾಗಲೀ ತಿಳಿದಿಲ್ಲ. ತಾಯೀ, ನನಗೆ ನಿನ್ನನ್ನು ಆಹ್ವಾನಿಸಲಾಗಲೀ ಧ್ಯಾನಿಸಲಾಗಲೀ ಸ್ತುತಿಕಥೆಗಳಾಗಲೀ ಗೊತ್ತಿರುವುದಿಲ್ಲ. ನಿನ್ನ ಮುದ್ರೆಯನ್ನೂ ನಾನರಿಯೆನು. ನಿನ್ನ ಎದುರು ಮೊರೆಯಿಡಲೂ ನಾನರಿಯೆ. ಆದರೆ ಅಮ್ಮಾ, ನನಗೆ ಇಷ್ಟು ಮಾತ್ರಾ ಅರಿವಿದೆ, ನಿನ್ನನ್ನು ಹಿಂಬಾಲಿಸಿದರೆ ನನ್ನ ಸಂಕಟಗಳೆಲ್ಲವೂ ನಾಶವಾಗುತ್ತವೆ.

**ವಿಧೇರಜ್ಞಾನೇನ ದ್ರವಿಣವಿರಹೇಣಾಲಸತಯಾ ವಿಧೇಯಾಶಕ್ಯತ್ವಾತ್ತವ ಚರಣಯೋರ್ಯಾ ಚ್ಯುತಿರಭೂತ್ । ತದೇತತ್ ಕ್ಷಂತವ್ಯಂ ಜನನಿ ಸಕಲೋದ್ಧಾರಿಣಿ ಶಿವೇ ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥2॥**

ಭಾವಾರ್ಥ - ಹೇ! ತಾಯೀ, ವಿಧಿಯ ಆಟದಿಂದಲೂ, ನನ್ನ ಬಡತನದಿಂದಲೂ ಜಡತ್ವದಿಂದಲೂ, ಹಾಗೇಯೇ, ನಿನಗೆ ವಿಧೇಯನಾಗಿರಲು ಶಕ್ಯನಾಗದಿರುವುದರಿಂದಲೂ, ನಿನ್ನ ಅಡಿದಾವರೆಗಳ ಸೇವೆಯಿಂದ ಹೊರದೂಡಲ್ಪಟ್ಟಿರುವೆನು, ಹೇ ಅಮ್ಮಾ, ಸಕಲೋದ್ಧಾರಿಣಿ ತಾಯಿ ಶಿವೇ, ನೀನು ನನ್ನ ಸರ್ವಾಪರಾಧಗಳನ್ನು ಕ್ಷಮಿಸು. ಅಮ್ಮಾ, ಲೋಕದಲ್ಲಿ ದುಷ್ಟ ಮಗನು ಹುಟ್ಟಬಹುದು, ಆದರೆ ದುಷ್ಟ ತಾಯಿಯು ಎಲ್ಲಿಯೂ ಕಾಣಲು ಸಿಗಲಾರದು.

**ಪೃಥಿವ್ಯಾಂ ಪುತ್ರಾಸ್ತೇ ಜನನಿ ಬಹವಃ ಸಂತಿ ಸರಲಾಃ ಪರಂ ತೇಷಾಂ ಮಧ್ಯೇ ವಿರಲತರಲೋಽಹಂ ತವ ಸುತಃ । ಮದೀಯೋಽಯಂ ತ್ಯಾಗಃ ಸುಮುಚಿತಮಿದಂ ತವ ಶಿವೇ ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥3॥**

ಭಾವಾರ್ಥ - ಅಮ್ಮಾ! ಈ ಭೂಮಂಡಲದಲ್ಲಿ ಪುಣ್ಯ ಪುರುಷರೆನಿಸಿದ ಅದೆಷ್ಟೋ ಮಕ್ಕಳು ನಿನಗಿರುವರು. ಅವರುಗಳ ನಡುವೆ ಈ ನಿನ್ನ ಮಗನಾಗಿರುವ ನಾನು ಕೇವಲ ಅತ್ಯಲ್ಪನೆನಿಸಿದವನು. ಹೇ! ಶುಭದಾಯಕಿಯಾಗಿರುವ ಶಿವೇ, ನಿನ್ನ ಬಿಟ್ಟು ನಾನಿರುವದು ಸರಿಯೆನಿಸಬಹುದು. ಆದರೆ ನನ್ನನ್ನು ನೀನು ತ್ಯಜಿಸಿರುವುದು ಉಚಿತವಲ್ಲ. ಏಕೆಂದರೆ ಜಗತ್ತಿನಲ್ಲಿ ಕೆಟ್ಟ ಮಗನು ಹುಟ್ಟಲೂ ಬಹುದು. ಆದರೆ ಕಿಂಚಿತ್ತಾದರೂ ಕೆಟ್ಟವಳಾಗಿರುವ ತಾಯಿಯು ಎಲ್ಲಿಯೂ ಕಾಣಸಿಗಲಾರಳು.

**ಜಗನ್ಮಾತರ್ಮಾತಸ್ತವ ಚರಣ ಸೇವಾ ನ ರಚಿತಾ ನ ವಾ ದತ್ತಂ ದೇವಿ ದ್ರವಿಣಮಪಿ ಭೂಯಸ್ತವ ಮಯಾ । ತಥಾಽಪಿ ತ್ವಂ ಸ್ನೇಹಂ ಮಯಿ ನಿರುಪಮಂ ಯತ್ಕುರುಷೇ ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥4॥**

ಭಾವಾರ್ಥ - ಹೇ! ಜಗದಂಬೆಯೇ, ಅಮ್ಮಾ! ನಾನು ಎಂದೂ ನಿನ್ನ ಚರಣ ಸೇವೆ ಗೈದವನಲ್ಲ. ಅಥವಾ ನಿನಗಾಗಿ ಬಹಳಷ್ಟು ಸಂಪತ್ತನ್ನು ದಾನ ಮಾಡಿದವನೂ

ಅಲ್ಲ. ಆದಾಗ್ಯೂ ನಿನಗೆ ನನ್ನಲ್ಲಿ ಇರುವ ಸರಿಸಾಟಿಯಿಲ್ಲದ ಪ್ರೇಮವದು ಅನುಪಮವಾದುದು. ಏಕೆಂದರೆ ಜಗತ್ತಿನಲ್ಲಿ ಕೆಟ್ಟ ಮಗನು ಹುಟ್ಟಲೂ ಬಹುದು. ಆದರೆ ಕಿಂಚಿತ್ತಾದರೂ ಕೆಟ್ಟವಳಾಗಿರುವ ತಾಯಿಯು ಎಲ್ಲಿಯೂ ಕಾಣಸಿಗಲಾರಳು.

**ಪರಿತ್ಯಕ್ತ್ವಾ ದೇವಾನ್ ವಿವಿಧವಿಧಿಸೇವಾಕುಲತಯಾ**
**ಮಯಾಪಂಚಾಶೀತೇರಧಿಕಮಪನೀತೇತು ವಯಸಿ । ಇದಾನೀಂ ಮೇ ಮಾತಸ್ತವ ಯದಿ**
**ಕೃಪಾ ನಾಪಿ ಭವಿತಾ ನಿರಾಲಂಬೋ ಲಂಬೋದರಜನನಿ ಕಂ ಯಾಮಿ ಶರಣಂ ॥5॥**

ಭಾವಾರ್ಥ - ಎಲೈ ಗಜಮುಖನ ಮಾತೆಯೇ! ಪೂಜಾದಿಗಳ ವಿಧಿ ನಿಯಮಗಳ ನಾನರಿಯೆ. ಆದ ಕಾರಣ ವಿವಿಧ ದೇವತೆಗಳ ಅರ್ಚನೆಯನ್ನು ನಾನು ಪರಿತ್ಯಜಿಸಿರುವೆ. ನಗೀಗಾಗಲೇ ಎಪ್ಪತ್ತೈದಕ್ಕೂ ಅಧಿಕ ವಯಸ್ಸು ಕಳೆಯಿತು. ಅಮ್ಮಾ, ತಾಯಿಯೇ, ಇನ್ನಾದರೂ ನೀನು ನನ್ನಲ್ಲಿ ಕರುಣೆದೋರದಿದ್ದರೆ ನಿರಾಶ್ರಿತನಾದ ನಾನು ಆರಲ್ಲಿ ಮೊರೆಯಿಟ್ಟು ಶರಣಾಗಲಿ?

**ಶ್ವಪಾಕೋ ಜಲ್ಪಾಕೋ ಭವತಿ ಮಧುಪಾಕೋಪಮಗಿರಾ ನಿರಾತಂಕೋ ರಂಕೋ**
**ವಿಹರತಿ ಚಿರಂ ಕೋಟಿಕನಕೈಃ । ತವಾಪರ್ಣೇ ಕರ್ಣೇ ವಿಶತಿ ಮನುವರ್ಣೇ ಫಲಮಿದಂ**
**ಜನಃ ಕೋ ಜಾನೀತೇ ಜನನಿ ಜಪನೀಯಂ ಜಪವಿಧೌ ॥6॥**

ಭಾವಾರ್ಥ - ಅಮ್ಮಾ ಅಪರ್ಣೇ! ನಿನ್ನ ಅಮೃತಮಯ ಸುಮಧುರ ಮಂತ್ರಾಕ್ಷರಗಳು ಕಿವಿಯೊಳಗೆ ಹೊಕ್ಕ ಮಾತ್ರದಲ್ಲಿ ಚಂಡಾಲನು ಕೂಡಾ ಜೇನಿನಂತಹಾ ಸುಮಧುರ ವಾಣಿಗಳನು ಹೊಂದುವನು. ದಟ್ಟ ದರಿದ್ರನೂ ಕುಭೇರ ಸದೃಶನಾಗಿ ಯಾವುದೇ ಆತಂಕಗಳ ಗೊಡವೆಯಿಲ್ಲದೆ ಬಹುಕಾಲ ಸಂಚರಿಸುವನು. ಹೀಗಿರುವಾಗ ಅಮ್ಮಾ, ವಿಧಿವತ್ತಾಗಿ ನಿನ್ನ ಜಪಾನುಷ್ಠಾನ ನಿರತನಿಗೆ ಎಂಥಾ ಫಲ ದೊರಕಬಹುದು ಎಂಬುದನ್ನಾರು ಹೇಳಲು ಸಾಧ್ಯ?

**ಚಿತಾಭಸ್ಮಾ ಲೇಪೋ ಗರಲಮಶನಂ ದಿಕ್ಪಟಧರೋ ಜಟಾಧಾರೀಕಂಠೇ**
**ಭುಜಗಪತಿಹಾರೀ ಪಶುಪತಿಃ । ಕಪಾಲೀ ಭೂತೇಶೋ ಭಜತಿ ಜಗದೀಶೈಕಪದವೀಂ**
**ಭವಾನೀ ತ್ವತ್ ಪಾಣಿಗ್ರಹಣಪರಿಪಾಟೀ ಫಲಮಿದಂ ॥7॥**

ಭಾವಾರ್ಥ - ಚಿತಾಗಾರದ ಭಸ್ಮವನ್ನು ಶರೀರಕ್ಕೆ ಲೇಪಿಸಿಕೊಂಡವನೂ, ವಿಷವನ್ನೇ ಕುಡಿದವನೂ, ಬೆತ್ತಲೆಯ ಮೈಯವನೂ, ಜಟೆಯನ್ನು ಧರಿಸಿಕೊಂಡವನೂ, ಕಂಠದಲ್ಲಿ ಉರಗವನ್ನು ಹಾರವಾಗಿ ಧರಿಸಿದವನೂ, ಹಸ್ತದಲ್ಲಿ ತಲೆ ಬುರುಡೆಯನ್ನು ಹಿಡಿದು ಕೊಂಡಿರುವವನೂ, ಪಶುಗಳ ಒಡೆಯನೂ ಆಗಿರುವ ಭೂತಾದಿಗಳ ಮಧ್ಯ ವಾಸಿಸುವ ಶಿವನು ಅದ್ವಿತೀಯವಾಗಿರುವಂತಹಾ ಜಗದೀಶ್ವರನ ಪದವಿಯನ್ನು ಹೊಂದಿರುವುದು ನಿನ್ನ ಪಾಣಿಗ್ರಹಣದ ಫಲದಿಂದ ಸಾಧ್ಯವಾಯಿತು.

**ನ ಮೋಕ್ಷಸ್ಯಾಕಾಂಕ್ಷಾ ನ ಚ ವಿಭವವಾಂಛಾಽಪಿ ಚ ನ ಮೇ ನ ವಿಜ್ಞಾನಾಪೇಕ್ಷಾ ಶಶಿಮುಖಿ ಸುಖೇಚ್ಛಾಽಪಿ ನ ಪುನಃ । ಅತಸ್ತ್ವಾಂ ಸಂಯಾಚೇ ಜನನಿ ಜನನಂ ಯಾತು ಮಮ ವೈ ಮೃಡಾನೀ ರುದ್ರಾಣೀ ಶಿವ ಶಿವ ಭವಾನೀತಿ ಜಪತಃ ॥8॥**

ಭಾವಾರ್ಥ - ಹೇ ಮಾತೆ ಚಂದ್ರವದನೇ! ನನಗೆ ಮೋಕ್ಷದ ಆಶೆಯಿಲ್ಲ. ಧನ ಸಂಪತ್ತುಗಳ ಬಯಕೆಯಿಲ್ಲ. ಸಂಸಾರ ವೈಭವದ ಇಚ್ಛೆಯಿಲ್ಲ. ಜ್ಞಾನಾಪೇಕ್ಷೆಯಾಗಲೀ ಸುಖದ ಅಭಿಲಾಷೆಯಾಗಲೀ ಇಲ್ಲ. ಆದ್ದರಿಂದ ಹೇ ತಾಯಿಯೇ, ನಾನು ನಿನ್ನನ್ನು ಬೇಡಿಕೊಳ್ಳುವುದಿಷ್ಟೇ, ಮೃಡಾನಿ. ರುದ್ರಾಣಿ, ಶಿವ, ಶಿವಾ, ಭವಾನೀ, ಎಂದು ಜಪಿಸುತ್ತಾ ನನ್ನ ಜನ್ಮವೆಲ್ಲವೂ ಕಳೆದುಹೋಗಲಿ.

**ನಾರಾಧಿತಾಽಸಿ ವಿಧಿನಾ ವಿವಿಧೋಪಚಾರೈಃ ಕಿಂ ರುಕ್ಷ ಚಿಂತನಪರೈರ್ನ ಕೃತಂ ವಚೋಭಿಃ । ಶ್ಯಾಮೇ ತ್ವಮೇವ ಯದಿ ಕಿಂಚನ ಮಯ್ಯನಾಥೇ ಧತ್ಸೇ ಕೃಪಾಮುಚಿತಮಂಬ ಪರಂ ತವೈವ ॥9॥**

ಭಾವಾರ್ಥ - ಹೇ ಮಾತೇಯೇ! ನಾನೆಂದೂ ವಿಧ ವಿಧವಾದ ಉಪಚಾರಗಳಿಂದ ನಿನ್ನನ್ನು ಅರ್ಚಿಸಿಲ್ಲ. ನೀರಸವಾದ ಚಿಂತನೆಗಳಲ್ಲಿ ತತ್ಪರನಾಗಿ ಕಾಲವನ್ನು ಕಳೆದು ಸಲ್ಲದ ಕರ್ಮಗಳನ್ನು ಮಾಡಿದೆನು. ಆದಾಗ್ಯೂ ದಿಕ್ಕಿಲ್ಲದ ನನ್ನಲ್ಲಿ ನೀನು ಇನಿತಾದರೂ ಕೃಪೆ ಮಾಡಿರುವೆ. ಅದು ನಿನಗೆ ತಕ್ಕದ್ದೇ ಆಗಿದೆ ಏಕೆಂದರೆ ನೀನು ನನ್ನ ಪೊರೆಯುವ ತಾಯಿಯಾಗಿರುವೆ.

**ಆಪತ್ಸು ಮಗ್ನಃ ಸ್ಮರಣಂ ತ್ವದೀಯಂ ಕರೋಮಿ ದುರ್ಗೇ ಕರುಣಾರ್ಣವೇಶಿ ।**
**ನೈತಚ್ಛಠತ್ವಂ ಮಮ ಭಾವಯೇಥಾಃ ಕ್ಷುಧಾತೃಷಾರ್ತಾ ಜನನೀ ಸ್ಮರಂತಿ ॥10॥**

ಭಾವಾರ್ಥ - ಅಮ್ಮಾ ದುರ್ಗಾಮಾತೆಯೇ! ಕರುಣಾಪೂರ್ಣೆಯೇ, ಈಶ್ವರೀ, ಆಪತ್ತಿನಲ್ಲಿ ಮುಳುಗಿ ನಿನ್ನನ್ನು ಸ್ಮರಿಸುತ್ತಿದ್ದೇನೆ. ಇದನ್ನು ಸಟೆಯೆಂದಾಗಲೀ, ಮೋಸವೆಂದಾಗಲೀ ಭಾವಿಸದಿರು ಅಮ್ಮಾ! ಏಕೆಂದರೆ ಹಸಿವು ಬಾಯಾರಿದಾಗ ಮಾತ್ರಾ ಮಕ್ಕಳು ತಾಯಿಗಾಗಿ ಹಂಬಲಿಸುತ್ತಾರೆಯಲ್ಲವೇ?

**ಜಗದಂಬ ವಿಚಿತ್ರಮತ್ರ ಕಿಂ ಪರಿಪೂರ್ಣಾ ಕರುಣಾಸ್ತಿ ಚೇನ್ಮಯಿ ।**
**ಅಪರಾಧಪರಂಪರಾವೃತಂ ನ ಹಿ ಮಾತಾ ಸಮುಪೇಕ್ಷತೇ ಸುತಂ ॥11॥**

ಭಾವಾರ್ಥ - ಹೇ! ಜಗಜ್ಜನನಿ ತಾಯಿಯೇ, ನೀನು ನನ್ನ ಬಗ್ಗೆ ಸಂಪೂರ್ಣ ಕರುಣಾಪೂರ್ಣೆಯಾಗಿದ್ದಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಸಹಸ್ರಾಪರಾಧಗಳನ್ನು ಮಾಡಿದರೂ ಮಾತೆಯು ಎಂದಿಗೂ ಮಗನನ್ನು ಉಪೇಕ್ಷಿಸುವುದಿಲ್ಲ.

**ಮತ್ಸಮಃ ಪಾತಕೀ ನಾಸ್ತಿ ಪಾಪಘ್ನೀ ತ್ವತ್ಸಮಾ ನ ಹಿ । ಏವಂ ಜ್ಞಾತ್ವಾ ಮಹಾದೇವಿ ಯಥಾ ಯೋಗ್ಯಂ ತಥಾ ಕುರು ॥12॥**

ಭಾವಾರ್ಥ - ಹೇ! ಜಗದೋದ್ಧಾರಿಣಿ ತಾಯೇ! ಮಹಾದೇವೀ, ನನ್ನಂತಹಾ ಪಾಪಿಷ್ಟ ಇನ್ನೊಬ್ಬನಿಲ್ಲ. ನಿನ್ನಂತಹಾ ಪಾಪನಾಶಕಳೂ ಬೇರೊಬ್ಬರಿಲ್ಲ. ಆದ ಕಾರಣ ಅಮ್ಮಾ, ತಾಯೀ, ಇದನ್ನು ಅರಿತವಳಾಗಿರುವ ನೀನು ಯಾವುದು ಉಚಿತವೆನಿಸುವುದೋ ಅದನ್ನೇ ನನಗೆ ಅನುಗ್ರಹಿಸು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ದೇವ್ಯಪರಾಧಕ್ಷಮಾಪಣ ಸ್ತೋತ್ರಂ ಸಂಪೂರ್ಣಂ ॥

## 5.17 ಶ್ರೀ ತುಲಸೀ ವಂದನಂ

**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ । ವಾಸುದೇವಾದಯೋ ದೇವಾ ವಸಂತಿ ತುಲಸೀವನೇ ॥1॥**

ಭಾವಾರ್ಥ - ಪುಷ್ಕರಾದಿ ಪವಿತ್ರ ತೀರ್ಥಗಳು, ಗಂಗೆಯೇ ಮೊದಲಾದಿಯಾದ ಪಾವನ ನದಿಗಳು, ಹಾಗೂ ಶ್ರೀಹರಿಯೇ ಮೊದಲಾದ ಪೂಜನೀಯದೇವತೆಗಳು ತುಲಸೀವನಗಳಲ್ಲಿ ನೆಲೆಸಿರುತ್ತಾರೆ.

**ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ । ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥2॥**

ಭಾವಾರ್ಥ - ತುಲಸಿಯು ಪುಷ್ಕಳವಾಗಿರುವಲ್ಲಿ, ಕಮಲಗಳು ಬಹುವಾಗಿ ಇರುವಲ್ಲಿ, ವೈಷ್ಣವರು ಹೆಚ್ಚಾಗಿ ವಾಸಿಸುವಲ್ಲಿ ಮಹಾವಿಷ್ಣುವಿನ ದಿವ್ಯ ಸಾನ್ನಿದ್ಧ್ಯವಿದೆ.

**ಯನ್ಮೂಲೇ ಸರ್ವ ತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ । ಯದಗ್ರೇ ಸರ್ವ ವೇದಾಶ್ಚ ತುಲಸಿ ತ್ವಾಂ ನಮಾಮ್ಯಹಂ ।3॥**

ಭಾವಾರ್ಥ - ಯಾರ ತಳಬಾಗದಲ್ಲಿ ಎಲ್ಲ ಪವಿತ್ರ ತೀರ್ಥಗಳಿವೆಯೋ ಯಾರ ಮಧ್ಯದಲ್ಲಿ ಸರ್ವ ದೇವತೆಗಳಿದ್ದಾರೆಯೋ, ಯಾರ ತುದಿಯಲ್ಲಿ ಸಮಸ್ತ ವೇದಗಳು ನೆಲೆಗೊಂಡಿವೆಯೋ ಅಂತಹಾ ತುಲಸಿಯೇ ನಿನಗೆ ನಾನು ನಮಸ್ಕರಿಸುತ್ತೇನೆ.

**ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ । ಕ್ಷೀರೋದ ಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಂ ॥4॥**

ಭಾವಾರ್ಥ - ತುಲಸಿ ಮಾತೆಯೇ ಪ್ರಸನ್ನಳಾಗು. ಹರಿವಲ್ಲಭೆಯೇ ಪ್ರಸನ್ನಳಾಗು. ಕ್ಷೀರಮಥನಕಾಲದಲ್ಲಿ ಉದ್ಭವಿಸಿದವಳೇ ಪ್ರಸನ್ನಳಾಗು. ತುಲಸಿ ಮಾತೆಯೇ ನಿನಗಿದೋ ನಾನು ನಮಸ್ಕರಿಸುವೆ.

**ನಮಸ್ತುಲಸಿ ಕಲ್ಯಾಣಿ ನಮೋ ವಿಷ್ಣುಪ್ರಿಯೇ ಶುಭೇ । ನಮೋ ಮೋಕ್ಷಪ್ರದೇ ದೇವಿ ನಮಃ ಸಂಪತ್ ಪ್ರದಾಯಿನಿ ॥5॥**

ಭಾವರ್ಥಃ- ಮಂಗಲದಾಯಿನಿಯಾದ ತುಲಸಿಯೇ ನಮಸ್ಕರಿಸುವೆ. ಶುಭದಾಯಕಳಾಗಿರುವ ಹರಿಪ್ರಿಯಳೇ ನನ್ನ ನಮನಗಳು. ಮುಕ್ತಿಪ್ರದಾಯಕ ದೇವಿಯೇ ನಿನಗೆ ನನ್ನ ಪ್ರಣಾಮಗಳು. ಸಂಪದವನ್ನೀವ ತಾಯಿಯೇ ನಿನಗೆ ನನ್ನ ನಮನಗಳು.

**ತುಲಸಿ ಶ್ರೀ ಸಖಿ ಶುಭೇ ಪಾಪಹಾರಿಣಿ ಪುಣ್ಯದೇ । ನಮಸ್ತೇ ನಾರದನುತೇ ನಾರಾಯಣ ಮನಃಪ್ರಿಯೇ ॥6॥**

ಭಾವಾರ್ಥ - ಹೇ! ತುಲಸಿದೇವಿಯೇ, ಲಕ್ಷ್ಮೀ ದೇವಿಯ ಸ್ನೇಹಿತೆಯೇ, ಒಳಿತು ಕೆಡುಕುಗಳನ್ನು ನಿವಾರಿಸುವವಳೇ, ಪುಣ್ಯವನ್ನು ಕರುಣಿಸುವವಳೇ, ನಾರದನಿಂದ ಸ್ತುತಿಸಲ್ಪಡುವವಳೇ, ಶ್ರೀಮನ್ನಾರಾಯಣನ ಮನೋವಲ್ಲಭೆಯೇ ನಿನಗೆ ಇದೋ ನನ್ನ ನಮನಗಳು.

**ಯಾ ದೃಷ್ಟ್ವಾ ನಿಖಿಲಾಘ ಸಂಘ ಶಮನೀ ಸ್ಪೃಷ್ಟ್ವಾವಪುಃಪಾವನೀ ರೋಗಾಣಾಮಭಿವಂದತಾ ನಿರಸನೀ ಸಿಕ್ತಾಂತಕ ತ್ರಾಸಿನೀ । ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥7॥**

ಭಾವಾರ್ಥ - ಹೇ ತುಲಸಿ ಮಾತೆಯೇ! ಕಂಡ ಮಾತ್ರದಲ್ಲೇ ಎಲ್ಲಾ ದೋಷಗಳ ಸಮೂಹವನ್ನೇ ಪರಿಹರಿಹರಿಸುವ ಮಹಾಶಕ್ತಿದಾಯಿನಿಯಾಗಿ, ಮುಟ್ಟಿದ ಮಾತ್ರದಿಂದಲೇ ದೇಹವನ್ನು ಪವಿತ್ರಗೊಳಿಸುವ ಪಾವನಮಯಿಯಾಗಿ, ನಮಸ್ಕರಿಸಿದ ಮಾತ್ರದಿಂದಲೇ ಸಮಸ್ತ ರೋಗಗಳನ್ನು ನಿವಾರಿಸುವ ಮಹಿಮಾನ್ವಿತೆಯಾಗಿ, ನೀರೆರೆದು ಪೋಷಿಸಿದಲ್ಲಿ ಯಮನನ್ನು ಬೆದರಿಸುವವಳಾಗಿ, ನೆಟ್ಟು ಬೆಳೆಸಿದರೆ ಭಗವಂತನಾಗಿರುವ ಶ್ರೀಕೃಷ್ಣನಲ್ಲಿ ಭಕ್ತಿಯನ್ನು ಉಂಟು ಮಾಡುವವಳಾಗಿ, ಆರಾಧ್ಯ ದೇವರ ಚರಣಾರವಿಂದಗಳಿಗರ್ಪಿಸಿದಾಗ ಮೋಕ್ಷಪ್ರದಾಯಕಿಯಾಗುವ ಮಹಾತಾಯಿ ತುಳಸಿಯೇ ನಿನಗಿದೋ ಪ್ರಣಾಮಗಳು.

॥ ಇತಿ ಶ್ರೀತುಲಸೀ ವಂದನಂ ಸಂಪೂರ್ಣಂ ॥

## 5.18 ಶ್ರೀ ತುಲಸೀ ಸ್ತೋತ್ರಂ

**ಜಗದ್ಧಾತ್ರಿ ನಮಸ್ತುಭ್ಯಂ ವಿಷ್ಣೋಶ್ಚ ಪ್ರಿಯವಲ್ಲಭೇ । ಯತೋ ಬ್ರಹ್ಮಾದಯೋದೇವಾಃ ಸೃಷ್ಟಿಸ್ಥಿತ್ಯಂತಕಾರಿಣಃ ॥1॥**

ಭಾವಾರ್ಥ - ವಿಷ್ಣುವಿನ ಪ್ರಿಯಕರಳಾಗಿ ಬ್ರಹ್ಮಾಂಡವನ್ನು ಧರಿಸಿರುವ ಮಾತೆಯೇ ನಿನಗೆ ನಮಸ್ಕರಿಸುವೆ. ನಿನ್ನಿಂದಲೇ ಬ್ರಹ್ಮನೇ ಮೊದಲಾದ ದೇವಾನುದೇವತೆಗಳು ಸೃಷ್ಟಿ, ಪಾಲನೆ, ಮತ್ತು ಲಯಕಾರ್ಯಗಳನ್ನು ನಿರ್ವಹಿಸುವ ಶಕ್ತಿಯುಳ್ಳವರಾದರು.

**ನಮಸ್ತುಲಸಿ ಕಲ್ಯಾಣೀ ನಮೋವಿಷ್ಣು ಪ್ರಿಯೇಶುಭೇ । ನಮೋಮೋಕ್ಷ ಪ್ರದೇದೇವಿ ನಮಃ ಸಂಪತ್ಪ್ರದಾಯಿಕೆ ॥2॥**

ಭಾವಾರ್ಥ - ಶುಭವನ್ನು ಕರುಣಿಸುವ ತುಲಸಿಯೇ ನಿನಗೆ ನಾನು ನಮಸ್ಕರಿಸುವೆ. ಅನುಗ್ರಹದಾಯಕಿ ವಿಷ್ಣು ಪ್ರಿಯಳೇ, ನಿನಗೆ ನನ್ನ ನಮಸ್ಕಾರ. ಮೋಕ್ಷಪ್ರದಾಯಿನಿಯೂ ಸಂಪತ್ಪ್ರದಾಯಿಕೆಯೂ ಆಗಿರುವ ನಿನಗಿದೋ ನಮನಗಳು.

**ತುಲಸೀಪಾತು ಮಾಂ ನಿತ್ಯಂ ಸರ್ವಾಪದ್ಭ್ಯೋಽಪಿ ಸರ್ವದಾ । ಕೀರ್ತಿತಾಪಿ ಸ್ಮೃತಾ ವಾಪಿ ಪವಿತ್ರಯತಿ ಮಾನವಂ ॥3॥**

ಭಾವಾರ್ಥ - ಹೇ ತುಲಸಿ ಮಾತೆಯೇ!ನಮ್ಮನ್ನು ಎಲ್ಲಾ ಆಪತ್ತುಗಳಿಂದಲೂ ಪ್ರತಿನಿತ್ಯವೂ ಪ್ರತಿಕ್ಷಣವೂ ರಕ್ಷಿಸು. ನಿನ್ನನ್ನು ಸ್ತುತಿಸಲಿ ಯಾ ಸ್ಮರಿಸಲಿ ಅಂತಹವರನ್ನು ನೀನು ಪಾವನಗೊಳಿಸುವೆ.

**ನಮಾಮಿ ಶಿರಸಾದೇವೀ ತುಲಸೀ ವಿಲಸತ್ತನುಂ । ಯಾಂ ದೃಷ್ಟ್ವಾ ಪಾಪಿನೋ ಮರ್ತ್ಯಾ ಮುಚ್ಯಂತೇ ಸರ್ವ ಕಿಲ್ಬಿಷಾತ್ ॥4॥**

ಭಾವಾರ್ಥ - ಮಾತೆ ತುಲಸಿಯೇ! ನಿನ್ನ ಚೆಲುವಾದ ಶರೀರಕ್ಕೆ ಶಿರಬಾಗಿ ನಮಸ್ಕರಿಸುವೆ ನಿನ್ನ ದರ್ಶನ ಮಾಡುವ ಭುವಿಯಲ್ಲಿನ ಪಾಪಿಗಳು ಸಮಸ್ತ ಪಾಪಗಳಿಂದ ಮುಕ್ತರಾಗುವರು.

**ತುಲಸ್ಯಾಂರಕ್ಷಿತಂ ಸರ್ವಂ ಜಗದೇತಚ್ಚರಾಚರಂ । ಯಾ ವಿನಿರ್ಹಂತಿ ಪಾಪಾನಿ ದೃಷ್ಟ್ವಾ ವಾಂ ಪಾಪಿಭಿರ್ನರೈಃ ॥5॥**

ಭಾವಾರ್ಥ - ಯಾವಾಕೆಯನ್ನು ನೋಡಿದ ಮಾತ್ರದಲ್ಲಿ ಪಾಪಿಗಳಾಗಿರುವ ಜನರು ತಮ್ಮ ಪಾಪಗಳಿಂದ ಮುಕ್ತರಾಗುವರೋ ಅಂತಹಾ ತುಲಸಿದೇವಿಯು ಈ ಜಗತ್ತೆಲ್ಲವನ್ನು ರಕ್ಷಿಸುವಳು.

**ನಮಸ್ತುಲಸ್ಯತಿತರಾಂ ಯಸ್ಯೈ ಬದ್ಧಾ ಬಲಿಂಕಲೌ । ಕಲಯಂತಿ ಸುಖಂ ಸರ್ವಂ ಸ್ತ್ರೀಯೋ ವೈಶ್ಯಾಸ್ತಥಾಪರೇ ॥6॥**

ಭಾವಾರ್ಥ - ತುಲಸೀ ದೇವಿಗೆ ನಮಸ್ಕರಿಸಿದರೆ ಸ್ತ್ರೀಯರು ಮತ್ತು ವೈಶ್ಯರು ಹಾಗೆಯೇ ಉಳಿದವರೆಲ್ಲರೂ ಕಲಿಯುಗದ ಎಲ್ಲಾ ಬಂಧನಗಳಿಂದ ಬಿಡುಗಡೆ ಹೊಂದಿ ಸುಖವನ್ನು ಅನುಭವಿಸುವವರಾಗುವರು.

**ತುಲಸ್ಯಾ ನಾಪರಂ ಕಿಂಚಿದ್ದೈವತಂ ಜಗತೀತಲೇ । ಯಯಾ ಪವಿತ್ರಿತೋಲೋಕೋ ವಿಷ್ಣು ಸಂಗೇನ ವೈಷ್ಣವಃ ॥7॥**

ಭಾವಾರ್ಥ - ಯಾವಾಕೆಯಿಂದ ಜಗತ್ತು ಪಾವನವಾಗಿ ವಿಷ್ಣುವಿನೊಂದಿಗೆ ವಿಷ್ಣುಮಯವಾಗುವುದೋ ಅಂತಹಾ ಮತ್ತೊಂದು ದೇವತಾಶಕ್ತಿಯು ತುಲಸಿಯ ಹೊರತಾಗಿ ಜಗತ್ತಿನಲ್ಲಿ ಇನ್ನಾವುದೂ ಇಲ್ಲ.

**ತುಲಸ್ಯಾಃ ಪಲ್ಲವಂ ವಿಷ್ಣೋಃ ಶಿರಸ್ಯಾರೋಪಿತಂ ಕಲೌ । ಆರೋಪ ಯತಿ ಸರ್ವಾಣಿ ಶ್ರೇಯಾಂಸಿ ವರಮಸ್ತಕೇ ॥8॥**

ಭಾವಾರ್ಥ - ಈ ಕಲಿಕಾಲದಲ್ಲಿ ತುಲಸಿಯ ದಳವನ್ನು ವಿಷ್ಣುವಿನ ಶಿರಸ್ಸಿನ ಮೇಲೆ ಏರಿಸುವವರು ಸಮಸ್ತ ಕೀರ್ತಿಯನ್ನೂ ಆತನಿಗೆ ಅರ್ಪಿಸಿದ ಫಲಾನುಭವಿಗಳೆನಿಸುವರು.

**ತುಲಸ್ಯಾಂ ಸಕಲಾ ದೇವಾ ವಸಂತಿ ಸತತಂ ಯತಃ ।**
**ಅತಸ್ತಾಮರ್ಚಯೇಲ್ಲೋಕೇಸರ್ವಾನ್ ದೇವಾನ್ ಸಮರ್ಚಯನ್ ॥9॥**

ಭಾವಾರ್ಥ - ಯಾವ ನಿಮಿತ್ತವಾಗಿ ಎಲ್ಲಾ ದೇವಾನುದೇವತೆಯರು ತುಲಸಿಯಲ್ಲಿ ಶಾಶ್ವತವಾಗಿ ನೆಲೆಯಾಗಿರುವರೋ ಅಂತಹಾ ಕಾರಣಕ್ಕಾಗಿ ಆಕೆಯನ್ನು ಆರಾಧಿಸಿದರೆ ಸಮಸ್ತ ದೇವಾನುದೇವತೆಯರನ್ನು ಆರಾಧಿಸಿದಂತಾಗುವುದು.

**ನಮಸ್ತುಲಸಿ ಸರ್ವಜ್ಞೆ ಪುರುಷೋತ್ತಮವಲ್ಲಭೆ । ಪಾಹಿಮಾಂ ಸರ್ವ ಪಾಪೇಭ್ಯಃ ಸರ್ವ ಸಂಪತ್ಪ್ರದಾಯಿಕೆ ॥10॥**

ಭಾವಾರ್ಥ - ಸಮಸ್ತವನ್ನರಿತವಳಾದ ಸರ್ವ ಸಂಪತ್ಪ್ರದಾಯಕಳಾಗಿರುವ ಪುರುಷೋತ್ತಮನ ಸತಿಯಾಗಿರುವ ದೇವಿ ತುಲಸಿಯೇ, ನಿನಗೆ ನನ್ನ ನಮನಗಳು. ನನ್ನನ್ನು ಸರ್ವ ಪಾಪಗಳಿಂದ ವಿಮುಕ್ತಗೊಳಿಸುವವಳಾಗು.

**ಇತಿ ಸ್ತೋತ್ರಂ ಪುರಾಗೀತಂ ಪುಂಡರೀಕೇಣ ಧೀಮತಾ । ವಿಷ್ಣುಮರ್ಚಯತಾ ನಿತ್ಯಂ ಶೋಭನೈಸ್ತುಲಸೀ ದಲೈಃ ॥11॥**

ಭಾವಾರ್ಥ - ಅನುದಿನವೂ ಮಂಗಲಕರವಾಗಿರುವ ತುಲಸೀ ದಳಗಳಿಂದ ಪೂಜಿಸುವಂತಹಾ ವಿವೇಕಯುತನಾಗಿರುವ ಪುಂಡರೀಕನೆಂಬವನಿಂದ ಪ್ರಥಮವಾಗಿ ಈ ತೆರನಾಗಿ ಸ್ತೋತ್ರ ಮುಖೇನ ಹಾಡಲ್ಪಟ್ಟಿತು.

**ತುಲಸೀ ಶ್ರೀ ಮಹಾಲಕ್ಷ್ಮೀರ್ವಿದ್ಯಾವಿದ್ಯಾ ಯಶಸ್ವಿನಿ । ಧರ್ಮ್ಯಾಧರ್ಮಾನನಾ ದೇವೀ ದೇವದೇವ ಮನಃಪ್ರಿಯಾ ॥12॥**

ಭಾವಾರ್ಥ - ತುಲಸಿಯು ಶ್ರೀಮಹಾಲಕ್ಷ್ಮಿಯೇ ತಾನಾಗಿದ್ದಾಳೆ. ಅವಳು ವಿದ್ಯೆ, ಅವಿದ್ಯೆಗಳಿಗೆ ಕಾರಣಳು. ಯಶಸ್ಸನ್ನು ಕರುಣಿಸುವವಳು. ಧರ್ಮದ ಮೊಗವನ್ನು ಹೊಂದಿರುವವಳು. ದೇವರ ದೇವ ತಾನಾಗಿರುವ ಮಹಾವಿಷ್ಣುವಿನ ಮನಸ್ಸಿಗೆ ಮೆಚ್ಚಿಗೆಯಾದವಳು.

**ಲಕ್ಷ್ಮೀ ಪ್ರಿಯಸಖೀದೇವೀದ್ಯೌರ್ಭೂಮಿರಚಲಾ ಚಲಾ । ಷೋಡಶೈತಾನಿ ನಾಮಾನಿ ತುಲಸ್ಯಾಃ ಕೀರ್ತಯೇನ್ನರಃ ॥13॥**

ಭಾವಾರ್ಥ - ಲಕ್ಷ್ಮೀ, ಪ್ರಿಯಾ, ಸಖಿ, ದೇವಿ, ಸ್ವರ್ಗ, ಭೂಮಿ, ಅಚಲೆ, ಚಲೆ, ಎಂಬಿತ್ಯಾದಿ ಹದಿನಾರು ನಾಮಗಳಿಂದ ಮಾನವನು ತುಲಸಿಯನ್ನು ಸ್ತುತಿಸಬೇಕು.

**ಲಭತೆ ಸುತರಾಂ ಭಕ್ತಿಮಂತ್ಯೇ ವಿಷ್ಣುಪದಂ ಲಭೇತ್ । ತುಲಸೀ ಭೂರ್ಮಹಾಲಕ್ಷ್ಮೀಃ ಪದ್ಮಿನಿ ಹರಿಪ್ರಿಯಾ ॥14॥**

ಭಾವಾರ್ಥ - ಕಿಂಚಿತ್ ಶ್ರದ್ಧಾಭಕ್ತಿ ತುಲಸಿದೇವಿಯ ವಿಚಾರವಾಗಿ ಹೊಂದಿದ್ದಲ್ಲಿ ಅಂತ್ಯದಲ್ಲಿ ವಿಷ್ಣುಪದವು ಲಭಿಸುವುದು.

**ತುಲಸಿ ಶ್ರೀ ಸಖಿ ಶುಭೆ ಪಾಪಹಾರಿಣಿ ಪುಣ್ಯದೆ । ನಮಸ್ತೆ ನಾರದನುತೆ ನಾರಾಯಣ ಮನಃಪ್ರಿಯೆ ॥15॥**

ಭಾವಾರ್ಥ - ತುಲಸಿ, ಮಹಾಲಕ್ಷ್ಮೀ, ಪದ್ಮಿನಿ, ಶ್ರೀಹರಿಪ್ರಿಯಾ, ಶ್ರೀ, ಸಖಿ, ಶುಭೆ, ಪಾಪಹಾರಿಣಿ, ಪುಣ್ಯದೆ, ನಾರದನುತೆ, ನಾರಾಯಣ ಮನಃಪ್ರಿಯೆ ಎಂಬ ವಿವಿಧ ಹೆಸರುಗಳಿಂದ ಸ್ತುತಿಸಲ್ಪಡುವವಳೇ ನಿನಗಿದೋ ನನ್ನ ನಮನಗಳು.

॥ ಇತಿ ಶ್ರೀ ಪುಂಡರೀಕ ಕೃತಂ ತುಲಸೀ ಸ್ತೋತ್ರಂ ಸಂಪೂರ್ಣಂ ॥

## 5.19 ಶ್ರೀ ಮಹಾಲಕ್ಷ್ಮ್ಯಷ್ಟಕಂ

**ನಮಸ್ತೇಸ್ತು ಮಹಾಮಾಯೇ ಶ್ರೀಪೀಠೇ ಸುರಪೂಜಿತೇ ।**
**ಶಂಖಚಕ್ರಗದಾಹಸ್ತೇ ಮಹಾಲಕ್ಷ್ಮೀ ನಮೋಸ್ತುತೇ ॥1॥**

ಭಾವಾರ್ಥ - ಹೇ ಮಹಾಮಯಾರೂಪಿಣಿಯೇ! ಸೌಭಾಗ್ಯದ ಗದ್ದುಗೆಯ ಮೇಲೆ ವಿರಾಜಿಸುವವಳೇ, ದೇವಾನುದೇವತೆಗಳಿಂದ ಪೂಜಿಸಿಕೊಂಬವಳೇ, ನಿನಗೆ ನಮಸ್ಕರಿಸುವೆ. ಹೇ! ಶಂಖ, ಚಕ್ರ, ಗಧೆಗಳನ್ನು ಧರಿಸಿರುವಾಕೆಯೇ, ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ನಮಸ್ತೇ ಗರುಡಾರೂಢೇ ಕೋಲಾಸುರಭಯಂಕರಿ ।**
**ಸರ್ವಪಾಪಹರೇ ದೇವಿ ಮಹಾಲಕ್ಷ್ಮಿ ನಮೋಸ್ತುತೇ ॥2॥**

ಭಾವಾರ್ಥ - ಹೇ ದೇವಿ ಗರುಢ ವಾಹನೆಯೇ! ಕೋಲನೆಂಬರಕ್ಕಸನನ್ನು ನಾಶಗೊಳಿಸಿದವಳೇ, ನಿನಗಿದೋ ನಮಸ್ಕಾರಗಳು. ಎಲ್ಲಾ ಪಾಪಗಳನ್ನು ನಾಶ ಮಾಡುವ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ಸರ್ವಜ್ಞೇ ಸರ್ವವರದೇ ಸರ್ವದುಷ್ಟ ಭಯಂಕರಿ ।**
**ಸರ್ವ ದುಃಖಹರೇ ದೇವಿ ಮಹಾಲಕ್ಷ್ಮಿ ನಮೋಸ್ತುತೇ ॥3॥**

ಭಾವಾರ್ಥ - ಹೇ! ದೇವಿ, ಸಮಸ್ತವನ್ನೂ ಬಲ್ಲಾಕೆಯೇ, ಎಲ್ಲವನ್ನೂ ಅನುಗ್ರಹಿಸುವಾಕೆಯೇ, ದುಷ್ಟರಿಗೆ ಭಯಂಕರ ರೂಪಿಣಿಯೂದವಳೇ, ಸಮಸ್ತ ದುಃಖವನ್ನು ಪರಿಹರಿಸುವವಳೇ, ದೇವಿ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ಸಿದ್ಧಿ ಬುದ್ಧಿ ಪ್ರದೇ ದೇವಿ ಭುಕ್ತಿ ಮುಕ್ತಿ ಪ್ರದಾಯಿನಿ ।**
**ಮಂತ್ರಮೂರ್ತೇ ಸದಾ ದೇವೀ ಮಹಾಲಕ್ಷ್ಮಿ ನಮೋಸ್ತುತೇ ॥4॥**

ಭಾವಾರ್ಥ - ಹೇ ದೇವಿ, ಸಿದ್ಧಿ ಹಾಗೂ ಬುದ್ಧಿಗಳನ್ನು ಕರುಣಿಸುವವಳೇ, ಭೋಗ ಮತ್ತು ಮುಕ್ತಿಯನ್ನು ದಯಪಾಲಿಸುವಾಕೆಯೇ, ಮಂತ್ರಗಳಲ್ಲಿ ಅನುದಿನವೂ ನೆಲೆಸಿರುವವಳೇ, ದೇವಿ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ಆದ್ಯಂತರಹಿತೇ ದೇವಿ ಆದ್ಯಾಶಕ್ತಿ ಮಹೇಶ್ವರಿ ।**
**ಯೋಗಜೇ ಯೋಗ ಸಂಭೂತೇ ಮಹಾಲಕ್ಷ್ಮಿ ನಮೋಸ್ತುತೇ ॥5॥**

ಭಾವಾರ್ಥ - ಆದಿಯೂ ಅಂತ್ಯವೂ ಇಲ್ಲದಿರುವ ದೇವಿಯೇ, ಆದಿಶಕ್ತಿಯೇ, ಮಹೇಶ್ವರಿಯೇ, ಯೋಗವನ್ನು ಕರುಣಿಸುವಾಕೆಯೇ, ಯೋಗಮಾಯೆಯಿಂದ ಜನಿಸಿದಾಕೆಯೇ, ದೇವಿ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ಸ್ಥೂಲ ಸೂಕ್ಷ್ಮ ಮಹಾರೌದ್ರೇ ಮಹಾಶಕ್ತಿ ಮಹೋದರೇ ।**
**ಮಹಾಪಾಪಹರೇ ದೇವಿ ಮಹಾಲಕ್ಷ್ಮಿ ನಮೋಸ್ತುತೇ ॥6॥**

ಭಾವಾರ್ಥ - ಅಸಾಮಾನ್ಯಳೂ, ಸಾಮಾನ್ಯಳೂ, ಮಹಾರುದ್ರ ಸ್ವರೂಪಳೂ, ಮಹಾಶಕ್ತಿರೂಪಿಣಿಯೂ ಆಗಿರುವ ದೇವಿ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ಪದ್ಮಾಸನಸ್ಥಿತೇ ದೇವಿ ಪರಬ್ರಹ್ಮ ಸ್ವರೂಪಿಣಿ ।**
**ಪರಮೇಶಿ ಜಗನ್ಮಾತರ್ಮಹಾಲಕ್ಷ್ಮಿ ನಮೋಸ್ತುತೇ ॥7॥**

ಭಾವಾರ್ಥ - ಹೇ ದೇವಿ, ಕಮಲದ ಮೇಲೆ ಆರೂಢಳಾಗಿರುವಾಕೆಯೇ, ಪರಬ್ರಹ್ಮ ರೂಪಿಣಿಯೇ, ಪರಮೇಶ್ವರಿಯೇ, ಜಗತ್ತಿನ ತಾಯಿಯೇ, ದೇವಿ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

**ಶ್ವೇತಾಂಬರಧರೇ ದೇವಿ ನಾನಾಲಂಕಾರಭೂಷಿತೇ ।**
**ಜಗತ್ ಸ್ಥಿತೇ ಜಗನ್ಮಾತರ್ಮಹಾಲಕ್ಷ್ಮಿ ನಮೋಸ್ತುತೇ ॥8॥**

ಭಾವಾರ್ಥ - ಶುಭ್ರವಾಗಿರುವ ಬಿಳಿಯ ವಸ್ತ್ರವನ್ನು ಧರಿಸಿರುವಾಕೆಯೇ, ವಿವಿಧಾಲಂಕಾರಗಳಿಂದ ಶೋಭಿಸುತ್ತಿರುವಾಕೆಯೇ, ಜಗತ್ತಿಗೆ ಆಧಾರಶಕ್ತಿಯಾಗಿರುವಾಕೆಯೇ, ಜಗತ್ತಿನ ತಾಯಿ ಮಹಾಲಕ್ಷ್ಮಿಯೇ ನಿನಗೆ ನನ್ನ ನಮಸ್ಕಾರಗಳು.

॥ ಇತಿ ಶ್ರೀ ಮಹಾಲಕ್ಷ್ಮ್ಯಷ್ಟಕಂ ಸಂಪೂರ್ಣಂ ॥

## 5.20 ಕಲ್ಯಾಣವೃಷ್ಟಿಸ್ತವಃ

**ಕಲ್ಯಾಣವೃಷ್ಟಿಭಿರಿವಾಮೃತಪೂರಿತಾ ಭಿ । ರ್ಲಕ್ಷ್ಮೀಸ್ವಯಂವರಣಮಂಗಲದೀಪಿಕಾಭಿಃ ॥ ಸೇವಾಭಿರಂಬ ತವ ಪಾದಸರೋಜ ಮೂಲೇ । ನಾಕಾರಿ ಕಿಂ ಮನಸಿ ಭಾಗ್ಯವತಾಂ ಜನಾನಾಂ ॥1॥**

ಭಾವಾರ್ಥ - ಅಮೃತ ಗುಣ ಸಂಪನ್ನಳಾದ, ಮಂಗಳಕಾರಿಣಿ ವಿಷ್ಣು ಪತ್ನಿ ಲಕ್ಷ್ಮಿಯೇ, ನಿನ್ನ ಪಾದ ಕಮಲದ ಸೇವೆ ಮಾಡುವುದು ಜನರ ಎಂತಹ ಭಾಗ್ಯವು.

**ಏತಾವದೇವ ಜನನಿ ಸ್ಪೃಹಣೀಯಮಾಸ್ತೇ । ತ್ವದ್ವಂದನೇಷು ಸಲಿಲಸ್ಥಗಿತೇ ಚ ನೇತ್ರೇ ॥ ಸಾನ್ನಿಧ್ಯಮುದ್ಯದರುಣಾಯುತ ಸೋದರಸ್ಯ । ತ್ವದ್ವಿಗ್ರಹಸ್ಯ ಪರಯಾ ಸುಧಯಾ ಪ್ಲುತಸ್ಯ ॥2॥**

ಭಾವಾರ್ಥ - ಜಗದೇಕಮಾತೆ, ಅಶ್ರುಪೂರಿತ ನಯನಗಳಿಂದ ಸ್ಮರಣೀಯಳಾದ, ಅರುಣ ಪ್ರಭೆಯುಳ್ಳ ನಿನ್ನ ಸ್ವರೂಪದಿಂದ ನನಗೆ ಅಮೃತ ಸಿಂಚನವಾಗಿದೆ.

**ಈಶತ್ವನಾಮಕಲುಷಾಃ ಕತಿ ವಾ ನ ಸಂತಿ । ಬ್ರಹ್ಮಾದಯಃ ಪ್ರತಿಭವಂ ಪ್ರಲಯಾಭಿಭೂತಾಃ ॥ ಏಕಃ ಸ ಏವ ಜನನಿ ಸ್ಥಿರಸಿದ್ಧಿ ರಾಸ್ತೇ । ಯಃ ಪಾದ ಯೋಸ್ತವ ಸಕೃತ್ಪ್ರಣತಿಂ ಕರೋತಿ ॥3॥**

ಭಾವಾರ್ಥ - ಈಶತ್ವನಾಮವು ಎಂದಿಗೂ ಕಲ್ಮಷವಾಗುವುದಿಲ್ಲ। ಬ್ರಹ್ಮಾದಿಗಳಿಂದ ಪ್ರಳಯದಿಂದ ಮತ್ತೆ ಜಗತ್ತು ಸೃಷ್ಟಿಯಾದರೂ, ಆಗಲೂ ನೀನೇ ತಾಯಿಯು. ಇದು ಸಿದ್ಧಿಯಾಗಿರುತ್ತದೆ. ಅಂತಃ ನಿನ್ನ ಪಾದಗಳಿಗೆ ನಾನು ನಮಸ್ಕರಿಸುವೆನು.

**ಲಬ್ಧ್ವಾ ಸಕೃತ್ತ್ರಿಪುರಸುಂದರ ತಾವಕೀನಂ । ಕಾರುಣ್ಯಕಂದಲಿತಕಾಂತಿ ಭರಂ ಕಟಾಕ್ಷಂ ॥ ಕಂದರ್ಪ ಕೋಟಿ ಸುಭಾಗಸ್ತ್ವಯಿ ಭಕ್ತಿ ಭಾಜಃ । ಸಂಮೋಹಯಂತಿ ತರುಣೀರ್ಭುವನತ್ರಯೇಪಿ ॥4॥**

ಭಾವಾರ್ಥ - ನೀನು ತ್ರಿಪುರಸುಂದರಿಯು, ನಿನ್ನ ನೋಟದಲ್ಲಿ ಕಾರುಣ್ಯ, ಕಾಂತಿಗಳೆಲ್ಲವೂ ತುಂಬಿದೆ. ಕಂದರ್ಪಕೋಟಿ ಭಕ್ತರೆಲ್ಲರೂ ನಿನ್ನ ಭಕ್ತಿಗೆ ಪಾತ್ರರಾಗಿರುತ್ತಾರೆ, ನೀನು ಮುರು ಲೋಕಗಳನ್ನೂ ಸಂಮೋಹಗೊಳಿಸಿರುವೆ.

**ಹ್ರೀಂಕಾರಮೇವ ತವ ನಾಮ ಗೃಣಂತಿ ವೇದಾ । ಮಾತಸ್ತ್ರಿಕೋಣ ನಿಲಯೇ ತ್ರಿಪುರೇ ತ್ರಿನೇತ್ರೇ ॥ ತ್ವತ್ಸಂಸ್ಮೃತೌ ಯಮಭಟಾಭಿಭವಂ ವಿಹಾಯ । ದೀವ್ಯಂತಿ ನಂದನವನೇ ಸಹ ಲೋಕಪಾಲೈಃ ॥5॥**

ಭಾವಾರ್ಥ - ವೇದದಲ್ಲಿ ನಿನ್ನ ನಾಮವನ್ನು ಹ್ರೀಂ ಕಾರವೆಂದು ಗ್ರಹಿಸಲ್ಪಟ್ಟಿದೆ. ಮಾತೃ ತ್ರಿಕೋಣ ನಿಲಯದಲ್ಲಿರುವ ತ್ರಿಪುರೆ, ತ್ರೀನೇತ್ರೆ, ತ್ರಿನೇತ್ರೆ ನಿನ್ನನ್ನು

ನೆನೆಯುವುದರಿಂದ ಯಮ ಭಟರೂ ಕೂಡ ತ್ಯಜಿಸಿ, ನಿನ್ನ ನಂದನವನ ಲೋಕದಲ್ಲಿ ಪಾಲಿಸಲ್ಪಡುತ್ತಾರೆ.

**ಹಂತುಃ ಪುರಾಮಧಿಲಂ ಪರಿಪೀಯಮಾನಃ । ಕ್ರೂರಃ ಕಥಂ ನ ಭವತಾ ಗರಲಸ್ಯ ವೇಗಃ ॥ ನಾಶ್ವಾಸನಾಯ ಯದಿ ಮಾತರಿದಂ ತವಾರ್ಧಂ । ದೇಹಸ್ಯ ಶತ್ವದಮೃತಾಪ್ಲುತ ಶೀತಲಸ್ಯ ॥6॥**

ಭಾವಾರ್ಥ - ಕುಡಿಯಲ್ಪಟ್ಟ ಕ್ರೂರವಾದ ವಿಷದ ತಾಪವು ಎಲ್ಲಿ ಉಂಟಾಗುತ್ತದೆ? ಈಶ್ವರನ ಅಧಾಂಗಿಯಾದ ತಾಯಿ ನಿನ್ನ ಆಶ್ವಾಸನೆಯಿಂದ ವಿಷದ ಜ್ವಾಲೆಯು ಶೀತಲವಾಗುತ್ತದೆ.

**ಸರ್ವಜ್ಞತಾಂ ಸದಸಿ ವಾಕ್ಪಟುತಾಂ ಪ್ರಸುತೇ । ದೇವಿ ತ್ವದಂಘ್ರಿ ಸರಸೀರುಹಯೋಃ ಪ್ರಣಾಮಃ ॥ ಕಿಂ ಚ ಸ್ಫುರನ್ಮಕುಟಮುಜ್ಜ್ವಲಮಾತ ಪತ್ರಂ । ದ್ವೇ ಚಾಮರೇ ಚ ಮಹತೀಂ ವಸುದಾಂ ದದಾತಿ ॥7॥**

ಭಾವಾರ್ಥ - ತಾಯಿ, ನಿನ್ನ ಪಾದಕಮಲಗಳಲ್ಲಿ ನಮಿಸುವುದರಿಂದ ಸರ್ವಜ್ಞತೆಯುಂಟಾಗುತ್ತದೆ. ನಿನ್ನ ಕಿರೀಟ, ಚಾಮರದ ಸೊಲ್ಪ ಉಜ್ವಲ ಪ್ರಕಾಶದಿಂದ ಭಾಗ್ಯ ಲಭಿಸುತ್ತದೆ.

**ಕಲ್ಪದ್ರುಮೈರಭಿಮತ ಪ್ರತಿಪಾದನೇಷು । ಕಾರುಣ್ಯ ವಾರಿಧಿಭಿರಂಬ ಭವತ್ಕಟಾಕ್ಷೈಃ ॥ ಆಲೋಕಯ ತ್ರಿಪುರಸುಂದರಿ ಮಾಮನಾಥಂ । ತ್ವಯ್ಯೇವ ಭಕ್ತಿ ಭರಿತಂ ತ್ವಯಿ ಬದ್ಧತೃಷ್ಣಂ ॥8॥**

ಭಾವಾರ್ಥ - ತ್ರಿಪುರಸುಂದರೀ, ನಿನ್ನ ಕರುಣ್ಯ ಭವತ್ಕಟಾಕ್ಷದಿಂದ ನನ್ನನ್ನು ನೋಡು. ಕಲ್ಪಧೃಮವೂ ಇದನ್ನು ಪ್ರತಿಪಾದಿಸುತ್ತದೆ. ನಿನ್ನ ಭಕ್ತಿ ಹಂಬಲದಿಂದ ನಿನ್ನಲ್ಲಿ ಭಕ್ತಿ ನಿರತನಾದ ನನ್ನನ್ನು ನೋಡು.

**ಹಂತೇತರೇಷ್ವಪಿ ಮನಾಂಸಿ ನಿಧಾಯ ಚಾನ್ಯೇ । ಭಕ್ತಿಂ ವಹಂತಿ ಕಿಲ ಪಾಮರದೈವ ತೇಷು ॥ ತ್ವಾಮೇವ ದೇವಿ ಮನಸಾ ಸಮನುಸ್ಮರಾಮಿ । ತ್ವಾಮೇವ ನೌಮಿ ಶರಣಂ ಜನನಿ ತ್ವಮೇವ ॥9॥**

ಭಾವಾರ್ಥ - ಎಲ್ಲರೂ ನಿನ್ನಲ್ಲಿ ಭಕ್ತಿಯನ್ನು ತೋರುತ್ತಾರೆ। ನಿನ್ನನ್ನು ನಾನು ಮನಸಾ ಅನುಸರಿಸುತ್ತೇನೆ. ತಾಯಿ, ನಿನ್ನಲ್ಲಿ ಶರಣು ಹೋಗುತ್ತೇನೆ.

**ಲಕ್ಷ್ಮೇಷು ಸತ್ಸ್ವಪಿ ಕಟಾಕ್ಷ ನಿರೀಕ್ಷಣಾನಾ । ಮಾಲೋಕಯ ತ್ರಿಪುರಸುಂದರಿ ಮಾಂ ಕದಾಚಿತ್ ॥ ನೂನಂ ಮಯಾ ತು ಸದೃಶಃ ಕರುಣೈ ಕಪಾತ್ರಂ । ಜಾತೋ ಜನಿಷ್ಯತಿ ಜನೋನ ಚ ಜಾಯತೇ ವಾ ॥10॥**

ಭಾವಾರ್ಥ - ದೇವಿ, ನಿನ್ನ ಕರುಣಾಕಟಾಕ್ಷಕ್ಕಾಗಿ ನಿರೀಕ್ಷೆಯಲ್ಲಿರುವ ನನ್ನಲ್ಲಿ ಸ್ವಲ್ಪವಾದರೂ ಲಕ್ಷ್ಯವಿಟ್ಟು ನನ್ನನ್ನು ನೋಡು. ನನಗೆ ನೀನೇ ಕರುಣಾಪಾತ್ರಳು, ನೀನಲ್ಲದೆ ಬೇರೆಯಾರೂ ಗತಿ ಇರುವುದಿಲ್ಲ.

**ಹ್ರೀಂ ಹ್ರಿಮತಿ ಪ್ರತಿದಿನಂ ಜಪತಾಂ ತವಾಖ್ಯಾಂ । ಕಿಂ ನಾಮ ದುರ್ಲಭಮಿಹ ತ್ರಿಪುರಾಧಿವಾಸೇ ॥ ಮಾಲಾಕಿರೀಟ ಮದವಾರಣ ಮಾನನೀಯಾ । ತಾನ್ಸೇವತೇ ವಸುಮತೀ ಸ್ವಯಮೇವ ಲಕ್ಷ್ಮೀಃ ॥11॥**

ಭಾವಾರ್ಥ - ಹ್ರೀ ಹ್ರೀ ಎಂದು ನಿನ್ನನ್ನು ಪ್ರತಿನಿತ್ಯವೂ ಜಪಿಸುತ್ತೇನೆ, ನಿನ್ನ ನಾಮವು ಎಲ್ಲಿ ಲಭ್ಯವಿರುವುದಿಲ್ಲ? ಮಾಲೆ, ಕಿರೀಟ ಧರಿಸಿ ಮದಿಸಿದ ಆನೆಯಂತೆ ಇರುವ ನಿನ್ನನ್ನು ಸ್ವತಃ ವಸುಮತಿ ಲಕ್ಷ್ಮಿಯೇ ಸೇವಿಸುತ್ತಾಳೆ.

**ಸಂಪತ್ಕರಾಣಿ ಸಕಲೇಂದ್ರಿಯನಂದನಾನಿ । ಸಾಮ್ರಾಜ್ಯದಾನನಿರತಾನಿ ಸರೋರುಹಾಕ್ಷಿ ॥ ತ್ವದ್ವಂದನಾನಿ ದುರಿತಾಹರಣೋದ್ಯತಾನಿ । ಮಾಮೇವ ಮಾತುರನಿಶಂ ಕಲಯಂತು ನಾನ್ಯಂ ॥12॥**

ಭಾವಾರ್ಥ - ಸಂಪತ್ತನ್ನು ನೀಡುವ, ಆನಂದ ನೀಡುವ, ಸಾಮ್ರಾಜ್ಯ ದಾಯಕಿ, ಕಮಲನೇತ್ರೆಯಾದ ದುರಿತಗಳನ್ನು ನಿವಾರಿಸುವವಳಾದ ನೀನು ವಂದನೀಯಳು. ನೀನೇ ತಾಯಿಯೆಂದು ಸದಾ ತಿಳಿದಿರುತ್ತೇನೆ.

**ಕಲ್ಪೋಪಸಂಹೃತಿಷು ಕಲ್ಪಿತತಾಂಡವಸ್ಯ । ದೇವಸ್ಯ ಖಂಡಪರಶೋಃ ಪರಭೈರವಸ್ಯ ॥ ಪಾಶಾಂಕುಶೈಕ್ಷ ವಶರಾಸನ ಪುಷ್ಪಾ ಬಾಣಾ । ಸಾ ಸಾಕ್ಷಿಣೀ ವಿಜಯತೇ ತವ ಮೂರ್ತಿರೇಖಾ ॥13॥**

ಭಾವಾರ್ಥ - ತಾಂಡವದಿಂದ ಕಲ್ಪಸೃಷ್ಟಿಸುವ ದೈವ ಭೈರವನಿಗೆ ಪಾಶ, ಅಂಕುಶ ಪುಷ್ಪಬಾಣಪಿಡಿದು ಸಾಕ್ಷಿಯಾಗಿರುವ ನಿನ್ನ ರೂಪಕ್ಕೆ ವಿಜಯವಾಗಲಿ.

**ಲಗ್ನಂ ಸದಾ ಭವತು ಮಾತರಿದಂ ತವಾರ್ಧಂ । ತೇಜಃ ಪರಂ ಬಹುಲಕುಂಕುಮಪಂಕಶೋಣಂ ॥ ಭಾಸ್ವತ್ಕಿರೀಟಮಮೃತಾಂಶುಕಲಾವತಂಸಂ । ಮಧ್ಯೇ ತ್ರಿಕೋಣನಿಲಯಂ ಪರಮಾಮೃತಾರ್ದ್ರಂ ॥14॥**

ಭಾವಾರ್ಥ - ಶಿವನ ಅರ್ಧಾಂಗಿಯಾದ ತಾಯಿ, ಕುಂಕುಮಲೇಪಿತಳಾಗಿ, ತೇಜಸ್ಸಿನಿಂದ ಶೋಭಿಸುವ, ಕಿರೀಟ ಗಿಣಿಗಳಿಂದ ಶೋಭಿತಳಾದ, ತ್ರಿಕೋಣ ಮಧ್ಯದಲ್ಲಿ ವಾಸಿಸುವ ತಾಯಿ ಕಷ್ಟದಲ್ಲಿರುವವರಿಗೆ ಸದಾ ಶುಭ ಅಮೃತ ಪ್ರಾಯಳು.

**ಹ್ರೀಂಕಾರಮೇವ ತವ ನಾಮ ತದೇವ ರೂಪಂ । ತ್ವನ್ನಾಮ ದುರ್ಲಭಮಿಹ ತ್ರಿಪುರೇ ಗೃಣಂತಿ ॥ ತ್ವತ್ತೇಜಸಾ ಪರಿಣತಂ ವಿಯದಾದಿಭೂತಂ । ಸೌಖ್ಯಂ ತನೋತಿ ಸರಸೀರುಹಸಂಭವಾದೇಃ ॥15॥**

ಭಾವಾರ್ಥ - ಹ್ರೀಂ ಕಾರವೇ ನಿನ್ನ ನಾಮ, ಅದೇ ನಿನ್ನ ರೂಪವು. ನಿನ್ನ ನಾಮವು ಮೂರು ಲೋಕಗಳಲ್ಲೂ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ. ಅನಾದಿಕಾಲದಿಂದಲೂ ನೀನೇ ತೇಜಸ್ವಿನಿ. ಬ್ರಹ್ಮಾದಿಗಳೂ ನಿನ್ನಿಂದ ಸೌಖ್ಯ ಪಡೆದಿರುತ್ತಾರೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಕಲ್ಯಾಣವೃಷ್ಟಿಸ್ತವಃ ಸಂಪೂರ್ಣಂ ॥

## 5.21 ಚತುಶ್ಲೋಕೀ

**ಕಾಂತಸ್ತೇ ಪುರುಷೋತ್ತಮಃ ಪಣಿಪತಿಃ ಶಯ್ಯಾಸ್ಸನಂ ವಾಹನಂ ವೇದಾತ್ಮಾ ವಿಹಗೇಶ್ವರೋ ಯವನಿಕಾ ಮಾಯಾ ಜಗನ್ಮೋಹಿನೀ । ಬ್ರಹ್ಮೇಶಾದಿ ಸುರವ್ರಜಸ್ಸದಯಿತ ಸ್ತ್ವದ್ದಾಸ ದಾಸೀಗಣಃ ಶ್ರೀರಿತ್ಯೇವ ಚ ನಾಮ ತೇ ಭಗವತಿ ಬ್ರೂಮಃ ಕಥಂ ತ್ವಾಂ ವಯಂ ॥1॥**

ಭಾವಾರ್ಥ - ತಾಯಿಯೇ! ಪುರುಷೋತ್ತಮನಾಗಿರುವ ಶ್ರೀಹರಿಯು ನಿನ್ನ ಪತಿಯು, ನಾಗರಾಜನಾದ ಆದಿಶೇಷನು ನಿನಗೆ ಆಸನವಾಗಿಯೂ ಹಾಸಿಗೆಯಾಗಿಯೂ ಇರುವನು. ವೇದಗಳ ಶಕ್ತಿಯೂ ಪಕ್ಷಿಗಳ ಒಡೆಯನೂ ಆಗಿರುವ ಗರುಢನೇ ನಿನ್ನ ವಾಹನ. ಜಗತ್ತನ್ನೇ ಮೋಹಗೊಳಿಸುವ ಯಾವ ಮಾಯೆಯಿದೆಯೋ ಅದುವೇ ನಿನ್ನ ಪರದೆ. ಸತೀ ಸಹಿತರಾದ ಬ್ರಹ್ಮ ಈಶ್ವರನೇ ಮೊದಲಾದ ದೇವಾನುದೇವತೆಗಳು ನಿನ್ನ ಸೇವಕರು. ಇದಲ್ಲದೆ ನಿನ್ನ ಹೆಸರೇ "ಶ್ರೀ" ಎಂಬುದಾಗಿದೆ. ಅಮ್ಮಾ ಭಗವತೀ, ಹಾಗಿರುವಾಗ ಇಂತಹಾ ನಿನ್ನನ್ನು ನಾವು ಬೇರಾವ ರೀತಿಯಲ್ಲಿ ಸ್ತುತಿಸಲು ಸಾಧ್ಯ?

**ಯಸ್ಯಾಸ್ತೇ ಮಹಿಮಾನಮಾತ್ಮನ ಇವತ್ವದ್ವಲ್ಲಭೋಸ್ಪಿ ಪ್ರಭುಃ ನಾಲಂ ಮಾತುಮಿಯತ್ತಯಾ ನಿರವಧಿಂ ನಿತ್ಯಾನುಕೂಲಂ ಸ್ವತಃ । ತಾಂ ತ್ವಾಂ ವಾಸ ಇತಿ ಪ್ರಸನ್ನ ಇತಿ ಚ ಸ್ತೋಷ್ಯಾಮ್ಯಹಂ ನಿರ್ಭಯೋ ಲೋಕೈಕೇಶ್ವರಿ ಲೋಕನಾಥ ದಯಿತೇ ದಾಂತೇ ದಯಾಂ ತೇ ವಿದನ್ ॥2॥**

ಭಾವಾರ್ಥ - ನಿನ್ನ ಇನಿಯನು ಸರ್ವಜ್ಞನಾಗಿರುವ ದೊರೆಯಾಗಿದ್ದರೂ, ನಿನ್ನ ಹಿರಿಮೆಯೆಂತಿರುವುದೋ ಅಂತೆಯೇ ಮಿತಿವಿರಹಿತವಾಗಿದ್ದು, ಸ್ವತಹಾ ಅನುಕ್ಷಣವೂ ಅನುಕೂಲವಾಗಿರುವ ನಿನ್ನ ಶ್ರೇಷ್ಠತೆಯನ್ನು ಇದಮಿತ್ಥಂ ಎಂದು ಅಳೆಯಲು ಅಸಾಧ್ಯವಿದೆ. ಈ ರೀತಿಯಾಗಿರುವ ನಿನ್ನನ್ನು ಹೇ ಲೋಕಮಾತೆಯೇ, ಲೋಕೇಶ್ವರನ ಅರಸಿಯೇ, ಸೋತುಬಂದವರ ಮೇಲೆ ನಿನಗಿರುವ ಕರುಣೆಯನ್ನು ಅರಿತವನಾಗಿ ನಾನು ನಿನ್ನ ಸೇವಕನು ಹಾಗೂ ಆಶ್ರಯಿಸಿದವನೆಂದು ನಿರ್ಭಯದಿಂದ ನಿನ್ನನ್ನು ಸ್ತುತಿಸುತ್ತೇನೆ.

**ಈಷತ್ ತ್ವತ್ಕರುಣಾ ನಿರೀಕ್ಷಣ ಸುಧಾ ಸಂಧುಕ್ಷಣಾದ್ರಕ್ಷ್ಯತೇ ನಷ್ಟಂ ಪ್ರಾಕ್ತದಲಾಭತಸ್ತ್ರಿಭುವನಂ ಸಂಪ್ರತ್ಯನಂತೋದಯಂ । ಶ್ರೇಯೋ ನ ಹ್ಯರವಿಂದ ಲೋಚನ ಮನಃ ಕಾಂತಾ ಪ್ರಸಾದಾದೃತೇ ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್ ॥3॥**

ಭಾವಾರ್ಥ - ಹೇ ಮಾತೆಯೇ! ಯಾವ ನಿನ್ನ ಕರುಣಾಪೂರ್ಣ ಕುಡಿನೋಟವೆಂಬ ಅಮೃತದ ಹೊರತಾಗಿ ಮೊದಲು ನಾಶವಾಗಿದ್ದ ಮೂರು ಲೋಕಗಳು ನಿನ್ನ ಅಮೃತಕಟಾಕ್ಷ ದೊರಕಿ ನಾಶವಿಲ್ಲದ ಸಂಪದೈಶ್ವರ್ಯಯುಕ್ತವಾಗಿ ಕಾಪಾಡಲ್ಪಟ್ಟಿದೆಯೋ ಅದೇ ತೆರವಾಗಿ ಅರವಿಂದಲೋಚನನ ವಲ್ಲಭೆಯ ಕರುಣೆಯ ಹೊರತಾಗಿ ಸಂಸಾರದಲ್ಲಾಗಲೀ, ಮೋಕ್ಷದಲ್ಲಾಗಲೀ, ಪಾರಮಾರ್ಥಿಕ ಹಾದಿಯಲ್ಲಾಗಲೀ ಯಶಸ್ಸು ಎಂದಿಗೂ ದೊರೆಯುವದಿಲ್ಲ.

**ಶಾಂತಾನಂತ ಮಹಾವಿಭೂತಿ ಪರಮಂ ಯದ್ಬ್ರಹ್ಮ ರೂಪಂ ಹರೇಃ ಮೂರ್ತಂ ಬ್ರಹ್ಮ ತತೋಽಪಿ ತತ್ಪ್ರಿಯತರಂ ರೂಪಂ ಯದತ್ಯದ್ಭುತಂ । ಯಾನ್ಯನ್ಯಾನಿ ಯಥಾಸುಖಂ ವಿಹರತೋ ರೂಪಾಣಿ ಸರ್ವಾಣಿ ತಾ- ನ್ಯಾಹುಃ ಸ್ವೈರನುರೂಪ ರೂಪ ವಿಭವೈರ್ಗಾಢೋಪಗೂಢಾನಿತೇ ॥4॥**

ಭಾವಾರ್ಥ - ಶಾಂತವೂ ಅನಂತವೂ ಮಹಾ ಅತುಲೈಶ್ವರ್ಯ ಸಹಿತವೂ, ಅತಿ ಉತ್ಕೃಷ್ಟವೂ ಆಗಿರುವ ಶ್ರೀಹರಿಯ ಪರಬ್ರಹ್ಮ ರೂಪವೂ ಅದಕ್ಕಿಂತಲೂ ಹೆಚ್ಚಾಗಿ ಅವನಿಗೆ ಪ್ರಿಯವಾಗಿರುವ ಅತಿ ಅದ್ಭುತವಾದ ಶ್ರೀಹರಿಯ ವಿಶ್ವಾತ್ಮರೂಪವೂ ಹಾಗೆಯೇ ಅವನು ಸುಖವಾಗಿ ಸಂಚರಿಸಲೋಸುಗ ಅವತರಿಸಿದ ಇನ್ನಿತರ ಯಾವ್ಯಾವ ಅವತಾರಗಳಿವೆಯೋ ಅವೆಲ್ಲವೂ ಅವನಿಗೆ ತಕ್ಕುದಾಗಿರುವಂತಹಾ ನಿನ್ನ ರೂಪಗಳ ವೈಭವಗಳೇ ಸಾಂದ್ರರೂಪವಾಗಿ ಸೇರಿಕೊಂಡಿವೆಯೆಂದು ಶಾಸ್ತ್ರಗಳು ಸಾರುತ್ತಿವೆ.

॥ ಇತಿ ಚತುಶ್ಲೋಕೀ ಸಂಪೂರ್ಣಂ ॥

## 5.22 ಶ್ರೀಸ್ತುತಿಃ

**ಜಾತಾಕಾಂಕ್ಷಾ ಜನನಿ ಯುವಯೋರೇಕಸೇವಾಧಿಕಾರೇ ಮಾಯಾಲೀಢಂ ವಿಭವಮಖಿಲಂ ಮನ್ಯಮಾನಾಸ್ತೃಣಾಯ । ಪ್ರೀತ್ಯೈ ವಿಷ್ಣೋಸ್ತವ ಚ ಕೃತಿನಃ ಪ್ರೀತಿಮಂತೋ ಭಜಂತೇ ವೇಲಾಭಂಗಪ್ರಶಮನಫಲಂ ವೈದಿಕಂ ಧರ್ಮಸೇತುಂ ॥1॥**

ಭಾವಾರ್ಥ - ಹೇ ತಾಯಿಯೆ! ನಿಮ್ಮೀರ್ವರ ಏಕಾಂತ ಸೇವೆಯಲ್ಲಿ ಆಸಕ್ತಿಯುಳ್ಳ ಭಕ್ತಜನರು ಮಾಯಾಮಯವಾಗಿರುವ ಅಖಿಲೈಶ್ವರ್ಯಗಳೆಲ್ಲವನ್ನು ತೃಣವೆಂಬುದಾಗಿ ಪರಿಗಣಿಸುತ್ತಾರೆ. ಹರಿಯ ಹಾಗೂ ನಿನ್ನ ಪ್ರೀತಿಗೋಸ್ಕರವಾಗಿ ಶಾಸ್ತ್ರಗೌರವವನ್ನು ಮೀರಿದ ದೋಷವನ್ನು ಕಳೆಯಲು ಸಾಧನವಾಗುವಂತಹಾ ವೈದಿಕಧರ್ಮವನ್ನು ಇಂತಹಾ ಭಕ್ತಜನರು ಬಳಸುತ್ತಾರೆ.

**ಸೇವೇ ದೇವಿ ತ್ರಿದಶಮಹಿಲಾಮೌಲಿಮಾಲಾರ್ಚಿತಂ ತೇ ಸಿದ್ಧಿಕ್ಷೇತ್ರಂ ಶಮಿತವಿಪದಾಂ ಸಂಪದಾಂ ಪಾದಪದ್ಮಂ । ಯಸ್ಮಿನ್ ಈಷನ್ನಮಿತಶಿರಸೋ ಯಾಪಯಿತ್ವಾ ಶರೀರಂ ವರ್ತಿಷ್ಯಂತೇ ವಿತಮಸಿ ಪದೇ ವಾಸುದೇವಸ್ಯ ಧನ್ಯಾಃ ॥2॥**

ಭಾವಾರ್ಥ - ಹೇ ತಾಯಿಯೆ! ದೇವತಾ ಸ್ತ್ರೀಯರ ಶಿರಸ್ಸುಗಳೆಂಬ ಹಾರಗಳಿಂದ ಪೂಜಿಸಲ್ಪಟ್ಟ ಯಾವುದೇ ವಿಪತ್ತುಗಳಿಂದ ವಿರಹಿತವಾಗಿರುವ ಐಶ್ವರ್ಯ ಸಿದ್ಧಿಯ ಪುಣ್ಯಸ್ಥಳವಾಗಿರುವ ನಿನ್ನ ಚರಣಾರವಿಂದಂಗಳನ್ನು ಸೇವಿಸುವೆ. ನಿನ್ನಾ ಚರಣ ಕಮಲಗಳಿಗೆ ಇನಿತಾದರೂ ನಮಿಸುವವರು ಪುಣ್ಯಾತ್ಮರೆನಿಸುವರು. ಏಕೆಂದರೆ ಇಂತಹ ಜನರು ತಮ್ಮ ಶರೀರವನ್ನು ತ್ಯಜಿಸಿದ ನಂತರ ನಿರ್ಮಲಸತ್ವ ಸ್ವರೂಪವಾಗಿರುವ ಮೋಕ್ಷವನ್ನು ಪಡೆಯುವುದರೊಂದಿಗೆ ಶ್ರೀಹರಿಯ ಪದತಲದಲ್ಲಿ ವಾಸಿಸುವರು.

**ಸಂಪದ್ಯಂತೇ ಭವಭಯತಮೀಭಾನವಃ ತ್ವತ್ ಪ್ರಸಾದಾತ್ ಭಾವಾಃ ಸರ್ವೇ ಭಗವತಿ ಹರೌ ಭಕ್ತಿ ಮುದ್ವೇಲಯಂತಃ । ಯಾಚೇ ಕಿಂ ತ್ವಾಮಹಮಿಹ ಯತಃ ಶೀತಲೋದಾರಶೀಲಾ ಭೂಯೋ ಭೂಯೋ ದಿಶಸಿ ಮಹತಾಂ ಮಂಗಲಾನಾಂ ಪ್ರಬಂಧಾನ್ ॥3॥**

ಭಾವಾರ್ಥ - ನಿನ್ನ ದಯೆಯಿಂದ ನಾನು ಮಾಡುವ ಎಲ್ಲಾ ಧ್ಯಾನಗಳೂ ಸಂಸಾರಭಯವೆನ್ನುವ ಇರುಳಿಗೆ ರವಿಯಂತಾಗಿ ಭಗವಂತನಾಗಿರುವ ಶ್ರೀಹರಿಯಲ್ಲಿ ಭಕ್ತಿಯನ್ನು ಹೊಮ್ಮಿಸಿ ಪ್ರವಹಿಸುತ್ತಿವೆ. ಹೆಚ್ಚಾಗಿರುವ ತಂಪಿನಿಂದ ಕೂಡಿದವಳಾದ ನೀನು ಪುನಃ ಪುನಃ ನನಗೆ ಶುಭಸಮೂಹವನ್ನೇ ಅನುಗ್ರಹಿಸುತ್ತಿರುವೆ. ಇಂತಿರುತ್ತಾ ನಿನ್ನಿಂದ ನಾನೇನನ್ನು ಯಾಚಿಸಲಿ ತಾಯೇ?

**ಮಾತಾ ದೇವಿ ತ್ವಮಸಿ ಭಗವಾನ್ ವಾಸುದೇವಃ ಪಿತಾ ಮೇ ಜಾತಃ ಸೋಽಹಂ ಜನನಿ ಯುವಯೋರೇಕಲಕ್ಷ್ಯಂ ದಯಾಯಾಃ । ದತ್ತೋ ಯುಷ್ಮ ತ್ಪರಿಜನತಯಾ ದೇಶಿಕೈರಪ್ಯರಸ್ತ್ವಂ ಕಿಂ ತೇ ಭೂಯ, ಪ್ರಿಯಮಿತಿ ಕಿಲ ಸ್ಮೇರವಕ್ತ್ರಾ ವಿಭಾಸಿ ॥4॥**

ಭಾವಾರ್ಥ - ಹೇ!ದೇವಿಯೇ, ನೀನು ನನ್ನ ತಾಯಿ. ಪರಮಾತ್ಮನಾಗಿರುವ ಶ್ರೀಹರಿಯು ನನ್ನ ತಂದೆ. ನಿಮ್ಮಿಬ್ಬರ ದಯೆಯ ಮುಖ್ಯ ಗುರಿಯೇ ನಾನಾಗಿರುವೆ ತಾಯಿ. ಅದು ಮಾತ್ರವಲ್ಲದೆ ನನ್ನನ್ನು ನನ್ನ ಗುರುಗಳು ನಿಮ್ಮ ಸೇವೆಗಾಗಿ ನಿಮ್ಮ ಚರಣಾರವಿಂದಗಳಿಗೆ ಅರ್ಪಿಸಿದ್ದಾರೆ. ಆದಾಗ್ಯೂ "ನಿನಗೇನು ಇಷ್ಟ?" ಎಂದು ವಿಚಾರಿಸುವ ತೆರನಾಗಿ ಕಿರುನೋಟದಿಂದ ಕೂಡಿರುವ ಮೊಗದಿಂದ ಶೋಭಿಸುತ್ತಿರುವೆ.

**ಕಲ್ಯಾಣಾನಾಮವಿಕಲನಿಧಿಃ ಕಾಪಿ ಕಾರುಣ್ಯ ಸೀಮಾ ನಿತ್ಯಾಮೋದಾ ನಿಗಮವಚಸಾಂ ಮೌಲಿಮಂದಾರಮಾಲಾ । ಸಂಪದ್ ದಿವ್ಯಾ ಮಧುವಿಜಯಿನಃ ಸನ್ನಿಧತ್ತಾಂ ಸದಾ ಮೇ ಸೈಷಾ ದೇವೀ ಸಕಲಭುವನಪ್ರಾರ್ಥನಾಕಾಮಧೇನುಃ ॥5॥**

ಭಾವಾರ್ಥ - ಲಕ್ಷ್ಮೀ ದೇವಿಯು ಎಲ್ಲಾ ಕಲ್ಯಾಣಗಳ ನಾಶವಿಲ್ಲದ ನಿಧಿಯಾಗಿರುವಳು. ಹಾಗೂ ಕರುಣೆಗೆ ಅಂತಿಮವಾಗಿರುವ ಗಡಿ. ಆಕೆ ನಿತ್ಯವೂ ಆನಂದದಾಯಕಳು. ಮಂದಾರದ ಪುಷ್ಪ ಮಾಲಿಕೆಯ ತೆರನಾಗಿ ವೇದಗಳ ತಲೆಯನ್ನು ಅಲಂಕರಿಸುವಾಕೆ. ಆಕೆ ಶ್ರೀಹರಿಯ ದಿವ್ಯವಾದ ಸಂಪದವು. ಸಮಸ್ತ ಜಗತ್ತಿನ ಪ್ರಾರ್ಥನೆಗೆ ಆ ತಾಯಿಯು ಕಾಮಧೇನುವಿನಂತೆ ಇರುವವಳು. ಅಂತಹಾ ಮಹಾತಾಯಿ ದೇವಿಯು ಯಾವತ್ತೂ ನನ್ನ ಹೃದಯದಲ್ಲಿ ಶಾಶ್ವತವಾಗಿ ನೆಲೆಸಲಿ.

॥ ಇತಿ ಶ್ರೀಸ್ತುತಿಃ ಸಂಪೂರ್ಣಂ ॥

## 5.23 ಶ್ರೀಸ್ತವಃ

**ಐಶ್ವರ್ಯಂ ಯದಶೇಷಪುಂಸಿ ವಿದಿತಂ ಸೌಂದರ್ಯ-ಲಾವಣ್ಯಯೋ ರೂಪಂ ಯಚ್ಚ ಹಿ ಮಂಗಲಂ ಕಿಮಪಿ ಯಲ್ಲೋಕೇ ಸದಿತ್ಯುಚ್ಯತೇ । ತತ್ಸರ್ವಂ ತ್ವದಧೀನಮೇವ ಯದತಃ ಶ್ರೀರಿತ್ಯಭೇದೇನ ವಾ ಯದ್ವಾ ಶ್ರೀಮದಿತೀದೃಶೇನ ವಚಸಾ ದೇವಿ ಪ್ರಥಾಮಶ್ನುತೇ ॥1॥**

ಭಾವಾರ್ಥ - ಎಲೇ ದೇವಿಯೇ! ಸಮಸ್ತ ಮಾನವರಲ್ಲಿ ಕಾಣಸಿಗುವ ಐಶ್ವರ್ಯ-ಸೌಂದರ್ಯ-ಲಾವಣ್ಯ ಮೊದಲಾದ ಶುಭ ರೂಪಗಳು ಮತ್ತು ಭುವಿಯಲ್ಲಿ ಯಾವುದನ್ನು "ಸತ್" ಎಂಬುದಾಗಿ ಕರೆಯಲ್ಪಡುತ್ತದೆಯೋ ಅದು ನಿನ್ನಾಧೀನವಾಗಿಯೇ ಇರುವುದಾಗಿದೆ. ಆದುದರಿಂದ ನಿನ್ನಿಂದ ಬೇರೆಯಾಗಲಾರದ ಈ ಸಾರಗಳು "ಶ್ರೀ" ಎಂಬುದಾಗಿಯೊ, "ಶ್ರೀಮತ್" ಎಂಬುದಾಗಿಯೂ ಪ್ರಸಿದ್ಧಿಯನ್ನು ಹೊಂದಿವೆ.

**ಲೋಕೇ ವನಸ್ಪತಿ-ಬೃಹಸ್ಪತಿ-ತಾರತಮ್ಯಂ ಯಸ್ಯಾಃ ಪ್ರಸಾದ-ಪರಿಣಾಮಮುದಾಹರಂತಿ । ಸಾ ಭಾರತಿ ಭಗವತೀ ತು ಯದೀಯದಾಸೀ ತಾಂ ದೇವದೇವ-ಮಹಿಷೀಂ ಶ್ರಿಯಮಾಶ್ರಯಾಮಃ ॥2॥**

ಭಾವಾರ್ಥ - ಭುವಿಯೊಳಗೆ ವನಸ್ಪತಿ [ಅಜ್ಞಾನಿಯೆನಿಸಿದ ಗಿಡ], ಬೃಹಸ್ಪತಿ [ಎಲ್ಲವನ್ನೂ ತಿಳಿದಿರುವ ಜ್ಞಾನಿ]ಎನ್ನುವ ತಾರತಮ್ಯವು ಯಾವಾತನ ಸಂತಸದ ಪರಿಣಾಮದಿಂದ ಉಂಟಾಗಿರುವುದೋ ಆ ಭಗವತಿಯಾಗಿರುವ ವಿದ್ಯಾಧಿದೇವತೆ ಸರಸ್ವತಿಯು ಯಾವಾತನ ದಾಸಿಯಾಗಿರುವಳೋ, ಅಂತಹಾ ದೇವಾಧಿದೇವತೆಗಳ ಒಡೆಯನಾಗಿರುವ ಮಹಾವಿಷ್ಣುವಿನ ಪಟ್ಟದರಸಿ ಶ್ರೀದೇವಿಯನ್ನು ನಾವು ಶರಣುಹೊಂದುತ್ತೇವೆ.

**ಯಸ್ಯಾಃ ಕಟಾಕ್ಷ-ವೀಕ್ಷಾ-ಕ್ಷಣ ಲಕ್ಷಂ ಲಕ್ಷಿತಾ ಮಹೇಶಾಃ ಸ್ಯುಃ । ಶ್ರೀರಂಗರಾಜ- ಮಹಿಷೀ ಸಾ ಮಾಮಪಿ ವೀಕ್ಷತಾಂ ಲಕ್ಷ್ಮೀಃ ॥3॥**

ಭಾವಾರ್ಥ - ಯಾವ ದೇವಿಯ ಒಂದು ಕ್ಷಣದ ಕುಡಿನೋಟಕ್ಕೆ ವಸ್ತುವಾಗುವ ವ್ಯಕ್ತಿಗಳೆಲ್ಲರೂ ತಕ್ಷಣವೇ ಮಹೇಶ್ವರ ಸಮಾನರಾಗುವರೋ, ಅಂತಹಾ ಶ್ರೀರಂಗನಾಥಸ್ವಾಮಿಯ ಒಡತಿಯಾಗಿರುವ ಲಕ್ಷ್ಮಿಯು ತನ್ನ ಕೃಪಾಕಟಾಕ್ಷದಿಂದ ನನ್ನನ್ನೂ ಪರಿಗ್ರಹಿಸಿ ಅನುಗ್ರಹಿಸಲಿ.

॥ ಇತಿ ಶ್ರೀಸ್ತವಃ ಸಂಪೂರ್ಣಂ ॥

## 5.24 ಶ್ರೀಲಕ್ಷ್ಮೀ ಗುಣರತ್ನಕೋಶಂ

**ಶ್ರಿಯೈ ಸಮಸ್ತಚಿದಚಿದ್ವಿಧಾನವ್ಯಸನಂ ಹರೇಃ । ಅಂಗೀಕಾರಿಭಿರಾಲೋಕೈಃ**
**ಸಾರ್ಥಯಂತ್ರ್ಯೈ ಕೃತೋಂಽಜ್ಜಲಿಃ ॥1॥**

ಭಾವಾರ್ಥ - ಯಾವಾಕೆ ತನ್ನ ಸಮ್ಮತಿಯನ್ನು ನಿರ್ದೇಶಿಸುವ ಕೃಪಾದೃಷ್ಟಿಯಿಂದ ಶ್ರೀಮನ್ನಾರಾಯಣನ ಸಮಸ್ತ ಸಜೀವ ಹಾಗೂ ನಿರ್ಜೀವವಾಗಿರುವ ಸೃಷ್ಟಿಯ ಇಚ್ಛೆಯನ್ನು ಸಾಕಾರಗೊಳಿಸುತ್ತಿರುವಳೋ ಅಂತಹಾ ಶ್ರೀದೇವಿಯ ಸನ್ನಿಧಾನದಲ್ಲಿ ಬೊಗಸೆಯನ್ನು ಒಡ್ಡುತ್ತಿರುವೆ.

**ಯದ್ಭ್ರೂಭಂಗಾಃ ಪ್ರಮಾಣಂ ಸ್ಥಿರ-ಚರ-ರಚನಾತಾರತಮ್ಯೇ ಮುರಾರೇಃ**
**ವೇದಾಂತಾಸ್ತತ್ವಚಿಂತಾಂ ಮುರಭಿದುರಸಿ ಯತ್ಪಾದಚಿಹ್ನೈಸ್ತರಂತಿ ।**
**ಭೋಗೋಪೋದ್ಘಾತ-ಕೇಲೀ- ಚುಲಕಿತ-ಭಗವದ್ ವೈಶ್ವರೂಪ್ಯಾನುಭಾವಾ ಸಾ ನಃ**
**ಶ್ರೀರಾಸ್ತೃಣೀತಾಮಮೃತಲಹರಿಧೀಲಂಘನೀಯೈರಪಾಂಗೈಃ ॥2॥**

ಭಾವಾರ್ಥ - ಯಾವಾಕೆಯ ಹುಬ್ಬುಹಾರಿಸುವಿಕೆಯು ಶ್ರೀಹರಿಯ ಸ್ಥಾವರಜಂಗಮಾದಿ ಅನ್ಯಾನ್ಯ ಸೃಷ್ಟಿಗೆ ಮಾರ್ಗದರ್ಶಕಗಳಾಗಿವೆಯೋ, ಮುರಾರಿಯ ವಕ್ಷಸ್ಥಳದಲ್ಲಿರುವ ಯಾವಾಕೆಯ ಪಾದಗಳ ಗುರುತಿನಿಂದ ವೇದೋಪನಿಷತ್ತುಗಳು ಪಾರಮಾರ್ಥಿಕ ನೈಜತ್ವವನ್ನು ನಿರ್ಧರಿಸುತ್ತವೆಯೋ, ಯಾವಾಕೆಯ ದೈವೀಸ್ವರೂಪ, ಗುಣಾದಿಗಳ ಜ್ಞಾನದಿಂದ ಪರಮಾತ್ಮನ ವಿಶ್ವರೂಪದ ಸಂಪದವೆಲ್ಲವೂ ಸೇರಿದರೂ ತುಚ್ಛವಾಗುವುದೋ, ಅದನ್ನು ಆ ಶ್ರೀದೇವಿಯು ಅಮೃತ ಪ್ರವಾಹವನ್ನೂ ಮೀರಿಸುವ ತನ್ನ ಕುಡಿಗಣ್ಣೋಟಗಳಿಂದ ನಮ್ಮನ್ನು ಸಂಸ್ಕಾರಗೊಳಿಸಲಿ.

**ಆಕುಗ್ರಾಮ-ನಿಯಾಮಕಾದಪಿ ವಿಭೋ-ರಾಸರ್ವ-ನಿರ್ವಾಹಕಾತ್ ಐಶ್ವರ್ಯಂ ಯದಿಹೋತ್ತರೋತ್ತರಗುಣಂ ಶ್ರೀರಂಗಭರ್ತುಃ ಪ್ರಿಯೇ । ತುಂಗಂ ಮಂಗಲಮುಜ್ಜ್ವಲಂ ಗರಿಮವತ್ ಪುಣ್ಯಂ ಪುನಃ ಪಾವನಂ ಧನ್ಯಂ ಯತ್ತದದಶ್ವ ವೀಕ್ಷಣಭುವಸ್ತೇ ಪಂಚಷಾ ವಿಪುಷಃ ॥3॥**

ಭಾವಾರ್ಥ - ಹೇ! ಶ್ರೀರಂಗನ ಪ್ರೀತಿಪಾತ್ರಳೇ, ಒಂದು ಚಿಕ್ಕ ಜಾಗದ ಅಧಿಪತ್ಯದಿಂದ ಸರ್ವ ನಿಯಾಮಕನಾಗಿರುವ ಭಗವಂತನತನಕ ಹೆಚ್ಚು ಹೆಚ್ಚು ವಿಪುಲವಾಗಿರುವ ಯಾವ್ಯಾವ ಸಂಪದಗಳಿವೆಯೋ ಅವು ಶ್ರೇಷ್ಠವಾದುದು, ಶುಭಕರವಾದುದು, ಕಾಂತಿಮಯವಾದುದು, ವಿಶಾಲವಾದುದು, ಪುಣ್ಯಮಯವಾದುದು, ಪಾವನಮಯವಾದುದು, ಕೃತ ಕೃತ್ಯವಾದಂತಹದು ಯಾವುದೆಲ್ಲವಿದೆಯೋ ಅವೆಲ್ಲವೂ ನಿನ್ನ ದೃಷ್ಟಿಯ ಐದು ಅಥವಾ ಆರು ಬಿಂದುಗಳು.

**ರತಿರ್ಮತಿ-ಸರಸ್ವತೀ-ಧೃತಿ-ಸಮೃದ್ಧಿ-ಸಿದ್ಧಿ-ಶ್ರಿಯಃ ಸುಧಾಸಖಿ ಯತೋಮುಖಂ ಚಿಚಲಿಷೇತ್ ತವ ಭ್ರೂಲತಾ । ತತೋಮುಖಮಥೇಂದಿರೇ ಬಹುಮುಖೀಮಹಂ-ಪೂರ್ವಿಕಾಂ ವಿಗಾಹ್ಯ ಚ ವಶಂವದಾಃ ಪರಿವಹಂತಿ ಕೂಲಂಕಷಾಃ ॥4॥**

ಭಾವಾರ್ಥ - ಅಮೃತದ ಒಡನಾಡಿಯಾಗಿರುವ ಇಂದಿರೆಯೇ, ನಿನ್ನ ಹುಬ್ಬಿನ ಹಂಬು ಯಾರ ಕಡೆಗೆ ಸಂಚರಿಸಬಯಸುವುದೋ ಅವನೆಡೆಗೆ ಸಂಪತ್ತು, ಜ್ಞಾನ, ಪ್ರೀತಿ, ವಿದ್ಯೆ, ಬುದ್ಧಿ, ಸಮೃದ್ಧಿ, ಇಷ್ಟಸಿದ್ಧಿ ಇವೆಲ್ಲವೂ ತಾ ಮೊದಲು ತಾ ಮೊದಲು ಎಂಬುದಾಗಿ ಅಂಚನ್ನು ಮೀರಿ ಹರಿವ ನದಿಯಂತೆ ಪ್ರವಹಿಸಿ ಅವನ ಕೈ ವಶವಾಗುವುದು.

**ಸಹ-ಸ್ಥಿರ-ಪರಿತ್ರಸ-ವ್ರಜ-ಮಂಚನಾಕಿಂಚನೈಃ ಅನೋಕಹ-ಬೃಹಸ್ಪತಿ-ಪ್ರಬಲ-ವಿಕ್ಲಬ-ಪ್ರಕ್ರಿಯಂ । ಇದಂ ಸದಸದಾತ್ಮನಾ ನಿಖಿಲಮೇವ ನಿಮ್ನೋನ್ನತಂ ಕಟಾಕ್ಷ-ತದುಪೇಕ್ಷಯೋಸ್ತವ ಹಿ ಲಕ್ಷ್ಮಿ ತತ್ತಾಂಡಂ ॥5॥**

ಭಾವಾರ್ಥ - ಹೇ! ಲಕ್ಷ್ಮಿ, ಸ್ಥಾವರಹಾಗೂ, ಜಂಗಮ, ಸ್ಥಿತಿವಂತ ಮತ್ತು ದರಿದ್ರ, ಬೃಹಸ್ಪತಿ ಮತ್ತು ವನಸ್ಪತಿ, ಬಲಶಾಲಿ ಮತ್ತು ದುರ್ಬಲ ಈ ರೀತಿಯಾಗಿ ಸದಸದ್ರೂಪದಲ್ಲಿರುವ ಹಾಗೂ ಉಚ್ಛ ನೀಚ ಭಾವನೆಗಳನ್ನು ಹೊಂದಿರುವ ಈ

ಸಮಸ್ತ ಭೂಮಂಡಲವು ನಿನ್ನ ಕರುಣೆಯಕುಡಿಗಣ್ಣೋಟವಿಲ್ಲದಿರುವ ಮತ್ತು ಕರುಣಾಕಟಾಕ್ಷದ ಫಲವಾಗಿದೆ.

**ಯದ್ದೂರೇ ಮನಸೋ ಯದೇವ ತಮಸಃಪಾರೇ ಯದತ್ಯದ್ಭುತಂ**
**ಯತ್ಕಾಲಾದಪಚೇಲಿಮಂ ಸುರಪುರೀ ಯದ್ಗಚ್ಛತೋ ದುರ್ಗತಿಃ । ಸಾಯುಜ್ಯಸ್ಯ**
**ಯದೇವ ಸೂತಿರಥವಾ ಯದ್ದುರ್ಗ್ರಹಂ ಮದ್ಗಿರಾಂ ತದ್ವಿಷ್ಣೋಃ ಪರಮಂ ಪದಂ**
**ತವ ಕೃತೇ ಮಾತಃ ಸಮಾಮ್ನಾಸಿಷುಃ ॥6॥**

ಭಾವಾರ್ಥ - ಯಾವುದು ಮಾತು ಮನಸ್ಸುಗಳಿಗೆ ಕಾಣದಿರುವುದೋ, ಯಾವುದು ಕತ್ತಲಿನ ಆಚೆಗಿರುವುದೋ, ಯಾವುದು ಅತಿ ಭಯಂಕರವೋ, ಯಾವುದರ ಮೇಲೆ ವೇಳೆ ಪರಿಣಾಮ ಬೀರಲು ಸಾಧ್ಯವಾಗುವುದಿಲ್ಲವೋ, ಯಾವ ಜಾಗಕ್ಕೆ ಹೋಗುವವರಿಗೆ ಇಂದ್ರನ ನಗರಿಯೂ ದುರ್ಗತಿಯ ಅನುಭವನ್ನು ಒದಗಿಸುವುದೋ, ಯಾವುದು ಪರಮ ಸಾಯುಜ್ಯದ ಉಗಮ ಸ್ಥಾನವೋ, ಅಂತಹಾ ಮಹಾವಿಷ್ಣುವಿನ ಪರಮಪದವು ನಿನಗೋಸ್ಕರವೆಂದು ವೇದಶಾಸ್ತ್ರಗಳು ಹೇಳುತ್ತಿವೆಯಮ್ಮಾ!

**ಮಾತರ್ಮೈಥಿಲಿ ರಾಕ್ಷಸೀಸ್ತ್ವಯಿ ತದೈವಾರ್ದ್ರಾಪರಾಧಾಸ್ತ್ವಯಾ ರಕ್ಷಂತ್ಯಾ**
**ಪವನಾತ್ಮಜಾಲ್ಲಘುತರಾ ರಾಮಸ್ಯ ಗೋಷ್ಠೀ ಕೃತಾ । ಕಾಕಂ ತವ ಚ ವಿಭೀಷಣಂ**
**ಶರಣಮಿತ್ಯುಕ್ತಿಕ್ಷಮೌ ರಕ್ಷತಃ ಸಾ ನಃ ಸಾಂದ್ರಮಹಾಗಸಃಸುಖಯತು**
**ಕ್ಷಾಂತಿಸ್ತವಾಸ್ಕಸ್ಮಿಕೀ ॥7॥**

ಭಾವಾರ್ಥ - ಮಾತೆ ಮೈಥಿಲಿಯೇ, ನವನವೀನ ಅಪರಾಧಗಳನ್ನು ಮಾಡುತ್ತಲಿದ್ದ ರಕ್ಕಸಿಯರನ್ನು ನಾಶಪಡಿಸಲು ಹನುಮನು ಇಚ್ಛಿಸಿದಾಗ, ನೀನು ಅವರನ್ನು ರಕ್ಷಿಸಿ ರಾಮನ ಸಹವಾಸವನ್ನೂ ಹಗುರವಾಗಿ ಭಾವಿಸಿದೆ. ಏಕೆಂದರೆ "ನಿನಗೆ ಶರಣು ಬಂದಿರುವೆ"ಎಂದಾಕ್ಷಣ ಕಾಕಾಸುರನನ್ನೂ ವಿಭೀಷಣನನ್ನೂ ಶ್ರೀರಾಮನು ರಕ್ಷಿಸಿದ. ಅಂತಹಾ ನಿನ್ನ ಅಕಸ್ಮಾತ್ತಾದ ಮನ್ನಿಸುವ ಗುಣವು ನಮ್ಮೆಲ್ಲರನ್ನು ಸುಖಿಗಳಾಗಿ ಬಾಳುವಂತೆ ಮಾಡಲಿ.

**ಮಾತರ್ಲಕ್ಷ್ಮಿ ಯಥೈವ ಮೈಥಿಲ-ಜನಸ್ತೇನಾಧ್ವನಾ ತೇ ವಯಂ ತ್ವದ್ದಾಸ್ಯೈಕ-ರಸಾಭಿಮಾನ-ಸುಭಗೈರ್ಭಾವೈರಿಹಾಮುತ್ರ ಚ । ಜಾಮಾತಾ ದಯಿತಸ್ತವೇತಿ ಭವತೀಸಂಬಂಧ-ದೃಷ್ಟ್ಯಾಹರಿಂ ಪಶ್ಯೇಮ ಪ್ರತಿಯಾಮ ಯಾಮ ಚ ಪರೀಚಾರಾನ್ ಪ್ರಹೃಷ್ಯೇಮ ಚ ॥8॥**

ಭಾವಾರ್ಥ - ಅಮ್ಮಾ! ಮಾತೆ ಲಕ್ಷ್ಮೀದೇವಿಯೇ, ಮಿಥಿಲಾನಗರಿಯ ಪ್ರಜೆಗಳು ನಿನಗೆ ಎಂತು ಸೇರಿದವರಾಗಿರುವರೋ, ನಿನ್ನ ಸೇವೆಯಲ್ಲಿ ಇರುವ ಶ್ರೇಷ್ಠವಾದ ಶ್ರದ್ಧೆಯಿಂದಲೂ, ನಿನ್ನ ಮೇಲಿರುವ ತಾದಾತ್ಮ್ಯ ಗೌರವದಿಂದ ಮನ್ನಣೆ ಪಡೆಯುವ ಇಂಗಿತವನ್ನು ಹೊಂದಿದರೋ ಅದೇ ತೆರನಾಗಿ ನಾವು ಕೂಡಾ ನಿನ್ನವರು. ನಿನ್ನ ಸಂಪರ್ಕದ ಉದ್ದೇಶದಿಂದ ನಾವು ಶ್ರೀಹರಿಯನ್ನು ಇಲ್ಲಿಯೂ ಶಾಶ್ವತವಾದ ದಿವ್ಯ ಶಕ್ತಿಯಲ್ಲಿ "ನಿನ್ನ ಪತಿಯು ನಮ್ಮ ಅಳಿಯನು" ಎಂದು ಕಾಣುತ್ತಿರುವೆವು. ಮತ್ತು ಆತನಲ್ಲಿ ಶರಣಾಗಿ ಸೇವೆಯನ್ನು ಮಾಡುತ್ತಾ ಸಂತಸವನ್ನು ಹೊಂದುತ್ತಿರುವೆವು.

**ಪಿತೇವ ತ್ವತ್ಪ್ರೇಯಾನ್ ಜನನಿ ಪರಿಪೂರ್ಣಾಗಸಿ ಜನೇ ಹಿತಸ್ರೋತೋ ವೃತ್ತ್ಯಾ ಭವತಿ ಚ ಕದಾಚಿತ್ ಕಲುಷಧೀಃ । ಕಿಮೇತತ್ ನಿರ್ದೋಷಃ ಕ ಇಹ ಜಗತೀತಿ ತ್ವಮುಚಿತೈಃ ಉಪಾಯೈರ್ವಿಸ್ಮಾರ್ಯ ಸ್ವಜನಯಸಿ ಮಾತಾ ತದಸಿ ನಃ ॥9॥**

ಭಾವಾರ್ಥ - ಹೇ! ತಾಯಿ, ನಿನಗೆ ಮೆಚ್ಚಿನವನಾದ ಶ್ರೀಮನ್ನಾರಾಯಣನು ಕೆಲವೊಮ್ಮೆ ತಪ್ಪು ಮಾಡಿದವರಾದ ನಮ್ಮ ಬಗ್ಗೆ ಕೋಪಿಸಿಕೊಳ್ಳುತ್ತಾನೆ. ಆಗ ನೀನು ಜಗತ್ತಿನಲಿ ತಪ್ಪು ಮಾಡದವರು ಯಾರೂ ಇಲ್ಲ ಎಂದು ತಕ್ಕುದಾದ ಮಾತುಗಳಿಂದಲೂ ಉಪಾಯದಿಂದಲೂ ನಮ್ಮ ದೋಷಗಳನ್ನು ಮರೆಯುವ ಹಾಗೆ ಮಾಡುವುದಲ್ಲದೆ ನಮ್ಮನ್ನು ನಿನ್ನವರೆಂದು ಸ್ವೀಕರಿಸುತ್ತಿರುವಿ. ಆದ ಕಾರಣದಿಂದ ನೀನು ನಮಗೆ ಸಂಶಯಾತೀತವಾಗಿ ಮಾತೃ ರೂಪಿಯಾಗಿರುವೆ.

**ಔದಾರ್ಯ-ಕಾರುಣಿಕತಾಶ್ರಿತವತ್ಸಲತ್ವ- ಪೂರ್ವೇಷು ಸರ್ವಮತಿಧಾಯಿತಮತ್ರ ಮಾತಃ । ಶ್ರೀರಂಗಧಾಮ್ನಿ ಯದುತಾನ್ಯದುದಾಹರಂತಿ ಸೀತಾವತಾರ-ಮುಖಮೇತದಮುಷ್ಯ ಯೋಗ್ಯಂ ॥10॥**

ಭಾವಾರ್ಥ - ತಾಯೇ! ನಿನ್ನ ಗುಣಗಳಾದ ಔದಾರ್ಯ, ಕಾರುಣ್ಯ ಭಾವ, ಆಶ್ರಿತರಬಗೆಗಿನ ವಾತ್ಸಲ್ಯತೆ, ಇತ್ಯಾದಿಗಳು ಆ ಶ್ರೀರಂಗಧಾಮದ ಮೂರ್ತ್ಯಾವತಾರದಲ್ಲಿ ಶ್ರೇಷ್ಠತೆಯನ್ನು ಪಡೆದಿವೆ. ಇದಕ್ಕಿಂತ ವಿಭಿನ್ನವಾದ ಸೀತಾವತಾರವೇ ಆದಿಯಾದ ಅವತಾರಗಳನ್ನು ಪ್ರತ್ಯೇಕವಾಗಿ ಹೇಳಿದ್ದರೆ ಅವೆಲ್ಲವೂ ಆ ಮೂರ್ತ್ಯಾವತಾರಕ್ಕೆ ಯೋಗ್ಯವಾದವುಗಳೇ ಆಗಿವೆ.

॥ ಇತಿ ಶ್ರೀಲಕ್ಷ್ಮೀ ಗುಣರತ್ನಕೋಶಂ ಸಂಪೂರ್ಣಂ ॥

## 5.25 ಕನಕಧಾರಾ ಸ್ತೋತ್ರ

ಕನಕಧಾರಾ ಸ್ತೋತ್ರದ ವಿಶೇಷ – ಹಿನ್ನೆಲೆ. ಶ್ರೀ ಲಕ್ಷ್ಮಿಯ ಕೃಪಾಕಟಾಕ್ಷಕ್ಕೆ ಪಾತ್ರರಾಗಲು ಅದ್ವೈತಕೇಸರಿ ಜಗದ್ಗುರು ಶ್ರೀ ಶಂಕರಾಚಾರ್ಯರಿಂದ ವಿರಚಿತವಾದ ಕನಕಧಾರಾ ಸ್ತೋತ್ರವನ್ನು ನಿತ್ಯವೂ ಪಠಿಸುವುದರಿಂದ ನಮ್ಮ ಸಕಲ ಮನೋಕಾಮನೆಗಳು ಪೂರ್ಣಗೊಳ್ಳುವುದರ ಜೊತೆಗೆ ಪ್ರಾಪಂಚಿಕ, ಪಾರಮಾರ್ಥಿಕ ಎರಡೂ ಸಾಧನೆಗಳು ಪೂರ್ಣಗೊಳ್ಳುತ್ತವೆ. ನಮಗೆ ಧನ - ಕನಕ, ಸಿರಿ - ಸಂಪತ್ತು, ಐಶ್ವರ್ಯ, ಯಶಸ್ಸು, ಸೌಭಾಗ್ಯ, ವಿಜಯಗಳನ್ನು ದಯಪಾಲಿಸುವ ಮಹಾ ಕಾಮಧೇನು " ಕನಕಧಾರಾ ಸ್ತೋತ್ರ "

ಭಾಗ್ಯವಂತರ ಮನೆಗಳಲ್ಲಿ ಐಶ್ವರ್ಯ ಸ್ವರೂಪಳಾಗಿ, ಜ್ಞಾನಿಗಳ ಅಂತರಂಗದಲ್ಲಿ ಬುದ್ಧಿಸ್ವರೂಪಳಾಗಿ, ಭಕ್ತರ ಹೃದಯದಲ್ಲಿ ಶ್ರದ್ಧಾ ಸ್ವರೂಪಳಾಗಿ, ಮೋಕ್ಷೇಚ್ಛುಗಳ ಆಂತರ್ಯದಲ್ಲಿ ಮುಕ್ತಿಸ್ವರೂಪಳಾಗಿ ರಾರಾಜಿಸುತ್ತಿರುವ ಮಹಾಲಕ್ಷ್ಮಿಯ ಕರುಣಾ ಕಟಾಕ್ಷ ಶ್ರೀ ಶಂಕರಾಚಾರ್ಯರ ಕೃಪಾಶೀರ್ವಾದದಿಂದ ಚಿನ್ನದ ಮಳೆಯನ್ನೇ ಕರೆದ ಮಹಾಸ್ತೋತ್ರವೇ " ಕನಕಧಾರಾ ಸ್ತೋತ್ರ ". ಅದರ ಹಿನ್ನೆಲೆ ಹೀಗೆದೆ.

ಪರಮಹಂಸ ಪರಿವ್ರಾಜಕ ಶ್ರೀ ಶಂಕರಭಗವತ್ಪಾದರು ಸನ್ಯಾಸಿಗಳಾದ್ದರಿಂದ ಮಧುಕರ ( ಭಿಕ್ಷೆ ) ವೃತ್ತಿಯನ್ನು ಅನುಸರಿಸುತ್ತಿದ್ದರು. ತಮ್ಮ ದಿಗ್ವಿಜಯ ಸಂಚಾರ ಕಾಲದಲ್ಲಿ ಒಮ್ಮೆ ಕೇರಳದ ಕುಗ್ರಾಮವೊಂದಕ್ಕೆ ಬರುತ್ತಾರೆ. ತಮ್ಮ ಶಿಷ್ಯರೊಡಗೂಡಿ

ದೈವಭಕ್ತನಾದ ಒಬ್ಬ ಬಡ ಬ್ರಾಹ್ಮಣನ ಮನೆಯ ಮುಂದೆನಿಂತು, "ಭವತಿ ಭಿಕ್ಷಾಂದೇಹಿ" ಎಂದು ಭಿಕ್ಷೇಯನ್ನು ಬೇಡುತ್ತಾರೆ. ಆ ಬ್ರಾಹ್ಮಣನಾದರೋ ಕಡು ಬಡವ. ಮನೆ ಮಂದಿಗೆ ಊಟಕ್ಕಿಲ್ಲದ ಪರಿಸ್ಥಿತಿ. ಮನೆಗೆ ಭಿಕ್ಷೆಗೆ ಬಂದಿರುವವರು ಮಹಾ ಮಹಿಮರಾದ ಶಂಕರಾಚಾರ್ಯರು. ಬ್ರಾಹ್ಮಣ ತನ್ನ ಹೆಂಡತಿಗೆ ಏನಾದರೂ ಭಿಕ್ಷೆ ಇದ್ದರೆ ಯತಿಗಳಿಗೆ ನೀಡಲು ಹೇಳುತ್ತಾನೆ. ಆ ಸಾಧ್ವಿಮಣಿಯೂ ಮಹಾ ದೈವ ಭಕ್ತೆ. ಕೊಡಲು ಮನೆಯಲ್ಲಿ ಏನೂ ಇಲ್ಲ. ಮನೆಗೆ ಬಂದ ಅತಿಥಿ ರೂಪದ ದೇವರನ್ನು ಬರಿಗೈಯಲ್ಲಿ ಕಳುಹಿಸುವುದು ಮಹಾಪಾಪವೆಂದರಿತು, ಮನೆಯಲ್ಲಿ ಹುಡುಕಿದಾಗ, ಒಂದು ಜಲಡಿಯಲ್ಲಿ ಇಟ್ಟಿದ್ದ ಒಣಗಿದ ನೆಲ್ಲಿಕಾಯಿಯೊಂದು ದೊರಕುತ್ತದೆ. ಆ ದಿನ ಆ ಒಣ ನೆಲ್ಲಿ ಕಾಯಿಯ ಪಾನಕ ಮಾಡಿ ಮನೆಯವರ ಹಸಿವು ನೀಗಿಸುವುದೆಮದು ಇಟ್ಟಿದ್ದುದು. ಅದನ್ನೇ ಯತಿಗಳಿಗೆ ನೀಡುವುದೆಂದು ನಿರ್ಧರಿಸುತ್ತಾಳೆ.

ತನ್ನ ಗುಡಿಸಲು ಮುಂದೆ ಭಿಕ್ಷೆಗಾಗಿ ಕಾಯುತ್ತಿರುವ ಶಂಕರರಿಗೆ ನಮಸ್ಕರಿಸಿ, " ಸ್ವಾಮಿ ನಾವು ಕಡುಬಡವರು, ಮಹಾತ್ಮರಾದ ತಮ್ಮನ್ನು ಉಪಚರಿಸಲು ಮನೆಯಲ್ಲಿ ಏನು ಇಲ್ಲ. ಇದ್ದ ಒಂದು ನೆಲ್ಲಿಕಾಯಿಯನ್ನೇ ತಮಗೆ ಭಕ್ತಿಯಿಂದ ಅರ್ಪಿಸುತ್ತಿದ್ದೇನೆ, ದಯಮಾಡಿ ಸ್ವೀಕರಿಸಿ ಅನುಗ್ರಹಿಸಬೇಕು " ಎಂದು ಕಾಲಿಗೆ ಬೀಳುತ್ತಾಳೆ. ಸಾಕ್ಷಾತ್ ಶಿವನ ಅವತಾರವಾಗಿದ್ದ, ಸರ್ವಜ್ಞರಾದ ಶಂಕರರು, ಆ ಬಡ ಹೆಂಗಸಿನ ತ್ಯಾಗ ಬುದ್ಧಿಯನ್ನೂ, ಭಕ್ತಿಯನ್ನೂ ಮನಗಂಡು ಆ ಕುಟುಂಬದ ಬಡತನವನ್ನು ಹೋಗಲಾಡಿಸಬೇಕೆಂದು ಸಂಕಲ್ಪಮಾಡಿ, ಆಕ್ಷಣವೇ ಜಗನ್ಮಾತೆ ಮಹಾಲಕ್ಷ್ಮಿಯನ್ನು ಕುರಿತು ಸ್ತೋತ್ರವೊಂದನ್ನು ರಚಿಸುತ್ತಾರೆ. ಹಾಗೂ ಮಹಾಲಕ್ಷ್ಮಿಯಲ್ಲಿ ಈ ಬಡ ಕುಟುಂಬವನ್ನು ಉದ್ಧಾರ ಮಾಡಬೇಕೆಂದು ಪ್ರಾರ್ಥಿಸುತ್ತಾರೆ. ಮಹಾಲಕ್ಷ್ಮಿಯ ದಿವ್ಯಾನುಗ್ರಹದಿಂದ ಆ ಬ್ರಾಹ್ಮಣನ ಮನೆಯ ಮುಂದೆ ಬಂಗಾರದ ನೆಲ್ಲಿಕಾಯಿಗಳ ಮಳೆಯೇ ಆಯಿತು. ಆ ಮಹಾಮಹಿಮ ಸ್ತೋತ್ರವೇ " ಕನದಧಾರ ಸ್ತೋತ್ರ ". ಇದನ್ನು 'ಕನಕವೃಷ್ಟಿಸ್ತೋತ್ರ' ವೆಂದೂ ಕರೆಯುವುದುಂಟು. ಶಂಕರಭಗವತ್ಪಾದರ ಪವಾಡ, ಅನುಗ್ರಹಗಳಿಂದ ಬ್ರಾಹ್ಮಣನ ಕುಟುಂಬದವರೆಲ್ಲರೂ ಆನಂದ ತುಂಬಿರಲಾಗುತ್ತಾರೆ. ಶಂಕರರ ಶಿಷ್ಯವೃಂದ ದಿಗ್ಮೂಢವಾಗುತ್ತದೆ. ಬಡ ದಂಪತಿಗಳ

ಕಣ್ಣಲ್ಲಿ ಆನಂದಾಶ್ರುಗಳು ದಾರಾಕಾರವಾಗಿ ಹರಿಯುತ್ತದೆ. ಶಂಕರರ ದಿವ್ಯ ಪಾದಗಳಿಗೆರಗಿ ತಮ್ಮನ್ನು ಉದ್ಧಾರ ಮಾಡಿದ್ದಕ್ಕಾಗಿ ಅನಂತ ಭಗವದ್ಭಕ್ತಿ, ಶ್ರದ್ಧೆ, ಶರಣಾಗತಿ, ಆತ್ಮಸಮರ್ಪಣೆಗಳ ಫಲವೇ ಆಗಿದೆ. ಯಾರು ಸರ್ವಶಕ್ತನಾದ ಪರಮಾತ್ಮನಲ್ಲಿ ಶ್ರವಣ, ಕೀರ್ತನ, ಸ್ಮರಣ, ಪದಸೇವನ, ಅರ್ಚನ, ವಂದನ, ದಾಸ್ಯ, ಸುಖ, ಆತ್ಮನಿವೇದನೆ ಗಳೆಂಬ ನವವಿಧ ಭಕ್ತಿಗಳಿಂದ ಪ್ರಾರ್ಥಿಸುತ್ತಾರೋ ಅವರು ಎಂದೂ ನಾಶವಾಗುವುದಿಲ್ಲ ಎಂದು ಸಾರಿ ತಮ್ಮ ವಿಜಯ ಯಾತ್ರೆಯನ್ನು ಮುಂದುವರೆಸುತ್ತಾರೆ.

ಆಸ್ತಿಕ ಮಹಾಶಯರೂ, ಸದ್ಭಕ್ತರೂ ಈ ಮಹಿಮಾನ್ವಿತ "ಕನಕಧಾರಾ ಸ್ತೋತ್ರ"ವನ್ನು ನಿತ್ಯ ಪಠಿಸಿ ಕೃತಕೃತ್ಯರಾಗಲಿ.

**ಅಂಗಂ ಹರೇ ಪುಲಕಭೂಷಣಮಾಶ್ರಯಂತೀ ಭೃಂಗಾಗನೇವ ಮುಕುಲಾಭರಣಂ ತಮಾಲಂ । ಅಂಗೀಕೃತಾಖಿಲವಿಭೂತಿರಪಾಂಗಲೀಲಾ ಮಾಂಗಲ್ಯದಾಸ್ತು ಮಮ ಮಂಗಳದೇವತಾಯಾ ॥ 1 ॥**

ಭಾವಾರ್ಥ - ತಮಾಲವೆಂಬ ಮರದ ಆಭರಣಪ್ರಾಯವಾದ ಮೊಗ್ಗನ್ನು ಆಶ್ರಯಿಸಿರುವ ಹೆಣ್ಣುದುಂಬಿಯಂತೆ - ಶ್ರೀ ಮಹಾವಿಷ್ಣುವಿನ ರೋಮಾಂಚಗೊಂಡ ಶರೀರವನ್ನು ಅವಲಂಬಿಸಿರುವ, ಮಂಗಳದೇವತೆಯಾದ (ಮಹಾಲಕ್ಷ್ಮಿಯ), ಸಮಸ್ತ ಐಶ್ವರ್ಯಗಳನ್ನೂ ಅಡಗಿಸಿಕೊಂಡಿರುವ ಕುಡಿಗಣ್ಣಿನ ನೋಟಗಳೆಂಬ ಲೀಲೆಯು ನನಗೆ ಮಂಗಳವನ್ನೀಯಲಿ.

**ಮುಗ್ಧಾಮುಹುರ್ವಿದಧತೀ ವದನೇ ಮುರಾರೇ । ಪ್ರೇಮತ್ರಪಾಪ್ರಣೀಹಿತಾನಿ ಗತಾಗತಾನಿ । ಮಾಲಾದೃಶೋರ್ಮಧುಕರೀವ ಮಹೋತ್ಪಲೇ ಯಾ ಸಾ ಮೇ ಶ್ರಿಯಂ ದಿಶತು ಸಾಗರಸಂಭವಾಯಾಃ ॥ 2 ॥**

ಭಾವಾರ್ಥ - ಶ್ರೀ ಮಹಾವಿಷ್ಣುವಿನ ಮುಖದ ಕಡೆಗೆ ಪ್ರೇಮಪೂರ್ವಕವಾದ ನಾಚಿಕೆಯಿಂದ ನೋಟವನ್ನು ಬೀರುತ್ತಾ ಹಾಗೂ ಹಿಂದೆಗೆಯುತ್ತಾ ಮುಗ್ದವಾದ ರೀತಿಯಿಂದ ಚಲಿಸುತ್ತಿರುವ ಎರಡು ದೊಡ್ಡನೈದಿಲೆಗಳಂತೆ ಇರುವ - ಹಾಗೂ

ಹೂಮಾಲೆಯನ್ನು ನೋಡುತ್ತಿರುವ ದುಂಬಿಯಂತೆ ಇರುವ ಸಾಗರಕನ್ನಿಕೆಯಾದ ಲಕ್ಷ್ಮಿಯ ಕಟಾಕ್ಷಗಳು ನನಗೆ ಐಶ್ವರ್ಯವನ್ನುಂಟು ಮಾಡಲಿ

**ಅಮೀಲಿತಾಕ್ಷಮಧಿಗಮ್ಯ ಮುದಾ ಮುಕುಂದಂ – ಆನಂದಕಂದ ಮನಿಮೇಷಮನಂಗ ತಂತ್ರಂ । ಅಕೇಕರಸ್ಥಿತಕನೀನಿಕಪಕ್ಷ್ಮನೇತ್ರಂ ಭೂತ್ಯೈಭವೇನ್ಮಮ ಭುಜಂಗ ಶಯಾಂಗನಾಯಾಃ ॥ 3 ॥**

ಭಾವಾರ್ಥ - ಸ್ವಲ್ಪವೇ ಮುಚ್ಚಿದ ಕಣ್ಣುಳ್ಳ ಹಾಗೂ ಆನಂದಭರಿತನೂ ರೆಪ್ಪೆಯಾಡಿಸದವನೂ ಮನ್ಮಥಾವಿಷ್ಟನೂ ಆದ ಮುಕುಂದ - ವಿಷ್ಣುನನ್ನು ಅರಿತವಳಾದ ನಾಗಶಯನನ ಮಡದಿಯಾದ ಲಕ್ಷ್ಮಿಯ ಕುಡಿಗಣ್ಣಿನ ನೋಟವನ್ನು ಅವಲಂಬಿಸಿರುವ ರೆಪ್ಪೆಗಳುಳ್ಳ ನೇತ್ರವು ನನ್ನ ಐಶ್ವರ್ಯ ಸಂವೃದ್ಧಿಗೆ ಕಾರಣವಾಗಲಿ.

**ಬಾಹ್ವಂತರೇ ಮಧುಜಿತಃ ಶ್ರಿತಕೌಸ್ತುಭೇ ಯಾ ಹಾರಾವಲೀ ಚ ಹರಿನೀಲಮಣೀ ವಿಭಾತಿ । ಕಾಮಪ್ರದಾ ಭವತೋಽಪಿ ಕಟಾಕ್ಷಮಾಲಾ ಕಲ್ಯಾಣಮಾವಹತು ಮೇ ಕಮಲಲಯಾಯಾಃ ॥ 4 ॥**

ಭಾವಾರ್ಥ - ಮಧುಸೂದನನಾದ ವಿಷ್ಣುವಿನ ತೋಳುಗಳ ನಡುವೆ ಹಾಯ್ದ ಕೌಸ್ತುಭ ರತ್ನವನ್ನು ಆಶ್ರಯಿಸಿರುವ ಹಸಿರುಮಿಶ್ರವಾದ ಎರಡು ನೀಲಮಣಿಗಳುಳ್ಳ ಯಾವ ಹಾರವು ಹೋಳೆಯುತ್ತಿದೆಯೋ, ಮತ್ತು ಭಗವಂತನ ಹಾಗೂ ಕಮಲವಾಸಿನಿಯಾದ ದೇವಿಯ ಕುಡಿಗಣ್ಣುಗಳ ನೋಟಗಳ ಸಾಲು ( ಭಕ್ತರಿಗೆ ) ಇಷ್ಟಾರ್ಥಪ್ರದವಾಗಿ ಶೋಭಿಸುತ್ತಿರುವುದೋ - ಅದು ಸಹ ನನಗೆ ಕಲ್ಯಾಣವನ್ನುಂಟು ಮಾಡಲಿ.

**ಕಾಲಾಂಬುದಾಲಿಲಲಿತೋರಸಿ ಕೈಟಭಾರೇ- ರ್ಧಾರಾಧರಸ್ಫುರತಿ ಯಾ ತಟಿದಂಗನೇವ । ಮಾತುಃ ಸಮಸ್ತಜಗತಾಂ ಮಹನೀಯಮೂರ್ತಿ ಭದ್ರಾಣಿ ಮೇ ದಿಶತು ಭಾರ್ಗವನಂದನಾಯಾಃ ॥ 5 ॥**

ಭಾವಾರ್ಥ - ಕೈಟಭಶತೃವಾದ ( ವಿಷ್ಣುವಿನ ) ಕಾಲಮೇಘದಂತೆ ಕಾಂತಿಯುಳ್ಳ ಸುಂದರವಾದ ಎದೆಯಲ್ಲಿ ಮಿಂಚಿನಬಳ್ಳಿಯಂತೆ ಹೊಳೆಯುತ್ತಿರುವ ಖಡ್ಗವಿದೆಯೋ,

ಅದರೋಡನೆಯೇ ಎದೆಯಲ್ಲಿ ನೆಲೆಸಿರುವ ಸಮಸ್ತ ಜಗತ್ತಿಗೂ ತಾಯಿಯಾದ ಮಹಾಶ್ರೇಷ್ಠವಾದ ಭಾರ್ಗವಪುತ್ರಿಯ ದಿವ್ಯರೂಪವು ನನಗೆ ಮಂಗಳವನ್ನುಂಟು ಮಾಡಲಿ.

**ಪ್ರಾಪ್ತಂ ಪದಂ ಪ್ರಥಮತಃ ಖಲು ಯತ್ಪ್ರಭಾವಾತ್ ಮಾಂಗಲ್ಯಭಾಜಿ ಮಧುಮಾಥಿನಿ ಮನ್ಮಥೇನ । ಮಯ್ಯಾಪತೇತ್ತದಿಹ ಮಂದರಮೀಕ್ಷಣಾರ್ಥಂ ಮಂದಾಲಸಾಕ್ಷಿ ಮಕರಾಕರಕನ್ಯಕಾಯಾಃ ॥ 6 ॥**

ಭಾವಾರ್ಥ - ಯಾವ ದೇವಿಯ ಅನುಗ್ರಹ ದೃಷ್ಟಿಯಿಂದ ಮಧುಸೂದನನಲ್ಲಿ ಸ್ಥಾನವು ಮೊದಲ ಬಾರಿಗೆ ಮಂಗಳಕರವಾಗಿ ಮನ್ಮಥನಿಗೆ ದೊರಕಿತೋ ( ಆ ದೇವಿಯ ), ಸಮುದ್ರರಾಜನ ಕನ್ಯೆಯಾದ ಲಕ್ಷ್ಮಿಯ ಕಟಾಕ್ಷವು ಅಲ್ಪವಾಗಿಯಾದರೂ ಮೆಲ್ಲ ಮೆಲ್ಲನೆ ನನ್ನ ಮೇಲೆ ಹರಿಯುವಂತಾಗಲಿ.

**ವಿಶ್ವಾಮರೇಂದ್ರಪದವಿಭ್ರಮದಾನದಕ್ಷ ಮಾನಂದಹೇತುರಧಿಕಂ ಮಧವಿದ್ವಿಷೋಽಪಿ । ಈಷನ್ನಿಷೀದತು ಮಯಿ ಕ್ಷಣಮೀಕ್ಷಣಾರ್ಧ ದೀವರೋದರಸಹೋದರಮಿಂದಿರಾಯಾಃ ॥ 7 ॥**

ಭಾವಾರ್ಥ - ಸಮಸ್ತದೇವತಾಶ್ರೇಷ್ಠರ ಪದವಿಗಳೆಂಬ ಸೌಭಾಗ್ಯವನ್ನು ಕೊಡುವದರಲ್ಲಿ ಸಮರ್ಥವಾದ, ಮತ್ತು ಮಧುಸೂದನನಿಗೂ ಹೆಚ್ಚಿನ ಆನಂದಕಾರಣವಾದ, ಕಮಲದ ಗರ್ಭದಂತೆ ಮೃದುವಾದ ಇಂದಿರಾದೇವಿಯ ಕಣ್ಣಿನ ನೋಟದ ಅರ್ಧ ಭಾಗದಲ್ಲಿ ಒಂದಿಷ್ಟಾದರೂ ನನ್ನಲ್ಲಿ ನೆಲೆಗೊಳ್ಳಲಿ.

**ಇಷ್ಟಾವಿಶಿಷ್ಟಮತಯೋಽಪಿನರಾಯಯಾ ದ್ರಾಗ್ ದೃಷ್ಟಾಸ್ತ್ರಿವಿಷ್ಟಪದಂ ಸುಲಭಂ ಲಭಂತೇ । ದೃಷ್ಟಿಃ ಪ್ರಹೃಷ್ಟಕಮಲೋದರದೀಪ್ತಿರೀಷ್ಟಾಂ ಪುಷ್ಟಿಂ ಕೃಷೀಷ್ಟಮಮ ಪುಷ್ಕರವಿಷ್ಟರಾಯಾಃ ॥ 8 ॥**

ಭಾವಾರ್ಥ - ವಿಶೇಷವಾದ ಪಾಂಡಿತ್ಯವುಳ್ಳ (ದೇವಿಗೆ) ಪ್ರಿಯರಾದ ಮನಷ್ಯರಾರೂ ಒಮ್ಮೆ ದೇವಿಯ ದೃಷ್ಟಿಗೆ ಪಾತ್ರರಾದದ್ದೇ ಆದರೆ ಸುಲಭವಾಗಿ ಸ್ವರ್ಗಪದವಿಯನ್ನು

ಹೊಂದುವರು. ಅರಳಿದ ಕಮಲದ ಒಳಭಾಗದಂತೆ ಕಾಂತಿಯುಳ್ಳ, ಕಮಲಾಸನೆಯಾದ ದೇವಿಯ ಅಂಥ ದೃಷ್ಟಿಯ ನನಗೆ ಪುಷ್ಟಿಯನ್ನುಂಟುಮಾಡಲಿ.

**ದದ್ಯಾದ್ದಯಾನುಪವನೋ ದ್ರವಿಣಾಂಬುಧಾರಾ ಮಸ್ಮಿನ್ನ ಕಿಂಚನ ವಿಹಂಗಶಿಶೌ ವಿಷಣ್ಣೇ । ದುಷ್ಕರ್ಮಘರ್ಮಮಪನೀಯ ಚಿರಾಯ ದೂರಾನ್ನಾರಾಯಣಪ್ರಣಯಿನೀನಯನಾಂಬುವಾಹಃ ॥ 9 ॥**

ಭಾವಾರ್ಥ - ನಾರಾಯಣನ ಪ್ರಿಯೆಯಾದ ದೇವಿಯ ಕಟಾಕ್ಷಪ್ರವಾಹವು ಕೆಟ್ಟ ಕರ್ಮಗಳೆಂಬ ಬಿಸಿಲನ್ನು ನಿತ್ಯವಾಗಿ ದೂರವಾಗಿ ತೊಡೆದುಹಾಕಿ ವಿಷಾದದಿಂದ ಕೂಡಿರುವ ದರಿದ್ರವೆಂಬ ಪಕ್ಷಿಯ ಮರಿಯಾದ (ನನ್ನಲ್ಲಿ ) ದಯೆಯಿಟ್ಟು ಕೃಪೆಯಿಂದ ಗಾಳಿಯಿಂದ ಪ್ರೇರಿಸಲ್ಪಟ್ಟ ಐಶ್ವರ್ಯವೆಂಬ ಮಳೆಯ ಧಾರೆಯುನ್ನುಂಟುಮಾಡಲಿ.

**ಗೀರ್ದೇವತೇತಿ ಗರುಡಧ್ವಜಸುಂದರೀತಿ ಶಾಕಂಭರೀತಿ ಶಶಿಶೇಖರವಲ್ಲಭೇತಿ । ಸೃಷ್ಟಿಸ್ಥಿತಿಪ್ರಲಯಕೇಲಿಷು ಸಂಸ್ಥಿತಾಯೈ ತಸ್ಯೈ ನಮಸ್ತ್ರಿಭುವನೈಕಗುರೋಸ್ತರುಣ್ಯೈ ॥ 10 ॥**

ಭಾವಾರ್ಥ - ವಾಗ್ದೇವಿಯೆಂದೂ ಗರುಡಧ್ವಜನಾದ ವಿಷ್ಣುವಿನ ಪ್ರಿಯಳೆಂದೂ ಶಾಖಂಬರಿಯೆಂದೂ ಚಂದ್ರಶೇಖರನಾದ ಶಿವನ ಪತ್ನಿಯೆಂದೂ ಆಯಾ ಕಾಲಕ್ಕೆ ಎಂದರೆ ಸೃಷ್ಟಿ-ಸ್ಥಿತಿ-ಸಂಹಾರ ಲೀಲೆಗಳಲ್ಲಿ ತೋರಿಕೊಂಡಿರುವವಳಾದ, ಮೂರು ಲೋಕಕ್ಕೂ ಗುರುವಾದ ಶ್ರೀ ಮನ್ನಾರಾಯಣನ ಮಡದಿಯಾದ ಅಕೆಗೆ ವಂದನೆಗಳು.

**ಶ್ರುತ್ಯೈಸಮೋಸ್ತು ಶುಭಕರ್ಮಫಲಪ್ರಸೂತ್ಯೈ ರತ್ಯೈ ನಮೋಸ್ತು ರಮಣೀಯಗುಣಾಶ್ರಯಾಯೈ । ಶಕ್ತ್ಯೈ ನಮೋಸ್ತು ಶತಪತ್ರನಿಕೇತನಾಯೈ ಪುಷ್ಟ್ಯೈ ನಮೋಸ್ತು ಪುರುಷೋತ್ತಮವಲ್ಲಭಾಯೈ ॥ 11 ॥**

ಭಾವಾರ್ಥ - ಶುಭಕರ್ಮಗಳ ಫಲವನ್ನು ಉಂಟುಮಾಡುವ ಶ್ರುತಿರೂಪಳಾದ ದೇವಿಗೆ ನಮಸ್ಕಾರವು. ರಮಣೀಯವಾದ ಗುಣಗಳಿಗೆ ಆಶ್ರಯಳಾದ ರತತಿಗೆ ನಮಸ್ಕಾರಗಳು. ಕಮಲನಿವಾಸಿನಿಯಾದ ಶಕ್ತಿರೂಪಳಾದ ಲಕ್ಷ್ಮಿಗೆ ನಮಸ್ಕಾರಗಳು. ಪುರುಷೋತ್ತಮನ ಪತ್ನಿಯಾದ ಪುಷ್ಟಿದೇವಿಗೆ ನಮಸ್ಕಾರಗಳು.

**ನಮೋಸ್ತು ನಾಲಿಕನಿಭಾನನಾಯ್ಯೈ ನಮೋಸ್ತು ದಿಗ್ಧೋದಧಿಜನ್ಮಭೂಮ್ಯೈ । ನಮೋಸ್ತು ಸೋಮಾಮೃತಸೋದರಾಯ್ಯೈ ನಮೋಸ್ತು ನಾರಾಯಣವಲ್ಲಭಾಯ್ಯೈ ॥ 12 ॥**

ಭಾವಾರ್ಥ - ಕಮಲದಂತೆ ಸುಂದರವಾದ ಮುಖವುಳ್ಳ ದೇವಿಗೆ ನಮಸ್ಕಾರ. ಕ್ಷೀರಸಮುದ್ರವನ್ನು ಜನ್ಮಸ್ಥಾನವಾಗಿ ಹೊಂದಿರುವವಳಿಗೆ ನಮಸ್ಕಾರ. ಸಮುದ್ರಮಂಥನ ಕಾಲದಲ್ಲಿಯೇ ( ಲಕ್ಷ್ಮಿಯೊಡನೆ ) ಹುಟ್ಟಿದ ಚಂದ್ರ ಹಾಗೂ ಅಮೃತಗಳಿಗೆ ಸೋದರಿಯಾದವಳಿಗೆ ನಮಸ್ಕಾರ ನಾರಾಯಣನ ವಲ್ಲಭೆಗೆ ವಂದನೆಗಳು.

**ನಮೋಸ್ತು ಹೇಮಾಂಭುಜಪೀಠಕಾಯ್ಯೈ ನಮೋಸ್ತು ಭೂಮಂಡಲನಾಯಿಕಾಯ್ಯೈ । ನಮೋಸ್ತು ದೇವಾದಿದಯಾಪರಾಯ್ಯೈ ನಮೋಸ್ತು ಶಾರ್ಙ್ಗಾಯುಧವಲ್ಲಭಾಯ್ಯೈ ॥ 13 ॥**

ಭಾವಾರ್ಥ - ಸುವರ್ಣಕಮಲಪೀಠವಾಸಿನಿಯಾದ, ಭೂಮಂಡಲಕ್ಕೆಲ್ಲ ಒಡೆಯಳಾದ, ದೇವಾದಿ ಸಮಸ್ತ ಜೀವಿಗಳಲ್ಲಿಯೂ ದಯೆಯುಳ್ಳ ಮತ್ತು ಶಾರ್ಙ್ಗವೆಂಬ ಬಿಲ್ಲನ್ನು ಧರಿಸಿರುವ ವಿಷ್ಣುವಿನ ಪತ್ನಿಯಾದ ದೇವಿಗೆ ನಮಸ್ಕಾರಗಳು.

**ನಮೋಸ್ತು ದೇವ್ಯೈ ಭೃಗುನಂದನಾಯ್ಯೈ ನಮೋಸ್ತು ವಿಷ್ಣೋರುರಸಿ ಸ್ಥಿತಾಯ್ಯೈ । ನಮೋಸ್ತು ಲಕ್ಷ್ಮ್ಯೈ ಕಮಲಾಲಯಾಯ್ಯೈ ನಮೋಸ್ತು ದಾಮೋದರವಲ್ಲಭಾಯ್ಯೈ ॥ 14 ॥**

ಭಾವಾರ್ಥ - ಭೃಗುಪುತ್ರಿಯಾದ ದೇವಿಗೆ, ವಿಷ್ಣವಿನ ಹೃದಯವಾಸಿನಿಯಾದವಳಿಗೆ, ಕಮಲವಾಸಿನಿಯಾದ ಲಕ್ಷ್ಮಿಗೆ, ದಾಮೋದರನ ಪತ್ನಿಯಾದ ಮಹಾದೇವಿಗೆ ವಂದನೆಗಳು.

**ನಮೋಸ್ತು ಕಾಂತ್ಯೈ ಕಮಲೇಕ್ಷಣಾಯ್ಯೈ ನಮೋಸ್ತು ಭೂತ್ಯೈ ಭವನಪ್ರಸೂತ್ಯೈ । ನಮೋಸ್ತು ದೇವಾದಿಭಿರರ್ಚಿತಾಯ್ಯೈ ನಮೋಸ್ತು ನಂದಾತ್ಮಜವಲ್ಲಭಾಯ್ಯೈ ॥ 15 ॥**

ಭಾವಾರ್ಥ - ಕಮಲದಂತೆ ಕಂಗಳುಳ್ಳ ಪ್ರಕಾಶಮಾನಳಾದವಳಿಗೂ, ಜಗತ್ತನ್ನು ಹಡೆದಿರುವ ಮಹಿಮಾವಂತಳಿಗೂ ದೇವತೆಗಳೇ ಮೊದಲಾದವರಿಂದ ಪೂಜಿಸಲ್ಪಟ್ಟವಳಿಗೂ ನಂದಗೋಪನ ಮಜಗಳಾದ ದುರ್ಗೆಗೆ ಪ್ರಿಯಳಾಗಿಯೂ ಇರುವ ಮಹಾಲಕ್ಷ್ಮಿಗೆ ನಮಸ್ಕಾರಗಳು.

**ಸಂಪತ್ಕರಾಣಿ ಸಕಲೇಂದ್ರಿಯ ನಂದನಾನಿ ಸಾಮ್ರಾಜ್ಯದಾನವಿಭವಾನಿ ಸರೋರುಹಾಣಿ । ತ್ವದ್ವಂದನಾನಿ ದುರಿತಾಹರಣೋದ್ಯತಾನಿ ಮೂಮೇವ ಮಾತರನಿಶಂ ಕಲಯಂತು ಮಾನ್ಯೇ ॥ 16 ॥**

ಭಾವಾರ್ಥ - ಸಂಪತ್ತುಗಳನ್ನು ನೀಡುವ, ಎಲ್ಲಾ ಇಂದ್ರಿಯಗಳಿಗೂ ಆನಂದವನ್ನುಂಟುಮಾಡುವ, ಸಾಮ್ರಾಜ್ಯ ಪದವಿಯನ್ನು ದಯಪಾಲಿಸುವ ನಿನ್ನ ಪಾದಕಮಲಗಳನ್ನು ನಮಸ್ಕರಿಸುವಿಕೆಯು ಸಕಲ ಪಾಪಗಳನ್ನೂ ಕಳೆಯುವುದರಲ್ಲಿ ಮುಂದಾಗಿರುವವು. ಎಲೌ ತಯೆ, ಮಾನನೀಯಳೆ, ಆ ವಂದನೆಗಳು ಯಾವಾಗಲೂ ನನಗೆ ಸಂಭವಿಸುತ್ತಿರಲಿ.

**ಯತ್ಕಟಾಕ್ಷಸಮುಪಾಸನಾವಿಧಿಃ ಸೇವಕಸ್ಯ ಸಕಲಾರ್ಥಸಂಪದಃ । ಸಂತನೋತಿ ವಚನಾಂಗಮಾನಸೈಸ್ತ್ವಾಂ ಮುರಾರಿಹೃದಯೇಶ್ವರೀಂ ಭಜೇ ॥ 17 ॥**

ಭಾವಾರ್ಥ - ಯಾವ ದೇವಿಯ ಕುಡಿಗಣ್ಣಿನ ನೋಟದ ಚಿಂತನೆಯು ಸೇವಕನಾದ ಭಕ್ತನಿಗೆ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದೋ ಅಂಥ, ಮರಾರಿಯಾದ ನಾರಾಯಣನ ಹೃದಯೇಶ್ವರಿಯಾದ ನಿನ್ನನ್ನು ಕಾಯೇನ-ಮನಸಾ-ವಾಚಾ ( ತ್ರಿಕರಣಗಳಿಂದಲೂ) ಭಜಿಸುವೆನು.

**ಸರಸಿಜನಯನೇ ಸರೋಜಹಸ್ತೇ ಧವಲತಮಾಂಶುಕಗಂಧಮಾಲ್ಯಶೋಭೇ । ಭಗವತಿ ಹರಿವಲ್ಲಭೇ ಮನೋಜ್ಞೇ ತ್ರಿಭುವನಭೂತಿಕರಿ ಪ್ರಸೀದ ಮಹ್ಯಂ ॥ 18 ॥**

ಭಾವಾರ್ಥ - ಕಮಲದಂತೆ ಕಣ್ಣುಳ್ಳವಳೆ, ಕೈಯಲ್ಲಿ ಕಮಲವನ್ನು ಹಿಡಿದಿರುವವಳೆ, ಅತ್ಯಂತ ಶುಭ್ರವಾದ ವಸ್ತ್ರ, ಗಂಧ, ಹೂಮಾಲೆಗಳಿಂದ ಶೋಭಿಸುತ್ತಿರುವವಳೆ,

ಪೂಜ್ಯಳೆ, ಶ್ರೀಹರಿಯ ಪ್ರಿಯಳೆ, ಮನೋಜ್ಞಳೆ, ಮೂರು ಲೋಕಗಳ ಐಶ್ವರ್ಯಗಳ ಐಶ್ವರ್ಯವನ್ನು ಕೊಡುವವಳೆ, ನನಗೆ ಪ್ರಸನ್ನಳಾಗು.

**ದಿಗ್ ಹಸ್ತಿಭಿಃ ಕನಕಕುಂಭಮುಖಾವಸೃಷ್ಟ- ಸ್ವರ್ವಾಹಿನೀವಿಮಲಚಾರು ಜಲಾಪ್ಲುತಾಂಗೀಮ । ಪ್ರಾತರ್ನಮಾಮಿ ಜಗತಾಂ ಜನನೀಮಶೇಷ- ಲೋಕಾಧಿನಾಥಗೃಹಿಣೀಮಮೃತಾಬ್ಧಿಪುತ್ರೀಂ ॥ 19 ॥**

ಭಾವಾರ್ಥ - ದಿಗ್ಗಜಗಳ ( ಸೊಂಡಿಲುಗಳಲ್ಲಿರುವ) ಚಿನ್ನದ ಕಲಶಗಳ ಬಾಯಿಂದ ಸುರಿಯಲ್ಪಟ್ಟ ಆಕಾಶಗಂಗೆಯ ದಿವ್ಯಜಲದಿಂದ ತೋಯಿಸಲ್ಪಟ್ಟ ಶರೀರವುಳ್ಳವಳೂ, ಜಗತ್ತಿಗೇ ತಾಯಿಯೂ, ಸಮಸ್ತ ಲೋಕಗಳ ಒಡೆಯನಾದ ( ವಿಷ್ಣುವಿನ ) ಪತ್ನಿಯೂ, ಅಮೃತಸಮುದ್ರರಜನ ಮಗಳೂ ಆದ ದೇವಿಯನ್ನು ನಾನು ಪ್ರಾತಃಕಾಲದಲ್ಲಿ ವಂದಿಸುವೆನು.

**ಕಮಲೇ ಕಮಲಾಕ್ಷವಲ್ಲಭೇ ತ್ವಂ ಕರುಣಾಪೂರತರಂಗಿತೈರಪಾಂಗೈಃ । ಅವಲೋಕಯ ಮಾಮಕಿಂಚನಾನಾಂ ಪ್ರಥಮಂ ಪಾತ್ರಮಕೃತ್ರಿಮಂ ದಯಾಯಾಃ ॥ 20 ॥**

ಭಾವಾರ್ಥ - ಎಲೌ ಕಮಲಾದೇವಿಯ, ಕಮಲನಯನನಾದ ವಿಷ್ಣುವಿನ ಪ್ರಿಯಳೆ, ನೀನು ಕರುಣೆಯಿಂದ ತುಂಬಿದ ಚಂಚಲವಾದ ಕುಡಿನೋಡಗಳಿಂದ ನನ್ನನ್ನು ನೋಡುವವಳಾಗು. ದರಿದ್ರದಲ್ಲಿ ಮೊದಲಿಗನೂ ದಯೆತೋರಬೇಕಾದವರ ಗುಂಪಿನಲ್ಲಿ ಅರ್ಹನೂ ಕಪಟವಿಲ್ಲದವನೂ ನಾನಾಗಿರುವೆನಷ್ಟೆ?

**ಸ್ತುವಂತಿ ಯೇ ಸ್ತುತಿಭಿರಮೀಭಿರನ್ವಹಂ ತ್ರಯೀಮಯೀಂ ತ್ರಿಭುವನಮಾತರಂ ರಮಾಂ । ಗುಣಾಧಿಕಾ ಗುರುತರಭಾಗ್ಯಭಾಜಿನೋ ಭವಂತಿ ತೇ ಭುವಿ ಬುಧಭಾವಿತಾಶಯಾಃ ॥ 21 ॥**

ಭಾವಾರ್ಥ - ಯಾರು ಈ ದಿವ್ಯ ಸ್ತುತಿಗಳಿಂದ ವೇದಮಯಳೂ, ಮೂರು ಲೋಕಗಳ ತಾಯಿಯೂ ಆದ ರಮಾದೇವಿಯನ್ನು ಸ್ತೋತ್ರ ಮಾಡುವರೋ ಅವರು ಈ ಭೂಲೋಕದಲ್ಲಿ ಗುಣಸಂಪನ್ನರೂ ಅತ್ಯಧಿಕವಾದ ಐಶ್ವರ್ಯಯುಕ್ತರೂ, ವಿದ್ವಾಂಸರಿಂದ ಗೌರವಿಸಲ್ಪಡುವವರೂ ಆಗಿ ಸುಖಿಸುವರು.

॥ ಇತಿ ಶ್ರೀ ಜಗದ್ಗುರು ಆದಿಶಂಕರಾಚಾರ್ಯ ವಿರಚಿತ ಕನಕಧಾರಾ ಸ್ತೋತ್ರಂ ಸಂಪೂರ್ಣಂ ॥

## 5.26 ಶ್ಯಾಮಲಾನವರತ್ನ ಮಾಲಿಕಾ ಸ್ತೋತ್ರಂ

**ಕುಚಾಂಚಿತ ವಿಪಂಚಿಕಾಂ ಕುಟಿಲಕುಂತಲಾಲಂಕೃತಾಂ । ಕುಶೇಶಯನಿವೇಶಿನೀಂ ಕುಟಿಲಚಿತ್ತ ವಿದ್ವೇಷಿಣೀಂ ॥**

ಭಾವಾರ್ಥ - ಮುಂಗುರುಳುಗಳಿಂದ ಅಲಂಕೃತಳಾದ, ದರ್ಭಾಸನೆಯಾದ ಕುಟಿಲ ತಂತ್ರ ದ್ವೇಷಿಸುವವಳಾದ ವೀಣಾಪಾಣಿ.

**ಮದಾಲಸಗತಿ ಪ್ರಿಯಾಂ ಮನಸಿಜಾರಿರಾಜ್ಯಶ್ರೀಯಂ । ಮತಂಗಕುಲ ಕನ್ಯಕಾಂ ಮಧುರಭಾಷಿಣೀ ಮಾಶ್ರಯೇ ॥**

ಭಾವಾರ್ಥ - ಮಧವೇರಿದ ಆನೆಯಂತೆ ನಡಿಗೆಯುಳ್ಳ, ಮನ್ಮಥನ ಶತ್ರುವಾದ ಶಿವನ ರಾಜ್ಯಶ್ರೀ, ಮತಂಗರಾಜನ ಕುಲಕನ್ಯೆ, ಮಧುರಭಾಷಿಣಿ ಆದ ಶ್ಯಾಮಲೆಯನ್ನು ಆಶ್ರಯಿಸುತ್ತೇನೆ.

**ಕುಂದಮುಕುಳಾಗ್ರದಂತಾಂ ಕುಂಕುಮಪಂಕೇನ ಲಿಪ್ತ ಕುಚಭಾರಾಂ । ಆನೀಲನೀಲದೇಹಾಂ ಅಂಬಾಮುಖಿಲಾಂಡನಾಯಕೀಂ ವಂದೇ ॥**

ಭಾವಾರ್ಥ - ಮುತ್ತಿನಂತೆ ದಂತ ಪಂಕ್ತಿಯುಳ್ಳ ಕುಂಕುಮರಾಗ ಶೋಭಿತಳಾದ ದೇಹ ಸೌಂದರ್ಯವುಳ್ಳ ಶ್ಯಾಮಲವರ್ಣಳಾದ ಅಖಿಲಾಂಡನಾಯಕಿ ಅಂಬಾ ನಿನ್ನನ್ನು ವಂದಿಸುತ್ತೇನೆ.

**ಸ್ತೋತ್ರಂ**

**ಓಂಕಾರ ಪಂಜರ ಶುಕೀಮುಪನಿಷದುದ್ಯಾನ ಕೇಳಿ ಕಲಕಂಠೀಂ । ಆಗಮವಿಪಿನ ಮಯೂರೀಂ ಆರ್ಯಾಮಂತರ್ವಿಭಾವಯೇ ಗೌರೀಂ ॥1॥**

ಭಾವಾರ್ಥ - ಓಂಕಾರವೆಂಬ ಪಂಜರದಲ್ಲಿ ಗಿಳಿಯಂತಿರುವ ಉಪನಿಷತ್ ಎಂಬ ಉದ್ಯಾನದಲ್ಲಿ ವಿಹರಿಸುವ ಮಧುರ ಕಂಠವುಳ್ಳ ಆಗಮವೆಂಬ ಕಾಡಿನಲ್ಲಿ ನವಿಲಿನಂತೆ ಸಂಚರಿಸುವ ತಾಯಿ ಗೌರಿ ನಿನ್ನನ್ನು ಧ್ಯಾನಿಸುತ್ತೇನೆ.

**ದಯಮಾನ ದೀರ್ಘನಯನಾಂ ದೇಶಿಕರೂಪೇಣ ದರ್ಶಿತಾಭ್ಯುದಯಾಂ । ವಾಮಕುಚನಿಹಿತ ವೀಣಾಂ ವರದಾಂ ಸಂಗೀತ ಮಾತೃಕಾಂ ವಂದೇ ॥2॥**

ಭಾವಾರ್ಥ - ದಯೆಯನ್ನೇ ಸೂಸುವ ಕಣ್ಣುಗಳುಳ್ಳ, ದೇಶಿಕ ರೂಪದಿಂದ ಅಭ್ಯುದಯಕ್ಕಾಗಿ ದರ್ಶನ ನೀಡುವ ವೀಣಾಪಾಣಿ ವರದೆ, ಸಂಗೀತಕ್ಕೆ ಮಾತೃ ಸ್ವರೂಪಳಾದ ಶ್ಯಾಮಲೆಯನ್ನು ವಂದಿಸುತ್ತೇನೆ.

**ಶ್ಯಾಮತನುಸೌಕುಮಾರ್ಯಾಂ ಸೌಂದರ್ಯ್ಯನಂದಸಂಪದುನ್ಮೇಷಾಂ । ತರುಣಿಮಕರುಣಾಪೂರಾಂ ಮದಜಲಕಲ್ಲೋಲ ಲೋಚನಾಂ ವಂದೇ ॥3॥**

ಭಾವಾರ್ಥ - ಸುಕುಮಾರ್ಯಾ ನೀಲವರ್ಣ ಶರೀರವುಳ್ಳ, ಸೌಂದರ್ಯ ಆನಂದ ಸಂಪತ್ತುಗಳುಳ್ಳ, ಕರುಣಾಪೂರ್ಣಳಾದ ತರುಣೆ, ಆನಂದಬಾಷ್ಪಗಳಿಂದ ಕೂಡಿದ ಕಣ್ಣುಗಳುಳ್ಳ ಶ್ಯಾಮಲೆಯನ್ನು ವಂದಿಸುತ್ತೇನೆ.

**ನಖಮುಖ ಮುಖರಿತವೀಣಾನಾದರಸಾಸ್ವಾದನವನ ವೋಲ್ಲಾಸಂ । ಮುಖಮಂಬ! ಮೋದಯತು ಮಾಂ ಮುಕ್ತಾ ತಾಟಂಕ ಮುಗ್ಧ ಹಸಿತಂ ತೇ ॥4॥**

ಭಾವಾರ್ಥ - ಉಗುರಿನ ತುದಿಯಿಂದ ಮೀಟಿದ ವೀಣಾನಾದದ ರಸಾಸ್ವಾದದಿಂದ ನವೋಲ್ಲಾಸಳಾದ ನಗೆಮುಖವುಳ್ಳ ಅಂಬಾ ನಿನ್ನನ್ನು ನೋಡಿ ಸಂತೋಷಪಡುತ್ತೇನೆ.

**ಸರಿಗಮಪಧನಿರುತಾಂತಾಂ ವೀಣಾಸಂಕ್ರಾಂತಕಾಂತ ಹಸ್ತಾಂ ತಾಂ । ಶಾಂತಾಂ ಮೃದಳಸ್ವಾಂತಾಂ ಕುಚಭರತಾಂತಾಂ ನಮಾಮಿಶಿವಕಾಂತಾಂ ॥5॥**

ಭಾವಾರ್ಥ - ಸರಿಗಮಪದನಿ-ಸ್ವರಗಳಲ್ಲಿ ನಿರತಳಾದ, ವೀಣೆಯನ್ನು ಪಿಡಿದಿಹ ಶಾಂತಳಾದ ಮೃದುಸ್ವಭಾವದವಳಾದ, ಶಿವಕಾಂತೆಯಾದ ದೇವಿ ನಿನಗೆ ವಂದಿಸುತ್ತೇನೆ.

**ಅವಟುತಟ ಘಟಿತ ಚೂಳಿತಾಡಿತತಾಳೀ ಫಲಾಶತಾಟಂಕಾಂ । ವೀಣಾವಾದನ ಮೇಳ ಕಂಪಿತಶೀಷಾಂ ನಮಾಮಿ ಮಾತಂಗೀಂ ॥6॥**

ಭಾವಾರ್ಥ - ಲಯಭರಿತ ನಡೆಯುಳ್ಳ ವೀಣಾವಾದನದ ಮೇಳದಿಂದ ತಲೆತೂಗುತ್ತಿರುವ ಮಾತಂಗಿಗೆ ನಮಸ್ಕರಿಸುತ್ತೇನೆ.

**ವೀಣಾರವಾನುಷಂಗ ವಿಕಚಮುಖಾಂಭೋಜ ಮಾಧುರೀ ಭೃಂಗಂ । ಕರುಣಾಪೂರತರಂಗಂ ಕಲಯೇ ಮಾತಂಗ ಕನ್ಯಕಾಪಾಂಗಂ ॥7॥**

ಭಾವಾರ್ಥ - ಮಾಧುರ್ಯ ಮುಖವು ವೀಣಾವಾದನದಿಂದ ಕಮಲಪುಷ್ಪಕ್ಕೆ ಆಕರ್ಷಿಸಿದ ದುಂಬಿಯಂತೆ ಕರುಣಾಪೂರಿತ ತರಂಗಗಳಿಂದ ಕೂಡಿದ ಮಾತಂಗ ಕನ್ಯೆಯನ್ನು ನಮಸ್ಕರಿಸುತ್ತೇನೆ.

**ಮಣಿಭಂಗ ಮೇಚಕಾಂಗೀಂ ಮಾತಂಗೀಂ ನೌಮಿ ಸಿದ್ಧಮಾತಂಗೀಂ । ಯೌವನವನಸಾರಂಗೀಂ ಸಂಗೀತಾಂಭೋರು ಹಾನುಭವಭೃಂಗೀಂ ॥8॥**

ಭಾವಾರ್ಥ - ರತ್ನಖಚಿತ ಆಭರಣ ಧರಿಸಿಹ ಶೋಭಿತ ಮಾತಂಗಿ, ಯೌವನವನದಲ್ಲಿ ಜಿಂಕೆಯಂತೆ ವಿಹರಿಸುವ, ಸಂಗೀತವೆಂಬ ಕಮಲವನ್ನು ಅನುಭವಿಸುವ ದುಂಬಿಯಂತೆ ಇರುವವಳೇ ಮಾತಂಗಿ ನಿನಗೆ ನಮಸ್ಕರಿಸುತ್ತೇನೆ.

**ಮೇಚಕಮಾಸೇಚನಕಂ ಮಿಥ್ಯಾ ದೃಷ್ಟಾಂತಮಧ್ಯಭಾಗಂ ತೇ । ಮಾತಸ್ಸ್ವರೂಪಮನಿಶಂ ಮಂಗಳ ಸಂಗೀತ ಸೌರಭಂ ವಂದೇ ॥9॥**

ಭಾವಾರ್ಥ - ಪ್ರಪಂಚದ ಮಿಥ್ಯಾ ದೃಷ್ಟಾಂತಕ್ಕೆ ಕಾರಣಳಾದ, ಗಣಪತಿಯ ತಾಯಿಗೆ, ಮಂಗಳ ಸಂಗೀತದಿಂದ ಕೂಡಿದ ದೇವಿಗೆ ನಮಸ್ಕರಿಸುತ್ತೇನೆ.

**ನವರತ್ನ ಮಾಲ್ಯ ಮೇತತ್ ರಚಿತಂ ಮಾತಂಗಕನ್ಯಕಾಭರಣಂ । ಯಃ ಪಠತಿ ಭಕ್ತಿಯುಕ್ತಃ ಸಂಭವೇದ್ವಾಗೀಶ್ವರೀ ಸಾಕ್ಷಾತ್ ॥10॥**

ಭಾವಾರ್ಥ - ಈ ನವರತ್ನಮಾಲಿಕೆ ಮಾತಂಗ ಕನ್ನಿಕೆಯ ಆಭರಣವಾಗಿ ರಚಿಸಲ್ಪಟ್ಟಿದೆ. ಇದನ್ನು ಭಕ್ತಿಯಿಂದ ಪಠಿಸಿದರೆ ಸಾಕ್ಷಾತ್ ವಾಗೀಶ್ವರಿಯು ಪ್ರಸನ್ನಳಾಗುತ್ತಾಳೆ.

॥ ಇತಿ ಶ್ರೀ ಜಗದ್ಗುರು ಆದಿಶಂಕರಾಚಾರ್ಯ ವಿರಚಿತ ಶ್ಯಾಮಲಾನವರತ್ನ ಮಾಲಿಕಾ ಸ್ತೋತ್ರಂ ಸಂಪೂರ್ಣಂ ॥

## 5.27 ಶ್ರೀ ಅನ್ನಪೂರ್ಣಾ ಸ್ತೋತ್ರಂ

**ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರೀ**
**ನಿರ್ಧೂತಾಖಿಲಘೋರಪಾವನಕರೀ ಪ್ರತ್ಯಕ್ಷಮಾಹೇಶ್ವರೀ ।**
**ಪ್ರಾಲೇಯಾಚಲವಂಶಪಾವನಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ**
**ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥1॥**

ಭಾವಾರ್ಥ - ನಿತ್ಯವೂ ಆನಂದವನ್ನು ನೀಡುವವಳೂ, ಭಕ್ತರಿಗೆ ವರವನ್ನೂ ಅಭಯವನ್ನೂ ಕರುಣಿಸುವವಳೂ, ಸೌಂದರ್ಯದ ನಿಧಿಯೂ, ಭಕ್ತರ ಪಾಪಗಳನ್ನು ಕಳೆದು ಅವರನ್ನು ಪಾವನರನ್ನಾಗಿಸುವವಳೂ, ಸಾಕ್ಷಾತ್ ಮಾಹೇಶ್ವರೀ ಸ್ವರೂಪಳೂ, ಪರ್ವತರಾಜನ ವಂಶವನ್ನು ಪುನೀತಗೊಳಿಸಿದವಳೂ, ಕಾಶೀ ಪಟ್ಟಣದ ಅಧೀಶ್ವರಿಯೂ, ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ನಾನಾರತ್ನವಿಚಿತ್ರಭೂಷಣಕರೀ ಹೇಮಾಂಬರಾಡಂಬರೀ**
**ಮುಕ್ತಾಹಾರವಿಲಂಬಮಾನವಿಲಸದ್ವಕ್ಷೋಜಕುಂಭಾಂತರೀ । ಕಾಶ್ಮೀರಾಗರುವಾಸಿತಾ**
**ರುಚಿಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ ಕೃಪಾವಲಂಬನಕರೀ**
**ಮಾತಾನ್ನಪೂರ್ಣೇಶ್ವರೀ ॥2॥**

ಭಾವಾರ್ಥ - ವಿಧವಿಧವಾಗಿರುವ ಚಿತ್ರವಿಚಿತ್ರವಾಗಿರುವ ಆಶ್ಚರ್ಯಕಾರಕವಾದ ರತ್ನಾಭರಣಗಳನ್ನು ಧರಿಸಿದವಳೂ ಹೊಂಬಣ್ಣದ ವಸನಗಳಿಂದ ಶೋಭಿಸುತ್ತಿರುವವಳೂ, ವಕ್ಷಸ್ಥಳದ ಮೇಲೆ ಪ್ರಕಾಶಮಾನವಾದಂತಹಾ ಮುತ್ತಿನ

ಹಾರವನ್ನು ಧರಿಸಿಕೊಂಡಿರುವವಳೂ, ಕೇಸರಿ-ಅಗರುಗಳಿಂದ ಸುವಾಸಿತಳಾದವಳೂ, ಕಾಂತಿಯುತಳಾಗಿರುವವಳೂ ಕಾಶೀ ಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಯೋಗಾನಂದಕರೀ ರಿಪುಕ್ಷಯಕರೀ ಧರ್ಮಾರ್ಥನಿಷ್ಠಾಕರೀ**
**ಚಂದ್ರಾರ್ಕಾನಲಭಾಸಮಾನಲಹರೀ ತ್ರಿಲೋಕ್ಯರಕ್ಷಾಕರೀ ।**
**ಸರ್ವೈಶ್ವರ್ಯಸಮಸ್ತವಾಂಛಿತಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ**
**ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥3॥**

ಭಾವಾರ್ಥ - ಯೋಗಾನಂದದಾಯಕಳೂ, ಶತ್ರು ಸಂಹಾರಕಳೂ, ಧರ್ಮ-ಅರ್ಥಗಳಲ್ಲಿ ಶ್ರದ್ಧೆ ಉಂಟುಮಾಡುವವಳೂ, ಚಂದ್ರ-ಸೂರ್ಯ-ಅಗ್ನಿಗಳ ಕಿರಣಕ್ಕೆ ಸಮಾನವಾದ ದೇಹಕಾಂತಿಯುಳ್ಳವಳೂ, ಮೂರು ಲೋಕಗಳನ್ನು ಪಾಲಿಸುವವಳೂ, ಹಾಗೆಯೇ ಸಮಸ್ತ ಐಶ್ವರ್ಯಗಳನ್ನೂ ವಾಂಛಿತಾರ್ಥಗಳನ್ನೂ ದಯಪಾಲಿಸುವವಳೂ ಕಾಶೀಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಕೈಲಾಸಾಚಲಕಂದರಾಲಯಕರೀ ಗೌರೀಹ್ಯುಮಾ ಶಂಕರೀ ಕೌಮಾರೀ**
**ನಿಗಮಾರ್ಥಗೋಚರಕರೀ ಓಂಕಾರಬೀಜಾಕ್ಷರೀ । ಮೋಕ್ಷ ದ್ವಾರಕಪಾಟಪಾಟನಕರೀ**
**ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ**
**॥4॥**

ಭಾವಾರ್ಥ - ಕೈಲಾಸ ಪರ್ವತದ ಗುಹೆಗಳನ್ನು ತನ್ನ ಆಲಯವನ್ನಾಗಿಸಿಕೊಂಡವಳೂ, ಗೌರಿ, ಉಮೆ, ಶಂಕರಿ ಹಾಗೆಯೇ ಕೌಮಾರೀ ಸ್ವರೂಪಳೂ, ವೇದಗಳ ಮಹತ್ವವನ್ನು ಮನಗಾಣಿಸುವವಳೂ, ಓಂಕಾರ ಬೀಜಾಕ್ಷರದ ಮೂಲ ಸ್ವರೂಪಳೂ, ಮೋಕ್ಷದ ಹೆಬ್ಬಾಗಿಲನ್ನು ತೆರೆಯುವವಳೂ, ಕಾಶೀಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ

ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ದೃಶ್ಯಾದೃಶ್ಯಪ್ರಭೂತವಾಹನಕರೀ ಬ್ರಹ್ಮಾಂಡಭಾಂಡೋದರೀ**
**ಲೀಲಾನಾಟಕಸೂತ್ರಭೇಧನಕರೀ ವಿಜ್ಞಾನದೀಪಾಂಕುರೀ ।**
**ಶ್ರೀವಿಶ್ವೇಶಮನಃಪ್ರಸಾದನಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ**
**ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥5॥**

ಭಾವಾರ್ಥ - ಸೃಷ್ಟಿಯಲ್ಲಿ ಗೋಚರವಾದ ಹಾಗೂ ಅಗೋಚರವಾದ ಸಮಸ್ತ ವಸ್ತುಗಳನ್ನು ವಹಿಸಿಕೊಂಡಿರುವವಳೂ, ಬ್ರಹ್ಮಾಂಡವನ್ನು ಒಡವೆಯ ರೂಪದಲ್ಲಿ ತನ್ನ ಉದರದಲ್ಲಿ ಧರಿಸಿಕೊಂಡವಳೂ, ಲೀಲಾನಾಟಕದ ನಿಬಂದನೆಗಳನ್ನು ಬೇಧಿಸಬಲ್ಲವಳೂ, ವಿಜ್ಞಾನವೆಂಬ ಸೊಡರು ಪ್ರಕಾಶಿಸಲು ಕಾರಣೀಭೂತಳೂ, ಶ್ರೀವಿಶ್ವೇಶ್ವರನ ಮನಸ್ಸಿಗೆ ಮುದನೀಡುವಾಕೆಯೂ ಕಾಶೀಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಉರ್ವೀಸರ್ವಜನೇಶ್ವರೀ ಭಗವತೀ ಮಾತಾನ್ನಪೂರ್ಣೇಶ್ವರೀ**
**ವೇಣೀನೀಲಸಮಾನಕುಂತಲಧರೀ ನಿತ್ಯಾನ್ನದಾನೇಶ್ವರೀ । ಸರ್ವಾನಂದಕರೀ**
**ದಶಾಶುಭಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ ಕೃಪಾವಲಂಬನಕರೀ**
**ಮಾತಾನ್ನಪೂರ್ಣೇಶ್ವರೀ ॥6॥**

ಭಾವಾರ್ಥ - ಬ್ರಹ್ಮಾಂಡದ ಸಮಸ್ತ ಜೀವಿಗಳಿಗೂ ಈಶ್ವರಿಯೂ, ಭಗವತಿಯೂ, ತಾಯಿಯೂ, ಅನ್ನಪೂರ್ಣೇಶ್ವರಿಯೂ ಕಪ್ಪಾಗಿರುವ ಕೂದಲುಗಳಿಂದ ಮನೋಹರವಾಗಿ ಜಡೆಯನ್ನು ಹೆಣೆದುಕೊಂಡವಳೂ, ಅನುದಿನವೂ ಪ್ರಾಣಶಕ್ತಿದಾಯಕವಾಗಿರುವ ಅನ್ನ ಪ್ರಸಾದವನ್ನು ಕರುಣಿಸುವವಳೂ, ಸರ್ವಾನಂದದಾಯಕಳೂ, ಸೌಭಾಗ್ಯದಾಯಕಳೂ ಕಾಶೀಪಟ್ಟಣದ ಅಧೀಶ್ವರಿಯೂ

ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಆದಿಕ್ಷಾಂತಸಮಸ್ತ ವರ್ಣನಕರೀ ಶಂಭೋಸ್ತ್ರಿಭಾವಾಕರೀ ಕಾಶ್ಮೀರಾ ತ್ರಿಜನೇಶ್ವರೀ ತ್ರಿಲಹರೀ ನಿತ್ಯಾಂಕುರಾ ಶರ್ವರೀ । ಕಾಮಾಕಾಂಕ್ಷಕರೀ ಜನೋದಯಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥7॥**

ಭಾವಾರ್ಥ - "ಅ"ಕಾರದಿಂದ"ಕ್ಷ"ಕಾರದ ತನಕದ ಸಮಸ್ತ ಅಕ್ಷರ ಸಮೂಹಗಳನ್ನು ಸೃಷ್ಟಿಸಿದವಳೂ, ಈಶ್ವರ, ಹಿರಣ್ಯಗರ್ಭ, ವಿರಾಟ್ ಗಳೆಂಬ ಅವಸ್ಥಾತ್ರಯಗಳಿಗೆ ಕಾರಣೀಭೂತಳಾದವಳೂ, ಕುಂಕುಮಾಂಕಿತೆಯೂ, ಮೂರು ಲೋಕಗಳ ಅಧಿಷ್ಠಾನದೇವತೆಯೂ, ಸೃಷ್ಟಿ-ಸ್ಥಿತಿ-ಲಯಗಳೆಂಬ ಮೂರು ತರಂಗಗಳ ರೂಪವುಳ್ಳವಳೂ, ಸದಾ ಕಾರಣ ಸ್ವರೂಪಳೂ, ಪ್ರಳಯಾಂಧಕಾರ ಸ್ವರೂಪಿಣಿಯೂ, ಸಮಸ್ತ ಆಕಾಂಕ್ಷೆಗಳನ್ನು ಈಡೇರಿಸಬಲ್ಲವಳೂ, ಭಕ್ತೋದ್ಧಾರಕಳೂ, ಕಾಶೀಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ದರ್ವೀ ಸ್ವರ್ಣವಿಚಿತ್ರರತ್ನರಚಿತಾ ದಕ್ಷೇ ಕರೇ ಸಂಸ್ಥಿತಾ ವಾಮೇ ಸ್ವಾದುಪಯೋದಯೋಧರೀ ಸಹಚರೀ ಸೌಭಾಗ್ಯ ಮಾಹೇಶ್ವರೀ । ಭಕ್ತಾಭೀಷ್ಟಕರೀ ದೃಶಾ ಶುಭಕರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥8॥**

ಭಾವಾರ್ಥ - ಬಲಹಸ್ತದಲ್ಲಿ ಬಂಗಾರದ ಸೌಟನ್ನು ಧರಿಸಿದವಳಾಗಿಯೂ, ಎಡಹಸ್ತದಲ್ಲಿ ರುಚಿಕರವಾದ ಅಮೃತಕಲಶವನ್ನು ಹಿಡಿದವಳಾಗಿಯೂ, ಸಕಲ ಸೌಭಾಗ್ಯಗಳಿಗೆ ಒಡತಿಯಾಗಿಯೂ, ಭಕ್ತರ ಸರ್ವಾಭೀಷ್ಟಗಳನ್ನು ಈಡೇರಿಸುವವಳೂ, ಕಟಾಕ್ಷಮಾತ್ರದಿಂದಲೇ ಶುಭವನ್ನು ಅನುಗ್ರಹಿಸುವವಳೂ, ಕಾಶೀಪಟ್ಟಣದ

ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಚಂದ್ರಾರ್ಕಾನಲ ಕೋಟಿಕೋಟಿಸದೃಶಾ ಚಂದ್ರಾಂಶುಬಿಂಬಾಧರೀ**
**ಚಂದ್ರಾರ್ಕಾಗ್ನಿಸಮಾನ ಕುಂಡಲಧರೀ ಚಂದ್ರಾರ್ಕವರ್ಣೇಶ್ವರೀ ।**
**ಮಾಲಾಪುಸ್ತಕಪಾಶಸಾಂಕುಶಧರೀ ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ**
**ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥9॥**

ಭಾವಾರ್ಥ - ಕೋಟ್ಯಾನುಕೋಟಿ ಸೂರ್ಯ ಚಂದ್ರ ಅಗ್ನಿಯರಿಗೆ ಸಮಾನವಾದ ತೇಜಸ್ಸನ್ನು ಹೊಂದಿರುವವಳೂ, ಚಂದ್ರನ ಕಿರಣಗಳನ್ನು ಪ್ರತಿಬಿಂಬಿಸುತ್ತಿರುವ ತುಟಿಯನ್ನು ಹೊಂದಿರುವವಳೂ, ಚಂದ್ರ ಸೂರ್ಯಾಗ್ನಿಗಳಂತೆ ಉಜ್ವಲವಾಗಿ ದೇದೀಪ್ಯಮಾನವಾಗಿ ಬೆಳಗುತ್ತಲಿರುವ ಕರ್ಣಾಭರಣಗಳುಳ್ಳವಳೂ, ಸೂರ್ಯ ಚಂದ್ರರಂತೆ ಕಾಂತಿಯುತವಾಗಿರುವ ದೇಹವನ್ನು ಹೊಂದಿರುವವಳೂ, ಹಸ್ತಗಳಲ್ಲಿ ಮಾಲೆ, ಪುಸ್ತಕ, ಪಾಶ, ಅಂಕುಶಗಳನ್ನು ಧರಿಸಿರುವವಳೂ, ಕಾಶೀಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಕ್ಷತ್ರತ್ರಾಣಕರೀ ಮಹಾಭಯಕರೀ ಮಾತಾಕೃಪಾಸಾಗರೀ ಸಾಕ್ಷಾನ್ಮೋಕ್ಷಕರೀ ಸದಾ**
**ಶಿವಕರೀ ವಿಶ್ವೇಶ್ವರೀಶ್ರೀಧರೀ । ದಕ್ಷಾಕ್ರಂದಕರೀ ನಿರಾಮಯಕರೀ**
**ಕಾಶೀಪುರಾಧೀಶ್ವರೀ ಭಿಕ್ಷಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ**
**॥10॥**

ಭಾವಾರ್ಥ - ಕ್ಷತ್ರಿಯರ ಮಹಾಸಂರಕ್ಷಕಳೂ, ಭಕ್ತರ ಘೋರ ಸಂಕಟಗಳನ್ನು ಪರಿಹರಿಸಿ ಅಭಯ ಪ್ರದಾನ ಮಾಡುವವಳೂ, ದಯಾಸಾಗರೆಯೂ, ಸಾಕ್ಷಾತ್ ಮೋಕ್ಷ ಪ್ರದಾಯಕಳೂ, ಮಂಗಲದಾಯಿನಿಯೂ, ಜಗತ್ತಿನ ಅಧೀಶ್ವರಿಯೂ, ಸಂಪತ್ತನ್ನು ಧರಿಸಿರುವವಳೂ, ದಕ್ಷನು ರೋಧಿಸುವಂತೆ ಮಾಡಿದವಳೂ, ಸರ್ವರೋಗ ನಿವಾರಕಳೂ

ಕಾಶೀಪಟ್ಟಣದ ಅಧೀಶ್ವರಿಯೂ ಭಕ್ತರ ಪಾಲಿನ ಕೃಪಾಮಯಿ ತಾಯಿಯೂ, ಒಡತಿಯೂ ಆಗಿರುವ ಅನ್ನಪೂರ್ಣಾದೇವಿಯೇ ನನಗೆ ಭಿಕ್ಷೆಯನ್ನು ಅನುಗ್ರಹಿಸು.

**ಅನ್ನಪೂರ್ಣೆ ಸದಾಪೂರ್ಣೆ ಶಂಕರ ಪ್ರಾಣವಲ್ಲಭೇ । ಜ್ಞಾನವೈರಾಗ್ಯ ಸಿದ್ಧ್ಯರ್ಥಂ ಭಿಕ್ಷಾಂದೇಹಿ ಚ ಪಾರ್ವತೀ ॥11॥**

ಭಾವಾರ್ಥ - ಅನವರತವೂ ಅಮೃತಮಯವಾಗಿ ಸದಾ ಪೂರ್ಣೆಯೆನಿಸಿಕೊಂಡಿರುವ ಅನ್ನಪೂರ್ಣೆ ತಾಯಿಯೇ, ಶಂಕರನಿಗೆ ಪ್ರಾಣಪ್ರಿಯಳಾದವಳೇ, ಪಾರ್ವತೀ ಮಾತೆಯೇ ನನಗೆ ಜ್ಞಾನ ವೈರಾಗ್ಯಗಳು ಸಿದ್ಧಿಸುವಂತೆ ಭಿಕ್ಷೆಯನ್ನು ಕರುಣಿಸು.

**ಮಾತಾ ಮೇ ಪಾರ್ವತೀ ದೇವೀ ಪಿತಾದೇವೋ ಮಹೇಶ್ವರಃ । ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಂ ॥12॥**

ಭಾವಾರ್ಥ - ಪಾರ್ವತೀ ದೇವಿಯೇ ನನ್ನ ತಾಯಿ. ಭಗವಂತನಾಗಿರುವ ಪರಮೇಶ್ವರನೇ ನನ್ನ ತಂದೆ. ಪರಶಿವನ ಭಕ್ತರೆಲ್ಲರೂ ನನ್ನ ಬಂಧುಗಳು. ಮೂರುಲೋಕಗಳೇ ನನ್ನ ಜನ್ಮಭೂಮಿ. ಈ ರೀತಿಯ ಮನೋ ಭಿಕ್ಷೆಯನ್ನು ಸದಾ ನನಗೆ ದಯಪಾಲಿಸು ಅಮ್ಮಾ!

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಅನ್ನಪೂರ್ಣಾ ಸ್ತೋತ್ರಂ ಸಂಪೂರ್ಣಂ ॥

## 5.28 ಶ್ರೀ ಅನ್ನಪೂರ್ಣಾ ಸ್ತೋತ್ರ ರತ್ನಂ

**ಭಗವತಿ ಭವರೋಗಾತ್ಪೀಡಿತಂ ದುಷ್ಕೃತೋತ್ಥಾತ್ । ಸುತದುಹಿತೃ ಕಲತ್ರೋಽಪದ್ರವೇಣಾನುಯಾಂತಂ ॥ ವಿಲಸದಮೃತದೃಷ್ಟ್ಯಾ ವೀಕ್ಷ ವಿಭ್ರಾಂತ ಚಿತ್ತಂ । ಸಕಲಭುವನ ಮಾತಃತ್ರಾಹಿ ಮಾಮೋಂ ನಮಸ್ತೇ ॥1॥**

ಭಾವಾರ್ಥ - ಹೇ!ಭಗವತಿಯೇ, ಜಗನ್ಮಾತೆಯೇ, ದುಷ್ಟಕಾರ್ಯಗಳಿಂದ ಜನಿಸಿದವನನ್ನು, ಸಂಸಾರ ಸ್ವರೂಪದ ರೋಗಗಳಿಂದ ಪೀಡಿತನಾದವನನ್ನು, ಪತ್ನೀ ಪುತ್ರ ಪುತ್ರಿಯರ ಉಪಟಳಕ್ಕೀಡಾದವನನ್ನು, ಮಂಕು ಕವಿದವನನ್ನು, ಬೆಳಗುವ ನಿನ್ನ

ಅಮೃತಮಯವಾಗಿರುವ ಕಾರುಣ್ಯ ದೃಷ್ಟಿಯಿಂದ ನೋಡು ಅಮ್ಮಾ! ತಾಯಿಯೇ ನಿನಗೆ ನಮಸ್ಕರಿಸುವೆನು.

**ಮಾಹೇಶ್ವರೀ ಮಾಶ್ರಿತಕಲ್ಪವಲ್ಲೀ । ಮಹಂ ಭವೋಚ್ಛೇದಕರೀಂ ಭವಾನೀಂ ॥**
**ಕ್ಷುಧಾರ್ತ ಜಾಯಾ ತನಯಾದ್ಯುಪೇತ । ಸ್ತ್ವಾಮನ್ನಪೂರ್ಣೇ ಶರಣಂ ಪ್ರಪದ್ಯೇ ॥2॥**

ಭಾವಾರ್ಥ - ತಾಯಿ ಅನ್ನಪೂರ್ಣೆಯೇ! ನೀನು ಮಹೇಶ್ವರನ ಅರ್ಧಾಂಗಿಯಾಗಿ ಮಾಹೇಶ್ವರಿಯೆನಿಸಿರುವವಳು. ನಿನ್ನನ್ನು ಆಶ್ರಯಿಸಿದವರಿಗೆ ಕಲ್ಪವೃಕ್ಷಳು. ಸಂಸಾರಬಂಧನವನ್ನು ಛೇಧಿಸುವವಳೂ ನೀನೇ. ಸಾಂಸಾರಿಕ ಜಂಜಾಟಗಳಿಗೆ ಸಿಲುಕಿ ಹಸಿವಿನಿಂದ ಪೀಡಿತರಾಗಿರುವ ಸತಿ ಸುತರಾದಿಯೊಡಗೂಡಿ ಅಮ್ಮಾ ನಿನಗೆ ನಾನು ಶರಣು ಬಂದಿರುವೆ.

**ದಾರಿದ್ರ್ಯ ದಾವಾನಲ ದಹ್ಯಮಾನಂ । ಪ್ರಾಹ್ಯನ್ನಪೂರ್ಣೇ ಗಿರಿರಾಜಕನ್ಯೇ ॥**
**ಕೃಪಾಂಬುಧೌ ಮಜ್ಜನ ಮಾಂ ತ್ವದೀಯೇ । ತ್ವತ್ಪಾದಪದ್ಮಾರ್ಪಿತ ಚಿತ್ತವೃತ್ತಿಂ ॥3॥**

ಭಾವಾರ್ಥ - ತಾಯೇ!ಗಿರಿರಾಜಕುವರಿಯೇ, ದಾರಿದ್ರ್ಯದ ಕಾಡ್ಗಿಚ್ಚಿನಿಂದ ಬೇಯುತ್ತಲಿರುವ ನನ್ನನ್ನು ರಕ್ಷಿಸುವವಳಾಗು. ನಿನ್ನ ಚರಣಾರವಿಂದಗಳಿಗೆ ನನ್ನ ಮನಸ್ಸನ್ನು ಅರ್ಪಿಸುತ್ತಿರುವೆನು. ನಿನ್ನ ಕೃಪಾಂಬುಧಿಯಲ್ಲಿ ನನ್ನನ್ನು ಮುಳುಗಿಸು ಅಮ್ಮಾ!

**ಇತ್ಯನ್ನಪೂರ್ಣಾ ಸ್ತುತಿರತ್ನಮೇತತ್ । ಶ್ಲೋಕತ್ರಯಂ ಯಃ ಪಠತೀಹ ಭಕ್ತ್ಯಾ ॥**
**ತಸ್ಮೈದಧಾತ್ಯನ್ನ ಸಮೃದ್ಧಿಮಂಬಾ । ಶ್ರೀಯಂ ಚ ವಿದ್ಯಾಂ ಚ ಯಶಶ್ಚ ಮುಕ್ತಿಂ ॥4॥**

ಭಾವಾರ್ಥ - ಈ ರೀತಿಯಲ್ಲಿರುವ ಮೂರು ಶ್ಲೋಕಗಳ ಅನ್ನಪೂರ್ಣಾಸ್ತೋತ್ರ ರತ್ನವನ್ನು ಯಾವಾತನು ಶ್ರದ್ಧಾಭಕ್ತಿಯಿಂದ ಪಠಿಸುತ್ತಾನೋ ಅವನಿಗೆ ವಿಫುಲವಾದ ಸಂಪತ್ತು, ಅನ್ನಾಹಾರ, ವಿದ್ಯಾ- ಯಶಸ್ಸು, ಮತ್ತು ಮೋಕ್ಷವನ್ನು ಆ ತಾಯಿ ಅನ್ನಪೂರ್ಣೆಯು ಕರುಣಿಸುವಳು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಅನ್ನಪೂರ್ಣಾ ಸ್ತೋತ್ರ ರತ್ನಂ ಸಂಪೂರ್ಣಂ ॥

## 5.29 ಶ್ರೀ ಮೀನಾಕ್ಷೀ ಪಂಚರತ್ನ ಸ್ತೋತ್ರಂ

**ಉದ್ಯದ್ಭಾನುಸಹಸ್ರ ಕೋಟಿ ಸದೃಶಾಂ ಕೇಯೂರ ಹಾರೋಜ್ವಲಾಂ । ಬಿಂಬೋಷ್ಟೀಂ ಸ್ಮಿತದಂತ ಪಂಕ್ತಿರುಚಿರಾಂ ಪೀತಾಂಬರಾಲಂಕೃತಾಂ ॥ ವಿಷ್ಣು ಬ್ರಹ್ಮ ಸುರೇಂದ್ರ ಸೇವಿತಪದಾಂ ತತ್ವಸ್ವರೂಪಾಂ ಶಿವಾಂ । ಮೀನಾಕ್ಷೀಂ ಪ್ರಣತೋಽಸ್ಮಿ ಸಂತತಮಹಂ ಕಾರುಣ್ಯವಾರಾಂನಿಧಿಂ ॥1॥**

ಭಾವಾರ್ಥ - ಉದಯಿಸುವ ಸಾವಿರಕೋಟಿ ಸೂರ್ಯಸಮಾನ ತೇಜೋಮಯಿಯಾಗಿರುವಾಕೆಗೆ, ಒಂಕಿಹಾರಗಳನ್ನು ಧರಿಸಿ ಸೌಂದರ್ಯಭರಿತಳಾಗಿರುವಾಕೆಗೆ, ತೊಂಡೆಯ ಹಣ್ಣನ್ನು ಹೋಲುವ ತುಟಿಯನ್ನು ಹೊಂದಿರುವಾಕೆಗೆ, ಚೆಲುವಿನ ದಂತಪಂಕ್ತಿಗಳಿಂದ ಮುಗುಳ್ನಗೆಯನ್ನು ಸೂಸುತ್ತಿರುವಾಕೆಗೆ, ಪೀತಾಂಬರಾಲಂಕೃತಳಿಗೆ, ಬ್ರಹ್ಮ-ವಿಷ್ಣು-ಮಹೇಂದ್ರರಿಂದ ಸೇವೆಯನ್ನು ಸ್ವೀಕರಿತ್ತಿರುವಾಕೆಗೆ, ತತ್ವ ಸ್ವರೂಪಳಿಗೆ, ಆ ಪರಶಿವೆಗೆ, ಅಪಾರ ಕರುಣಾಸಾಗರೆಯಾಗಿರುವ ಮೀನಾಕ್ಷಿಗೆ ನಾನು ನಮಸ್ಕರಿಸುವೆ.

**ಮುಕ್ತಾಹಾರಲಸತ್ಕಿರೀಟರುಚಿರಾಂ ಪೂರ್ಣೇಂದು ವಕ್ತ್ರಪ್ರಭಾಂ ।**
**ಶಿಂಜಿನ್ನೂಪುರಕಿಂಕಿಣೀಮಣಿಧರಾಂ ಪದ್ಮಪ್ರಭಾ ಭಾಸುರಂ ॥**
**ಸರ್ವಾಭೀಷ್ಟಫಲಪ್ರದಾಂ ಗಿರಿಸುತಾಂವಾಣೀರಮಾಸೇವಿತಾಂ । ಮೀನಾಕ್ಷೀಂ ಪ್ರಣತೋಽಸ್ಮಿ ಸಂತತಮಹಂ ಕಾರುಣ್ಯವಾರಾಂನಿಧಿಂ ॥2॥**

ಭಾವಾರ್ಥ - ಮುತ್ತಿನಹಾರವನ್ನೂ, ಶೋಭಾಯಮಾನವಾಗಿ ಬೆಳಗುವ ಕಿರೀಟವನ್ನೂ ಧರಿಸಿರುವಾಕೆಗೆ, ಪೌರ್ಣಿಮೆಯ ಚಂದಿರನ ಮುಖತೇಜಸ್ಸನ್ನು ಹೊಂದಿರುವಾಕೆಗೆ, ರತ್ನಾಭರಣಾಲಂಕೃತಳಿಗೆ, ತಾವರೆಯನ್ನು ಹೋಲುವ ತೇಜಸ್ಸುಳ್ಳಾಕೆಗೆ, ಸರ್ವೇಚ್ಛೆಗಳನ್ನು ಫಲಪ್ರದಗೊಳಿಸುವಾಕೆಗೆ, ಪರ್ವತರಾಜನ ಕುವರಿಗೆ, ಲಕ್ಷ್ಮೀ

ಸರಸ್ವತಿಯರಿಂದ ಸೇವಿಸಲ್ಪಡುವಾಕೆಗೆ ಆ ಪರಶಿವೆಗೆ, ಅಪಾರ ಕರುಣಾಸಾಗರೆಯಾಗಿರುವ ಮೀನಾಕ್ಷಿಗೆ ನಾನು ನಮಸ್ಕರಿಸುವೆ.

**ಶ್ರೀವಿದ್ಯಾಂ ಶಿವವಾಮಭಾಗನಿಲಯಾಂ ಹ್ರೀಂಕಾರ ಮಂತ್ರೋಜ್ವಲಾಂ । ಶ್ರೀಚಕ್ರಾಂಕಿತ ಬಿಂದು ಮಧ್ಯವಸತಿಂ ಶ್ರೀಮತ್ಸಭಾನಾಯಿಕಾಂ ॥ ಶ್ರೀಮತ್ಷಣ್ಮುಖ ವಿಘ್ನರಾಜ ಜನನೀಂ ಶ್ರೀಮಜ್ಜಗನ್ಮೋಹಿನೀಂ । ಮೀನಾಕ್ಷೀಂ ಪ್ರಣತೋಽಸ್ಮಿ ಸಂತತಮಹಂ ಕಾರುಣ್ಯವಾರಾಂನಿಧಿಂ ॥3॥**

ಭಾವಾರ್ಥ - ಶ್ರೀವಿದ್ಯೆಗೆ, ಶಿವನ ಎಡಭಾಗದಲ್ಲಿ ವಿರಾಜಮಾನಳಾಗಿರುವಾಕೆಗೆ, "ಹ್ರೀಂ"ಎಂಬ ಬೀಜ ಮಂತ್ರದಿಂದ ಶೋಭಿಸುತ್ತಿರುವಾಕೆಗೆ, ಶ್ರೀಚಕ್ರದ ಮಧ್ಯ ಬಿಂದುವಿನಲ್ಲಿ ನೆಲಸಿರುವಾಕೆಗೆ, ದೇವ ಸಭಾ ನಾಯಕಿಗೆ, ವಿಘ್ನೇಶ್ವರ-ಸುಬ್ರಹ್ಮಣ್ಯರ ತಾಯಿಗೆ, ಜಗತ್ತು ಮೋಹಿಸುವಾಕೆಗೆ ಆ ಪರಶಿವೆಗೆ, ಅಪಾರ ಕರುಣಾಸಾಗರೆಯಾಗಿರುವ ಮೀನಾಕ್ಷಿಗೆ ನಾನು ನಮಸ್ಕರಿಸುವೆ.

**ಶ್ರೀಮತ್ಸುಂದರನಾಯಿಕಾಂ ಭಯಹರಾಂ ಜ್ಞಾನಪ್ರದಾಂ ನಿರ್ಮಲಾಂ । ಶ್ಯಾಮಾಭಾಂ ಕಮಲಾಸನಾರ್ಚಿತಪದಾಂ ನಾರಾಯಣಾಸ್ಯಾನುಜಾಂ ॥ ವೀಣಾವೇಣು ಮೃದಂಗವಾದ್ಯರಸಿಕಾಂ ನಾನಾವಿಧಾಮಂಬಿಕಾಂ । ಮೀನಾಕ್ಷೀಂ ಪ್ರಣತೋಽಸ್ಮಿ ಸಂತತಮಹಂ ಕಾರುಣ್ಯವಾರಾಂನಿಧಿಂ ॥4॥**

ಭಾವಾರ್ಥ - ಸುಂದರಿಯರಲ್ಲಿ ಅತಿ ಸುಂದರಳೂ, ಭಯ ನಿವಾರಕಳೂ, ಜ್ಞಾನ ಪ್ರದಾಯಿನಿಯೂ, ನಿರ್ಮಳಲೂ, ಶ್ಯಾಮಲ ವರ್ಣ ಕಾಂತಿಯುಳ್ಳವಳೂ, ಬ್ರಹ್ಮನಿಂದ ಪೂಜಿಸಲ್ಪಡುವವಳೂ, ಕಮಲಚರಣಳೂ, ನಾರಾಯಣ ಸೋದರಿಯೂ, ವೀಣಾ ವೇಣು ಮೃದಂಗಾದಿ ನಾನಾ ವಿಧದ ವಾದ್ಯಗಳ ಸ್ವರಮಾಧುರ್ಯ ರಸಿಕಳೂ, ಜಗನ್ಮಾತೆಯೂ ಆಗಿರುವ ಆ ಪರಶಿವೆಗೆ, ಅಪಾರ ಕರುಣಾಸಾಗರೆಯಾಗಿರುವ ಮೀನಾಕ್ಷಿಗೆ ನಾನು ನಮಸ್ಕರಿಸುವೆ.

**ನಾನಾ ಯೋಗಿ ಮುನೀಂದ್ರ ಹೃನ್ನಿವಾಸೀಂ ನಾನಾರ್ಥ ಸಿದ್ಧಿಪ್ರದಾಂ । ನಾನಾಪುಷ್ಪವಿರಾಜಿತಾಂಘ್ರಿಯುಗಲಾಂ ನಾರಾಯಣೇನಾರ್ಚಿತಾಂ ॥ ನಾದ**

**ಬ್ರಹ್ಮಮಯೀಂ ಪರಾತ್ಪರತರಾಂ ನಾನಾರ್ಥ ತತ್ತ್ವಾತ್ಮಿಕಾಂ । ಮೀನಾಕ್ಷೀಂ ಪ್ರಣತೋಽಸ್ಮಿ ಸಂತತಮಹಂ ಕಾರುಣ್ಯವಾರಾಂನಿಧಿಂ ॥5॥**

ಭಾವಾರ್ಥ - ಅಸಂಖ್ಯಾತ ಯೋಗಿಗಳ-ಮುನಿ ಶ್ರೇಷ್ಠರುಗಳ ಶುದ್ಧ ಹೃದಯದಲ್ಲಿ ನೆಲೆಯಾಗಿರುವಾಕೆಗೆ, ಅನೇಕಾನೇಕ ಸಿದ್ಧಿಪ್ರದಾಯಕಳಿಗೆ, ಶ್ರೀಮನ್ನಾರಾಯಣನಿಂದ ಅರ್ಚಿಸಲ್ಪಟ್ಟಾಕೆಗೆ, ವಿಧವಿಧದ ಪುಷ್ಪಗಳಿಂದ ಅಲಂಕರಿಸಲ್ಪಟ್ಟು ರಾರಾಜಿಸುತ್ತಲಿರುವ ಚರಕಮಲಗಳನ್ನು ಹೊಂದಿರುವಾಕೆಗೆ, ನಾದಬ್ರಹ್ಮಮಯಿಗೆ, ಪರಾತ್ಪರಳಿಗೆ, ನಾನಾರ್ಥ ತತ್ವಸ್ವರೂಪಳಿಗೆ ಆ ಪರಶಿವೆಗೆ, ಅಪಾರ ಕರುಣಾಸಾಗರೆಯಾಗಿರುವ ಮೀನಾಕ್ಷಿಗೆ ನಾನು ನಮಸ್ಕರಿಸುವೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀಮೀನಾಕ್ಷೀ ಪಂಚರತ್ನ ಸ್ತೋತ್ರಂ ಸಂಪೂರ್ಣಂ ॥

## 5.30 ಶ್ರೀ ತ್ರಿಪುರಸುಂದರೀ ಪ್ರಾತಃಸ್ಮರಣ ಸ್ತೋತ್ರಂ

**ಕಸ್ತೂರಿಕಾ ಕೃತ ಮನೋಜ್ಞಲಲಾಮ ಭಾಸ್ವದ್- । ಅರ್ಧೇಂದು ಮುಗ್ಧ ನಿಟಿಲಾಂಚಲ ನೀಲಕೇಶೀಂ ॥ ಪ್ರಾಲಂಬಮಾನ ನವಮೌಕ್ತಿಕ ಹಾರಭೂಷಾಂ । ಪ್ರಾತಃಸ್ಮರಾಮಿ ಲಲಿತಾಂ ಕಮಲಾಯತಾಕ್ಷೀಂ ॥1॥**

ಭಾವಾರ್ಥ - ಕಸ್ತೂರಿಯಿಂದ ತಯಾರಿಸಲಾದ ಮನೋಹರವಾಗಿರುವ ತಿಲಕದಿಂದ ಬೆಳಗುತ್ತಾ ಅರ್ಧ ಚಂದ್ರನನ್ನು ಹೋಲುವ ಹಣೆಯ ದಂಡೆಯಲ್ಲಿ ಕರಿದಾದ ತಲೆಗೂದಲುಗಳನ್ನು ಹೊಂದಿರುವ ಹಾಗೂ ನೇತಾಡುವ ಹೊಸ ಮುತ್ತಿನ ಹಾರವನ್ನು ಧರಿಸಿರುವ ಕಮಲದಂತೆ ವಿಸ್ತಾರವಾಗಿರುವ ನಯನಗಳನ್ನು ಹೊಂದಿರುವ ತಾಯಿ ಶ್ರೀ ಲಲಿತಾಂಬಿಕೆಯನ್ನು ಉಷಃಕಾಲದಲ್ಲಿ ನಾನು ಧ್ಯಾನಿಸುವೆ.

**ಏಣಾಂಕ ಚೂಡ ಸಮುಪಾರ್ಜಿತ ಪುಣ್ಯರಾಶಿಂ । ಉತ್ತಪ್ತ ಹೇಮ ತನುಕಾಂತಿ ಝರೀ ಪರೀತಾಂ ॥ ಏಕಾಗ್ರ ಚಿತ್ತ ಮುನಿ ಮಾನಸ ರಾಜಹಂಸೀಂ । ಪ್ರಾತಃಸ್ಮರಾಮಿ ಲಲಿತಾ ಪರಮೇಶ್ವರೀಂ ತಾಂ ॥2॥**

ಭಾವಾರ್ಥ - ಹರಿಣದ ಕುರುಹುಳ್ಳ ಚಂದಿರನನ್ನು ತಲೆಯ ಆಭರಣವನ್ನಾಗಿ ಧರಿಸಿದವನಾದ ಪರಮೇಶ್ವರನು ಶೇಖರಿಸಿರುವ ಪುಣ್ಯದ ರಾಶಿಯೇ ಆಗಿರುವ, ಬಿಸಿ ಮಾಡಲ್ಪಟ್ಟ ಬಂಗಾರದ ದೇಹ ಕಾಂತಿಯು ಸುತ್ತಲೂ ಹೊರಸೂಸುತ್ತಿರುವುದರಿಂದ ಆದ ನದಿಯಿಂದ ಆವರಿಸಲ್ಪಟ್ಟಂತಿರುವ, ಏಕಾಗ್ರ ಚಿತ್ತರಾಗಿ ಧ್ಯಾನಿಸುತ್ತಿರುವ ಮುನಿಗಳ ಅಂತರ್ಯವೆಂಬ ಮಾನಸ ಸರೋವರದಲ್ಲಿ ವಿಹರಿಸುತ್ತಿರುವ ರಾಜಹಂಸದಂತಿರುವ ತಾಯಿ ಲಲಿತಾ ಪರಮೇಶ್ವರಿಯನ್ನು ನಾನು ಉಷಃಕಾಲದಲ್ಲಿ ಸ್ಮರಿಸುವೆನು.

**ಈಶದ್ವಿಕಾಸಿ ನಯನಾಂತ ನಿರೀಕ್ಷಣೇನ । ಸಾಮ್ರಾಜ್ಯದಾನ ಚತುರಾನನೇಡ್ಯಾಂ ॥**
**ಈಶಾಂಕ ವಾಸರಸಿಕಾಂ ರಸಸಿದ್ಧಿದಾತ್ರೀಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥3॥**

ಭಾವಾರ್ಥ - ಸ್ವಲ್ಪ ತೆರೆದ ಕಡೆಗಣ್ಣಿನ ಕುಡಿನೋಟದಿಂದ ನಂಬುವ ಭಕ್ತರಿಗೆ ಸಾಮ್ರಾಜ್ಯವನ್ನೇ ದಯಪಾಲಿಸುವಂತಹಾ ಚದುರೆಯಾಗಿರುವ, ಚತುರ್ಮುಖ ಬ್ರಹ್ಮನಿಂದ ಪೂಜಿಸಲ್ಪಡುವವಳಾದ, ಮಹಾದೇವನ ಮಡಿಲಲ್ಲಿರಲು ಬಯಸುತ್ತಿರುವವಳಾದ, ಬ್ರಹ್ಮಾನಂದ ಫಲಪ್ರಾಪ್ತಿಯನ್ನು ಅನುಗ್ರಹಿಸುವ ತಾಯಿ ಲಲಿತಾಂಬಿಕೆಯನ್ನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಲಕ್ಷ್ಮೀಶ ಪದ್ಮಭವನಾದಿ ಪದ್ಯೈಶ್ಚತುರ್ಭಿಃ । ಸಂಶೋಭಿತೇ ಚ ಫಲಕೇನ ಸದಾಶಿವೇನ ॥ ಮಂಚೇ ವಿತಾನಸಹಿತೇ ಸಸುಖಂ ನಿಷಣ್ಣಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥4॥**

ಭಾವಾರ್ಥ - ವಿಷ್ಣು, ಬ್ರಹ್ಮ, ರುದ್ರ, ಈಶ ಎಂಬ ನಾಲ್ಕು ಪಾದಗಳಿಂದಲೂ, ಹಾಗೂ ಸದಾಶಿವನೆಂಬ ಹಲಿಗೆಯಿಂದ ಪ್ರಕಾಶಿಸುವ, ಮತ್ತು ಮೇಲ್ ಹೊದಿಕೆಯಿಂದ ಅಲಂಕರಿಸಲ್ಪಟ್ಟ ಮಂಚದಲ್ಲಿ ಸಂತಸ ಭರಿತಳಾಗಿ ಆಸೀನಳಾಗಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಹ್ರೀಂಕಾರ ಮಂತ್ರ ಜಪ ತರ್ಪಣ ಹೋಮ ತುಷ್ಟಾಂ । ಹ್ರೀಂಕಾರ ಮಂತ್ರ ಜಲಜಾತ ಸುರಾಜಹಂಸೀಂ ॥ ಹ್ರೀಂಕಾರ ಹೇಮ ನವ ಪಂಜರ ಸಾರಿಕಾಂ ತಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥5॥**

ಭಾವಾರ್ಥ - ಹ್ರೀಂಕಾರ ಮಂತ್ರ, ಜಪ, ತರ್ಪಣ, ಹೋಮಾದಿಗಳಿಂದ ಮುದಗೊಳ್ಳುವವಳಾದ, ಹ್ರೀಂಕಾರ ಮಂತ್ರವೆಂಬ ನೀರಿನಲ್ಲಿ ಹುಟ್ಟಿರುವ ಕಮಲದ ಒಡನಿರುವ ರಾಜಹಂಸದ ಹಾಗಿರುವ, ಹ್ರೀಂಕಾರವೆಂಬ ಬಂಗಾರದ ನವ ಪಂಜರದೊಳಗಿನ ಹೆಣ್ಣು ಗಿಣಿಯಂತೆ ಇರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಹಲ್ಲೀಸ ಲಾಸ್ಯ ಮೃದು ಗೀತಿ ರಸಂ ಪಿಬಂತೀಂ । ಆಕೂಣಿತಾಕ್ಷ ಮನವದ್ಯ ಗುಣಾಂಬುರಾಶಿಂ ॥ ಸುಪ್ತೋತ್ಥಿತಾಂ ಶ್ರುತಿ ಮನೋಹರ ಕೀರವಾಗ್ಭಿಃ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥6॥**

ಭಾವಾರ್ಥ - ಹಲ್ಲೀಸವೆಂಬ ಶೃಂಗಾರಾಭಿನಯ ನೃತ್ಯದ ಮತ್ತು ಮೆಲುದನಿಯ ಹಾಡುಗಳ ರಸಾಸ್ವಾದನೆ ಮಾಡುತ್ತಲಿರುವ, ಸ್ವಲ್ಪ ಮುಚ್ಚಿದಂತಿರುವ ನಯನಗಳುಳ್ಳ, ದೋಷರಹಿತ ಗುಣ ಸಾಗರದಂತಿರುವ, ಕಿವಿಗಳಿಗೆ ಇಂಪಾಗುವ ಗಿಳಿಯ ನುಡಿಗಳೊಡನೆ ನಿದ್ರೆಯಿಂದ ಎಚ್ಚೆತ್ತ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಸಚ್ಚಿನ್ಮಯೀಂ ಸಕಲ ಲೋಕ ಹಿತೈಷಿಣೀಂ ಚ । ಸಂಪತ್ಕರೀಂ ಹಯಮುಖೀ ದೇವತೇಡ್ಯಾಂ ॥ ಸರ್ವಾನವದ್ಯ ಸುಕುಮಾರ ಶರೀರ ರಮ್ಯಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥7॥**

ಭಾವಾರ್ಥ - ಪ್ರಶಸ್ತವಾದ ಜ್ಞಾನಗಳಿಂದ ತುಂಬಿಕೊಂಡಿರುವ, ಸಮಸ್ತ ಲೋಕ ಹಿತವನ್ನು ಇಚ್ಚಿಸುವ, ಸಂಪತ್ತನ್ನು ಉಂಟು ಮಾಡುವ, ಹಯಗ್ರೀವಾದಿ ದೇವತಾ ಸಮೂಹದಿಂದ ಪೂಜಿಸಿಗೊಂಬ, ದೋಷರಹಿತವಾದ ಸುಕೋಮಲ ದೇಹದಿಂದ

ಮನೋಹರವಾಗಿ ಕಾಣುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಕನ್ಯಾಭಿರರ್ಧ ಶಶಿ ಮುಗ್ಧ ಕಿರೀಟ ಭಾಸ್ವತ್- । ಚೂಡಾಭಿರಂಕಗತ ಹೃದ್ಯ ವಿಪಂಚಿಕಾಭಿಃ ॥ ಸಂಸ್ತೂಯಮಾನ ಚರಿತಾಂ ಸರಸೀರುಹಾಕ್ಷೀಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥8॥**

ಭಾವಾರ್ಥ - ಅರ್ಧ ಚಂದ್ರನಿಂದೊಡಗೂಡಿದ ಕಿರೀಟದಿಂದ ಪ್ರಕಾಶಿಸುವ, ಮನೋಹರವಾದ ವೀಣೆಯನ್ನು ಮಡಿಲಲ್ಲಿ ಇರಿಸಿಕೊಂಡು ಸ್ತ್ರೀ ಸಮೂಹದಿಂದ ಸ್ತುತಿಸಲ್ಪಡುವ, ಹಾಗೂ ತಾವರೆಯನ್ನು ಹೋಲುವ ನಯನಗಳನ್ನು ಹೊಂದಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಹತ್ವಾಽಸುರೇಂದ್ರಮತಿ ಮಾತ್ರ ಬಲಾವಲಿಪ್ತ । ಭಂಡಾಸುರಂ ಸಮರಚಂಡ ಸುಘೋರ ಸೈನ್ಯಂ ॥ ಸಂರಕ್ಷಿತಾರ್ತ ಜನತಾಂ ತಪನೇಂದು ನೇತ್ರಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥9॥**

ಭಾವಾರ್ಥ - ತನ್ನ ಸ್ವಂತ ಬಲದಿಂದ ಅತಿಗರ್ವಿತನಾದ ಮತ್ತು ಕಾಳಗದಲ್ಲಿ ಪ್ರಚಂಡವಾಗಿರುವ ಸೈನ್ಯ ಬಲವನ್ನು ಹೊಂದಿದ್ದ ಅಸುರನಾಯಕನಾದ ಭಂಡಾಸುರನೆಂಬವವನನ್ನು ಕೊಂದು, ಶರಣು ಹೊಕ್ಕವರನ್ನು ಕಾಪಾಡಿದ, ರವಿಚಂದ್ರರನ್ನೇ ಕಣ್ಣುಗಳನ್ನಾಗಿಸಿಕೊಂಡಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಲಜ್ಜಾವನಮ್ರ ರಮಣೀಯ ಮುಖೇಂದು ಬಿಂಬಾಂ । ಲಾಕ್ಷಾರುಣಾಂಘ್ರಿ ಸರಸೀರುಹ ಶೋಭಮಾನಾಂ ॥ ರೋಲಂಬ ಜಾಲ ಸಮನೀಲಸುಕುಂತಲಾಢ್ಯಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥10॥**

ಭಾವಾರ್ಥ - ಲಜ್ಜೆಯಿಂದ ಮುದುಡಿದ ಮೋಹಕವಾದ ಚಂದ್ರಬಿಂಬವನ್ನು ಹೋಲುವ ಮುಖವುಳ್ಳವಳಾದ, ದಣಿವಿನಿಂದ ಕೆಂಪಾದ ಪಾದಗಳಿಂದ ಕಂಗೊಳಿಸುತ್ತಿರುವ,

ದುಂಬಿಗಳ ಗುಂಪಿನಂತೆ ಕಾಣುವ ಚೆಲುವಾದ ಕಪ್ಪಗಿನ ರೋಮಗಳುಳ್ಳವಳಾದ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಹ್ರೀಂಕಾರಿಣೀಂ ಹಿಮಮಹೀಧರ ಪುಣ್ಯರಾಶಿಂ । ಹ್ರೀಂಕಾರ ಮಂತ್ರ ಮಹನೀಯ ಮನೋಜ್ಞ ರೂಪಾಂ ॥ ಹ್ರೀಂಕಾರ ಗರ್ಭ ಮನು ಸಾಧಕ ಸಿದ್ಧಿದಾತ್ರೀಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥11॥**

ಭಾವಾರ್ಥ - ಹಿಮವಂತನ ಪುಣ್ಯವೇ ಮೈದಳೆದಂತಿರುವ, ಹ್ರೀಂಕಾರ ಮಂತ್ರದ ಮೋಹಕ ಸ್ವರೂಪಿಣಿಯಂತಿರುವ, ಹ್ರೀಂಕಾರವನ್ನೊಳಗೊಂಡ ಮಂತ್ರದ ಸಾಧಕರಿಗೆ ಸಿದ್ಧಿಯನ್ನು ಕರುಣಿಸುವ, ಸಾಕ್ಷಾತ್ ಹ್ರೀಂಕಾರಿಣಿಯೇ ಆಗಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಸಂಜಾತ ಜನ್ಮ ಮರಣಾದಿ ಭಯೇನ ದೇವೀಂ । ಸಂಫುಲ್ಲಪದ್ಮನಿಲಯಾಂ ಶರದಿಂದು ಶುಭ್ರಾಂ ॥ ಅರ್ಧೇಂದುಚೂಡ ವನಿತಾಮಣಿಮಾದಿ ವಂದ್ಯಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥12॥**

ಭಾವಾರ್ಥ - ಹುಟ್ಟು ಸಾವುಗಳೇ ಆದಿಯಾದವುಗಳ ಭೀತಿಯಿಂದ ದೇವಿ ಲಲಿತೆಯ ಸ್ಮರಣೆ ಮಾಡುತ್ತಿರುವೆನು. ಆಕೆ ಮನಮೋಹಕವಾಗಿ ಅರಳಿದ ಕಮಲದಲ್ಲಿ ನೆಲೆಯಾಗಿರುವಳು. ಮತ್ತು ಶರದೃತುವಿನ ಚಂದ್ರನಂತೆ ಬಿಳಿ ವರ್ಣದವಳಾಗಿರುವಳು. ಆ ಪರಶಿವನ ಮಡದಿಯೂ ಆಕೆಯೇ ಆಗಿರುವಳು. ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಂ ಯ, ಈಶತ್ವ, ವಶಿತ್ವಗಳೆಂಬ ಅಷ್ಟಸಿದ್ಧಿಗಳಿಂದ ನಮಸ್ಕರಿಸಲ್ಪಡುವವಳಾದ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಕಲ್ಯಾಣ ಶೈಲ ಶಿಖರೇಷು ವಿಹಾರಶೀಲಾಂ । ಕಾಮೇಶ್ವರಾಂಕ ನಿಲಯಾಂ ಕಮನೀಯ ರೂಪಾಂ ॥ ಕಾವ್ವರ್ಣ ಮಂತ್ರ ಮಹನೀಯ ಮಹಾನುಭಾವಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥13॥**

ಭಾವಾರ್ಥ - ಕಲ್ಯಾಣವೆಂಬ ಪರ್ವತದ ತುದಿಯಲ್ಲಿ ವಿಹರಿಸುತ್ತಿರುವ, ಕಾಮೇಶ್ವರನ ಮಡಿಲಲ್ಲಿ ಕುಳಿತವಳಾದ, ಮನಮೋಹಕ ರೂಪಿನ, "ಕ" ಅಕ್ಷರದಿಂದ ಆರಂಭಗೊಳ್ಳುವ ಮಂತ್ರದ ಮಹೋನ್ನತ ಆತ್ಮಾನುಭಾವವುಳ್ಳವಳಾದ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಲಂಬೋದರಸ್ಯ ಜನನೀಂ ತನು ರೋಮ ರಾಜೀಂ । ಬಿಂಬಾಧರಾಂ ಚ ಶರದಿಂದು ಮುಖೀಂ ಮೃಡಾನೀಂ ॥ ಲಾವಣ್ಯ ಪೂರ್ಣ ಜಲಧಿಂ ಜಲಜಾತ ಹಸ್ತಾಂ ।**
**ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥14॥**

ಭಾವಾರ್ಥ - ಲಂಬೋದರನಾದ ಗಜಾನನನ ತಾಯಿಯಾಗಿರುವ, ಸೂಕ್ಷ್ಮ ಹಾಗೂ ವಿರಳವಾಗಿರುವ ರೋಮಗಳ ಸಮೂಹವುಳ್ಳವಳಾದ, ತೊಂಡೆಯ ಹಣ್ಣನ್ನು ಹೋಲುವ ತುಟಿಯನ್ನು ಹೊಂದಿರುವ, ಶರದೃತುವಿನ ಚಂದ್ರನ ಮೊಗದಿಂದ ಕೂಡಿದ, ಮಹಾದೇವನ ಸತಿಯಾದ, ಸೌಂದರ್ಯ ಸಾಗರೆಯಾಗಿರುವ, ಹಸ್ತದಲ್ಲಿ ತಾವರೆಯ ಪುಷ್ಪವನ್ನು ಹಿಡಿದುಕೊಂಡಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಹ್ರೀಂಕಾರಪೂರ್ಣ ನಿಗಮೈಃ ಪ್ರತಿಪಾದ್ಯಮಾನಾಂ । ಹ್ರೀಂಕಾರ ಪದ್ಮನಿಲಯಾಂ ಹತದಾನವೇಂದ್ರಾಂ ॥ ಹ್ರೀಂಕಾರ ಗರ್ಭ ಮನುರಾಜ ನಿಷೇವ್ಯ ಮಾಣಾಂ ।**
**ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥15॥**

ಭಾವಾರ್ಥ - ಹ್ರೀಂಕಾರದಿಂದ ತುಂಬಿರುವ ವೇದಾದಿಗಳಿಂದ ಪ್ರತಿಪಾದಿಸಲ್ಪಡುತ್ತಿರುವ, ಹ್ರೀಂಕಾರವೆಂಬ ತಾವರೆಯಲ್ಲಿ ನೆಲೆಯಾಗಿರುವ, ಅಸುರರನ್ನೆಲ್ಲಾ ನಾಶಗೊಳಿಸಿದ, ಹ್ರೀಂಕಾರವನ್ನೊಳಗೊಂಡಿರುವ ಅಗ್ರಗಣ್ಯ ಮಂತ್ರಗಳಿಂದ ಸೇವೆಗಳನ್ನು ಸ್ವೀಕರಿಸುತ್ತಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

**ಶ್ರೀಚಕ್ರರಾಜ ನಿಲಯಾಂ ಶ್ರಿತ ಕಾಮಧೇನುಂ । ಶ್ರೀ ಕಾಮರಾಜ ಜನನೀಂ ಶಿವಭಾಗಧೇಯಾಂ ॥ ಶ್ರೀಮದ್ಗುಹಸ್ಯ ಕುಲ ಮಂಗಲ ದೇವತಾಂ ತಾಂ । ಪ್ರಾತಃಸ್ಮರಾಮಿ ಮನಸಾ ಲಲಿತಾಧಿನಾಥಾಂ ॥16॥**

ಭಾವಾರ್ಥ - ಶ್ರೀಚಕ್ರದಲ್ಲಿ ನೆಲೆಯಾಗಿರುವ, ಆಶ್ರಿತರಿಗೆ ಕಾಮಧೇನುವಿನೋಪಾದಿಯಾಗಿರುವ, ಮನ್ಮಥನ ಮಾತೆಯಾಗಿರುವ, ಪರಮೇಶ್ವರನ ಅರ್ಧಾಂಗಿಯಾಗಿ ಆತನ ಅದೃಷ್ಟವೇ ಆಗಿರುವ, ಶ್ರೀಸುಬ್ರಹ್ಮಣ್ಯನ ತಾಯಿಯಾಗಿ ಆತನ ಕುಲದ ಮಂಗಲ ದೇವತೆಯೇ ಆಗಿರುವ ಆ ತಾಯಿ ಲಲಿತಾಂಬಿಕೆಯನ್ನು ನಾನು ಉಷಃಕಾಲದಲ್ಲಿ ಮನಸಾ ಸ್ಮರಿಸುವೆನು.

॥ ಇತಿ ಶ್ರೀ ತ್ರಿಪುರಸುದರೀ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 5.31 ಶ್ರೀ ಮೂಕಾಂಬಿಕಾ ಅಷ್ಟಕಂ

**ಶ್ರೀಚಕ್ರಾಂಕಿತ ಬಿಂದು ಮಧ್ಯನಿಲಯಾಂ ಪೀತಾಂಬರಾಲಂಕೃತಾಂ । ಶಂಖಂ ಚಕ್ರ ವರಾಭಯಂ ಚ ದಧತೀಂ ಬಾಲೇಂದುಮೌಳೀಂ ಶುಭಾಂ ॥ ಸಿಂಹಸ್ಕೋಪರಿಸಂಸ್ಥಿತಾಂ ತ್ರಿನಯನಾಂ ಮೂಕಾಸುರಾಚ್ಛೇದಿನೀಂ । ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥1॥**

ಭಾವಾರ್ಥ - ಶ್ರೀಚಕ್ರದ ಮಧ್ಯದ ಬಿಂದುವಿನಲ್ಲಿ ನೆಲೆಯಾಗಿರುವ, ಪೀತಾಂಬರಾಲಂಕೃತಳಾಗಿರುವ, ಶಂಖಧಾರಿಣಿಯಾಗಿ ಅಭಯಹಸ್ತದಿಂದ ಅನುಗ್ರಹಿಸುತ್ತಿರುವ, ಬಾಲೇಂದುವನ್ನು ಶಿರದ ಮೇಲೆ ಧರಿಸಿಕೊಂಡಿರುವ, ಮಂಗಲದಾಯಿನಿಯಾಗಿರುವ, ಸಿಂಹವಾಹಿನಿಯಾಗಿರುವ, ತ್ರಿನೇತ್ರೆಯಾಗಿರುವ, ಮೂಕಾಸುರನ ಸಂಹಾರಕಳಾದ, ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ಮೂರ್ಧಾಗ್ರಾಂಚಿತರತ್ನಮೌಲಿವಿಲಸತ್ ಪೂರ್ಣೇಂದು ಬಿಂಬಾನನಾಂ । ಫಾಲೇ ಕುಂಕುಮಲಾಂಚನಾಂ ನಿಟಿಲಯೋರ್ಮಧ್ಯಸ್ಥ ಕಸ್ತೂರಿಕಾಂ ॥ ಕರ್ಣಾಲಂಕೃತ**

**ರತ್ನರಾಜಿತ ಘನಶ್ರೀಚಕ್ರ ಯುಗ್ಮಾನ್ವಿತಾಂ । ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥2॥**

ಭಾವಾರ್ಥ - ಹಣೆಯ ಭಾಗದಲ್ಲಿ ಹೊಳೆಯುತ್ತಲಿರುವ ಚೂಡಾರತ್ನದಿಂದ ಕೂಡಿರುವ, ಪೌರ್ಣಿಮೆಯ ಚಂದ್ರಬಿಂಬದಂತೆ ತೇಜೋಮಯವಾಗಿರುವ ಸತ್ವಗುಣಾನ್ವಿತ ಮೊಗದ ಮೇಲಿರುವ ಹಣೆಯಲ್ಲಿ ಕುಂಕುಮವನ್ನು ಧರಿಸಿಕೊಂಡವಳಾದ, ಹುಬ್ಬುಗಳ ನಡುವೆ ತಿಲಕವನ್ನು ಧರಿಸಿದವಳಾದ, ಕಿವಿಗಳಿಗೆ ಶ್ರೀಚಕ್ರದ ತೆಳ್ಳನೆಯ ಜತೆಯೋಲೆಗಳನ್ನು ಧರಿಸಿಕೊಂಡು ಬೆಳಗುತ್ತಲಿರುವ ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ಕಾಮಾಕ್ಷೀಂ ಕರುಣೇಕ್ಷಣಾಂ ಪರಿಲಸತ್ ದಿವ್ಯಾಂಜನೈಃ ರಂಜಿತಾಂ । ನಾಸಾಯಾಂ ನವಮೌಕ್ತಿಕಾಂ ವಿದಧತೀಂ ಮಾಧುರ್ಯ ಗಾನ ಪ್ರಿಯಾಂ ॥ ಆದರ್ಶೋಪಮ ಕಾಂತಿಗಂಡಯುಗಲಾಂ ಹಾರಿದ್ರ ಚೂರ್ಣಾನ್ವಿತಾಂ । ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥3॥**

ಭಾವಾರ್ಥ - ಕರುಣಾ ಕಟಾಕ್ಷವನ್ನು ಬೀರುತ್ತಲಿರುವ ಕಾಮಾಕ್ಷಿಯಾಗಿ, ದಿವ್ಯ ಕಾಡಿಗೆ ಹಚ್ಚಿಕೊಂಡವಳಾಗಿ, ಮೂಗಿನಲ್ಲಿ ನವಮುತ್ತುಗಳ ಮೂಗುತಿಯಿಂದ ಅಲಂಕೃತಗೊಂಡಿರುವ, ಮಧುರ ನಾದ ಗಾನ ಪ್ರಿಯಳಾದವಳಾದ, ಅರಸಿನವನ್ನು ಹಚ್ಚಿದ ಕನ್ನಡಿಯಂತೆ ಬೆಳಗುವ ಕಪೋಲವುಳ್ಳವಳಾದ ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ಬಿಂಬೋಷ್ಠೀಂ ನವಪೀಠಿಕಾರಸ ಲಸತ್ ಸೌಂದರ್ಯ ಮಾಲಾಧರಾಂ ।**
**ಶ್ರೀಮದ್ದಾಡಿಮಬೀಜಕಾಂತಿದಶನಾಂ ಮಂದೇಸ್ಮಿತೇನಾನ್ವಿತಾಂ ॥**
**ಮಾಧುರ್ಯಾಕ್ಷರಸಂಯುತಾಂ ಸುಖಕರೀಂ ಮಾರೇಣ ಸಂಸೇವಿತಾಂ ।**
**ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥4॥**

ಭಾವಾರ್ಥ - ತೊಂಡೆಯ ಹಣ್ಣನ್ನು ಹೋಲುವ ಸುಂದರ ತುಟಿಯಿಂದ ಕೂಡಿ ನವರತ್ನಾಲಂಕೃತ ಸುವರ್ಣ ಸಿಂಹಾಸನದ ಮೇಲೆ ವಿರಾಜಿಸುತ್ತಾ, ದಾಳಿಂಬದ ಎಸಳಿನ ಕಾಂತಿಯನ್ನು ಹೊಂದಿರುವ, ಮುಗುಳ್ನಗೆಯನ್ನು ಬೀರುತ್ತಲಿರುವ, ಮಧುರ ನುಡಿಗಳನ್ನಾಡುವ, ಸುಖದಾಯಕನಾದ ಮನ್ಮಥನಿಂದ ಪೂಜಿಸಲ್ಪಡುವ, ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ಯೈಃ ಷಡ್ಭಿರ್ವದನೈಃ ನಿಪೀತ ಸುಭಗಾಲಂಕಾರ ಪೀನಸ್ತನೀಂ । ಸ್ಕಂದಸ್ಯಾಮಿತ ತೇಜಸಃಸುಜನನೀಂ ಮಂದಾರಮಾಲಾಧರೀಂ ॥ ಮಧ್ಯೇ ಸೌಷ್ಠ್ಮವ ರೋಮರಾಜಿ ತಿಲಕಾಂ ಗಂಭೀರನಾಭೀ ಹೃದಾಂ । ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥5॥**

ಭಾವಾರ್ಥ - ಮನಮೋಹಕವಾಗಿರುವ ಆರು ಮುಖಗಳುಳ್ಳವಳಾಗಿರುವ, ತನಯ ಷಣ್ಮುಖನಿಗೆ ಸ್ತನ್ಯಪಾನ ಮಾಡಿಸಿದವಳಾದ, ಸ್ಕಂದನ ಅಪರಿಮಿತ ತೇಜೋಮಯಿ ಮಾತೆಯಾಗಿರುವ, ಪಾರಿಜಾತ ಪುಷ್ಪಗಳ ಮಾಲೆಯಿಂದ ಅಲಂಕೃತಳಾಗಿರುವ, ಮನೋಹರ ದೇಹ ಕಾಂತಿಯುಳ್ಳವಳಾದ, ಆಕರ್ಷಣೀಯ ಕೇಶಗಳಿಂದ ಅಲಂಕೃತಳಾಗಿರುವ ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ನಾನಾರತ್ನ ವಿಚಿತ್ರ ಭೂಷಣಕರಾಂ ವಾಮೋರುಜಾನುದ್ವಯಾಂ । ಜಂಘಾಂಗ್ರಾಂಚಿತ ಹಂಸಕಾದಿಕರುಣೋದ್ಭೂಷಾ ವಿಶೇಷಾನ್ವಿತಂ ॥ ಇಂದ್ರಾದ್ಯಾಮರ ವೃಂದವಂದಿತಪದಾಂ ಭಕ್ತೇಷ್ಟದಾನ ವ್ರತಾಂ । ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥6॥**

ಭಾವಾರ್ಥ - ನಾನಾವಿಧದ ಚಿತ್ರ ವಿಚಿತ್ರ ರತ್ನಾಭರಣಗಳನ್ನು ಕೈಯಲ್ಲಿ ಧರಿಸಿ ಸುಂದರವಾಗಿ ಬೆಳಗುತ್ತಲಿರುವ, ಮನೋಹರವಾಗಿರುವ ಶರೀರವನ್ನು ಹೊಂದಿದವಳಾದ, ಕೋಮಲವಾದ ಪಾದಗಳಲ್ಲಿ ಝೇಂಕಾರನಿನಾದ ಮೊಳಗುವ

ಗೆಜ್ಜೆಗಳನ್ನು ಧರಿಸಿದ ಕರುಣಾಸಾಗರೆ, ದೇವೇಂದ್ರಾದಿ ದೇವದೇವತೆಯರು ಪೂಜಿಸುವ ಪಾವನಮಯಚರಣಗಳನ್ನು ಹೊಂದಿ ತನ್ನ ನಿಜ ಭಕ್ತರ ಅಭೀಷ್ಟಗಳನ್ನು ಈಡೇರಿಸುವುದನ್ನೇ ಗುರಿಯಾಗಿಸಿಕೊಂಡಿರುವ ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ಮಾಯಾಮಾಧವ ಮುಖ್ಯದೇವನಿಚಯ್ಯೈಃ ಸಂಸೇವ್ಯಮಾನಾಂ ಶುಭಾಂ ।**
**ಮಾರಾರಾತಿವಧೂಟಿಕಾಂ ಶುಭಕರೀಂ ಆನಂದ ಸಂದಾಯಿನೀಂ ॥**
**ಸೌವರ್ಣಾಂಚಿತಲಿಂಗಮೂರ್ಧ್ನಿ ಪತಿನಾ ಸಾರ್ಥಸ್ವಸಾನ್ನಿಧ್ಯಕಾಂ ।**
**ಶ್ರೀಕೋಲಾಪುರವಾಸಿನೀಂ ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥7॥**

ಭಾವಾರ್ಥ - ಲಕ್ಷ್ಮೀ-ನಾರಾಯಣರೇ ಆದಿಯಾದ ದೇವತಾ ಸಮೂಹದಿಂದ ಆರಾಧಿಸಲ್ಪಡುತ್ತಿರುವ, ಮಂಗಲದಾಯಿನಿಯಾಗಿರುವ, ಮನ್ಮಥನ ವೈರಿಯಾಗಿರುವ ಶಿವನ ಪ್ರೀತಿಯ ಸತಿಯಾದ, ಶುಭಪ್ರದಾಯಕಿಯಾಗಿರುವ, ಶಿವನ ಸಮೀಪ ಪ್ರಯೋಜನಕಾರಿಯಾಗಿರುವ ಸಾನ್ನಿಧ್ಯವನ್ನು ಹೋದಿರುವವಳಾದ ಮಾತೆ ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

**ಶ್ರೀವಾಣೀಂ ಹಿಮಾದ್ರಿಜಾ ದಿತಿಸತೀ ಸ್ವಾಹಾಸ್ವಧಾನ್ವೇಷಿಣೀಂ । ಶ್ರೀಕಂಠಾದಿಸಮಸ್ತ**
**ದೈವತಮುಖೈಃ ಸಂಪ್ರಾರ್ಥಿತಾಂ ಚಿನ್ಮಯೀಂ ॥ ಶ್ರೀಕಾಮೋದ್ಧೃತ**
**ಮೂಕವಾಗ್ನಿಹತಿದಾಂ ಲಕ್ಷ್ಮೀಂ ಮಹಾಪೂರ್ವಿಕಾಂ । ಶ್ರೀಕೋಲಾಪುರವಾಸಿನೀಂ**
**ಭಗವತೀಂ ಧ್ಯಾಯಾಮಿ ಮೂಕಾಂಬಿಕಾಂ ॥8॥**

ಭಾವಾರ್ಥ - ವಾಕ್ಕಿನ ಅಧೀಶೆಯಾಗಿರುವ ವಾಣೀಯೇ, ಹಿಮವಂತನ ಮಗಳಾದ ಪಾರ್ವತಿಯೇ, ನೀನು ಲಕ್ಷ್ಮಿಯೂ, ದಾಕ್ಷಾಯಣಿಯೂ ಆಗಿರುವೆ. ಶ್ರೀಕಂಠನೇ ಮೊದಲಾದ ಸಕಲ ದೇವತಾ ಶಕ್ತಿಯಿಂದ ಪೂಜಿಸಿಕೊಳ್ಳುತ್ತಿರುವೆ. ಮಾನಸಿಕ ರೂಪಿಣಿಯಾದ ನೀನು ನಿನ್ನ ಶಕ್ತಿ ಮುಖೇನ ಮೂಕಾಸುರನ ವಾಕ್ಶಕ್ತಿಯನ್ನು ನಿಗ್ರಹಿಸಿದವಳು. ಸೌಂದರ್ಯ ಸ್ವರೂಪಿಣಿಯಾಗಿ, ಅವಿನಾಶಿನಿಯೂ ಅನಾದಿ

ಶಕ್ತಿರೂಪಳೂ ಆಗಿರುವ ಶ್ರೀಕೋಲಾಪುರನಿವಾಸಿನಿಯಾಗಿರುವ ತಾಯಿ ಭಗವತಿ ಮೂಕಾಂಬಿಕೆಯನ್ನು ನಾನು ಧ್ಯಾನಿಸುವೆನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಮೂಕಾಂಬಿಕಾ ಅಷ್ಟಕಂ ಸಂಪೂರ್ಣಂ ॥

## 5.32 ಶ್ರೀ ಭವಾನೀ ಭುಜಂಗ ಸ್ತೋತ್ರಂ

**ಷಢಾಧಾರಪಂಕೇರುಹಾಂತರ್ವಿರಾಜ । ತ್ಸುಷುಮ್ನಾಂತರಾಲೀsತಿತೇಜೋಲಸಂತೀಂ ॥ ಸುಧಾಮಂಡಲಂದ್ರಾವಯಂತೀಂ ಪಿಬಂತಿಂ । ಸುಧಾಮೂರ್ತಿಮೀಡೇ ಚಿದಾನಂದರೂಪಾಂ ॥1॥**

ಭಾವಾರ್ಥ - ಷಢಾಧಾರಚಕ್ರಗಳೆನ್ನುವ ತಾವರೆಯೊಳು ಹುಟ್ಟಿ ವಿರಾಜಿಸುವ ಶುಷುಮ್ನ ನಾಡಿಯಲ್ಲಿ ಹೆಚ್ಚಾದ ಕಾಂತಿಯಿಂದ ಹೊಳೆಯುವ, ಸಹಸ್ರದಳ ಪದ್ಮದಲ್ಲಿ ಅಮೃತಮಂಡಲವನ್ನು ಕರಗಿಸುವ ಹಾಗೂ ಅದನ್ನು ಸೇವಿಸುವ ಸುಧಾಮೂರ್ತಿಯನ್ನು ನಾನು ಸ್ತುತಿಸುವೆನು.

**ಜಲತ್ಕೋಟಿ ಬಾಲಾರ್ಕ ಭಾಸಾರುಣಾಂಗೀಂ । ಸುಲಾವಣ್ಯ ಶೃಂಗಾರ ಶೋಭಾಭಿರಾಮಾಂ ॥ ಮಹಾಪದ್ಮ ಕಿಂಜಲ್ಕ ಮಧ್ಯೇ ವಿರಾಜ । ತ್ರಿಕೋಣೇ ನಿಷಣ್ಣಾಂ ಭಜೇ ಶ್ರೀ ಭವಾನೀಂ ॥2॥**

ಭಾವಾರ್ಥ - ಮನಮೋಹಕವಾಗಿ ಕಂಗೊಳಿಸುವ ಉದಯರವಿಯ ಹೊಳಪಿನ, ಅರುಣ ವರ್ಣದ, ಶ್ ಋಂಗಾರ ಸಾಧನಗಳಿಂದ ಅಲಂಕೃತಳಾಗಿ ಸೌದರ್ಯದ ಖನಿಯಾಗಿರುವ, ಲಾವಣ್ಯವತಿಯಾಗಿರುವ, ಸಹಸ್ರದಳ ಪದ್ಮದಲ್ಲಿರುವ ಕೇಸರದಲ್ಲಿ ಪ್ರಕಾಶಿಸುವ, ತ್ರಿಕೋಣಗಳ ನಡುವಿನಲ್ಲಿ ಆರೂಢಳಾಗಿರುವ ತಾಯಿ ಶ್ರೀಭವಾನಿಯನ್ನು ನಾನು ಸ್ತುತಿಸುವೆನು.

**ಕ್ಷಣತ್ಕಿಂಕಿಣೀ ನೂಪುರೋದ್ಭಾಸಿ ರತ್ನ । ಪ್ರಭಾಲೀಢ ಲಾಕ್ಷಾರ್ದ್ರ ಪಾದಾಬ್ಜಯುಗ್ಮಂ ॥ ಅಜೇಶಾಚ್ಯುತಾದ್ಯೈಃಸುರೈಃಸೇವಮಾನಂ । ಮಹಾದೇವಿ ಮನ್ಮೂರ್ಧ್ನಿ ತೇ ಭಾವಯಾಮಿ ॥3॥**

ಭಾವಾರ್ಥ - ಝಣ ಝಣ ಧ್ವನಿಯನ್ನು ಮಾಡುತ್ತಾ ನೂಪುರಹಾರದಲ್ಲಿರುವ ಮಾಣಿಕ್ಯದ ಪ್ರಭೆಯಿಂದ ಬೆಳಗುವ, ರಕ್ತವರ್ಣದ ಚರಣಾರವಿಂದಗಳುಳ್ಳವಳಾದ, ಹರಿಹರಬ್ರಹ್ಮಾದಿಗಳೇ ಆದಿಯಾದ ದೇವರ್ಕಳುಗಳಿಂದ ಆರಾಧಿಸಲ್ಪಡುತ್ತಲಿರುವ ಅಮ್ಮ ಭವಾನಿಯನ್ನು ನಾನು ನನ್ನ ಮನದಲ್ಲಿ ಧ್ಯಾನಿಸುವೆನು.

**ಸುಶೋಣಾಂಬರಾಬದ್ಧ ನೀವೀ ವಿರಾಜ । ನ್ಮಹಾರತ್ನ ಕಾಂಚೀ ಕಲಾಪಂ ನಿತಂಬಂ ॥ ಸ್ಫುರದ್ದಕ್ಷಿಣಾವರ್ತನಾಭಿಂ ಚ ತಿಸ್ರೋ । ವಲೀರಂಬತೇ ರೋಮರಾಜಿಂ ಭಜೇಽಹಂ ॥4॥**

ಭಾವಾರ್ಥ - ಉತ್ತಮವಾದ ಅರುಣವರ್ಣದ ಮೋಹಕವಾಗಿರುವ ವಸ್ತ್ರಾಲಂಕೃತಳಾಗಿ ವಿರಾಜಮಾನಳಾಗಿರುವ, ಮಹಾಮಾಣಿಕ್ಯಗಳನ್ನು ಪೋಣಿಸಿದ ನಡುಪಟ್ಟಿಯನ್ನು ಧರಿಸಿರುವ, ಚೆಲುವಾದ ನಾಭಿಯನ್ನು ಹೊಂದಿರುವವಳಾಗಿ ಸುಂದರಕೇಶಾಲಂಕೃತೆಯಾಗಿರುವ ಅಮ್ಮಾ! ಭವಾನಿಯೇ! ನಿನ್ನನ್ನು ನಾನು ಸ್ತುತಿಸುತ್ತಿರುವೆನು.

**ಲಸದ್ವೃತ್ತ ಮುತ್ತುಂಗ ಮಾಣಿಕ್ಯಕುಂಭೋ । ಪಮಶ್ರೀ ಸ್ತನದ್ವಂದ್ವಮಂಬಾಂಬುಜಾಕ್ಷಿ ॥ ಭಜೇದುಗ್ಧ ಪೂರ್ಣಾಭಿರಾಮಂ ತವೇದಂ । ಮಹಾಹಾರದೀಪ್ತಂ ಸದಾ ಪ್ರಸ್ನುತಾಸ್ಯಂ ॥5॥**

ಭಾವಾರ್ಥ - ವಕ್ಷಸ್ಥಲದಲ್ಲಿ ದೇದೀಪ್ಯಮಾನವಾಗಿ ಬೆಳಗುತ್ತಲಿರುವ ಹಾರಗಳಿಂದ ಸುಶೋಭಿಸುತ್ತಾ ರಾರಾಜಿಸುತ್ತಲಿರುವ ಮಹಾಮಾತೆಯಾಗಿರುವ ಅಮ್ಮನೂ, ಕಮಲನಯನಳೂ ಆಗಿರುವ ಶ್ರೀ ಭವಾನಿಯನ್ನು ನಾನು ಸ್ತುತಿಸುವೆನು.

**ಶರೀಷಪ್ರಸೂನೋಲ್ಲಸದ್ಬಾಹುದಂಡೈ । ಜ್ವಲದ್ಬಾಣ ಕೋದಂಡ ಪಾಶಾಂಕುಶೈಶ್ಚ ॥ ಚಲತ್ಕಂಕಣೋದಾರ ಕೇಯೂರ ಭೂಷೋ । ಜ್ಜ್ವಲದ್ಭಿರ್ಲಸಂತೀಂ ಭಜೇ ಶ್ರೀ ಭವಾನೀಂ ॥6॥**

ಭಾವಾರ್ಥ - ಕುಸುಮಕೋಮಲ ಶರೀರವುಳ್ಳವಳಾಗಿ ಬೆಳಗುತ್ತಲಿರುವ, ಬಾಹುದಂಡಗಳಲ್ಲಿ ಪ್ರಕಾಶಮಯವಾದ ಧನುರ್ಬಾಣಗಳನ್ನೂ, ಪಾಶಾಂಕುಶಗಳನ್ನೂ

ಧರಿಸಿದವಳಾಗಿರುವ ಚಂಚಲನಯನೆಯಾಗಿರುವ ಕೇಯೂರಹಾರಾದಿಗಳಿಂದ ಅಲಂಕೃತಳಾಗಿ ಬೆಳಗುತ್ತಲಿರುವ ತಾಯಿ ಶ್ರೀಭವಾನಿಯನ್ನು ನಾನು ಸ್ತುತಿಸುವೆನು.

**ಶರತ್ಪೂರ್ಣಚಂದ್ರ ಪ್ರಭಾ ಪೂರ್ಣಬಿಂಬಾ । ಧರ ಸ್ಮೇರ ವಕ್ತ್ರಾರವಿಂದಾಂ ಸುಶಾಂತಾಂ ॥ ಸುರತ್ನಾವಲೀ ಹಾರ ತಾಟಂಕ ಶೋಭಾಂ । ಮಹಾಸುಪ್ರಸನ್ನಾಂ ಭಜೇ ಶ್ರೀ ಭವಾನೀಂ ॥7॥**

ಭಾವಾರ್ಥ - ಶರತ್ಕಾಲದ ಪೌರ್ಣಿಮೆಯ ಚಂದ್ರನ ಪ್ರಭಾಬಿಂಬವನ್ನು ಹೋಲುವ, ಮಂದಸ್ಮಿತವದನೆಯಾಗಿರುವ, ಅತ್ಯಂತಶಾಂತಳಾಗಿರುವ, ಉತ್ತಮವಾಗಿರುವ ರತ್ನಮಾಣಿಕ್ಯಗಳಿಂದ ಕೂಡಿದ ಕರ್ಣಾಭರಣಾಹಾರಗಳಿಂದ ಶೋಭಿತಳಾಗಿರುವ ಪ್ರಸನ್ನ ಚಿತ್ತಳೂ ಆಗಿರುವ ತಾಯಿ ಶ್ರೀ ಭವಾನಿಯನ್ನು ನಾನು ಸ್ತುತಿಸುವೆನು.

**ಸುನಾಸಾ ಪುಟಂ ಸುಂದರಂ ಭ್ರೂ ಲಲಾಟಂ । ತವೌಷ್ಠ ಶ್ರೀಯಂ ದಾನವಕ್ಷಂ ಕಟಾಕ್ಷಂ ॥ ಲಲಾಟೋಲ್ಲಸದ್ಗಂಧ ಕಸ್ತೂರಿ ಭೂಪಂ । ಸ್ಫುರಚ್ಛ್ರೀಮುಖಾಂಬೋಜಮೀಡೇಽಹಮಂಬ ॥8॥**

ಭಾವಾರ್ಥ - ಮನೋಹರವಾಗಿರುವ ಮೂಗು, ಚೆಲುವಾದ ಹುಬ್ಬು, ಮತ್ತು ಸೊಗಸಾದ ಹಣೆ, ಸುಂದರ ತುಟಿಗಳನ್ನು ಹೊಂದಿರುವ ಮಾತೆ ಆನಂದಭರಿತಳಾಗಿ ಭಕ್ತರಿಗೆ ದಾನ ಮಾಡುವುದರಲ್ಲಿ ದಕ್ಷತೆಯುಳ್ಳವಳಾಗಿ, ಹಣೆಯಲ್ಲಿ ಪ್ರಕಾಶಿಸುವ ಶ್ರೀಗಂಧ, ಕಸ್ತೂರಿಯಾದಿ ಅಲಂಕಾರಗಳನ್ನು ಹೊಂದಿ, ಕೃಪಾ ಕಟಾಕ್ಷೆಯೂ ತಾನಾಗಿ, ಪ್ರಕಾಶಮಯಿಯಾಗಿ ಬೆಳಗುತ್ತಲಿರುವ ಮುಖಾರವಿಂದವನ್ನು ಹೊಂದಿರುವ ತಾಯಿ ಶ್ರೀ ಭವಾನಿಯನ್ನು ನಾನು ಸ್ತುತಿಸುವೆನು.

**ಚಲತ್ಕುಂತಲಾಂತರ್ಭ್ರಮೃದ್ಭೃಂಗ ವೃಂದಂ । ಘನಸ್ನಿಗ್ಧ ಧಮ್ಮಿಲ್ಲ ಭೂಷೋಜ್ಜ್ವಲಂ ತೇ ॥ ಸ್ಫುರನ್ಮೌಲಿ ಮಾಣಿಕ್ಯ ಬದ್ಧೇಂದುರೇಖಾ । ವಿಲಾಸೋಲ್ಲಸದ್ದಿವ್ಯ ಮೂರ್ಧಾನಮೀಡೇ ॥9॥**

ಭಾವಾರ್ಥ - ಅಮ್ಮಾ!ನಿನ್ನ ಹೊಯ್ದಾಡುವ ಮುಂಗುರುಳುಗಳ ಸುತ್ತಲೂ ಭ್ರಮರಗಳ ಸಮೂಹವು ಹಾರಾಡುತ್ತಲಿವೆ. ದಟ್ಟವಾದ ಸಿರಿಮುಡಿಗೆ ಮಾಲೆಯನ್ನು

ತೊಟ್ಟವಳು ನೀನಾಗಿರುವೆ. ಈ ನಿನ್ನ ಅಲಂಕಾರಗಳಿಂದ ದೇಹ ಶಿಖರವು ಬೆಳಗುತ್ತಲಿದೆ. ಮಾಣಿಕ್ಯಾದಿ ರತ್ನ ಸಮೂಹಗಳಿಂದ ಅಲಂಕೃತಗೊಂಡ ಶ್ರೇಷ್ಠ ಕಿರೀಟವುಳ್ಳವಳು ನೀನಾಗಿರುವೆ. ಅಮ್ಮಾ! ಮಾತೆಯೇ, ಭವಾನಿಯೇ, ನಾನಿದೋ ನಿನ್ನನ್ನು ಸ್ತುತಿಸುತ್ತಲಿರುವೆನು.

**ಆಪತ್ಸುಮಗ್ನಃ ಸ್ಮರಣಂ ತ್ವದೀಯಂ । ಕರೋಮಿ ದುರ್ಗೇ ಕರುಣಾರ್ಣವೇತಿ ॥**
**ನೇತಚ್ಛಟತ್ವಂ ಮಮ ಭಾವಯೇಥಾಃ । ಕ್ಷುಧಾತೃಷಾರ್ಥಾ ಜನನೀಂ ಸ್ಮರಂತಿ ॥10॥**

ಭಾವಾರ್ಥ - ಅಮ್ಮಾ!ದುರ್ಗಾ ಮಾತೆಯೇ, ಹಸಿವು ಬಾಯಾರಿಕೆಗಳಿಗೊಳಗಾದ ಮಕ್ಕಳು ಹೆತ್ತಮ್ಮನನ್ನು ಸ್ಮರಿಸುತ್ತಾರೆ. ಅದೇ ರೀತಿ ನಾನಾದರೋ ಆಪತ್ತುಗಳಿಗೆ ಸಿಲುಕಿರುವಾಗ "ಹೇ! ಅಮ್ಮಾ, ದುರ್ಗೆಯೇ, ಕರುಣಾಸಾಗರಿಯೇ" ಎಂಬುದಾಗಿ ನಿನ್ನನ್ನು ಸ್ಮರಿಸುತ್ತಲಿರುವೆನು. ಇದು ನನ್ನ ದುರ್ಬುದ್ಧಿಯೆಂಬುದಾಗಿ ನಿನ್ನಿಂದ ಭಾವಿಸಲ್ಪಡದಿರಲಿ.

**ಜಗದಂಬ ವಿಚಿತ್ರ ಮತ್ರ ಕಿಂ । ಪರಿಪೂರ್ಣಾ ಕರುಣಾಽಸ್ತಿ ಚೇನ್ಮಯಿ ॥**
**ಅಪರಾಧಪರಂಪರಾವೃತಂ । ನ ಹಿ ಮಾತಾಸಮುಪೇಕ್ಷತೇ ಸುತಂ ॥11॥**

ಭಾವಾರ್ಥ - ಅಮ್ಮಾ!ಜಗದಂಬಿಕೆಯೇ, ನೀನು ನನ್ನ ಬಗ್ಗೆ ಕರುಣಾಮಯಿಯಾಗಿದ್ದರೆ ಅದರಲ್ಲಿ ವೈಚಿತ್ರ್ಯವೇನಿಲ್ಲ. ಯಾಕೆಂದರೆ ಅಪರಾಧಗಳ ವಂಶಾವಳಿಯೇ ನನ್ನದಾಗಿ ಸುತ್ತುವರಿದಿದ್ದರೂ ತಾಯಿಯು ಮಗನನ್ನು ನಿರ್ಲಕ್ಷಿಸುವುದಿಲ್ಲ.

**ತ್ವಮರ್ಕಸ್ತ್ವ ಮಿಂದುಸ್ತ್ವಮಾಪ । ಸ್ತ್ವಮಾಕಾಶ ಭೂವಾಯುಸ್ತ್ವಂ ಮಹತ್ವಂ ॥**
**ತ್ವದನ್ಯೋ ನ ಕಶ್ಚಿತ್ ಪ್ರಂಪಂಚೋಽಸ್ತಿ ಸರ್ವಂ । ತ್ವಮಾನಂದಸಂವಿತ್ಸ್ವರೂಪಾಂ ಭಜೇಽಹಂ ॥12॥**

ಭಾವಾರ್ಥ - ಅಮ್ಮಾ ಭವಾನಿಯೇ!ನೀನು ಸೂರ್ಯ, ಚಂದ್ರ, ಅಗ್ನಿ, ನೀರು, ಆಕಾಶ, ವಾಯು, ಭೂಮಿ ಸ್ವರೂಪಳೇ ಆಗಿರುವೆ. ಶ್ರೇಷ್ಠವಾದ ಜ್ಞಾನ ತತ್ವವು ನಿನ್ನ ಹೊರತಾಗಿ ಅನ್ಯ ಯಾವುದೇ ಸ್ಥಾನದಲ್ಲಿಲ್ಲ. ಸರ್ವಸ್ವವೂ ನೀನೇ ಆಗಿರುವೆ. ನೀನೇ

ಆನಂದ ಸ್ವರೂಪಳು. ನೀನೇ ಜ್ಞಾನ ಸ್ವರೂಪಳು. ಅಮ್ಮಾ!ಭವಾನಿಯೇ, ನಿನ್ನನ್ನು ಸ್ತುತಿಸಲು ನಾನು ಸ್ತುತಿಸುವೆನು.

**ಶ್ರುತೀ ನಾಮಗಮ್ಯೇ ಸುವೇದಾಗಮಜ್ಞಾ । ಮಹಿಮ್ನೋ ನ ಜಾನಂತಿ ಪಾರಂ ತವಾಂಬ ॥ ಸ್ತುತಿಂ ಕರ್ತು ಮಿಚ್ಛಾಮಿ ತೇತ್ವಂ ಭವಾನಿ । ಕ್ಷಮಸ್ವೇದಮತ್ರ ಪ್ರಮುಧಃ ಕಿಲಾಹಂ ॥13॥**

ಭಾವಾರ್ಥ - ಅಮ್ಮಾ!ಭವಾನೀ,ನಾದವು ನಿನ್ನನ್ನು ಅರಿಯಲಾರದು. ವೇದಗಳು ನಿನ್ನನ್ನು ಚೆನ್ನಾಗಿ ತಿಳಿದಿಲ್ಲ. ಇವು ಯಾವುವೂ ನಿನ್ನ ಮಹತ್ವವನ್ನು ಅರಿಯಲಾರವು. ಅಮ್ಮಾ!ನಿನ್ನನ್ನು ನಾನು ಸ್ತುತಿಸಲು ಇಚ್ಛೆಪಡುತ್ತಿದ್ದೇನೆ. ತಿಳುವಳಿಕೆಯಿಲ್ಲದವನಾದ ನನ್ನನ್ನು ನೀನು ಕ್ಷಮಿಸುವವಳಾಗು.

**ಗುರುಸ್ತ್ವಂಶಿವಸ್ತ್ವಂ ಚ ಶಕ್ತಿ ಸ್ತ್ವಮೇವ । ತ್ವಮೇವಾಸಿ ಮಾತಾಪಿತಾ ಚ ತ್ವ ಮೇವ ॥ ತ್ವಮೇವಾಸಿ ವಿದ್ಯಾ ತ್ವಮೇವಾಸಿ ಬಂಧು । ಗರ್ತಿರ್ಮೇ ಮತಿರ್ದೇವಿ ಸರ್ವಂ ತ್ವಮೇವ ॥14॥**

ಭಾವಾರ್ಥ - ಅಮ್ಮಾ!ನೀನೇ ಗುರುವು, ನೀನೇ ಹರನು, ನೀನೇ ಶಕ್ತಿಯು, ನೀನೇ ತಾಯಿ, ನೀನೇ ತಂದೆ, ನೀನೇ ವಿದ್ಯೆ, ಬಂಧು, ಬುದ್ಧಿ. ನನಗಾಧಾರವೂ ನೀನೇ ಆಗಿರುವೆ. ತಾಯಿ ಭವಾನಿಯೇ ನನ್ನ ಸರ್ವಸ್ವವೂ ನೀನೇ ಆಗಿರುವೆ.

**ಶರಣ್ಯೇ ವರೇಣ್ಯೇ ಸುಕಾರುಣ್ಯ ಮೂರ್ತೇ । ಹಿರಣ್ಯೋ ದರಾದ್ಯೈರಗಣ್ಯೇ ಸುಪುಣ್ಯೇ ॥ ಭವಾರಣ್ಯ ಭೀತೇಶ್ಚಮಾಂ ಪಾಹಿ ಭದ್ರೇ । ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥15॥**

ಭಾವಾರ್ಥ - ಆಶ್ರಯ ಹೊಂದಲು ತಕ್ಕವಳಾದವಳೇ, ಅಗ್ರಗಣ್ಯಳೇ, ಉನ್ನತ ಕರುಣಾಮೂರ್ತಿಯೇ, ಬ್ರಹ್ಮ, ವಿಷ್ಣುವೇ ಮೊದಲಾದವರಿಗೆ ತಿಳಿದುಕೊಳ್ಳಲು ಅಸಾಧ್ಯವಾಗಿರುವ ಮಹಾಸ್ವರೂಪಳೇ, ಅಧಿಕತಮ ಪುಣ್ಯಶಾಲಿನಿಯೇ, ಯೋಗ್ಯಳೇ, ಸಾಂಸಾರಿಕ ಕಾನನದೊಳು ಸಿಲುಕಿ ಭೀತನಾಗಿರುವ ನನ್ನನ್ನು ಕರುಣೆಯಿಂದ ನೋಡುವವಳಾಗು. ಅಮ್ಮಾ ಭವಾನಿಯೇ! ನಿನಗಿದೋ ಅನಂತಾನಂತ ಪ್ರಣಾಮಗಳು.

**ಇತೀ ಮಾಂ ಮಹಚ್ಛ್ರೀಭವಾನೀಭುಜಂಗ । ಸ್ತುತಿಂ ಯಃ ಪಠೇದ್ಭಕ್ತಿ ಯುಕ್ತಶ್ಚ ತಸ್ಮೈ ॥ ಸ್ವಕೀಯಂ ಪದಂ ಶಾಶ್ವತಂ ವೇದಸಾರಂ । ಶ್ರೀಯಂ ಚಾಷ್ಟಸಿದ್ಧಿಂ ಭವಾನೀ ದಧಾತಿ ॥16॥**

ಭಾವಾರ್ಥ - ಇಂತಿರುವ ಉತ್ತಮವಾಗಿರುವ ಭವಾನೀ ಭುಜಂಗ ಸ್ತೋತ್ರವನ್ನು ಯಾವಾತನು ಭಕ್ತಿಯಿಂದ ಪಠಿಸುತ್ತಾರೋ ಅಂತಹವನಿಗೆ ಸರ್ವವೇದಸಾರವಾಗಿರುವ ತನ್ನ ಅವಿನಾಶಿಯಾದ ಸ್ಥಾನವನ್ನೂ, ಅಷ್ಟೈಶ್ವರ್ಯಸಿದ್ಧಿಯನ್ನೂ ಆ ತಾಯಿ ಭವಾನಿಯು ದಯಪಾಲಿಸುವಳು.

**ಭವಾನೀ ಭವಾನೀ ಭವಾನೀ ತ್ರಿವಾರ । ಮುದಾರಂ ಮುದಾ ಸರ್ವದಾ ಯೇ ಜಪಂತಿ ॥ ನ ಶೋಕೋ ನ ಮೋಹೋ ನ ಪಾಪಂ ನ ಭೀತಿಃ । ಕದಾಚಿತ್ಕಥಂ ಚಿತ್ಕುತಶ್ಚಿಜ್ಜನಾನಾಂ ॥17॥**

ಭಾವಾರ್ಥ - ಭವಾನೀ, ಭವಾನೀ, ಭವಾನೀ, ಎಂಬುದಾಗಿ ಮೂರುಸಾರಿ ಪ್ರಾಮಾಣಿಕ ಮನಸ್ಸಿನಿಂದ ಅನುರಾಗಭರಿತನಾಗಿ ನಿರಂತರ ಯಾರು ಸ್ತುತಿಸುವರೋ ಅವರಿಗೆ ಯಾವತ್ತೂ ಯಾವ ತೆರನಾಗಿಯೂ ಯಾರಿಂದಲೂ ದುಃಖವಿರಲಾರದು. ಅವರನ್ನು ಮೋಹವು ಬಾಧಿಸದು. ಪಾಪವು ಅವರ ಬಳಿ ಸುಳಿಯದು. ಅವರು ನಿರ್ಭಯರಾಗುವರು.

॥ ಇತಿ ಶ್ರೀ ಭವಾನೀ ಭುಜಂಗ ಸ್ತೋತ್ರಂ ಸಂಪೂರ್ಣಂ ॥

## 5.33 ಅಪರಾಜಿತಾ ಸ್ತೋತ್ರ

**ಯಾ ದೇವೀ ಸರ್ವಭೂತೇಷು ವಿಷ್ಣುಮಾಯೇತಿ ಶಬ್ದಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ಚೇತನೇತ್ಯಭಿಧೀಯತೇ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ಶಕ್ತಿ ರೂಪೇಣ ಸಂಸ್ಥಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ಶಾಂತಿ ರೂಪೇಣ ಸಂಸ್ಥಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ಶ್ರದ್ಧಾ ರೂಪೇಣ ಸಂಸ್ಥಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ಕಾಂತಿ ರೂಪೇಣ ಸಂಸ್ಥಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ದಯಾ ರೂಪೇಣ ಸಂಸ್ಥಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

**ಯಾ ದೇವೀ ಸರ್ವಭೂತೇಷು ಮಾತೃ ರೂಪೇಣ ಸಂಸ್ಥಿತಾ । ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

ಭಾವಾರ್ಥ - ಯಾವ ದೇವಿ ವಿಷ್ಣು ಮಾಯೆಯೆಂದು ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವಿ ಚೈತನ್ಯದ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವಿ ಶಕ್ತಿ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವಿ ಶಾಂತಿ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವಿ ಶ್ರದ್ಧೆಯ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವೀ ಕಾಂತಿ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವಿ ದಯೆಯ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ. ಯಾವ ದೇವಿ ಮಾತೃ ರೂಪದಲ್ಲಿ ಎಲ್ಲ ಜಡ ಚೇತನಗಳಲ್ಲೂ ನೆಲಸಿರವಳೋ ಆಕೆಗಿದೋ ನಮ್ಮ ನಮಸ್ಕಾರ.

॥ ಇತಿ ಶ್ರೀ ಅಪರಾಜಿತಾಸ್ತೋತ್ರಂ ಸಂಪೂರ್ಣಂ ॥

----- ****** -----

# 6 ಶಿವ ಸ್ತೋತ್ರಗಳು

## 6.1 ಶ್ರೀ ಶಿವ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃ ಸ್ಮರಾಮಿ ಭವ ಭೀತಿಹರಂ ಸುರೇಶಂ । ಗಂಗಾಧರಂ ವೃಷಭವಾರ್ಷಂ ಅಂಬಿಕೇಷಂ ॥ ಖಟ್ವಾಂಗಶೂಲವರದಾಭಯ ಹಸ್ತಮೀಶಂ । ಸಂಸಾರ ರೋಗಹರಮೌಷಧಮದ್ವಿತೀಯಂ ॥1॥**

ಭಾವಾರ್ಥ - ಸಾಂಸಾರಿಕ ಭೀತಿಗಳನ್ನು ನಿವಾರಣೆ ಮಾಡುವವನೂ, ದೇವತೆಗಳ ಅಧಿಪತಿಯೂ, ಗಂಗೆಯನ್ನು ಧರಿಸಿದವನೂ, ನಂದಿಯನ್ನು ವಾಹನವನ್ನಾಗಿಸಿಕೊಂಡವನೂ, ಅಂಬಿಕೆಯಪತಿಯೂ, ಖಟ್ವಾಂಗ ಶೂಲಗಳನ್ನು ಆಯುಧಗಳನ್ನಾಗಿಸಿಕೊಂಡವನೂ, ಶರಣಾಗತ ಭಕ್ತರಿಗೆ ಅಭಯ ಹಸ್ತಗಳಿಂದ ವರವನ್ನು ದಯಪಾಲಿಸುವವನೂ, ಈಶ್ವರನೂ, ಭಕ್ತರ ಸಾಂಸಾರಿಕ ವ್ಯಾಧಿಗಳನ್ನು ನಿವಾರಿಸುವ ಅದ್ವಿತೀಯ ಔಷಧ ಸ್ವರೂಪನೂ ಆಗಿರುವ ಪರಮೇಶ್ವರನನ್ನು ನಾನು ಉಷಃಕಾಲದಲ್ಲಿ ಸ್ಮರಣೆ ಮಾಡುವೆನು.

**ಪ್ರಾತರ್ನಮಾಮಿ ಗಿರಿಶಂ ಗಿರಿಜಾರ್ಧ ದೇಹಂ । ಸರ್ಗಸ್ಥಿತಿ ಪ್ರಲಯಕಾರಣಮಾದಿ ದೇವಂ ॥ ವಿಶ್ವೇಶ್ವರಂ ವಿಜಿತ ವಿಶ್ವಮನೋಽಭಿರಾಮಂ । ಸಂಸಾರ ರೋಗಹರಮೌಷಧಮದ್ವಿತೀಯಂ ॥2॥**

ಭಾವಾರ್ಥ - ಅರ್ಧನಾರೀಶ್ವರನೂ, ಕೈಲಾಸಾಧಿಪತಿಯೂ, ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣನೂ, ವಿಶ್ವೇಶ್ವರನೂ, ಮನೋಲ್ಲಾಸಿಯೂ ವಿಶ್ವವನ್ನು ಜಯಿಸಿದವನೂ, ಭಕ್ತರ ಸಾಂಸಾರಿಕ ವ್ಯಾಧಿಗಳನ್ನು ನಿವಾರಿಸುವ ಅದ್ವಿತೀಯ ಔಷಧ

ಸ್ವರೂಪನೂ ಆಗಿರುವ ಪರಮೇಶ್ವರನನ್ನು ನಾನು ಉಷಃಕಾಲದಲ್ಲಿ ಸ್ಮರಣೆ ಮಾಡುವೆನು.

**ಪ್ರಾತರ್ಭಜಾಮಿ ಶಿವಮೇಕಮನಂತಮಾದ್ಯಂ । ವೇದಾಂತ ವೇದ್ಯಮನಘಂ ಪುರುಷಂ ಮಹಾಂತಂ ॥ ನಾಮಾದಿಭೇಧರಹಿತಂ ಷಡ್ಭಾವ ಶೂನ್ಯಂ । ಸಂಸಾರ ರೋಗಹರಮೌಷಧಮದ್ವಿತೀಯಂ ॥3॥**

ಭಾವಾರ್ಥ - ಅನಂತನೂ, ಆದಿ ಪುರುಷನೂ, ವೇದ-ವೇದಾಂತಗಳಿಂದ ತಿಳಿಯಲ್ಪಡುವವನೂ, ನಾಮಾದಿ ಭೇಧ ರಹಿತನೂ, ಷಡ್ಭಾವ ವಿರಹಿತನೂ ಭಕ್ತರ ಸಾಂಸಾರಿಕ ವ್ಯಾಧಿಗಳನ್ನು ನಿವಾರಿಸುವ ಅದ್ವಿತೀಯ ಔಷಧ ಸ್ವರೂಪನೂ ಆಗಿರುವ ಪರಮೇಶ್ವರನನ್ನು ನಾನು ಉಷಃಕಾಲದಲ್ಲಿ ಸ್ಮರಣೆ ಮಾಡುವೆನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಶಿವ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 6.2 ಶ್ರೀ ಮಹಾ ಮೃತ್ಯುಂಜಯ ಸ್ತೋತ್ರಂ

**ರುದ್ರಂ ಪಶುಪತಿಂ ಸ್ಥಾಣುಂ ನೀಲಕಂಠಂ ಉಮಾಪತಿಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥1॥**

ಭಾವಾರ್ಥ - ರುದ್ರನನ್ನನು, ಪಶುಪತಿಯನ್ನು, ಸ್ಥಿರರೂಪೀಶಿವನನ್ನು, ನೀಲಕಂಠನನ್ನು, ಉಮಾಪತಿಯನ್ನು, ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಕಾಲಕಂಠಂ ಕಾಲಮೂರ್ತಿಂ ಕಾಲಾಗ್ನಿಂ ಕಾಲನಾಶನಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥2॥**

ಭಾವಾರ್ಥ - ಕಾಲಕಂಠನನ್ನು, ಕಾಲಮೂರ್ತಿಯನ್ನು, ಕಾಲಾಗ್ನಿಯನ್ನು, ಕಾಲನಾಶಕನನ್ನು ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ವಾಮದೇವಂ ಮಹಾದೇವಂ ಲೋಕನಾಥಂ ಜಗದ್ಗುರುಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥3॥**

ಭಾವಾರ್ಥ - ವಾಮದೇವನನ್ನು, ಲೋಕನಾಥನನ್ನು, ಜಗದ್ಗುರುವನ್ನು, ದೇವದೇವನಾದ ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ದೇವದೇವಂ ಜಗನ್ನಾಥಂ ದೇವೇಶಂ ವೃಷಭಧ್ವಜಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥4॥**

ಭಾವಾರ್ಥ - ದೇವದೇವನಾದಜಗನ್ನಾಥನನ್ನುದೇವೇಶನಾದ ಪರಮಶಿವನನ್ನು, ವೃಷಭಧ್ವಜನನ್ನು, ಮಹಾದೇವನನ್ನುನಾನುಶಿರಸಾನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಗಂಗಾಧರಂ ಮಹಾದೇವಂ ಶಂಕರಂ ಶೂಲಪಾಣಿನಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥5॥**

ಭಾವಾರ್ಥ - ಗಂಗಾಧರನನ್ನು, ಶಂಕರನನ್ನು, ಶೂಲಪಾಣಿಯನ್ನು ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಭಸ್ಮೋದ್ಧೂಲಿತಸರ್ವಾಂಗಂ ನಾನಾಹರ್ಣಭೂಷಿತಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥6॥**

ಭಾವಾರ್ಥ - ವಿಭೂತಿಯ ಕಣದಿಂದ ಸರ್ವಾಂಗವೂ ಲೇಪಿತನಾದವನ, ಮತ್ತು ವಿವಿಧಾಭರಣಗಳನ್ನು ಧರಿಸಿಕೊಂಡಿರುವ ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಆನಂದಂ ಪರಮಾನಂದಂ ಕೈವಲ್ಯಪದಗಾಮಿನಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥7॥**

ಭಾವಾರ್ಥ - ಆನಂದ ಸ್ವರೂಪನೂ, ಪರಮಾನಂದಕಾರಕನೂ, ಕೈವಲ್ಯಕ್ಕೆ ಹಾದಿ ತೋರುವವನೂ ಆಗಿರುವ ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಸ್ವರ್ಗಾಪವರ್ಗದಾತಾರಂ ಸೃಷ್ಟಿಸ್ಥಿತ್ಯಂತಕಾರಿಣಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥8॥**

ಭಾವಾರ್ಥ - ಸ್ವರ್ಗಸುಖದಾಯಕನೂ, ಸೃಷ್ಟಿ ಸ್ಥಿತಿ ಲಯಕಾರಕನೂ ಆಗಿರುವ ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಪ್ರಲಯಸ್ಥಿತಿಸಂಹಾರಮಾದಿಕರ್ತಾರಮೀಶ್ವರಂ । ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯು ಕರಿಷ್ಯತಿ ॥9॥**

ಭಾವಾರ್ಥ - ಪ್ರಲಯ, ಸೃಷ್ಟಿ ನಾಶಗಳಿಗೆ ಕಾರಣನಾಗಿರುವ ಮಹಾದೇವನನ್ನು ನಾನು ಶಿರಸಾ ನಮಸ್ಕರಿಸುವೆ. ಮೃತ್ಯು ನನಗೇನು ಮಾಡಲು ಸಾಧ್ಯ?

**ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ । ವೇದ ಶಾಸ್ತ್ರಾತ್ ಪರಂ ನಾಸ್ತಿ ನ ದೇವಃ ಶಂಕರಾತ್ ಪರಃ ॥10॥**

ಭಾವಾರ್ಥ - ವೇದಶಾಸ್ತ್ರಗಳಿಂದ ಉತ್ಕೃಷ್ಠವಾಗಿರುವ ತತ್ವಗಳು ಬೇರಾವುದೂ ಇಲ್ಲ. ಅದೇ ರೀತಿಯಾಗಿ ಶಂಕರನಿಗಿಂತ ಬೇರೆಯಾದ ಉನ್ನತ ದೇವ ಇನ್ನೊಬ್ಬನಿಲ್ಲ.

**ಮಾರ್ಕಾಂಡೇಯಕೃತಂ ಸ್ತೋತ್ರಂ ಯಃ ಪಠೇಚ್ಛಿವಸನ್ನಿಧೌ । ತಸ್ಯ ಮೃತ್ಯುಭಯಂ ನಾಸ್ತಿ ಅಗ್ನಿಚೋರಭಯಂ ನ ಹಿ ॥11॥**

ಭಾವಾರ್ಥ - ಮಾರ್ಕಾಂಡೇಯ ಮಹರ್ಷಿಗಳಿಂದ ರಚಿಸಲ್ಪಟ್ಟ ಈ ಸ್ತೋತ್ರವನ್ನು ಯಾರು ಶಿವ ಸನ್ನಿಧಿಯಲ್ಲಿ ಭಕ್ತಿ ಶ್ರದ್ಧಾಪುರಸರವಾಗಿ ಪಠಿಸುವರೋ ಅಂತವರ ಮೃತ್ಯುಭೀತಿಯು ನಾಶವಾಗುವುದಲ್ಲದೆ ಅಗ್ನಿ ಭಯ, ಚೋರಭಯ ಇತ್ಯಾದಿಯಾದ ನೈಸರ್ಗಿಕ ವಿಕೋಪಗಳಿಂದ ಯಾವ ಭೀತಿಯೂ ಇರುವುದಿಲ್ಲ.

॥ ಇತಿ ಶ್ರೀ ಮಹಾ ಮೃತ್ಯುಂಜಯ ಸ್ತೋತ್ರಂ ಸಂಪೂರ್ಣಂ ॥

## 6.3 ಶಿವ ಮಾನಸಪೂಜಾ ಸ್ತೋತ್ರಂ

**ರತ್ನೈಃ ಕಲ್ಪಿತಮಾಸನಂ ಹಿಮಜಲೈಃ ಸ್ನಾನಂ ಚ ದಿವ್ಯಾಂಬರಂ । ನಾನಾರತ್ನ ವಿಭೂಷಿತಂ ಮೃಗಮದಾಮೋದಾಂಕಿತಂ ಚಂದನಂ । ಜಾತೀ ಚಂಪಕಬಿಲ್ವಪತ್ರರಚಿತಂ ಪುಷ್ಪಂ ಚ ಧೂಪಂ ತಥಾ । ದೀಪಂ ದೇವ ದಯಾನಿಧೇ ಪಶುಪತೇ ಹೃತ್ಕಲ್ಪಿತಂ ಗೃಹ್ಯತಾಂ ॥1॥**

ಭಾವಾರ್ಥ - ಹೇ! ಪಶುಪತಿಯೇ, ಇದು ರತ್ನಗಳಿಂದ ನಿರ್ಮಿಸಲ್ಪಟ್ಟ ಆಸನವು. ಇದು ಮಂಜಿನಂತೆ ಶೀತಲವಾದ ತಂಪಾಗಿರುವ ನೀರಿನ ಸ್ನಾನವು. ಇದು ನಾನಾ ವಿಧದ ರತ್ನಗಳಿಂದ ಅಲಂಕರಿಸಲ್ಪಟ್ಟಂತಹಾ ದಿವ್ಯಾಸನವು. ಇದು ಕಸ್ತೂರಿಯ ಪರಿಮಳದಿಂದ ಕೂಡಿದ ಚಂದನವು. ಇದರ ಹೊರತಾಗಿ ಜಾಜಿ-ಸಂಪಿಗೆ-ಬಿಲ್ವಪತ್ರಗಳಿಂದ ಮಾಡುತ್ತಿರುವ ಪುಷ್ಪಾಂಜಲಿಯು. ಇವುಗಳ ಜೊತೆಯಲ್ಲಿ ಧೂಪ ದೀಪಗಳನ್ನು ನನ್ನ ಹೃದಯಕಮಲದಲ್ಲಿ ಸ್ಥಾಪಿತನಾಗಿರುವವನಾದ ಸಾಮಿಯೇ ಸ್ವೀಕರಿಸುವವನಾಗು.

**ಸೌವರ್ಣೇ ನವರತ್ನಖಂಡರಚಿತೇ ಪಾತ್ರೇಘೃತಂ ಪಾಯಸಂ । ಭಕ್ಷ್ಯಂ ಪಂಚವಿಧಂ ಪಯೋದಧಿಯುತಂ ರಂಭಾಫಲಂ ಪಾನಕಂ । ಶಾಕಾನಾಮಯುತಂ ಜಲಂ ರುಚಿಕರಂ ಕರ್ಪೂರ ಖಂಡೋಜ್ಜ್ವಲಂ । ತಾಂಬೂಲಂ ಮನಸಾ ಮಯಾ ವಿರಚಿತಂ ಭಕ್ತ್ಯಾ ಪ್ರಭೋ ಸ್ವೀಕುರು ॥2॥**

ಭಾವಾರ್ಥ - ನವರತ್ನಗಳ ತುಂಡುಗಳಿಂದ ನಿರ್ಮಿಸಲ್ಪಟ್ಟಂತಹಾ ಬಂಗಾರದ ಪಾತ್ರೆಯಲ್ಲಿ ತುಪ್ಪ, ಪಾಯಸ, ಪಂಚವಿಧ ಭಕ್ಷ್ಯಗಳು, ಹಾಲು, ಮೊಸರು, ಬಾಳೆಯ ಹಣ್ಣು, ಪಾನಕ, ನಾನಾವಿಧದ ತರಕಾರಿಗಳು, ರುಚಿಕರವಾದ ನೀರು, ಕರ್ಪೂರ ಸಹಿತವಾಗಿರುವ ತಾಂಬೂಲ ಇವೆಲ್ಲವುಗಳನ್ನು ಭಕ್ತಿ ಪುರಸ್ಸರವಾಗಿ ಮನಸ್ಸಿನಲ್ಲಿಯೇ ಒಪ್ಪಿಸುತ್ತಿರುವೆ. ದಯಾನಿಧಿಯಾಗಿರುವ ಸ್ವಾಮಿಯೇ ಪ್ರಸನ್ನ ಚಿತ್ತನಾಗಿ ಸ್ವೀಕರಿಸುವವನಾಗು.

**ಛತ್ರಂ ಚಾಮರಯೋರ್ಯುಗಂ ವ್ಯಜನಕಂ ಚಾದರ್ಶಕಂ ನಿರ್ಮಲಂ । ವೀಣಾ-ಭೇರಿ-ಮೃದಂಗ-ಕಾಹಲ-ಕಲಾ-ಗೀತಂ ಚ ನೃತ್ಯಂ ತಥಾ । ಸಾಷ್ಟಾಂಗ ಪ್ರಣತಿಃ ಸ್ತುತಿರ್ಬಹುವಿಧಾ ಹ್ಯೇತತ್ ಸಮಸ್ತಂ ಮಯಾ । ಸಂಕಲ್ಪೇನ ಸಮರ್ಪಿತಂ ತವ ವಿಭೋ ಪೂಜಾಂ ಗ್ರಹಾಣ ಪ್ರಭೋ ॥3॥**

ಭಾವಾರ್ಥ - ಶ್ವೇತ ಛತ್ರ. ಚಾಮರ ದ್ವಯಗಳು, ಬೀಸಣಿಕೆ, ಸ್ವಚ್ಛವಾಗಿರುವ ದರ್ಪಣ, ವೀಣೆ, ಭೇರಿ, ಮದ್ದಳೆ, ಕಹಳೆಗಳ ಸಂಗೀತ, ಹಾಡು, ಕುಣಿತ, ಸಾಷ್ಟಾಂಗ ಪ್ರಣಾಮ, ವಿಧವಿಧವಾದ ಸ್ತುತಿಗಳು-ಇವೆಲ್ಲವುಗಳನ್ನು ನನ್ನ ಮನಃಸಂಕಲ್ಪದಿಂದ ನಿನಗರ್ಪಿಸುತ್ತಿರುವೆನು ಪ್ರಭುವೇ!ಈ ಪೂಜೆಯನ್ನು ಹರ್ಷಚಿತ್ತನಾಗಿ ಸ್ವೀಕರಿಸು ಸ್ವಾಮೀ.

**ಆತ್ಮಾ ತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ । ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ । ಸಂಚಾರಃ ಪದಯೋಃ ಪ್ರದಕ್ಷಿಣ ವಿಧಿಃಸ್ತೋತ್ರಾಣಿ ಸರ್ವಾ ಗಿರೋ । ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ ॥4॥**

ಭಾವಾರ್ಥ - ಸ್ವಾಮಿಯೇ, ನನ್ನ ಆತ್ಮವೇ ನೀನು. ಬುದ್ಧಿಯೇ ಪಾರ್ವತೀ ಮಾತೆ. ಇಂದ್ರಿಯಂಗಳೇ ನಿನ್ನ ಅನುಯಾಯಿಗಳು. ಈ ಶರೀರವೇ ನಿನ್ನಾಲಯವು. ವಿಷಯ ಸುಖಾನುಭವಂಗಳೇ ನಿನ್ನಾರಾಧನೆ. ನಿದ್ರೆಯೇ ಸಮಾಧಿ ಸ್ಥಿತಿಯು. ನನ್ನ ಪಾದಗಳ ಮೂಲಕದ ಸಂಚಾರವೇ ನಿನ್ನ ಪ್ರದಕ್ಷಿಣೆಯು. ನನ್ನ ನುಡಿಯೆಲ್ಲವೂ ನಿನ್ನ ಸ್ತುತಿಗಳು. ನಾನು ಏನೇನು ಕರ್ಮಗಳನ್ನು ಮಾಡುತ್ತಿರುವೆನೋ ಅವೆಲ್ಲವೂ ಹೇ! ಪರಮೇಶ್ವರನೇ ನಿನ್ನ ಆರಾಧನೆಗಳೇ ಆಗಿವೆ.

**ಕರಚರಣಕೃತಂ ವಾಕ್ಕಾಯಜಂ ಕರ್ಮಜಂ ವಾ । ಶ್ರವಣ ನಯನಜಂ ವಾ ಮಾನಸಂ ವಾಸ್ಪರಾಧಂ । ವಿಹಿತಮವಿಹಿತಂ ವಾ ಸರ್ವಮೇತತ್ ಕ್ಷಮಸ್ವ । ಜಯ ಜಯ ಕರುಣಾಬ್ಧೇ ಶ್ರೀ ಮಹಾದೇವ ಶಂಭೋ ॥5॥**

ಭಾವಾರ್ಥ - ಸ್ವಾಮಿಯೇ, ನಾನು ಕೈ-ಕಾಲುಗಳಿಂದ ಹಾಗೂ, ಮಾತು, ಶರೀರ, ಕ್ರಿಯೆ, ಕಿವಿ, ಕಣ್ಣು, ಮನಸ್ಸುಗಳಿಂದ ಯಾವುದೇ ಅಪರಾಧಗಳನ್ನು ಮಾಡಿರಲಿ ಅಥವಾ ಮಾಡದೆ ಇರಲಿ, ಅವು ಯೋಗ್ಯವಾಗಿರಲಿ ಅಥವಾ ಅಯೋಗ್ಯವಾಗಿರಲಿ ಅವೆಲ್ಲನ್ನೂ ಮನ್ನಿಸು ದೊರೆಯೇ! ಎಲೈ ಕರುಣಾಸಾಗರನೇ, ಶ್ರೀಮನ್ಮಹಾದೇವನೇ, ಶಂಭುವೇ ನಿನಗೆ ಜಯವಾಗಲಿ. ಜಯವಾಗಲಿ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶಿವ ಮಾನಸಪೂಜಾ ಸ್ತೋತ್ರಂ ಸಂಪೂರ್ಣಂ ॥

## 6.4 ಶ್ರೀ ಶಿವ ಪಂಚಾಕ್ಷರಿ ಸ್ತೋತ್ರಂ

**ನಾಗೇಂದ್ರಹಾರಾಯ ತ್ರಿಲೋಚನಾಯ ಭಸ್ಮಾಂಗರಾಗಾಯ ಮಹೇಶ್ವರಾಯ ।**
**ನಿತ್ಯಾಯ ಶುದ್ಧಾಯ ದಿಗಂಬರಾಯ ತಸ್ಮೈ "ನ" ಕಾರಾಯ ನಮಃ ಶಿವಾಯ ।1॥**

ಭಾವಾರ್ಥ - ಸರ್ಪವನ್ನು ಮಾಲೆಯನ್ನಾಗಿ ಧರಿಸಿದವನೂ, ಮೂರುಕಣ್ಣುಗಳುಳ್ಳವನೂ, ಭಸ್ಮವನ್ನು ಅಂಗಾಂಗಳಿಗೆ ಲೇಪಿಸಿಕೊಂಡವನೂ, ಮಹೇಶ್ವರನೂ, ನಿತ್ಯನೂ, ಶುದ್ಧನೂ, ದಿಕ್ಕುಗಳನ್ನು ವಸನವನ್ನಾಗಿ ಧರಿಸಿದವನೂ, "ನಮಃಶಿವಾಯ" ವೆಂಬ ಶಿವ ಪಂಚಾಕ್ಷರಿ ಮಂತ್ರದ ಮೊದಲ ಅಕ್ಷರವಾಗಿರುವ "ನ"ಕಾರ ಮೂಲಸ್ವರೂಪವಾಗಿಯುಳ್ಳವನೂ ಆಗಿರುವ ಪರಶಿವನಿಗೆ ನನ್ನ ನಮಸ್ಕಾರಗಳು.

**ಮಂದಾಕಿನೀ ಸಲಿಲ ಚಂದನ ಚರ್ಚಿತಾಯ ನಂದೀಶ್ವರ ಪ್ರಮಥನಾಥ ಮಹೇಶ್ವರಾಯ । ಮಂದಾರಪುಷ್ಪ ಬಹುಪುಷ್ಪ ಸುಪೂಜಿತಾಯ ತಸ್ಮೈ "ಮ"ಕಾರಾಯ ನಮಃ ಶಿವಾಯ ॥2॥**

ಭಾವಾರ್ಥ - ಮಂದಾಕಿನೀ ನದಿಯ ನೀರು ಹಾಗೂ ಶ್ರೀಗಂದವನ್ನು ಲೇಪಿಸಿಕೊಂಡವನೂ, ನಂದೀಶ್ವರಾದಿ ಪ್ರಮಥ ಗಣಗಳ ಒಡೆಯನಾಗಿರುವವನೂ, ಮಂದಾರ ಪುಷ್ಪವೇ ಮೊದಲಾದ ನಾನಾಬಗೆಯಪುಷ್ಪಗಳಿಂದ ಪೂಜಿಸಿಕೊಂಬವನೂ "ನಮಃ ಶಿವಾಯ" ಎಂಬ ಮಂತ್ರದ ಎರಡನೇ ಅಕ್ಷರ "ಮ" ಕಾರದ ಸ್ವರೂಪಹೊಂದಿರುವವನೂ ಆಗಿರುವ ಪರಶಿವನಿಗೆ ನನ್ನ ನಮಸ್ಕಾರಗಳು.

**ಶಿವಾಯ ಗೌರೀವದನಾಬ್ಜ ಬೃಂದ ಸೂರ್ಯಾಯ ದಕ್ಷಾಧ್ವರನಾಶಕಾಯ ।**
**ಶ್ರೀನೀಲಕಂಠಾಯ ವೃಷಭ ಧ್ವಜಾಯ ತಸ್ಮೈ "ಶಿ" ಕಾರಾಯ ನಮಃ ಶಿವಾಯ ॥3॥**

ಭಾವಾರ್ಥ - ಗೌರೀದೇವಿಯಮುಖಾರವಿಂದವನ್ನು ಅರಳಿಸುವ ಸೂರ್ಯನೂ, ಆನಂದಸ್ವರೂಪನೂ, ದಕ್ಷ ಯಜ್ಞ ನಾಶಕನೂ, ನೀಲಕಂಠನೂ, ವೃಷಭವನ್ನು ಧ್ವಜವಾಗಿಸಿಕೊಂಡವನೂ, "ನಮಃ ಶಿವಾಯ" ಎಂಬ ಮಂತ್ರದ ಮೂರನೇ ಅಕ್ಷರ "ಶಿ" ಕಾರದ ಸ್ವರೂಪಹೊಂದಿರುವವನೂ ಆಗಿರುವ ಪರಶಿವನಿಗೆ ನನ್ನ ನಮಸ್ಕಾರಗಳು.

**ವಸಿಷ್ಠ ಕುಂಭೋದ್ಭವ ಗೌತಮಾರ್ಯ ಮುನೀಂದ್ರ ದೇವಾರ್ಚಿತ ಶೇಖರಾಯ ।**
**ಚಂದ್ರಾರ್ಕ ವೈಶ್ವಾನರಲೋಚನಾಯ ತಸ್ಮೈ "ವ"ಕಾರಾಯ ನಮಃ ಶಿವಾಯ ॥4॥**

ಭಾವಾರ್ಥ - ಅಗಸ್ತ್ಯ, ವಸಿಷ್ಠ ಗೌತಮಾದಿ ಮುನಿಗಳಿಂದಲೂ, ದೇವೇಂದ್ರಾದಿ ದೇವತೆಗಳಿಂದಲೂ ಮಹೇಶ್ವರನೆಂದು ಪೂಜಿಸಲ್ಪಡುವವನಿಗೆ, ಚಂದ್ರ ಸೂರ್ಯಾಗ್ನಿಗಳನ್ನು ಮೂರು ಕಣ್ಣುಗಳಾಗಿ ಮಾಡಿಕೊಂಡಿರುವವನಿಗೆ, "ನಮಃ ಶಿವಾಯ" ಎಂಬ ಮಂತ್ರದ ನಾಲ್ಕನೇ ಅಕ್ಷರ "ವ" ಕಾರದ ಸ್ವರೂಪಹೊಂದಿರುವ ಪರಶಿವನಿಗೆ ನನ್ನ ನಮಸ್ಕಾರಗಳು.

**ಯಜ್ಞಸ್ವರೂಪಾಯ ಜಟಾಧರಾಯ ಪಿನಾಕ ಹಸ್ತಾಯ ಸನಾತನಾಯ ।**
**ದಿವ್ಯಾಯ ದೇವಾಯ ದಿಗಂಬರಾಯ ತಸ್ಮೈ "ಯ"ಕಾರಾಯ ನಮಃ ಶಿವಾಯ ॥5॥**

ಭಾವಾರ್ಥ - ಯಜ್ಞ ಸ್ವರೂಪನೂ, ಜಟಾಧಾರಿಯೂ, ಪಿನಾಕವೆಂಬ ಧನುವನ್ನು ಧರಿಸಿದವನೂ, ಸನಾತನನೂ, ದಿವ್ಯನೂ, ಶಾಶ್ವತನೂ, ಕಾಂತಿಮಯನೂ, ದೇವನೂ, ದಿಗಂಬರನೂ "ನಮಃ ಶಿವಾಯ" ಎಂಬ ಮಂತ್ರದ ಐದನೇ ಅಕ್ಷರ "ಯ" ಕಾರದ ಸ್ವರೂಪಹೊಂದಿರುವವನೂ ಆಗಿರುವ ಪರಶಿವನಿಗೆ ನನ್ನ ನಮಸ್ಕಾರಗಳು

॥ ಇತಿ ಶ್ರೀ ಶಿವ ಪಂಚಾಕ್ಷರೀ ಸ್ತೋತ್ರಂ ಸಂಪೂರ್ಣಂ ॥

## 6.5 ಸಂಕ್ಷಿಪ್ತ ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರಂ

**ಸೌರಾಷ್ಟ್ರೇ ಸೋಮನಾಥಂಚ ಶ್ರೀಶೈಲೇ ಮಲ್ಲಿಕಾರ್ಜುನಂ । ಉಜ್ಜಯಿನ್ಯಾಂ ಮಹಾಕಾಲಮೋಂಕಾರಮಮಲೇಶ್ವರಂ ॥1॥**

ಭಾವಾರ್ಥ - ಸೌರಾಷ್ಟ್ರದಲ್ಲಿ ಶ್ರೀ ಸೋಮನಾಥ, ಶ್ರೀಶೈಲದಲ್ಲಿ ಮಲ್ಲಿಕಾರ್ಜುನ, ಉಜ್ಜಯಿನಿಯಲ್ಲಿ ಶ್ರೀಮಹಾಕಾಲ, ಓಂಕಾರೇಶ್ವರ ಅಥವಾ ಅಮಲೇಶ್ವರ, . .

**ಪರಲ್ಯಾಂ ವೈದ್ಯನಾಥಂ ಚ ಡಾಕಿನ್ಯಾಂ ಭೀಮಶಂಕರಂ । ಸೇತುಬಂಧೇ ತು ರಾಮೇಶಂ ನಾಗೇಶಂ ದಾರುಕಾವನೇ ॥2॥**

ಭಾವಾರ್ಥ - ಪರಳಿಯಲ್ಲಿ ವೈದ್ಯನಾಥನು, ಡಾಕಿನಿ ಎಂಬಲ್ಲಿ ಶ್ರೀಭೀಮಾಶಂಕರ, ಸೇತುಬಂಧನದಲ್ಲಿ ಶ್ರೀರಾಮೇಶ್ವರನು, ದಾರುಕಾವನದಲ್ಲಿ ಶ್ರೀ ನಾಗೇಶ್ವರನು. . .

**ವಾರಣಾಸ್ಯಾಂ ತು ವಿಶ್ವೇಶಂ ತ್ರಯಂಬಂಕಂ ಗೌತಮೀ ತಟೇ । ಹಿಮಾಲಯೇ ತು ಕೇದಾರಂ ಘೃಸೃಣೇಶಂ ಚ ಶಿವಾಲಯೇ ॥3॥**

ಭಾವಾರ್ಥ - ವಾರಣಾಸಿಯಲ್ಲಿ ಶ್ರೀವಿಶ್ವೇಶ್ವರ, ಗೌತಮೀ ತಟದಲ್ಲಿ ಶ್ರೀ ತ್ರಯಂಬಕೇಶ್ವರ, ಹಿಮಾಲಯದೊಳಗಿನ ಕೇದಾರ ಪ್ರದೇಶದಲ್ಲಿ ಶ್ರೀಕೇದಾರನಾಥ, ಶಿವಾಲಯದಲ್ಲಿ ಶ್ರೀಘೃಷ್ಣೇಶ್ವರನೂ ಇರುವರು.

**ಏತಾನಿ ದ್ವಾದಶ ಜ್ಯೋತಿರ್ಲಿಂಗಾನಿ ಸಾಯಂಪ್ರಾತಃ ಪಠೇನ್ನರಃ । ಸಪ್ತಜನ್ಮ ಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥4॥**

ಭಾವಾರ್ಥ - ಈ ಹನ್ನೆರಡು ಜ್ಯೋತಿರ್ಲಿಂಗಗಳಸ್ತೋತ್ರವನ್ನು ಪ್ರತಿದಿನ ಮುಂಜಾನೆ ಹಾಗೂ ಸಂಧ್ಯಾ ಕಾಲಗಳಲ್ಲಿ ಯಾವ ಮಾನವನು ಪಠಿಸುವನೋ ಅವನು ತಾನು ಹಿಂದಿನ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಈ ದ್ವಾದಶ ಲಿಂಗಗಳ ಸ್ಮರಣೆಯಿಂದಲೇ ಕಳೆದುಕೊಳ್ಳುವನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರಂ ಸಂಪೂರ್ಣಂ ॥

## 6.6 ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರಂ

**ಸೌರಾಷ್ಟ್ರ ದೇಶೇ ವಿಶದೇಽತಿರಮ್ಯೇ । ಜ್ಯೋತಿರ್ಮಯಂ ಚಂದ್ರಕಲಾವತಂಸಂ ॥**
**ಭಕ್ತಿಪ್ರದಾನಾಯ ಕೃಪಾವತೀರ್ಣಂ । ತಂ ಸೋಮನಾಥಂ ಶರಣಂ ಪ್ರಪದ್ಯೇ ॥1॥**

ಭಾವಾರ್ಥ - ಯಾರು ತನ್ನ ಭಕ್ತಿಯನ್ನು ಅನುಗ್ರಹಿಸಲು ಬ್ರಹ್ಮಾಂಡದಲ್ಲಿ ಅತ್ಯಂತ ರಮಣೀಯವೂ ನಿರ್ಮಲವಾಗಿಯೂ ಇರುವ ಸೌರಾಷ್ಟ್ರವೆಂಬ ಪ್ರದೇಶದಲ್ಲಿ ಕರುಣಾಪೂರ್ಣನಾಗಿ ಅವತಾರವೆತ್ತಿ ಚಂದ್ರನನ್ನೇ ತನ್ನ ಶಿರೋಭೂಷಣವಾಗಿ ಧರಿಸಿರುವನೋ ಅಂತಹಾ ಜ್ಯೋತಿರ್ಲಿಂಗಸ್ವರೂಪೀ ಭಗವಾನ್ ಶ್ರೀ ಸೋಮನಾಥೇಶ್ವರನಿಗೆ ನಾನು ಶರಣಾಗುವೆ.

**ಶ್ರೀಶೈಲಶೃಂಗೇ ವಿವಿಧಾತಿಸಂಗೇ । ತುಲಾದ್ರಿ ತುಂಗೇಽಪಿ ಮುದಾವತಂಸಂ ॥**
**ತಮರ್ಜುನಂ ಮಲ್ಲಿಕಪೂರ್ವಮೇಕಂ । ನಮಾಮಿ ಸಂಸಾರ ಸಮುದ್ರಸೇತುಂ ॥2॥**

ಭಾವಾರ್ಥ - ಯಾರು ಶ್ರೀಶೈಲ ಪರ್ವತದ ಅತ್ಯಂತ ಉನ್ನತ ಶಿಖರದ ಮೇಲೆ ದೇವತಾ ಸಮೂಹಗಳ ಸಮಾಗಮವು ನಡೆವಾಗಲೆಲ್ಲಾ ಅತ್ಯಂತ ಪ್ರಸನ್ನನಾಗಿ ಅಲ್ಲಿ ವಾಸಿಸುವನೋ, ಯಾರು ಸಂಸಾರ ಸಾಗರವನ್ನು ದಾಟುವ ಸೇತುವಿನಂತೆ ಶೈಲಾದ್ರಿ ಶಿಖರದಲ್ಲಿ ನೆಲೆಯಾಗಿರುವನೋ, ಅಂತಹಾ ಏಕ ಮಾತ್ರ ಒಡೆಯನಾದ ಆ ಮಲ್ಲಿಕಾರ್ಜುನನಿಗೆ ನಾನು ನಮಸ್ಕರಿಸುವೆ.

**ಅವಂತಿಕಾಯಾಂ ವಿಹಿತಾವತಾರಂ । ಮುಕ್ತಿ ಪ್ರದಾನಾಯ ಚ ಸಜ್ಜನಾನಾಂ ॥**
**ಅಕಾಲಮೃತ್ಯೋಃ ಪರಿರಕ್ಷಣಾರ್ಥಂ । ವಂದೇ ಮಹಾಕಾಲ ಮಹಂ ಸುರೇಶಂ ॥3॥**

ಭಾವಾರ್ಥ - ಸಜ್ಜನ ಭಕ್ತರಿಗೆ ಮೋಕ್ಷವನ್ನು ಕರುಣಿಸಲೋಸುಗ ಯಾವಾತನು ಅವಂತಿಕಾಪುರ[ಉಜ್ಜೈನಿ]ದಲ್ಲಿ ಅವತರಿಸಿರುವನೋ, ಅಕಾಲಿಕ ಮೃತ್ಯುವಿನಿಂದ ಯಾವಾತನು ರಕ್ಷಿಸುವನೋ ಅಂತಹಾ ಮಹಾಕಾಲೇಶ್ವರನಾದ ದೇವಾದಿದೇವ ಮಹಾದೇವ ಸುರೇಶ್ವರನಿಗೆ ನಾನು ನಮಸ್ಕರಿಸುವೆ.

**ಕಾವೇರಿಕಾನರ್ಮದಯೋಃಪವಿತ್ರೇ । ಸಮಾಗಮೇ ಸಜ್ಜನ ತಾರಣಾಯ ॥ ಸದೈವ ಮಾಂಧಾತೃ ಪುರೇ ವಸಂತ- । ಮೋಂಕಾರಮೀಶಂ ಶಿವಮೇಕ ಮೀಡೇ ॥4॥**

ಭಾವಾರ್ಥ - ನರ್ಮದಾಕಾವೇರಿ ನದಿಗಳ ಪವಿತ್ರ ಸಂಗಮ ಪ್ರದೇಶದ ಹತ್ತಿರದ ಮಾಂಧಾತೃವೆಂಬ ಪಟ್ಟಣದಲ್ಲಿ ಸಜ್ಜನ ಭಕ್ತರನ್ನು ಸಂಸಾರ ಸಾಗರದಿಂದ ಪಾರು ಮಾಡಿ ರಕ್ಷಿಸಲೋಸುಗವಾಗಿ ನೆಲೆಸಿರುವ ಅದ್ವಿತೀಯನೂ ದಯಾಮಯಿಯೂ ಆಗಿರುವ ಭಗವಾನ್ ಓಂಕಾರೇಶ್ವರನನ್ನು ನಾನು ಸ್ತುತಿಸುತ್ತೇನೆ.

**ಪೂರ್ವೋತ್ತರೇ ಪ್ರಜ್ವಲಿಕಾನಿಧಾನೇ । ಸದಾ ವತಂಸಂ ತಂ ಗಿರಿಜಾ ಸಮೇತಂ ॥**
**ಸುರಾಸುರಾಧಿತ ಪಾದಪದ್ಮಂ । ಶ್ರೀ ವೈದ್ಯನಾಥಂ ಸತತಂ ನಮಾಮಿ ॥5॥**

ಭಾವಾರ್ಥ - ಯಾವಾತನು ಪೂರ್ವೋತ್ತರ ದಿಸೆಯಲ್ಲಿ ಸ್ಮಶಾನ ಮಧ್ಯದಲ್ಲಿ [ವೈದ್ಯನಾಥಧಾಮ] ಅನುದಿನವೂ ಗಿರಿಜಾ ಸಮೇತನಾಗಿರುವನೋ, ಯಾವತನ ಚರಣಾರವಿಂದಗಳನ್ನು ದೇವ ದಾನವರು ಆರಾಧಿಸುವರೋ ಅಂತಹಾ ಶ್ರೀ ವೈದ್ಯನಾಥೇಶ್ವರನಿಗೆ ನಾನು ನಿರಂತರ ನಮಸ್ಕರಿಸುತ್ತೇನೆ.

**ಆಮರ್ದಸಂಜ್ಞೇ ನಗರೇಚರಮ್ಯೇ । ವಿಭೂಷಿತಾಂಗಂ ವಿವಿಧೈಶ್ಚ ಭೋಗೈಃ ॥**
**ಸದ್ಭುಕ್ತಿ-ಮುಕ್ತಿ-ಪ್ರದಮೀಶಮೇಕಂ । ಶ್ರೀ ನಾಗನಾಥಂ ಶರಣಂ ಪ್ರಪದ್ಯೇ ॥6॥**

ಭಾವಾರ್ಥ - ರಮಣೀಯವಾಗಿರುವ ಆಮರ್ದ ಎಂಬ ಪಟ್ಟಣದಲ್ಲಿ ವಿವಿಧ ಸರ್ಪಗಳಿಂದ ಅಲಂಕೃತನಾಗಿ, ಸಜ್ಜನ ಭಕ್ತರಿಗೆ ಭೋಗ-ಭಾಗ್ಯ, ಮುಕ್ತಿಗಳನ್ನು ದಯಪಾಲಿಸುವ ಏಕ ಮಾತ್ರ ಸರ್ವೇಶ್ವರನಾಗಿರುವ ನಾಗನಾಥೇಶ್ವರನಿಗೆ ನಾನು ಶರಣಾಗುತ್ತಿರುವೆ.

**ಸಾನಂದಮಾನಂದವನೇ ವಸಂತ- । ಮಾನಂದಕಂದಂ ಹತಪಾಪವೃಂದಂ ॥**
**ವಾರಣಾಸೀನಾಥಮನಾಥನಾಥಂ । ಶ್ರೀ ವಿಶ್ವನಾಥಂ ಶರಣಂ ಪ್ರಪದ್ಯೇ ॥7॥**

ಭಾವಾರ್ಥ - ಕಾಶೀ ಕ್ಷೇತ್ರದ ಆನಂದವನದಲ್ಲಿ ನೆಲೆಯಾಗಿ ಭಕ್ತರ ಪಾಪಗಳನ್ನು ಕಳೆದು ಅನಾಥರಿಗೆ ರಕ್ಷಕನಾಗಿರುವಂತಹಾ ವಾರಣಾಸೀ ಪಟ್ಟಣದ ಅಧೀಶನಾಗಿರುವ ಶ್ರೀ ವಿಶ್ವನಾಥನಿಗೆ ನಾನು ಶರಣಾಗುತ್ತಿರುವೆ.

**ಯೋ ಡಾಕಿನೀಶಾಕಿನೀಕಾಸಮಾಜೇ । ನಿಷೇವ್ಯಮಾಣಃ ಪಿಶಿತಾರನೈಶ್ಚ ॥ ಸದೈವ ಭೀಮಾದಿಪದ ಪ್ರಸಿದ್ಧಂ । ತಂ ಶಂಕರಂ ಭಕ್ತಹಿತಂ ನಮಾಮಿ ॥8॥**

ಭಾವಾರ್ಥ - ಯಾವಾತನು ಶಾಕಿನೀ-ಡಾಕಿನೀಯರ ಸಮೂಹದಲ್ಲಿರುವನೋ, ಯಾರು ಭೂತ-ಪ್ರೇತ-ಅಸುರಾದಿಗಳಿಂದಲೂ ಸೇವೆಯನ್ನು ಸ್ವೀಕರಿಸುತ್ತಿರುವನೋ, ಯಾವಾತನು ಭೀಮನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಭಕ್ತ ಜನಾದಿಗಳ ಹಿತಚಿಂತಕನಾಗಿರುವ ಅಂತಹಾ ಶಂಕರನಿಗೆ ನಾನು ನಮಸ್ಕರಿಸುತ್ತೇನೆ.

**ಶ್ರೀತಾಮ್ರಪರ್ಣೇ ಜಲರಾಶಿಯೋಗೇ । ನಿಬಧ್ಯಸೇತುಂ ನಿಶಿಬಿಲ್ವಪತ್ರೈಃ ॥ ಶ್ರೀರಾಮಚಂದ್ರೇಣ ಸಮರ್ಚಿತಂ ತಂ । ರಾಮೇಶ್ವರಾಖ್ಯಂ ಸತತಂ ನಮಾಮಿ ॥9॥**

ಭಾವಾರ್ಥ - ಶ್ರೀ ತಾಮ್ರಪರ್ಣಿ ನದಿಯ ದಕ್ಷಿಣ ಪಾರ್ಶ್ವದಲ್ಲಿ ಸಾಗರವು ಸೇರುವ ಜಾಗದಲ್ಲಿ ಸೇತುವೆಯನ್ನು ನಿರ್ಮಿಸಿ ರಾತ್ರೆಯ ಕಾಲದಲ್ಲಿ ಆ ಶ್ರೀ ರಾಮಚಂದ್ರನಿಂದ ಬಿಲ್ವಪತ್ರ ಮುಖೇನ ಪೂಜಿಸಲ್ಪಟ್ಟಂತಹಾ ಭಗವಾನ್ ಶ್ರೀ ರಾಮೇಶ್ವರನಿಗೆ ನಾನು ನಿರಂತರ ನಮಸ್ಕರಿಸುವೆನು.

**ಸಹ್ಯಾದ್ರಿಶೀರ್ಷೇ ವಿಮಲೇ ವಸಂತೇ । ಗೋದಾವರೀ ತೀರ ಪವಿತ್ರದೇಶೇ ॥ ಯದ್ದರ್ಶನಾತ್ಪಾತಕಮಾಶು ನಾಶಂ । ಪ್ರಯಾತಿತಂ ತ್ರ್ಯಂಬಕ ಮೀಶಮೀಡೆ ॥10॥**

ಭಾವಾರ್ಥ - ಸಹ್ಯಾದ್ರಿ ಪರ್ವತ ಶಿಖರದಲ್ಲಿ ಗೋದಾವರೀ ನದಿಯ ತೀರದಲ್ಲಿ ಪವಿತ್ರ ಪ್ರದೇಶದಲ್ಲಿ ಯಾವಾತನ ದರ್ಶನ ಮಾತ್ರದಿಂದ ಮಹಾಪಾತಕಗಳು ತತ್ಕ್ಷಣ ನಾಶವಾಗುವವೋ ಅಂತಹಾ ತ್ರ್ಯಂಬಕೇಶ್ವರ ಸ್ವಾಮಿಯನ್ನು ನಾನು ಸ್ತುತಿಸುವೆನು.

**ಹಿಮಾದ್ರಿಪಾರ್ಶ್ವೇಽಪಿ ತಟೇ ರಮಂತಂ । ಸಂಪೂಜ್ಯಮಾನಂ ಸತತಂ ಮುನೀಂದ್ರೈಃ ॥ ಸುರಾಸುರೈರ್ಯಕ್ಷ ಮಹೋರಗಾದ್ಯೈಃ । ಕೇದಾರ ಸಂಜ್ಞಂ ಶಿವಮೀಶಮೀಡೆ ॥11॥**

ಭಾವಾರ್ಥ - ಹಿಮಾಲಯ ಪರ್ವತದ ತಪ್ಪಲಿನಲ್ಲಿ ಮಂದಾಕಿನೀ ನದಿಯ ದಂಡೆಯಲ್ಲಿ ಅನುದಿನವೂ ಸಿದ್ಧ ಮುನೀಂದ್ರರುಗಳಿಂದ ಪೂಜಿಸಿಕೊಳ್ಳುತ್ತಾ, ದೇವದಾನವ

ನಾಗಯಕ್ಷರುಗಳಾದಿಯಿಂದ ಪೂಜಿಸಿಗೊಂಬ ಆ ಮಂಗಲದಾಯಕ ರಮಾರಮಣನಾದ ಕೇದಾರನಾಥ ಸ್ವಾಮಿ ಮಹೇಶನನ್ನು ನಾನು ಸ್ತುತಿಸುವೆನು.

**ಇಲಾಪುರೇ ರಮ್ಯ ಶಿವಾಲಯೇಽಸ್ಮಿನ್ । ಸಮುಲ್ಲಸಂತಂಚ ತ್ರಿಜಗದ್ವರೇಣ್ಯಂ ॥ ವಂದೇ ಮಹೋದಾರ ತರ ಸ್ವಭಾವಂ । ಸದಾಶಿವಂ ತಂ ಧೃಷ್ಣೇಶ್ವರಾಖ್ಯಂ ಶರಣಂ ಪ್ರಪದ್ಯೇ ॥12॥**

ಭಾವಾರ್ಥ - ಏಲಾಪುರಿಯಲ್ಲಿ ರಮಣೀಯವಾದ ಶಿವಾಲಯದಲ್ಲಿ ಸಂತೋಷ ಭರಿತನಾಗಿರುವ ಮೂರ್ಲೋಕಗಳಲ್ಲಿಯೂ ಶ್ರೇಷ್ಠನೆನಿಸಿರುವ ಅತ್ಯಂತ ಉದಾರ ಸ್ವಭಾವವನ್ನು ಹೊಂದಿರುವ ಧಿಷಣೇಶ್ವರನೆಂದು ಪ್ರಸಿದ್ಧಿ ಹೊಂದಿರುವ ಆ ಸದಾಶಿವನಿಗೆ ನಾನು ಶರಣಾಗುವೆ.

**ಏತಾನಿ ಲಿಂಗಾನಿ ಸದೈವ ಮರ್ತ್ಯಾಃ । ಪ್ರಾತಃ ಪಠಂತೋಽಮಲ ಮಾನಸಾಶ್ಚ ॥ ತೇ ಪುತ್ರ ಪೌತ್ರೈಶ್ಚ ಧನೈರುದಾರೈಃ । ಸತ್ಕೀರ್ತಿಭಾಜಃ ಸುಖಿನೋ ಭವಂತಿ ॥13॥**

ಭಾವಾರ್ಥ - ಉಷಃಕಾಲದಲ್ಲಿ ಪರಿಶುದ್ಧವಾದ ಮನಸ್ಸಿನಿಂದ ಈ ಸ್ತೋತ್ರಗಳನ್ನು ಪಠಿಸುತ್ತಾ ಶಿವಲಿಂಗಗಳನ್ನು ಸ್ಮರಿಸುವ ಮನುಜರು ವಿಪುಲವಾದ ಸಂಪತ್ತಿನೊಂದಿಗೆ ಮಕ್ಕಳು, ಮೊಮ್ಮಕ್ಕಳೊಡನೆ ಸತ್ಕೀರ್ತಿಯುಕ್ತರಾಗಿ ಸುಖವನ್ನು ಅನುಭವಿಸುವರು.

**ಜ್ಯೋತಿರ್ಮಯ ದ್ವಾದಶ ಲಿಂಗಕಾನಾಂ । ಶಿವಾತ್ಮನಾಂ ಪ್ರೋಕ್ತಮಿದಂ ಕ್ರಮೇಣ ॥ ಸ್ತೋತ್ರಂ ಪಠಿತ್ವಾ ಮನುಜ್ಯೋತಿ ಭಕ್ತ್ಯಾ । ಫಲಂ ತದಾಲೋಕ್ಯ ನಿಜಂ ಭಜೇಚ್ಚ ॥14॥**

ಭಾವಾರ್ಥ - ಈ ಸ್ತೋತ್ರಗಳ ಮುಖೇನ ಕೀರ್ತಿವೆತ್ತ ಶಿವಸ್ವರೂಪವಾಗಿರುವ ಜ್ಯೋತಿರ್ಮಯ ದ್ವಾದಶಲಿಂಗಗಳನ್ನು ಕ್ರಮವರಿತು ಅತ್ಯಂತ ಭಕ್ತಿಪೂರ್ವಕವಾಗಿ ಯಾವಾತನು ಭಜಿಸುವನೋ ಅವನು ಸತ್ಫಲಗಳನ್ನು ಪಡೆದು ಸೌಭಾಗ್ಯಶಾಲಿಯಾಗುವನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರಂ ಸಂಪೂರ್ಣಂ ॥

## 6.7 ಶ್ರೀ ಶಿವ ಷಡಕ್ಷರಸ್ತೋತ್ರಂ

**ಓಂಕಾರಂ ಬಿಂದು ಸಂಯುಕ್ತಂ ನಿತ್ಯಂ ಧ್ಯಾಯಂತಿ ಯೋಗಿನಃ ।**
**ಕಾಮದಂ ಮೋಕ್ಷದಂ ಚೈವ ಓಂಕಾರಾಯ ನಮೋ ನಮಃ ॥1॥**

ಭಾವಾರ್ಥ - ಅಕಾರ ಉಕಾರ ಮಕಾರ ಅನುಸ್ವಾರದಿಂದ ಕೂಡಿರುವ ಓಂಕಾರವನ್ನು ಯೋಗಿಗಳು ಅನುದಿನವೂ ಧ್ಯಾನಿವರು. ಇಚ್ಛಿಸಿದ್ದನ್ನು ದಯಪಾಲಿಸುವ ಹಾಗೂ ಮೋಕ್ಷವನ್ನು ಕರುಣಿಸುವ ಓಂಕಾರ ಸ್ವರೂಪಿಗೆ ನನ್ನ ನಮನಗಳು.

**ನಮಂತಿ ಋಷಯೋ ದೇವಾ ನಮಂತ್ಯಪ್ಸರಸಾಂಗಣಾಃ ।**
**ನರಾ ನಮಂತಿ ದೇವೇಶಂ ನಕಾರಾಯ ನಮೋ ನಮಃ ॥2॥**

ಭಾವಾರ್ಥ - ಯಾವ ದೇವರಿಗೆ ಋಷಿಗಳೂ ಅಪ್ಸರಾಸಮೂಹವೂ ಗಣಗಳೂ ಮಾನವರೂ ನಮಿಸುತ್ತಾರೋ ಅಂತಹಾ ನಕಾರ ಸ್ವರೂಪಿಗೆ ನನ್ನ ನಮನಗಳು.

**ಮಹಾದೇವಂ ಮಹಾತ್ಮಾನಂ ಮಹಾಧ್ಯಾನ ಪರಾಯಣಂ ।**
**ಮಹಾಪಾಪಹರಂ ದೇವಂ ಮಕಾರಾಯ ನಮೋನಮಃ ॥3॥**

ಭಾವಾರ್ಥ - ಮಹಾದೇವನೂ, ಮಹಾತ್ಮನೂ, ಮಹಾಧ್ಯಾನದಲ್ಲಿ ನಿರತನಾದವನೂ ಮಹಾಪಾಪಗಳನ್ನು ಪರಿಹರಿಸುವವನೂ ಮಕಾರ ಸ್ವರೂಪಿಯೂ ಆಗಿರುವ ದೇವನಿಗೆ ನನ್ನ ನಮನಗಳು.

**ಶಿವಂ ಶಾಂತಂ ಜಗನ್ನಾಥಂ ಲೋಕಾನುಗ್ರಹ ಕಾರಕಂ ।**
**ಶಿವಮೇಕಪದಂ ನಿತ್ಯಂ ಶಿಕಾರಾಯ ನಮೋ ನಮಃ ॥4॥**

ಭಾವಾರ್ಥ - ಮಂಗಲದಾಯಕನೂ, ಶಾಂತ ಸ್ವರೂಪಿಯೂ, ಜಗತ್ತಿನ ದೊರೆಯೂ, ಲೋಕವನ್ನು ಅನುಗ್ರಹಿಸುವ ದಯಾರೂಪಿಯೂ, ಅನುದಿನವೂ

ಮಂಗಲದಾಯಕವಾಗಿರುವ ಒಂದೇ ಶಬ್ದದವನೂ ಆಗಿರುವ ಶಿಕಾರ ಸ್ವರೂಪಿಗೆ ನನ್ನ ನಮನಗಳು.

**ವಾಹನಂ ವೃಷಭೋ ಯಸ್ಯ ವಾಸುಕಿಃ ಕಂಠಭೂಷಣಂ ।**
**ವಾಮೇ ಶಕ್ತಿಧರಂ ದೇವಂ ವಕಾರಾಯ ನಮೋ ನಮಃ ॥5॥**

ಭಾವಾರ್ಥ - ಯಾವಾತನ ವಾಹನವು ವೃಷಭವಾಗಿದೆಯೋ, ಯಾವಾತನ ಕಂಠಮಾಲೆಯಾಗಿ ವಾಸುಕಿಯು ಅಲಂಕರಿಸಿದೆಯೋ, ಯಾವಾತನ ವಾಮ ಭಾಗದಲ್ಲಿ ಶಕ್ತಿ ದೇವತೆ ನೆಲೆಯಾಗಿರುವಳೋ ಅಂತಹಾ ವಕಾರ ಸ್ವರೂಪಿಗೆ ನನ್ನ ನಮನಗಳು.

**ಯತ್ರ ಯತ್ರ ಸ್ಥಿತೋ ದೇವಃ ಸರ್ವ ವ್ಯಾಪೀ ಮಹೇಶ್ವರಃ ।**
**ಯೋ ಗುರುಃ ಸರ್ವ ದೇವಾನಾಂ ಯಕಾರಾಯ ನಮೋ ನಮಃ ॥6॥**

ಭಾವಾರ್ಥ - ಯಾವ ದೇವರು ಸರ್ವ ವ್ಯಾಪಿಯಾಗಿ ಎಲ್ಲೆಲ್ಲೂ ಇರುವನೋ ಆ ದೇವ ಮಹೇಶ್ವರನು ಸಮಸ್ತ ದೇವತೆಗಳಿಗೂ ಗುರುವಾಗಿರುವನು. ಆಂತಹಾ ಯಕಾರ ಸ್ವರೂಪಿಗೆ ನನ್ನ ನಮನಗಳು.

**ಷಡಕ್ಷರಮಿದಂ ಸ್ತೋತ್ರಂ ಯಃ ಪಠೇಚ್ಛಿವ ಸನ್ನಿಧೌ ।**
**ಶಿವಲೋಕಮವಾಪ್ನೋತಿ ಶಿವೇನ ಸಹ ಮೊದತೇ ॥7॥**

ಭಾವಾರ್ಥ - ಯಾವಾತನು ಶಿವನ ಸನ್ನಿಧಿಯಲ್ಲಿ ಈ ಪುಣ್ಯದಾಯಕವಾದ ಈ ಶಿವಷಡಕ್ಷರಿ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವರೋ ಅವರು ಶಿವಲೋಕವನ್ನು ಸೇರಿ ಶಿವನೊಡನೆ ಆನಂದವನ್ನು ಅನುಭವಿಸುವರು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶಿವ ಷಡಕ್ಷರಿ ಸ್ತೋತ್ರಂ ಸಂಪೂರ್ಣಂ ॥

## 6.8 ಶ್ರೀ ಪಶುಪತ್ಯಷ್ಟಕಂ

**ಪಶುಪತಿಂದುಪತಿಂ ಧರಣೀಪತಿಂ । ಭುಜಗಲೋಕಪತಿಂ ಚ ಸತೀಪತಿಂ ॥ ಪ್ರಣತ ಭಕ್ತಾರ್ತಿಹರಂ ಪರಂ । ಭಜರೇ ಮನುಜಾ ಗಿರಿಜಾಪತಿಂ ॥1॥**

ಭಾವಾರ್ಥ - ಎಲೈ ಮಾನವನೇ,ಸಮಸ್ತ ಪ್ರಾಣಿಗಳಿಗೂ ಸ್ವರ್ಗ, ಭುವಿ, ನಾಗಾದಿ ಲೋಕಗಳಿಗೂ ಒಡೆಯನಾಗಿರುವ ದಾಕ್ಷಾಯಿಣಿಯ ಸ್ವಾಮಿ, ಆರ್ತ ಪ್ರಾಣಿಗಳ ಹಾಗೂ ಭಕ್ತ ಜನರ ಪೀಡಾ ಪರಿಹಾರಕ, ಪರಮ ಪುರುಷನೂ ಪಾರ್ವತೀ ವಲ್ಲಭನೂ ಆಗಿರುವ ಶಂಕರನನ್ನು ಭಜಿಸು.

**ನ ಜನಕೋ ಜನನೀ ನ ಚ ಸೋದರೋ । ನ ತನಯೋ ನ ಚ ಭೂರಿಬಲಂ ಕುಲಂ ॥**
**ಅವತಿ ಕೋಽಪಿ ನ ಕಾಲವಶಂ ಗತಂ । ಭಜರೇ ಮನುಜಾ ಗಿರಿಜಾಪತಿಂ ॥2॥**

ಭಾವಾರ್ಥ - ಎಲವೋ ಮನುಜನೇ, ಕಾಲನ ವಶದಲ್ಲಿರುವ ಈ ಜೀವನದಲ್ಲಿ ತಂದೆ, ತಾಯಿ, ಸೋದರ, ಮಕ್ಕಳು, ಬಂಧು ಬಳಗ, ಅಧಿಕಬಲ, ಸತ್ಕುಲದಬಲ, ಯಾವುದೂ ನಿನ್ನನ್ನು ರಕ್ಷಿಸಲಾರದು. ಆದ್ದರಿಂದ ನೀನು ಮಹಾಮಹಿಮನಾಗಿರುವ ಶಂಕರನನ್ನು ಭಜಿಸು.

**ಮುರಜಡಿಂಡಿಮ ವಾದ್ಯ ವಿಲಕ್ಷಣಂ । ಮಧುರ ಪಂಚಮನಾದ ವಿಶಾರದಂ ॥ ಪ್ರಮಥ ಭೂತ ಗಣೈರಪಿ ಸೇವಿತಂ । ಭಜರೇ ಮನುಜಾ ಗಿರಿಜಾಪತಿಂ ॥3॥**

ಭಾವಾರ್ಥ - ಹೇ ಮನುಜಾ, ಮೃದಂಗ, ಡಮರುಗಳನ್ನು ನುಡಿಸುವುದರಲ್ಲಿ ನಿಪುಣನೂ, ಪಂಚಮ ಸ್ವರದಲ್ಲಿ ಹಾಡುವುದರಲ್ಲಿ ಕುಶಲಿಗನೂ, ಪ್ರಮಥ ಹಾಗು ಭೂತ ಗಣಗಳಿಂದ ಸೇವೆಯನ್ನು ಸ್ವೀಕರಿಸುತ್ತಿರುವವನೂ ಆಗಿರುವ ಶಂಕರನನ್ನು ಭಜಿಸು.

**ಶರಣದಂ ಸುಖದಂ ಶರಣಾನ್ವಿತಂ । ಶಿವ ಶಿವೇತಿ ಶಿವೇತಿ ನತಂ ನೃಣಾಂ ॥**
**ಅಭಯದಂ ಕರುಣಾವರುಣಾಲಯಂ । ಭಜರೇ ಮನುಜಾ ಗಿರಿಜಾಪತಿಂ ॥4॥**

ಭಾವಾರ್ಥ - ಮಾನವನೇ,ಯಾವಾತನು ಶರಣಾಗತರಿಗೆ ಶರಣಾಗಿ ಸುಖವನ್ನೂ ಅಭಯವನ್ನೂ ದಯಪಾಲಿಸುವನೋ, ಶಿವ ಶಿವ ಶಿವಾ ಎಂಬುದಾಗಿ ಮಾನವರು ಯಾರಿಗೆ ನಮಿಸುವರೋ, ಅಂತಹಾ ದಯಾನಿಧಿಯಾಗಿರುವ ಶಂಕರನನ್ನು ಭಜಿಸು.

**ನರಶಿರೋರಚಿತಂ ಮಣಿಕುಂಡಲಂ । ಭುಜಗಹಾರಮುದಂ ವೃಷಭ ಧ್ವಜಂ ॥**
**ಚಿತಿರಜೋಧವಲೀಕೃತ ವಿಗ್ರಹಂ । ಭಜರೇ ಮನುಜಾ ಗಿರಿಜಾಪತಿಂ ॥5॥**

ಭಾವಾರ್ಥ - ಹೇ ಮನುಜಾ, ಮಾನವನ ರುಂಡವನ್ನೂ, ಮಣಿಗಳ ಕುಂಡಲವನ್ನೂ ಹಾಗೂ ಸರ್ಪಗಳ ಹಾರವನ್ನೂ ಧರಿಸಿಕೊಂಡು ಚಿತಾಭಸ್ಮವನ್ನು ಲೇಪಿಸಿರುವ ದೇಹವುಳ್ಳವನೂ ವೃಷಭವನ್ನು ಲಾಂಛನವಾಗಿರಿಸಿಕೊಂಡವನೂ ಆಗಿರುವ ಶಂಕರನನ್ನು ಭಜಿಸು.

**ಮಖವಿನಾಶಕರಂ ಶಶಿಶೇಖರಂ । ಸತತಮಧ್ವರಭಾಜಿ ಫಲಪ್ರದಂ ॥ ಪ್ರಲಯದಗ್ಧ ಸುರಾಸುರ ಮಾನವಂ । ಭಜರೇ ಮನುಜಾ ಗಿರಿಜಾಪತಿಂ ॥6॥**

ಭಾವಾರ್ಥ - ಎಲೈ ಮಾನವಾ,ದಕ್ಷನ ಯಜ್ಞವನ್ನು ಹಾಳುಗೆಡವಿದವನೂ, ಶಿರದ ಮೇಲೆ ಚಂದ್ರನನ್ನು ಧರಿಸಿ ಪ್ರಕಾಶಿಸುವವನೂ, ಯಜ್ಞ ಕರ್ತೃಗಳಿಗೆ ಯಾವತ್ತೂ ಸತ್ಫಲವನ್ನು ಕರುಣಿಸುವವನೂ, ಅಲ್ಲದೆ ಪ್ರಳಯ ಕಾಲಾಗ್ನಿಯಿಂದ ದೇವ ದಾನವ ದನುಜರನ್ನು ಸುಟ್ಟವನೂ ಆಗಿರುವ ಶಂಕರನನ್ನು ಭಜಿಸು.

**ಮದಮಪಾಸ್ಯ ಚಿರಂ ಹೃದಿ ಸಂಸ್ಥಿತಂ । ಮರಣಜನ್ಮ ಜರಾಭಯ ಪೀಡಿತಂ ॥**
**ಜಗದುದೀಕ್ಷ್ಯ ಸಮೀಪ ಭಯಾಕುಲಂ । ಭಜರೇ ಮನುಜಾ ಗಿರಿಜಾಪತಿಂ ॥7॥**

ಭಾವಾರ್ಥ - ಹೇ ಮಾನವನೇ, ಹುಟ್ಟು, ಮುಪ್ಪು, ಸಾವುಗಳ ಭೀತಿಯಿಂದ ಪೀಡಿಸಲ್ಪಡುವ ಹಾಗೆಯೇ ಎದುರಾಗುವ ಸಂಕಷ್ಟಗಳಿಂದ ವ್ಯಾಕುಲಗೊಂಡಿರುವ ಜಗತ್ತನ್ನು ಕಂಡು ಹೃದಯದಲ್ಲಿ ಬಹುಕಾಲದಿಂದ ಶೇಖರಗೊಂಡಿರುವ ದರ್ಪವನ್ನು ತ್ಯಜಿಸಿದವನೂ ಆಗಿರುವ ಶಂಕರನನ್ನು ಭಜಿಸು.

**ಹರಿವಿರಿಂಚಿ ಸುರಾಧಿಪ ಪೂಜಿತಂ । ಯಮಜನೇಶಧನೇಶ ನಮಸ್ಕೃತಂ ॥ ತ್ರಿನಯನಂ ಭುವನತ್ರಿತಯಾಧಿಪಂ । ಭಜರೇ ಮನುಜಾ ಗಿರಿಜಾಪತಿಂ ॥8॥**

ಭಾವಾರ್ಥ - ಎಲೈ ಮಾನವನೇ,ವಿಷ್ಣು, ಬ್ರಹ್ಮ ಹಾಗೂ ಸುರೇಂದ್ರರಿಂದ ಪೂಜಿಸಿಗೊಂಬವನೂ, ಯಮ ಮತ್ತು ಕುಬೇರರಿಂದ ನಮಸ್ಕರಿಸಿಕೊಂಬವನೂ, ಮುಕ್ಕಣ್ಣನೂ ತ್ರಿಲೋಕದೊಡೆಯನೂ ಆಗಿರುವ ಶಂಕರನನ್ನು ಭಜಿಸು.

**ಪಶುಪತೇರಿದಮಷ್ಟಕಮದ್ಭುತಂ । ವಿರಚಿತಂ ಪೃಥಿವೀಪತಿ ಸೂರಿಣಾ ॥ ಪಠತಿ ಸಂಶೃಣುತೇ ಮನುಜಃ ಸದಾ । ಶಿವಪುರೀಂ ವಸತೇ ಲಭತೇ ಮುದಂ ॥9॥**

ಭಾವಾರ್ಥ - ಪಂಡಿತ ಪೃಥಿವೀಪತಿ ಎಂಬವನಿಂದ ರಚಿಸಲ್ಪಟ್ಟ ಈ ಅದ್ಭುತ ಪಶುಪತಿ ಅಷ್ಟಕಗಳನ್ನು ನಿತ್ಯವೂ ಯಾರು ಪಠಣ ಹಾಗೂ ಶ್ರವಣ ಮಾಡುವರೋ ಅವರು ಶಿವನ ಪಟ್ಟಣದಲ್ಲಿ ವಾಸ ಮಾಡುತ್ತಾ ಆನಂದವನ್ನು ಅನುಭವಿಸುವರು.

॥ ಇತಿ ಶ್ರೀ ಪಶುಪತ್ಯಷ್ಟಕಂ ಸಂಪೂರ್ಣಂ ॥

## 6.9 ಶ್ರೀ ಶಿವನಾಮಾವಲ್ಯಷ್ಟಕಂ

**ಹೇ ಚಂದ್ರಚೂಡ ಮದನಾಂತಕ ಶೂಲಪಾಣೇ । ಸ್ಥಾಣೋ ಗಿರೀಶ ಮಹೇಶ ಶಂಭೋ ॥ ಭೂತೇಶ ಭೀತಿ ಭವಸೂದನ ಮಾಮನಾಥಂ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥1॥**

ಭಾವಾರ್ಥ - ಎಲೈ ಚಂದ್ರಶೇಖರನೇ, ವ್ಯಾಮೋಹ ನಾಶಕನೇ, ತ್ರಿಶೂಲವನ್ನು ಧರಿಸಿದವನೇ ಶಾಶ್ವತನೇ, ಅಚಲನೇ, ಗಿರೀಶನೇ, ಗಿರಿಜೆಯ ಒಡೆಯನೇ, ಮಹೇಶ್ವರನೇ, ಶಂಭುವೇ, ಭೂತಾಧಿಪನೇ, ಭಯನಾಶಕನೇ, ಜಗದೊಡೆಯನೇ, ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ಹೇ ಪಾರ್ವತೀ ಹೃದಯವಲ್ಲಭ ಚಂದ್ರ ಮೌಳೇ । ಭೂತಾಧಿಪ ಪ್ರಮಥನಾಥ ಗಿರೀಶಚಾಪ ॥ ಹೇ ವಾಮದೇವ ಭವರುದ್ರ ಪಿನಾಕಪಾಣೇ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥2॥**

ಭಾವಾರ್ಥ - ಎಲೈ ಪಾರ್ವತಿ ದೇವಿಯ ಹೃದಯ ವಲ್ಲಭನೇ, ಚಂದ್ರ ಮೌಳೀಶ್ವರನೇ, ಪ್ರಾಣಿಗಳ ಒಡೆಯನೇ, ಪ್ರಮಥ ಗಣಗಳ ಅಧಿಪತಿಯೇ, ಗಿರಿಜೇಶನೇ, ವಾಮದೇವನೇ,

ಭವನೇ, ರುದ್ರನೇ, ಪಿನಾಕಹಸ್ತನೇ, ಜಗದೊಡೆಯನೇ, ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ಹೇ ನೀಲಕಂಠ ವೃಷಭಧ್ವಜ ಪಂಚವಕ್ತ್ರ । ಲೋಕೇಶ ಶೇಷವಲಯ ಪ್ರಮಥೇಷ ಶರ್ವ ॥ ಹೇ ಧೂರ್ಜಟೇ ಪಶುಪತೇ ಗಿರಿಜಾಪತೇ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥3॥**

ಭಾವಾರ್ಥ - ಹೇ ನೀಲಕಂಠನೇ, ವೃಷಭ ಲಾಂಛನನೇ, ಪಂಚವಕ್ತ್ರನೇ, ಲೋಕೇಶನೇ, ನಾಗಾಭರಣನೇ, ಪ್ರಮಥಗಣಾಧೀಶನೇ, ಶರ್ವನೇ, ಧೂರ್ಜಟಿಯೇ, ಪಶುಪತಿಯೇ, ಗಿರಿಜಾನಾಥನೇ ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ಹೇ ವಿಶ್ವನಾಥ ಶಿವ ಶಂಕರ ದೇವದೇವ । ಗಂಗಾಧರ ಪ್ರಮಥ ನಾಯಕ ನಂದಿಕೇಶ ॥ ಬಾಣೇಶ್ವರಾಂಧಕ ರಿಪೋ ಹರ ಲೋಕನಾಥ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥4॥**

ಭಾವಾರ್ಥ - ಹೇ ವಿಶ್ವನಾಥನೇ, ಶಿವನೇ, ಶಂಕರನೇ, ದೇವಾದಿದೇವನೇ, ಗಂಗಾಧರನೇ, ಪ್ರಮಥರೊಡೆಯನೇ, ನಂದಿಕೇಶ್ವರನೇ, ಬಾಣೇಶ್ವರನೇ, ಅಂಧಕಾಸುರ ವೈರಿಯೇ, ಪಾಪನಾಶಕ ಹರನೇ, ಲೋಕಾಧೀಶನೇ ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ವಾರಣಸೀಪುರಪತೇ ಮಣಿಕರ್ಣಿಕೇಶ । ವೀರೇಶ ದಕ್ಷ ಮಖಕಾಲ ವಿಭೋ ಗಣೇಶ ॥ ಸರ್ವೇಶ ಸರ್ವ ಹೃದಯೈಕನಿವಾಸ ನಾಥ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥5॥**

ಭಾವಾರ್ಥ - ಹೇ ಕಾಶೀಪುರಾಧೀಶ್ವರನೇ, ಮಣಿಕರ್ಣಿಕೇಶನೇ, ವೀರಾಗ್ರೇಸರನೇ, ದಕ್ಷ ಯಜ್ಞ ಧ್ವಂಸಕನೇ, ಸರ್ವ ವ್ಯಾಪಕನೇ, ಸ್ವಾಮಿಯೇ, ಗಣಾಧೀಶನೇ, ಸರ್ವೇಶ್ವರನೇ, ಸಮಸ್ತರ ಹೃದಯದಲ್ಲಿ ನೆಲೆಸಿರುವ ಏಕಮಾತ್ರನೇ, ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ಶ್ರೀಮನ್ಮಹೇಶ್ವರ ಕೃಪಾಮಯ ಹೇ ದಯಾಲೋ । ಹೇ ವ್ಯೋಮಕೇಶ ಶಿಶಿಕಂಠ ಗಣಾಧಿನಾಥ ॥ ಭಸ್ಮಾಂಗರಾಗ ನೃಕಪಾಲ ಕಾಪಾಲಮಾಲ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥6॥**

ಭಾವಾರ್ಥ - ಹೇ!ಶ್ರೀಮನ್ಮಹೇಶೇಶ್ವರನೇ, ಕೃಪಾಮಯಿಯೇ, ದಯಾಳುವೇ, ವ್ಯೋಮಕೇಶನೇ, ನೀಲಕಂಠನೇ, ಗಣಗಳೊಡೆಯನೇ, ಭಸ್ಮಧಾರಿಯೇ, ರುಂಡಮಾಲಾಧರನೇ, ಜಗದೊಡೆಯನೇ ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ಕೈಲಾಸಶೈಲವಿನಿವಾಸ ವೃಷಾಕಪೇ ಹೇ । ಮೃತ್ಯುಂಜಯ ತ್ರಿನಯನ ತ್ರಿ ಜಗನ್ನಿವಾಸ ॥ ನಾರಾಯಣಪ್ರಿಯ ಮದಾಪಹ ಶಕ್ತಿನಾಥ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥7॥**

ಭಾವಾರ್ಥ - ಎಲೈ ಕೈಲಾಸಗಿರಿವಾಸನೇ, ಪರಮೇಶ್ವರನೇ, ಮೃತ್ಯುಂಜಯನೇ, ಮುಕ್ಕಣ್ಣನೇ, ಮೂರುಲೋಕಗಳಲ್ಲಿ ನೆಲೆಸಿರುವವನೇ, ಶ್ರೀಹರಿಪ್ರಿಯನೇ, ದರ್ಪ ನಾಶಕನೇ, ಶಕ್ತಿನಾಥನೇ, ಜಗದೊಡೆಯನೇ ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

**ವಿಶ್ವೇಶ ವಿಶ್ವಭವನಾಶಕ ವಿಶ್ವರೂಪ । ವಿಶ್ವಾತ್ಮಕ ತ್ರಿಭುವನೈಕ ಗುಣಾಧಿವಾಸ ॥ ಹೇ ವಿಶ್ವವಂದ್ಯ ಕರುಣಾಮಯ ದೀನಬಂಧೋ । ಸಂಸಾರ ದುಃಖಗಹನಾಜ್ಜಗದೀಶ ರಕ್ಷ ॥8॥**

ಭಾವಾರ್ಥ - ಹೇ ವಿಶ್ವದೊಡೆಯನೇ, ವಿಶ್ವದ ಸಾಂಸಾರಿಕ ದುರಿತ ನಾಶಕನೇ, ಬ್ರಹ್ಮಾಂಡಸ್ವರೂಪನೇ, ವಿಶ್ವಾತ್ಮಕನೇ, ಮೂರ್ಲೋಕಗಳ ಗುಣಗಳಿಗೆ ಆವಾಸ ಸ್ಥಾನವಾಗಿರುವವನೇ, ಸಮಸ್ತ ವಿಶ್ವದ ವಂದನೆಗಳಿಗರ್ಹನಾದವನೇ, ಕರುಣಾಮಯಿಯೇ, ದೀನಬಂಧುವೇ ಜಗದೀಶನೇ ಸಂಸಾರವೆಂಬ ದಟ್ಟ ಕಾನನದಿಂದ ಅನಾಥನಾದ ನನ್ನನ್ನು ರಕ್ಷಿಸು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶಿವನಾಮಾವಲ್ಯಷ್ಟಕಂ ಸಂಪೂರ್ಣಂ ॥

## 6.10 ರಾವಣ ಕೃತ ಶಿವತಾಂಡವ ಸ್ತೋತ್ರಂ

**ಜಟಾಕಟಾಹ ಸಂಭ್ರಮಭ್ರನ್ನಿಲಿಂಪನಿರ್ಝರೀ । ವಿಲೋಲ ವೀಚಿ ವಲ್ಲರೀ ವಿರಾಜಮಾನ ಮೂರ್ಧನಿ ॥ ಧಗದ್ಧಗದ್ಧಗಜ್ಜ್ವಲಲ್ಲಲಾಟಪಟ್ಟಪಾವಕೇ । ಕಿಶೋರಚಂದ್ರಶೇಖರೇ ರತಿಃ ಪ್ರತಿಕ್ಷಣಂ ಮಮ ॥1॥**

ಭಾವಾರ್ಥ - ಯಾವಾತನ ಮೇಲ್ಭಾಗದಲ್ಲಿರುವ ಜಟೆಯ ದಿನ್ನೆಯಲ್ಲಿ ವೇಗದಿಂದ ಚಲಿಸುವ ಗಂಗೆಯ ಅಲೆದಾಡುವತೆರೆ ಬಿಳಿಲುಗಳಿಂದ ಶೋಭಿಸುತ್ತಿರುವುದೋ, ಹಣೆಗಣ್ಣು ಪ್ರಜ್ವಲಿಸಿ ಉರಿಯುತ್ತಲಿರುವುದೋ, ಶಿರದಲ್ಲಿ ಬಾಲಚಂದ್ರನು ಕುಳ್ಳಿಹನೋ, ಆ ಭಗವಾನ್ ಶಿವನಲ್ಲಿ ನನಗೆ ಸದಾ ಪ್ರೀತಿಯುಂಟಾಗಲಿ.

**ಧರಾಧರೇಂದ್ರನಂದಿನೀವಿಲಾಸ ಬಂಧುಬಂಧುರ । ಸ್ಫುರದ್ದಿಗಂತ ಸಂತತಿ ಪ್ರಮೋದಮಾನ ಮಾನಸೇ ॥ ಕೃಪಾಕಟಾಕ್ಷ ಧೋರಣೀ ನಿರುದ್ಧ ದುರ್ಧರಾಪದಿ । ಕ್ವಚಿಚ್ಚಿದಂಬರೇ ಮನೋ ವಿನೋದಮೇತು ವಸ್ತುನಿ ॥2॥**

ಭಾವಾರ್ಥ - ಪರ್ವತರಾಜನ ತನಯೆಯಾದ ಪಾರ್ವತಿಯು ವಿಲಾಸ ಸಮಯದಲ್ಲಿ ಉಪಯೋಗಿಸುವ ಶಿರೋಮಣಿಗಳಿಂದ ದಿಕ್ಕುಗಳೆಲ್ಲವೂ ಬೆಳಗುತ್ತಿರುವುದನ್ನು ವೀಕ್ಷಿಸಿ ಯಾವಾತನ ಮನಸ್ಸು ಆನಂದ ಭರಿತವಾಗಿರುವುದೋ, ಯಾರ ಎಡೆಬಿಡದ ಕೃಪಾಕಟಾಕ್ಷದಿಂದ ಕಠಿಣ ಆಪತ್ತುಗಳೂ ಪರಿಹಾರಗೊಳ್ಳುವವೋ, ಆ ತೆರನಾದ ಶಿವ ತತ್ವದಲ್ಲಿ ನನ್ನ ಮನವು ಉತ್ಸಾಹಗೊಳ್ಳಲಿ.

**ಜಟಾ ಭುಜಂಗ ಪಿಂಗಲ ಸ್ಫುರತ್ ಫಣಾಮಣಿಪ್ರಭಾ- । ಕದಂಬ ಕುಂಕುಮದ್ರವ ಪ್ರಲಿಪ್ತ ದಿಗ್ ವಧೂಮುಖೇ ॥ ಮದಾಂಧ ಸಿಂಧುರ ಸ್ಫುರತ್ ತ್ವಗುತ್ತರೀಯ ಮೇಧುರೇ । ಮನೋವಿನೋದಮದ್ಭುತಂ ಬಿಭರ್ತು ಭೂತಭರ್ತರಿ ॥3॥**

ಭಾವಾರ್ಥ - ಯಾವಾತನ ಜಡೆಯಲ್ಲಿ ಉರಗದ ಹೆಡೆಯಲ್ಲಿರುವ ನಾಗಮಣಿಯಿಂದ ಹರಡಿರುವ ಹಳದಿ ವರ್ಣದ ಪ್ರಭಾಪುಂಜವು ದಿಕ್ಕುಗಳೆನ್ನುವ ಸ್ತ್ರೀಯರ

ಮೊಗದಮೇಲೆ ಕುಂಕುಮ ಬಣ್ಣದ ಲೇಪನವನ್ನುಂಟುಮಾಡುವುದೋ, ಅಲೆದಾಡುವ ಮದಿಸಿದಾನೆಯ ಚರ್ಮದ ವಸನವನ್ನು ಹೊದ್ದುಕೊಳ್ಳುವ ಮೂಲಕ ನುಣುಪಾದವರ್ಣದವನಾಗಿ ಕಾಣುವ ಆ ಭೂತನಾಥನಲ್ಲಿ ನನ್ನ ಮನವು ಆಶ್ಚರ್ಯವಾದ ರೀತಿಯಲ್ಲಿ ಉಲ್ಲಸಿತಗೊಳ್ಳಲಿ.

**ಸಹಸ್ರಲೋಚನ ಪ್ರಭೃತ್ಯಶೇಷ ಲೇಖ ಶೇಖರ । ಪ್ರಸೂನಧೂಲಿ ಧೋರಣೀ ವಿಧೂಸರಾಂಘ್ರಿ ಪೀಠಭೂಃ ॥ ಭುಜಂಗರಾಜ ಮಾಲಯಾ ನಿಬದ್ಧ ಜಾಟಜೂಟಕಃ ।**
**ಶ್ರಿಯೈ ಚಿರಾಯ ಜಾಯತಾಂ ಚಕೋರಬಂಧು ಶೇಖರಃ ॥4॥**

ಭಾವಾರ್ಥ - ಸಾವಿರ ಕಣ್ಣುಗಳುಳ್ಳ ಇಂದ್ರಾದಿ ದೇವತೆಯರ್ಕಳು ತಲೆಯಲ್ಲಿ ಮುಡಿದ ಹೂಗಳ ಪರಾಗರೇಣುಗಳಿಂದ ಯಾವಾತನ ಚರಣಪೀಠವು ತುಂಬಿದ್ದವೋ, ಯಾವಾತನ ಜಟಾಸಮೂಹದಲ್ಲಿ ಹಾರದೋಪಾದಿಯಲ್ಲಿ ಮೆರೆವ ನಾಗರಾಜನಿರುವನೋ, ಯಾವಾತನು ಚಕೋರಪಕ್ಷಿಗಳ ಆಪ್ತೇಷ್ಟನಂತಿರುವ ಚಂದ್ರನನ್ನು ತಲೆಯಲ್ಲಿ ಧರಿಸಿರುವನೋ ಅಂತಹಾ ಭಗವಾನ್ ಶಿವನು ಚಿರಕಾಲ ನನ್ನ ಸಂಪತ್ತಿಗೆ ಸಾಧಕನಾಗಿರಲಿ.

**ಲಲಾಟ ಚತ್ವರ ಜ್ವಲದ್ಧನಂಜಯ ಸ್ಫುಲಿಂಗಭಾ- । ನಿಪೀತ ಪಂಚಸಾಯಕಂ ನಮನ್ನಿಲಿಂಪ ನಾಯಕಂ ॥ ಸುಧಾ ಮಯೂಖ ಲೇಖಯಾ ವಿರಾಜಮಾನ ಶೇಖರಂ ಮಹಾಕಪಾಲಿ ಸಂಪದೇ ಶಿರೋ ಜಟಾಲಮಸ್ತು ನಃ ॥5॥**

ಭಾವಾರ್ಥ - ಯಾವಾತನ ಹಣೆಯ ಜಗಲಿಯಲ್ಲಿ ಪ್ರಜ್ವಲಿಸುತ್ತಲಿರುವ ಅಗ್ನಿಯ ಕಿಡಿಗಳ ಪ್ರಭೆಯಿಂದ ಕಾಮದೇವನು ಸೋಲನ್ನು ಅನುಭವಿಸಿದನೋ, ಇಂದ್ರಾದಿ ದೇವರ್ಕಳು ಯಾವಾತನಿಗೆ ನಮಸ್ಕರಿಸುವರೋ, ಅಮೃತಶಲಾಕೆಗಳನ್ನು ಬೀರುವ ಚಂದ್ರಕಲಾಶೋಭಿತವಾದ ಮುಕುಟಧಾರಿ, ಆ ಮಹಾಕಪಾಲಿಯ ಶಿರದ ಮೇಲಿರುವ ಜಟೆಯು ನಮಗೆ ಸಂಪದವನ್ನು ಕರುಣಿಸಲಿ.

**ಕರಾಲಭಾಲ ಪಟ್ಟಿಕಾ ಧಗದ್ಧಗದ್ಧಗಜ್ಜ್ವಲದ್ । ಧನಂಜಯಾಧರೀಕೃತ ಪ್ರಚಂಡ ಪಂಚಸಾಯಕೇ ॥ ಧರಾಧರೇಂದ್ರ ನಂದಿನೀ ಕುಚಾಗ್ರ ಚಿತ್ರಪತ್ರಕ- । ಪ್ರಕಲ್ಪನೈಕ ಶಿಲ್ಪಿನಿ ತ್ರಿಲೋಚನೇ ಮತಿರ್ಮಮ ॥6॥**

ಭಾವಾರ್ಥ - ಯಾರು ಭಯಾನಕವಾದ ತನ್ನ ಹಣೆಪಟ್ಟಿಯ ಮಧ್ಯದಲ್ಲಿ ಧಗಧಗನೆ ಪ್ರಜ್ವಲಿಸುತ್ತಾ ಉರಿಯುತ್ತಲಿರುವ ಅಗ್ನಿಯಿಂದ ಮನ್ಮಥನನ್ನು ದಹಿಸಿಹನೋ, ಬೆಟ್ಟಗಳೊಡೆಯನ ಕುವರಿಯಾದ ಗಿರಿಯ ಕುಚಗಳ ಮೇಲೆ ಯಾರು ವಿವಿಧಾಕಾರದ ಚಿತ್ರಗಳನ್ನು ರಚಿಸಿದ ಶಿಲ್ಪಿಯಾದನೋ, ಆ ಮುಕ್ಕಣ್ಣನಲ್ಲಿ ನನ್ನ ಜ್ಞಾನವು ನೆಲೆಗೊಳ್ಳಲಿ.

**ನವೀನ ಮೇಘ ಮಂಡಲೀ ನಿರುದ್ಧ ದುರ್ಧರ ಸ್ಫುರತ್- । ಕುಹೂ ನಿಶೀಥಿನೀ ತಮಃ ಪ್ರಬಂಧಬಂಧು ಕಂದರಃ ॥ ನಿಲಿಂಪ ನಿರ್ಝರೀ ಧರಸ್ತನೋತು ಕೃತ್ತಿಸಿಂಧುರಃ । ಕಲಾ ನಿಧಾನ ಬಂಧುರಃ ಶ್ರಿಯಂ ಜಗದ್ಧುರಂಧರಃ ॥7॥**

ಭಾವಾರ್ಥ - ಯಾವಾತನ ಕಂಠ ಪ್ರದೇಶವು, ಹೊಸ ಮೋಡಗಳ ಗುಂಪಿನಿಂದ ತುಂಬಿದ, ಅಮವಾಸ್ಯೆಯ ಕಗ್ಗತ್ತಲೆಯನ್ನು ಹೋಲುವ, ಕಪ್ಪು ವರ್ಣದಿಂದ ಕೂಡಿದೆಯೋ, ಯಾರು ಪುಣ್ಯವಾಹಿನಿಯಾದ ಗಂಗೆಯನ್ನು ಧರಿಸಿಹನೋ, ಯಾರು ಗಜ ಚರ್ಮವನ್ನು ಹೊದೆದು ಕೊಂಡಿರುವನೋ, ಸಮಸ್ತ ಕಲಾನಿಧಿಯೂ ಸುಂದರನೂ ಆಗಿ ಲೋಕದ ಜವಾಬ್ದಾರಿಯನ್ನೂ ಹೊತ್ತವನಾದ ಆ ಭಗವಾನ್ ಶಿವನು ಸಂಪತ್ತನ್ನು ಕರುಣಿಸಲಿ.

**ಪ್ರಫುಲ್ಲ ನೀಲ ಪಂಕಜ ಪ್ರಪಂಚ ಕಾಲಿಮಚ್ಛಟಾ- । ವಿಡಂಬಿ ಕಂಠ ಕಂದರಾರುಚಿ ಪ್ರಬಂಧ ಕಂದರಂ ॥ ಸ್ಮರಚ್ಛಿದಂ ಪುರಚ್ಛಿದಂ ಭವಚ್ಛಿದಂ ಮಖಚ್ಛಿದಂ । ಗಜಚ್ಛಿದಾಂಧಕಚ್ಛಿದಂ ತಮಂತಕಚ್ಛಿದಂ ಬಜೇ ॥8॥**

ಭಾವಾರ್ಥ - ಅರಳಿದ ನೀಲಿತಾವರೆಗಳ ರಾಶಿಯ ಕರಿವರ್ಣದಂತೆ ಹೋಲುವ, ಕತ್ತಿನ ಬಿಲದಿಂದ ಹೊರಟ ನೀಲ ಪ್ರಭೆಯಿಂದ ಕೂಡಿದ ಕುತ್ತಿಗೆಯನ್ನು ಯಾರು ಹೊಂದಿಹನೋ, ಯಾರು ಮನ್ಮಥನನ್ನು ನಿಗ್ರಹಿಸಿಹನೋ, ತ್ರಿಪುರರನ್ನು ಯಾರು ನಾಶಮಾಡಿದನೋ, ಯಾವಾತನಿಂದ ಸಂಸಾರಿಕಬಂಧನವು ಕಳಚಿಕೊಳ್ಳುವುದೋ,

ಯಾರು ದಕ್ಷ ಯಜ್ಞನಾಶಕನೋ, ಅಂಧಕಾಸುರನನ್ನು ಯಾವಾತನು ನಾಶಗೊಳಿಸಿದನೋ, ಮಾರ್ಕಾಂಡೇಯನ ಯಮಪಾಷವನ್ನು ಕತ್ತರಿಸಿದಾತನೂ ಆಗಿರುವ ಆ ಮಹಾರುದ್ರನನ್ನು ನಾನು ಭಜಿಸುತ್ತೇನೆ.

**ಅಗರ್ವ ಸರ್ವಮಂಗಲಾ ಕಲಾ ಕದಂಬ ಮಂಜರೀ- । ರಸಪ್ರವಾಹ ಮಾಧುರೀ ವಿಜೃಂಭಣಾ ಮಧುವ್ರತಂ ॥ ಸ್ಮರಾಂತಕಂ ಪುರಾಂತಕಂ ಭವಾಂತಕಂ ಮಖಾಂತಕಂ । ಗಜಾಂತಕಾಂಧಕಾಂತಕಂ ತಮಂತಕಾಂತಕಂ ಭಜೇ ॥9॥**

ಭಾವಾರ್ಥ - ಅಭಿಮಾನರಹಿತಳಾದ ಸರ್ವಮಂಗಳೆ ಪಾರ್ವತಿದೇವಿಯ ಕಲಾಸಮೂಹದಿಂದ ಹೊರಹೊಮ್ಮುತ್ತಿರುವ ಮಾಧುರ್ಯರಸಪ್ರವಾಹವನ್ನು ಮೆಲ್ಲುವ ದುಂಬಿಯಂತಿರುವ, ಮನ್ಮಥನನ್ನು ನಿಗ್ರಹಿಸಿದ, ತ್ರಿಪುರರನ್ನು ಅಂತ್ಯಗೊಳಿಸಿದ, ಸಂಸಾರಬಂಧನವನ್ನು ಕಳಚುವ, ದಕ್ಷಯಜ್ಞ ನಾಶಕನಾದ, ಗಜಾಸುರ ಹಾಗೂ ಅಂಧಕಾಸುರ ವಧಿಸಿದ, ಯಮನಿಗೇ ಯಮನಾಗಿರುವ ಆ ಮಹಾರುದ್ರನನ್ನು ನಾನು ಭಜಿಸುವೆ.

**ಜಯತ್ವದಭ್ರ ವಿಭ್ರಮ ಭ್ರಮದ್ ಭುಜಂಗಮ ಸ್ಫುರದ್- । ಧಗದ್ಧಗದ್ವಿನಿರ್ಗಮತ್ ಕರಾಲ ಭಾಲ ಹವ್ಯವಾಟ್ ॥ ಧಿಮಿದ್ಧಿಮಿದ್ಧಿಮಿ ಧ್ವನನ್ ಮೃದಂಗ ತುಂಗ ಮಂಗಲ- । ಧ್ವನಿಕ್ರಮ ಪ್ರವರ್ತಿತ ಪ್ರಚಂಡತಾಂಡವಃ ಶಿವಃ ॥10॥**

ಭಾವಾರ್ಥ - ಯಾವಾತನ ಶಿರದಮೇಲೆ ಬಹುರಭಸದಿಂದ ತೊನೆದಾಡುವ ಹಾವು ಶೋಭಿಸುತ್ತಿದೆಯೋ, ಯಾರ ಹಣೆಯು ಧಗಧಗನೆ ಪ್ರಜ್ವಲಿಸುವ ಅಗ್ನಿಜ್ವಾಲೆಯ ಕಣ್ಣನ್ನು ಹೊಂದಿರುವುದೋ, ಯಾವಾತನು ಧಿಮಿ ಧಿಮಿ ಧನಿ ಮಾಡುವ ಮೃದಂಗದ ಗಂಭೀರಮಂಗಲಘೋಷಕ್ಕನುಗುಣಾವಾಗಿ ಪ್ರಚಂಡವಾದ ತಾಂಡವನೃತ್ಯದಲ್ಲಿ ನಿರತನಾಗಿರುವನೋ ಆ ಶಿವನಿಗೆ ಜಯವಾಗಲಿ.

**ವೃಷದ್ ವಿಚಿತ್ರ ತಲ್ಪಯೋರ್ಭುಜಂಗ ಮೌಕ್ತಿಕ ಸ್ರಜೋ- । ರ್ಗರಿಷ್ಠ ರತ್ನಲೋಷ್ಠಯೋಃ ಸುಹೃದ್ ವಿಪಕ್ಷ ಪಕ್ಷಯೋಃ ॥ ತೃಣಾರವಿಂದ ಚಕ್ಷುಷೋಃ**

**ಪ್ರಜಾಮಹೀಮಹೇಂದ್ರಯೋಃ । ಸಮಂ ಪ್ರವರ್ತಯನ್ಮನಃ ಸದಾ ಸದಾಶಿವಂ ಭಜೇ ॥11॥**

ಭಾವಾರ್ಥ - ಕಲ್ಲಿನ ಮಂಚ ಹಾಗೂ ಮೆದುವಾಗಿರುವ ಹಾಸುಗೆಗಳನ್ನು ಮತ್ತು ಹಾವು ಹಾಗೂ ಮುತ್ತಿನಹಾರಗಳನ್ನು, ಹಾಗೆಯೇ ಬಹುಮೌಲ್ಯದ ರತ್ನ, ಮಣ್ಣಿನ ಹೆಂಟೆಗಳನ್ನು, ಮಿತ್ರ ಹಾಗೂ ಶತ್ರುಗಳನ್ನು, ಹುಲ್ಲು ಮತ್ತು ಕಮಲನಯನೆ, ಪ್ರಜೆ ಮತ್ತು ಭೂಪತಿಗಳನ್ನು ಸಮಾನಭಾವದಿಂದ ಕಾಣುತ್ತಾ ಅನುಕ್ಷಣವೂ ಸಮಚಿತ್ತತೆಯಿಂದ ಕೂಡಿ ಆ ಸದಾಶಿವನನ್ನು ನಾನು ಭಜಿಸುವೆ.

**ಕದಾ ನಿಲಿಂಪ ನಿರ್ಝರೀ ನಿಕುಂಜಕೋಟರೇ ವಸನ್ । ವಿಮುಕ್ತದುರ್ಮತಿಃ ಸದಾ ಶಿರಸ್ಥಮಂಜಲಿಂ ವಹನ್ ॥ ವಿಮುಕ್ತಲೋಲ ಲೋಚನಾ ಲಲಾಮ ಭಾಲ ಲಗ್ನಕಃ । ಶಿವೇತಿ ಮಂತ್ರಮುಚ್ಚರನ್ ಕದಾ ಸುಖೀ ಭವಾಮ್ಯಹಂ ॥12॥**

ಭಾವಾರ್ಥ - ಎಂದು ದೇವನದಿಯಾಗಿರುವ ಗಂಗೆಯ ತಟದ ಲತಾಮಟಪದೊಳಗೆ ನೆಲೆಯಾಗಿ ದುರ್ಗುಣರಹಿತನಾಗಿ, ಶಿರದ ಮೇಲಿಂದ ಯಾವಾಗಲೂ ಕೈಯೆತ್ತಿ ಮುಗಿಯುತ್ತಾ, ನಯನಗಳಲ್ಲಿ ಅಸ್ಥಿರತೆಯನ್ನು ಕಳೆದು, ಶಿವನ ಮನೋಹರವಾದ ಹಣೆಯ ಮೇಲೆ ನೇರ ದೃಷ್ಟಿಯುಳ್ಳವನಾಗಿ ಶಿವಮಂತ್ರವನ್ನು ಉಚ್ಚರಿಸುತ್ತಾ ನಾನು ಸುಖಿಯಾಗಬಹುದು?

**ಇಮಂ ಹಿ ನಿತ್ಯಮೇವಮುಕ್ತಮುತ್ತಮೋತ್ತಮಂ ಸ್ತವಂ । ಪಠಣ್ ಸ್ಮರನ್ ಬ್ರುವನ್ನರೋ ವಿಶುದ್ಧಿಮೇತಿ ಸಂತತಂ ॥ ಹರೇ ಗುರೌ ಸ ಭಕ್ತಿಮಾಶು ಯಾತಿ ನಾನ್ಯಥಾ ಗತಿಂ । ವಿಮೋಹನಂ ಹಿ ದೇಹಿನಾಂ ತು ಶಂಕರಸ್ಯ ಚಿಂತನಂ ॥13॥**

ಭಾವಾರ್ಥ - ಯಾವಾತನು ಈ ತೆರನಾಗಿ ಹೇಳಲ್ಪಟ್ಟಿರುವ ಉತ್ತಮೋತ್ತಮವಾದ ಈ ಸ್ತುತಿಯನ್ನು ಅನುದಿನವೂ ಪಾರಾಯಣ ಮಾಡುತ್ತಾ, ಸ್ಮರಿಸುತ್ತಾ, ಹಾಗೆಯೇ ಬಣ್ಣಿಸುತ್ತಾ ಇರುವನೋ, ಅಂತಹವನು ಪವಿತ್ರನಾಗುವನು. ಅಲ್ಲದೆ ಅತಿ ಶೀಘ್ರವಾಗಿ ಶ್ರೀ ಶಂಕರನಲ್ಲಿ ಶ್ರೇಷ್ಠವಾದ ಭಕ್ತಿಯನ್ನು ಹೊಂದುವನು. ಇದಕ್ಕೆ

ವಿಮುಖವಾದ ಗತಿಯನ್ನೆಂದೂ ಆತನು ಹೊಂದಲಾರನು. ಏಕೆಂದರೆ ಶಂಕರನ ಚಿಂತನೆಯೇ ಜೀವಿಗಳಿಗೆ ಮೋಹ ನಿವಾರಕವಾಗಿದೆ.

**ಪೂಜಾವಸಾನ ಸಮಯೇ ದಶವಕ್ತ್ರ ಗೀತಂ । ಯಃ ಶಂಭುಪೂಜನಮಿದಂ ಪಠತಿ ಪ್ರದೋಷೋ ॥ ತಸ್ಯ ಸ್ಥಿರಾಂ ರಥ ಗಜೇಂದ್ರ ತುರಂಗ ಯುಕ್ತಾಂ । ಲಕ್ಷ್ಮೀಂ ಸದೈವ ಸುಮುಖೀಂ ಪ್ರದದಾತಿ ಶಂಭುಃ ॥14॥**

ಭಾವಾರ್ಥ - ದಶಕಂಠ ರಾವಣನು ರಚಿಸಿ ಸ್ತುತಿಸಿದ ಈ ಶಿವಾರಾಧನ ಸ್ತೋತ್ರವನ್ನು ಸಾಯಂಸಂಧ್ಯಾ ಸಮಯದ ಆರಾಧನೆಯ ಕೊನೆಯಲ್ಲಿ ಯಾವಾತನು ಪಠಿಸುವನೋ ಅಂತಹವನಿಗೆ ಆನೆ, ಕುದುರೆ, ರಥವಾಹನಾದಿಗಳಿಂದ ಕೂಡಿದ ಮತ್ತು ಸರ್ವದಾ ಸ್ಥಿರವಾದ ಅನುಕೂಲಕರ ಸಂಪದವನ್ನು ಆ ಮಹಾರುದ್ರನು ಕರುಣಿಸುವನು.

॥ ಇತಿ ರಾವಣ ಕೃತ ಶಿವತಾಂಡವ ಸ್ತೋತ್ರಂ ಸಂಪೂರ್ಣಂ ॥

## 6.11 ಶ್ರೀ ಪಂಚಮುಖ ಧ್ಯಾನ ಶ್ಲೋಕಂ

**ಪ್ರಾಲೇಯಾಚಲಮಿಂದುಕುಂದಧವಳಂ ಗೋಕ್ಷೀರಫೇನಪ್ರಭಂ ।**
**ಭಸ್ಮಾಭ್ಯಂಗಮನಂಗದೇಹದಹನಜ್ವಾಲಾವಲೀಲೋಚನಂ ॥ ವಿಷ್ಣು ಬ್ರಹ್ಮ ಮರುದ್ಗಣಾರ್ಚಿತಪದಂ ಋಗ್ವೇದ ನಾದೋದಯಂ । ವಂದೇಽಹಂ ಸಕಲಂ ಕಲಂಕರಹಿತಂ ಸ್ಥಾಣೋರ್ಮುಖಂ ಪಶ್ಚಿಮಂ ॥1॥**

**॥ ಶ್ರೀ ಸದ್ಯೋಜಾತ ಸ್ವರೂಪೀ ಭಗವಾನ್ ಶ್ರೀ ಪಂಚಲಿಂಗೇಶ್ವರಾಯ ನಮಃ ॥**

ಭಾವಾರ್ಥ - ಈಶನ ಪಶ್ಚಿಮ ಭಾಗದ ಮುಖವು ಹಿಮವತ್ಪರ್ವತದಂತೆ ನಿರ್ಮಲವಾಗಿದೆ. ಅದು ಚಂದ್ರ ಹಾಗೂ ಮಲ್ಲಿಗೆಯಂತೆ ಶುಭ್ರ ವರ್ಣವನ್ನು ತಾಳಿದೆ. ಗೋವಿನ ಹಾಲಿನ ನೊರೆಯಂತೆ ಶೋಭೆಯುಳ್ಳದ್ದಾಗಿದೆ. ಭಸ್ಮದಿಂದ ಲೇಪಿಸಲ್ಪಟ್ಟಿದೆ. ಮನ್ಮಥನನ್ನು ದಹಿಸಿದ ಅವನ ಆ ನೇತ್ರಗಳು ಪ್ರಕಾಶಮಾನವಾಗಿ ಬೆಳಗುತ್ತಲಿವೆ. ಆ ಮೊಗವನ್ನು ಬ್ರಹ್ಮ, ವಿಷ್ಣು, ಹಾಗೂ ಮರುತ್ ಆದಿ ದೇವತೆಗಳು ಭಕ್ತಿಯಿಂದ ಆರಾಧಿಸುತ್ತಿದ್ದಾರೆ. ಆ ಮೊಗದಿಂದ ಋಗ್ವೇದನಾದವು ಹೊರಹೊಮ್ಮುತ್ತಲಿದೆ. ಈ

ರೀತಿಯ ಕಳಂಕರಹಿತವಾಗಿರುವ, ಕಲಾಪೂರ್ಣವಾಗಿರುವ, ಆ ಪರಶಿವನ ಪಶ್ಚಿಮಮುಖವನ್ನು ನಾನು ವಂದಿಸುವೆನು.

॥ ಶ್ರೀ ಸದ್ಯೋಜಾತ ಸ್ವರೂಪನಾದ ಭಗವಾನ್ ಶ್ರೀ ಪಂಚಲಿಂಗೇಶ್ವರ ಸ್ವಾಮಿಗೆ ನಮನಗಳು ॥

**ಗೌರಂ ಕುಂಕುಮಪಂಕಿಲಂ ಸುತಿಲಕಂ ವ್ಯಾಪಾಂಡುಗಂಡಸ್ಥಲಂ । ಭ್ರೂವಿಕ್ಷೇಪಕಟಾಕ್ಷವೀಕ್ಷಣಲಸತ್ಸಂಸ್ರಸ್ತಕರ್ಣೋತ್ಪಲಂ ॥ ಸ್ನಿಗ್ಧಂ ಬಿಂಬ ಫಲಾಧರಂ ಪ್ರಹಸಿತಂ ನೀಲಾಲಕಾಲಂಕೃತಂ । ವಂದೇ ಯಾಜುಷವೇದನಾದಜನಕಂ ವಕ್ತ್ರಂ ಹರಸ್ಯೋತ್ತರಂ ॥2॥**

**॥ ಶ್ರೀ ವಾಮದೇವ ಸ್ವರೂಪೀ ಭಗವಾನ್ ಶ್ರೀ ಪಂಚಲಿಂಗೇಶ್ವರಾಯ ನಮಃ ॥**

ಭಾವಾರ್ಥ - ಪಂಚಮುಖಿಯಾಗಿರುವ ಪರಮೇಶ್ವರನ ಉತ್ತರ ದಿಗ್ಭಾಗದ ಮೊಗವು ಬಿಳಿ ವರ್ಣದಿಂದ ಕೂಡಿದೆ. ಕುಂಕುಮ ಕೇಸರಿ ಹಚ್ಚಲ್ಪಟ್ಟಿದೆ. ತಿಲಕವು ಹಣೆಯಲ್ಲಿ ಕಂಗೊಳಿಸುತ್ತಲಿದೆ. ಕೆನ್ನೆಗಳು ಶುಭ್ರವಾಗಿದೆ. ಹುಬ್ಬು ಹಾರುವಿಕೆಯಿಂದ ಕೂಡಿದ ನೋಟವು ಮನೋಹರವಾಗಿದೆ. ಕಿವಿಯ ಮೇಲಿನ ಕನ್ನೈದಿಲೆಯು ಸ್ವಲ್ಪ ಮಟ್ಟಿಗೆ ಕೆಳಕ್ಕೆ ಜಾರಿದೆ. ಮೊಗದಲ್ಲಿ ಸ್ನೇಹದ ಕಳೆಯು ಉಕ್ಕುತ್ತಿದೆ. ತೊಂಡೆಯ ಹಣ್ಣಿನಂತೆ ಆತನ ತುಟಿಗಳು ಕೆಂಪಾಗಿವೆ. ಮುಗುಳ್ನಗೆಯೂ ನೀಲಿಯ ಮುಂಗುರುಳೂ ಆತನ ಮೊಗವನ್ನು ಹೆಚ್ಚು ಬೆಳಗುವಂತೆ ಮಾಡುತ್ತಿವೆ. ಆತನ ಆ ಮುಖದಿಂದ ಯಜುರ್ವೇದದನಾದವು ಹೊಮ್ಮುತ್ತಲಿದೆ. ಈ ರೀತಿಯ ಪರಶಿವನ ಉತ್ತರ ಮೊಗಕ್ಕೆ ನಾನು ನಮಸ್ಕರಿಸುವೆನು.

॥ ಶ್ರೀ ವಾಮದೇವ ಸ್ವರೂಪನಾದ ಭಗವಾನ್ ಶ್ರೀ ಪಂಚಲಿಂಗೇಶ್ವರ ಸ್ವಾಮಿಗೆ ನಮನಗಳು ॥

**ಬಾಲಾರ್ಕಾಗ್ನಿ ತಟಿತ್ಪ್ರದೀಪ್ತಕನಕಪ್ರಸ್ಪರ್ಧಿತೇಜೋರುಣಂ ।**
**ಗಂಭೀರಧ್ವನಿಸಾಮವೇದಜನಕಂ ತಾಮ್ರಾಧರಂ ಸುಂದರಂ ॥**

**ಅರ್ಧೇಂದುದ್ಯುತಿಲೋಲಪಿಂಗಲಜಟಾಭಾರಪ್ರಬದ್ಧೋರಗಂ । ವಂದೇ**
**ಸಿದ್ಧಸುರಾಸುರೇಂದ್ರನಮಿತಂ ಪೂರ್ವಂ ಮುಖಂ ಶೂಲಿನಃ ॥3॥**

**॥ ಶ್ರೀ ತತ್ಪುರುಷ ಸ್ವರೂಪೀ ಭಗವಾನ್ ಶ್ರೀ ಪಂಚಲಿಂಗೇಶ್ವರಾಯ ನಮಃ ॥**

ಭಾವಾರ್ಥ - ಆ ಪರಶಿವನ ಪೂರ್ವ ದಿಗ್ಭಾಗದ ಮೊಗವು ಉದಯಿಸುವ ರವಿಯಂತೆ, ಅಗ್ನಿಯಂತೆ, ಮಿಂಚಿನಂತೆ ಪ್ರಕಾಶಿಸುತ್ತಲಿದೆ. ಬಂಗಾರವನ್ನು ಹೋಲುವ ಹೊಂಬಣ್ಣದಿಂದ ಕೂಡಿದೆ. ಮನೋಹರವಾದ ಕೆಂದುಟಿಯನ್ನು ಹೊಂದಿ ಸಾಮವೇದದ ಉಗಮಸ್ಥಾನವಾಗಿದೆ. ಕಂದುಗೆಂಪಿನ ಜಡೆಮುರಿಯಲ್ಲಿ ಅರ್ಧ ಚಂದ್ರನ ಕಾಂತಿ ಅಂಟಿಕೊಂಡಿದೆ. ಅಲ್ಲಿ ಸರ್ಪವೊಂದನ್ನು ಬಂಧಿಸಲಾಗಿದೆ. ಸಿದ್ಧ ಸಾಧ್ಯರೂ, ದೇವದಾನವರುಗಳೂ ವಂದಿಸುತ್ತಿರುವ ಆ ಪರಶಿವನ ಪೂರ್ವ ಮುಖಕ್ಕೆ ನಾನು ನಮಸ್ಕರಿಸುವೆನು.

॥ ಶ್ರೀ ತತ್ಪುರುಷ ಸ್ವರೂಪನಾದ ಭಗವಾನ್ ಶ್ರೀ ಪಂಚಲಿಂಗೇಶ್ವರನಿಗೆ ನಮನಗಳು ॥

**ಕಾಲಾಭ್ರ ಭ್ರಮರಾಂಜನದ್ಯುತಿನಿಭಂ ವ್ಯಾವೃತ್ತಪಿಂಗೇಕ್ಷಣಂ ।**
**ಕರ್ಣೋದ್ಭಾಸಿತಭೋಗಿಮಸ್ತಕಮಣಿಪ್ರೋದ್ಭಿನ್ನ ದಂಷ್ಟ್ರಾಂಕುರಂ ॥**
**ಸರ್ಪಪ್ರೋತಕಪಾಲಶುಕ್ತಿಶಕಲಂ ವ್ಯಾಕೀರ್ಣಮಾಶೇಖರಂ । ವಂದೇ**
**ದಕ್ಷಿಣಮೀಶ್ವರಸ್ಯ ವದನಂ ಚಾಥರ್ವನಾದೋದಯಂ೦ ॥4॥**

**॥ ಶ್ರೀ ಅಘೋರ ಸ್ವರೂಪೀ ಭಗವಾನ್ ಶ್ರೀ ಪಂಚಲಿಂಗೇಶ್ವರಾಯ ನಮಃ ॥**

ಭಾವಾರ್ಥ - ಪರಶಿವನ ದಕ್ಷಿಣ ದಿಗ್ಭಾಗದ ಮೊಗವು ಕಾರ್ಮುಗಿಲಿನಂತೆಯೂ, ಗುಂಗೀಹುಳದಂತೆಯೂ, ಕಾಡಿಗೆಯಂತೆಯೂ ಕಪ್ಪು ವರ್ಣವನ್ನು ತಾಳಿದೆ. ಕಂದುಗೆಂಪಿನ ಕಣ್ಣುಗಳಿವೆ. ಕಿವಿಯಲ್ಲಿ ಧರಿಸಿರುವ ನಾಗಾಭರಣಗಳ ಪ್ರಕಾಶದಲ್ಲಿ ಕೋರೆದಾಡೆಗಳು ಬೆಳಗುತ್ತಲಿವೆ. ಕಿರೀಟದತನಕ ಹರಡಿಕೊಂಡಿರುವ ಸರ್ಪಗಳೂ, ಕಪಾಲವೂ ಕಂಗೊಳಿಸುತ್ತಿವೆ. ಅಥರ್ವಣ ವೇದನಾದದ ಉದಯಕ್ಕೆ ಕಾರಣನಾದ ಆ ಪರಶಿವನ ಪೂರ್ವ ಮುಖಕ್ಕೆ ನಾನು ನಮಸ್ಕರಿಸುವೆನು.

॥ ಶ್ರೀ ಅಘೋರ ಸ್ವರೂಪನಾದ ಭಗವಾನ್ ಶ್ರೀ ಪಂಚಲಿಂಗೇಶ್ವರನಿಗೆ ನಮನಗಳು ॥

**ವ್ಯಕ್ತಾವ್ಯಕ್ತನಿರೂಪಿತಂ ಚ ಪರಮಂ ಶುದ್ಧಾಂಶಸತ್ವಾಧಿಕಂ । ತಸ್ಮಾದುತ್ತಮ ತತ್ವಮಕ್ಷರಮಿದಂ ಧ್ಯೇಯಂ ಸದಾಯೋಗಿಭಿಃ ॥ ಓಂಕಾರಾದಿಸಮಸ್ತಮಂತ್ರಜನಕಂ ಸೂಕ್ಷ್ಮಾತಿಸೂಕ್ಷ್ಮಂ ಪರಂ । ಧ್ಯಾಯೇತ್ಪಂಚಮಮೀಶ್ವರಸ್ಯ ವದನಂ ಖ ವ್ಯಾಪಿ ತೇಜೋಮಯಂ ॥5॥**

**॥ ಶ್ರೀ ಈಶಾನ ಸ್ವರೂಪೀ ಭಗವಾನ್ ಶ್ರೀ ಪಂಚಲಿಂಗೇಶ್ವರಾಯ ನಮಃ ॥**

ಭಾವಾರ್ಥ - ತೇಜೋಸ್ವರೂಪದವನಾದ ಐದನೆಯ ಮೊಗದಲ್ಲಿ ವ್ಯಕ್ತ ಹಾಗೂ ಅವ್ಯಕ್ತ ರೂಪಗಳು ಗೋಚರವಾಗುತ್ತಿವೆ. ಇದು ಸತ್ವಗುಣಾಂಶವುಳ್ಳದ್ದಾಗಿದೆ. ಹಾಗೆಯೇ ಉತ್ತಮ ತತ್ವಗಳನ್ನು ಪ್ರತಿಪಾದಿಸುತ್ತಲಿದ್ದು ಅವಿನಾಶಿಯಾಗಿ ಅನವರತವೂ ಯೋಗಿಗಳ ಧ್ಯಾನಕ್ಕೆ ಒಳಗಾಗುತ್ತಲಿದೆ. ಓಂಕಾರವೇ ಆದಿಯಾದ ಸಮಸ್ತ ಮಂತ್ರಗಳ ಉಗಮ ಸ್ಥಾನವಿದಾಗಿದೆ. ಅತ್ಯಂತ ಸೂಕ್ಷ್ಮ ರೂಪದಲ್ಲಿದ್ದು ಊರ್ಧ್ವಮುಖಿಯಾಗಿ ಆಕಾಶ ವ್ಯಾಪಿಯಾಗಿದೆ. ಇಂತಹಾ ಪರಶಿವನ ಈ ಐದನೆಯದಾದ ಊರ್ಧ್ವ ಮುಖಕ್ಕೆ ನಾನು ನಮಸ್ಕರಿಸುವೆನು.

॥ ಈಶಾನಸ್ವರೂಪೀ ಭಗವಾನ್ ಶ್ರೀ ಪಂಚಲಿಂಗೇಶ್ವರನಿಗೆ ನಮಿಸುವೆನು. ॥

॥ ಇತಿ ಶ್ರೀ ಪಂಚಮುಖ ಧ್ಯಾನ ಶ್ಲೋಕಂ ಸಂಪೂರ್ಣಂ ॥

## 6.12 ಶ್ರೀ ಮೃತ್ಯುಂಜಯ ಮಾನಸ ಪೂಜಾ ಸ್ತೋತ್ರಂ

**ಕೈಲಾಸೇ ಕಮನೀಯರತ್ನ ಖಚಿತೇ ಕಲ್ಪದ್ರುಮೂಲೇ ಸ್ಥಿತಂ । ಕರ್ಪೂರಸ್ಫಟಿಕೇಂದು ಸುಂದರತನುಂ ಕಾತ್ಯಾಯನೀ ಸೇವಿತಂ ॥ ಗಂಗಾತುಂಗ ತರಂಗ ರಂಜಿತ ಜಟಾಧಾರಂ ಕೃಪಾಸಾಗರಂ । ಕಂಠಾಲಂಕೃತಶೇಷಭೂಷಣಮಹಂ ಮೃತ್ಯುಂಜಯಂ ಭಾವಯೇ ॥1॥**

ಭಾವಾರ್ಥ - ಮನೋಹರವಾಗಿ ಕಂಗೊಳಿಸುವ ರತ್ನಮಯವಾದ ಕಲ್ಪವೃಕ್ಷದಲ್ಲಿರುವ ಕರ್ಪೂರದ ಪಳಕಿನಂತೆ ಕೈಲಾಸದಲ್ಲಿ ಚೆಲುವಿನ ಕಾತ್ಯಾಯನಿ ದೇವಿಯಿಂದ

ಸೇವೆಯನ್ನು ಕೈಗೊಳ್ಳುತ್ತಿರುವ, ಗಂಗಾ ಹಾಗೂ ತುಂಗಾ ನದಿಗಳ ಅಲೆಗಳಿಂದ ಕೂಡಿದ ಜಟೆಯಿಂದ ಭೂಷಿತನಾಗಿರುವ ಮತ್ತು ಕುತ್ತಿಗೆಯಲ್ಲಿ ಮಹಾಶೇಷನನ್ನು ಹಾರವನ್ನಾಗಿ ಧರಿಸಿ ಅಲಂಕರಿಸಿಕೊಂಡಿರುವ ದಯಾಸಾಗರನಾದ ಮೃತ್ಯುಂಜಯನನ್ನು ನಾನು ಭಜಿಸುತ್ತೇನೆ.

**ಆಗತ್ಯ ಮೃಂತ್ಯುಂಜಯ ಚಂದ್ರಮೌಲೇ । ವ್ಯಾಘ್ರಾಜಿನಾಲಂಕೃತ ಶೂಲಪಾಣೇ ॥**
**ಸ್ವಭಕ್ತ ಸಂರಕ್ಷಣ ಕಾಮಧೇನೋ । ಪ್ರಸೀದ ವಿಶ್ವೇಶ್ವರ ಪಾರ್ವತೀಶ ॥2॥**

ಭಾವಾರ್ಥ - ಚಂದ್ರನನನ್ನು ಶಿರದಲ್ಲಿ ಧರಿಸಿರುವವನಾದ, ಹುಲಿಯ ಚರ್ಮದಿಂದ ಅಲಂಕರಿಸಿಕೊಂಡಿರುವ, ತ್ರಿಶೂಲವನ್ನು ಹಸ್ತದಲ್ಲಿ ಹಿಡಿದುಕೊಂಡು, ಭಕ್ತರನ್ನು ಸಂರಕ್ಷಿಸುವ ಕಾಮಧೇನುವಾಗಿರುವ, ವಿಶ್ವೇಶ್ವರನೇ, ಪಾರ್ವತೀ ಪತಿಯೇ ಪ್ರಸನ್ನನಾಗು.

**ಭಾಸ್ವನ್ಮೌಕ್ತಿಕತೋರಣೇ ಮರಕತಸ್ತಂಭಾಯ ತಾಲಂಕೃತೇ । ಸೌಧೇ ಧೂಪಸುವಾಸಿತೇ ಮಣಿಮಯೇ ಮಾಣಿಕ್ಯದೀಪಾಂಚಿತೇ ॥ ಬ್ರಹ್ಮೇಂದ್ರಾಮರಯೋಗಿ ಪುಂಗವಗಣೈರ್ಯುಕ್ತೇ ಚ ಕಲ್ಪದ್ರುಮೈಃ । ಶ್ರೀ ಮೃಂತ್ಯುಂಜಯ ಸುಸ್ಥಿರೋ ಭವ ವಿಭೋ ಮಾಣಿಕ್ಯ ಸಿಂಹಾಸನೇ ॥3॥**

ಭಾವಾರ್ಥ - ಮುತ್ತಿನ ಮಣಿಗಳ ತೋರಣಗಳಿಂದಲೂ, ವಜ್ರಗಳಿಂದಲೂ ಅಲಂಕರಿಸಲ್ಪಟ್ಟ ಕಂಬಗಳಿಂದ ಕೂಡಿದ, ಧೂಪದ ಸುವಾಸನೆಯ ಮಹಲಿನಲ್ಲಿ ಮಾಣಿಕ್ಯರತ್ನ ಖಚಿತವಾದ ದೀಪಗಳಿಂದ ಅಲಂಕರಿಸಲ್ಪಟ್ಟ, ಬ್ರಹ್ಮ, ಇಂದ್ರಾದಿ ಮುನಿಯೋಗಿಗಳಿಂದ ದೇವತೆಗಳ ಬೇಡಿಕೆಯನ್ನು ದಯಪಾಲಿಸುವ ಗಿಡವಾಗಿ ಅಲಂಕರಿಸಲ್ಪಟ್ಟ ಮಹಲಿನಲ್ಲಿ, ಮಾಣಿಕ್ಯ ಸಿಂಹಾಸನದಲ್ಲಿ ಆ ಮೃತ್ಯುಂಜಯ ಸ್ವಾಮಿಯು ರಾರಾಜಿಸುವನು.

**ಮಂದಾರ ಮಲ್ಲೀಕರವೀರಮಾಧವೀ । ಪುನ್ನಾಗನೀಲೋತ್ಪಲ ಚಂಪಕಾನ್ವಿತೈಃ ॥**
**ಕರ್ಪೂರ ಪಾಟೀರ ಸುವಾಸಿತೈರ್ಜಲೈ । ರಾಧತ್ಸ್ವ ಮೃತ್ಯುಂಜಯ ಪಾದ್ಯ ಮುತ್ತಮಮಂ ॥4॥**

ಭಾವಾರ್ಥ - ಮಂದಾರ, ಮಲ್ಲಿಗೆ, ಕರವೀರ, ಇರವಂತಿಗೆ, ಸುರಹೊನ್ನೆ, ಕನ್ನೈದಿಲೆ, ಸಂಪಿಗೆಯೇ ಮೊದಲಾದ ಪುಷ್ಪಗಳಿಂದಲೂ, ಕರ್ಪೂರ ಗಂಧ, ಚಂದನಾದಿ ಪರಿಮಳಭರಿತ ಪನ್ನೀರಿನಿಂದಲೂ, ಆ ಮಹಾ ಸ್ವಾಮಿ ಮೃತ್ಯುಂಜಯನ ಅಗ್ರಗಣ್ಯ ಪಾದವು ಸದಾ ಆರಾಧಿಸಲ್ಪಡುವುದು.

**ಸುಗಂಧ ಪುಷ್ಪ ಪ್ರಕರೈಃ ಸುವಾಸಿತೈ । ರ್ವಿಯನ್ನದೀ ಶೀತಲವಾರಿಭಿಃ ಶುಭೈಃ ॥ ತ್ರಿಲೋಕನಾಥಾರ್ತಿಹರಾರ್ಘ್ಯಮಾದರಾ । ದ್ಗೃಹಾಣ ಮೃತ್ಯುಂಜಯ ಸರ್ವ ವಂದಿತ ॥5॥**

ಭಾವಾರ್ಥ - ಪರಿಮಳಭರಿತವಾದ ಪುಷ್ಪಗಳಿಂದಲೂ, ಸುವಾಸನಾಯುಕ್ತ ನದಿಗಳ ತಂಪಾದ ನೀರಿನಿಂದಲೂ, ನಿರ್ಮಲವಾಗಿರುವ ಮನದಿಂದ ನೀಡುವ ಅರ್ಘ್ಯವನ್ನು ಸ್ವೀಕರಿಸುವ ಮೂರು ಲೋಕಗಳೊಡೆಯನಾಗಿರುವ ಪಾಪನಾಶಕನಾಗಿರುವ ಆ ಮೃತ್ಯುಂಜಯನು ಸರ್ವ ವಂದಿತನಾಗಿರುವನು.

**ಹಿಮಾಂಬುವಾಸಿತೈಸ್ತೋಯೈಃ ಶೀತಲೈರತಿ ಪಾವನೈಃ । ಮೃತ್ಯುಂಜಯ ಮಹಾದೇವ ಶುದ್ಧಾಚಮನಮಾಚರ ॥6॥**

ಭಾವಾರ್ಥ - ಹಿಮವತ್ಪರ್ವತದ ನೀರು ಅತಿ ಶೀತಲವಾಗಿಯೂ ಅತಿ ಪಾವನವಾಗಿಯೂ ಇದೆ. ಮಹಾದೇವ ಮೃತ್ಯುಂಜಯ ಸ್ವಾಮಿಯೇ, ಶುದ್ಧಾಚಮನವನ್ನು ಕೈಗೊಳ್ಳು.

**ಗುಡದಧಿ ಸಹಿತಂ ಮಧು ಪ್ರಕೀರ್ಣಂ । ಸುಘೃತ ಸಮನ್ವಿತ ಧೇನುಗ್ಧ ಯುಕ್ತಂ ॥ ಶುಭಕರ ಮಧುಪರ್ಕ ಮಾ ಹರ ತ್ವಂ । ತ್ರಿನಯನ ಮೃತ್ಯುಹರ ತ್ರಿಲೋಕ ವಂದ್ಯ ॥7॥**

ಭಾವಾರ್ಥ - ಬೆಲ್ಲ, ಮೊಸರು, ಜೇನುತುಪ್ಪಗಳ ಮಿಶ್ರಣ ಮತ್ತು ಉತ್ತಮವಾದ ತುಪ್ಪ ಹಾಗೂ ಹಸುವಿನ ಪರಿಶುದ್ಧವಾದ ಹಾಲನ್ನು ಕೂಡಿಸಿದ ಮಧುಪರ್ಕವನ್ನು ತ್ರಿನಯನೇ, ಮೃತ್ಯುಹರನೇ, ತ್ರಿಲೋಕವಂದ್ಯನೇ, ಮೃತ್ಯುಂಜಯ ಸ್ವಾಮಿಯೇ ಸೇವಿಸುವವನಾಗು.

**ಪಂಚಾಸ್ತ್ರ ಶಾಂತ ಪಂಚಾಸ್ಯ ಪಂಚಪಾತಕಸಂಹರ । ಪಂಚಾಮೃತ ಸ್ನಾನಮಿದಂ ಕುರು ಮೃತ್ಯುಂಜಯ ಪ್ರಭೋ ॥8॥**

ಭಾವಾರ್ಥ - ಐದು ಅಸ್ತ್ರಗಳನ್ನು ಹೊಂದಿ, ಶಾಂತನೂ ಐದು ಮುಖಗಳನ್ನು ಹೊಂದಿರುವವನೂ, ಪಂಚ ಮಹಾಪಾತಕಗಳನ್ನು ನಾಶ ಮಾಡುವವನೂ, ಆಗಿರುವ ಮೃತ್ಯುಂಜಯ ಸ್ವಾಮಿಯೇ ಪಂಚಾಮೃತ ಸ್ನಾನವನ್ನು ಕೈಗೊಳ್ಳು ದೊರೆಯೇ.

**ಜಗತ್ರಯೀಖ್ಯಾತ ಸಮಸ್ತ ತೀರ್ಥ । ಸಮಾಹೃತೈಃ ಕಲ್ಮಷಹಾರಿಭಿಶ್ಚ ॥ ಸ್ನಾನಂ ಸುತೋಯೈಃ ಸಮುದಾಚರ ತ್ವಂ । ಮೃತ್ಯುಂಜಯಾನಂತ ಗುಣಾಭಿರಾಮ ॥9॥**

ಭಾವಾರ್ಥ - ಸಮಸ್ತ ಲೋಕಗಳಲ್ಲಿಯೂ ಪ್ರಖ್ಯಾತನಾಗಿರುವ, ಅನಂತಾನಂತ ಕಲ್ಯಾಣಗುಣ ಸಂಪನ್ನನಾಗಿರುವ, ಸ್ವಾಮಿ ಮೃತ್ಯುಂಜಯನೇ ಸಮಸ್ತ ತೀರ್ಥಗಳಿಂದ ಕೂಡಿರುವ ಕಲ್ಮಷಗಳನ್ನು ಹೋಗಲಾಡಿಸುವ ಪರಿಶುದ್ಧವಾಗಿರುವ ನೀರಿನಿಂದ ಸ್ನಾನವನ್ನು ಮಾಡುವವನಾಗು.

**ಆನೀತೇನಾತಿ ಶುಭ್ರೇಣ ಕೌಶೇಯೇ ನಾಮರದ್ರುಮಾ । ಮಾರ್ಜಯಾಮಿ ಜಟಾಭಾರಂ ಶಿವ ಮೃತ್ಯುಂಜಯ ಪ್ರಭೋ ॥10॥**

ಭಾವಾರ್ಥ - ಮೃತ್ಯುಂಜಯ ಮಹಾ ಸ್ವಾಮಿಯೇ! ನಿನ್ನ ಜಟೆಯನ್ನು ಮಡಿ ಮಾಡುವೆನು. ನಿನ್ನಲ್ಲಿ ಈ ಬಗೆಯಲ್ಲಿ ಶುಭ್ರವಾಗುವುದೇನೂ ಇಲ್ಲ ದೊರೆಯೇ.

**ನಾನಾ ಹೇಮ ವಿಚಿತ್ರಾಣಿ ಚೀರ ಚೀನಾಂಬರಾಣಿ ಚ । ವಿವಿಧಾನಿ ಚ ದಿವ್ಯಾನಿ ಮೃತ್ಯುಂಜಯ ಸುಧಾರಯ ॥11॥**

ಭಾವಾರ್ಥ - ಮಹಾದೇವ ಮೃತ್ಯುಂಜಯ ಸ್ವಾಮಿಯೇ, ನಾನಾ ತರದ ವಿಚಿತ್ರವಾದಂತಹಾ ಬಂಗಾರದ ಆಭರಣಗಳನ್ನೂ ವಿಧ ವಿಧವಾಗಿರುವ ಚರ್ಮದ ಮನೋಹರವಾದ ವಸನಗಳನ್ನು ಧರಿಸುವವನಾಗು.

**ವಿಶುದ್ಧ ಮುಕ್ತಾ ಫಲಜಾಲರಮ್ಯಂ । ಮನೋಹರಂ ಕಾಂಚನ ಹೇಮಸೂತ್ರಂ ॥ ಯಜ್ಞೋಪವೀತಂ ಪರಮಂ ಪವಿತ್ರಂ । ಮಾಧತ್ಸ್ವ ಮೃತ್ಯುಂಜಯ ಭಕ್ತಿಗಮ್ಯ ॥12॥**

ಭಾವಾರ್ಥ - ಶುಭ್ರವಾಗಿರುವ ಮುತ್ತಿನ ಮಣಿಗಳಿಂದ ಶೃಂಗಾರಗೊಂಡು ರಮಣೀಯನಾಗಿರುವವನೂ, ಮನೋಹರವಾದ ಚಿನ್ನದ ಎಳೆಗಳಿಂದ ತಯಾರಿಸಿಲಾದ ಪರಮ ಪವಿತ್ರವಾಗಿರುವ ಯಜ್ಞೋಪವೀತವನ್ನು ಧರಿಸಿರುವವನೂ ಆದ ಆ ಸ್ವಾಮಿ ಮೃತ್ಯುಂಜಯನಿಗೆ ನಾನು ಭಕ್ತಿ ಪುರಸ್ಸರವಾಗಿ ನಮಸ್ಕರಿಸುವೆನು.

**ಶ್ರೀಗಂಧಂ ಘನಸಾರಕುಂಕುಮಯುತಂ ಕಸ್ತೂರಿಕಾಪೂರಿತಂ । ಕಾಲೇಯೇನ ಹಿಮಾಂಬುನಾ ವಿರಚಿತಂ ಮಂದಾರಸಂವಾಸಿತಂ ॥ ದಿವ್ಯಂ ದೇವಮನೋಹರಂ ಮಣಿಮಯೇ ಪಾತ್ರೇ ಸಮಾರೋಪಿತಂ । ಸರ್ವಾಂಗೇಷು ವಿಲೇಪಯಾಮಿ ಸತತಂ ಮೃತ್ಯುಂಜಯ ಶ್ರೀ ವಿಭೋ ॥13॥**

ಭಾವಾರ್ಥ - ಶ್ರೇಷ್ಠವಾದ ಶ್ರೀಗಂಧ, ಕರ್ಪೂರಯುಕ್ತ ಕುಂಕುಮ, ಕಸ್ತೂರಿಯನ್ನು ಸೇರಿಸಿದ ಕಾಡಿಗೆ ಹಾಗೂ ದಿವ್ಯವಾದ ಶೀತಲ ಗಂಗಾಜಲದಲ್ಲಿ ಪಾರಿಜಾತ ಪುಷ್ಪದ ಪರಿಮಳಯುಕ್ತ ಸುಗಂಧ ದ್ರವ್ಯಗಳನ್ನು ಸೇರಿಸಿ ಮನೋಹರವಾಗಿರುವ ಮಣಿಖಚಿತ ಪಾತ್ರೆಯಲ್ಲಿ ತುಂಬಿಸಿ ಆ ದೇವ ಮೃತ್ಯುಂಜಯ ಸ್ವಾಮಿಯ ಸರ್ವಾಂಗಗಳಿಗೆ ಲೇಪಿಸುವೆನು.

**ಅಕ್ಷತೈರ್ಧವಲೈರ್ದಿವ್ಯೈಃ ಸಮ್ಯಕ್ತಿಲಸಮನ್ವಿತೈಃ । ಮೃತ್ಯುಂಜಯ ಮಹಾದೇವ ಪೂಜಯಾಮಿ ವೃಷಧ್ವಜ ॥14॥**

ಭಾವಾರ್ಥ - ಬಿಳುಪಾಗಿರುವ ಶ್ರೇಷ್ಠ ಅಕ್ಷತೆಯಿಂದಲೂ, ಎಳ್ಳಿನ ಕಾಳುಗಳಿಂದಲೂ ಲಕ್ಷ್ಯವಿಟ್ಟು ವೃಷಭ ದ್ವಜನಾಗಿರುವ ಆ ಮೃತ್ಯುಂಜಯ ಸ್ವರೂಪೀ ಮಹಾದೇವನನ್ನು ನಾನು ಪೂಜಿಸುತ್ತಿದ್ದೇನೆ.

**ಚಂಪಕ ಪಂಕಜ ಕುರವಕ್ತ । ಕುಂದೈಃ ಕರವೀರಮಲ್ಲಿಕಾಕುಸುಮೈಃ ॥ ವಿಸ್ತಾರಯ ನಿಜಮಕುಟಂ । ಮೃತ್ಯುಂಜಯ ಪುಂಡರೀಕನಯನಾಪ್ತ ॥15॥**

ಭಾವಾರ್ಥ - ಸಂಪಿಗೆ, ತಾವರೆ, ಮದರಂಗಿ, ದುಂಡುಮಲ್ಲಿಗೆ, ಕರವೀರ, ಜಾಜಿಮಲ್ಲಿಗೆಗಳ ಕುಸುಮಗಳಿಂದ ವಿಸ್ತರಿಸಿ ಸ್ವಾಭಾವಿಕ ಶಿರೋಭೂಷಣನಾಗಿ

ಕಂಗೊಳಿಸುವ ಹಾಗೂ ತಾವರೆಯನ್ನು ಹೋಲುವ ನಯನಗಳನ್ನು ಹೊಂದಿರುವ ಆ ಮಹಾದೇವ ಮೃತ್ಯುಂಜಯ ಸ್ವಾಮಿಯನ್ನು ನಾನು ಪೂಜಿಸುತ್ತಿದ್ದೇನೆ.

**ಮಾಣಿಕ್ಯ ಪಾದುಕಾದ್ವಂದೇ ಮೌನಿಹೃತ್ಪದ್ಮ ಮಂದಿರೇ । ಪಾದೌ ಸತ್ಪದ್ಮ ಸದೃಶೌ ಮೃತ್ಯುಂಜಯ ನಿವೇಶಯ ॥16॥**

ಭಾವಾರ್ಥ - ಮುನಿಗಳ ಹೃತ್ಕಮಲ ಮಂದಿರದಲ್ಲಿವಾಸಿಸುತ್ತಿರುವ ಪ್ರಶಸ್ತವಾಗಿರುವ ಚರಣಾರವಿಂದಗಳಿಗೆ ಸಮಾನವಾಗಿರುವ ಆ ಮೃತ್ಯುಂಜಯ ಸ್ವಾಮಿಯ ಮಾಣಿಕ್ಯ ಪಾದಗಳಿಗೆ ನಾನು ನಮಸ್ಕರಿಸುವೆ.

**ಮಾಣಿಕ್ಯ ಕೇಯೂರ ಕಿರೀಟ ಹಾರೈಃ । ಕಾಂಚೀ ಮಣಿಸ್ಥಾಪಿತ ಕುಂಡಲೈಶ್ಚ ॥ ಮಂಜೀರ ಮುಖ್ಯಾಭರಣೈರ್ಮನೋಜ್ಞೈ । ರಂಗಾನಿ ಮೃತ್ಯುಂಜಯ ಭೂಷಯಾಮಿ ॥17॥**

ಭಾವಾರ್ಥ - ಮಾಣಿಕ್ಯ ಹಾಗೂ ತೋಳ ಬಂದಿಗೆಯಿಂದ ಕೂಡಿದ ಕಿರೀಟ, ಒಡ್ಯಾಣ, ಹಾರಗಳು, ರತ್ನ ಮಣಿ ಕುಂಡಲಗಳು, ಕಾಲಲಂದುಗೆ ಮೊದಲಾದ ಆಭರಣಗಳನ್ನು ಸ್ವಾಮಿ ಮೃತ್ಯುಂಜಯನೇ ನಿನ್ನ ಅಂಗಾಂಗಗಳಿಗೆ ನಾನು ತೊಡಿಸುತ್ತಿದ್ದೇನೆ.

**ಗಜವದನಸ್ಕಂದಧೃತೇ । ನಾತಿ ಸ್ವಚ್ಛೇನ ಚಾಮರ ಯುಗೇನ ॥ ಗಲದಲ ಕಾನನ ಪದ್ಮಂ । ಮೃತ್ಯುಂಜಯ ಭಾವಯಾಮಿ ಹೃತ್ಪದ್ಮೇ ॥18॥**

ಭಾವಾರ್ಥ - ಗಜಾನನ ಹಾಗೂ ಸುಬ್ರಹ್ಮಣ್ಯರು ನಿರ್ಮಲವಾಗಿರುವ ಚಾಮರಯುಗಳಗಳನ್ನು ಹಿಡಿದಿರುತ್ತಾರೆ. ಕಮಲವನ್ನು ಹೋಲುತ್ತಿರುವ ಮೊಗದಿಂದ ಕಂಗೊಳಿಸುವ ಆ ಸ್ವಾಮಿ ಮೃತ್ಯುಂಜಯನನ್ನು ನನ್ನ ಹೃದಯ ಕಮಲದಲ್ಲಿರಿಸಿ ಸ್ಮರಿಸುವೆನು.

**ಮುಕ್ತಾತಪತ್ರಂ ಶಶಿ ಕೋಟಿ ಶುಭ್ರಂ । ಶುಭಪ್ರದಂ ಕಾಂಚನದಂಡಯುಕ್ತಂ ॥ ಮಾಣಿಕ್ಯ ಸಂಸ್ಥಾಪಿತ ಹೇಮಕುಂಭಂ । ಸುರೇಶ ಮೃತ್ಯುಂಜಯ ತೇಽರ್ಪಯಾಮಿ ॥19॥**

ಭಾವಾರ್ಥ - ಮುತ್ತಿನಂತಹಾ ಕೋಟಿಚಂದ್ರರ ಪ್ರಭೆಯಂತೆ ಶುಭ್ರನಾಗಿ ಶುಭದಾಯಕನಾಗಿ ಸುವರ್ಣದಂಡವನ್ನು ಹಿಡಿದು, ಮಾಣಿಕ್ಯಖಚಿತ ಬಂಗಾರದ ಕಳಶದಲ್ಲಿ ಸಂಸ್ಥಾಪಿತನಾಗಿರುವ ದೇವತೆಗಳ ಒಡೆಯನಾದ ಆ ಸ್ವಾಮಿ ಮೃತ್ಯುಂಜಯನನ್ನು ನಾನು ಆರಾಧಿಸುತ್ತಿದ್ದೇನೆ.

**ಮಣಿಮುಕುಟೇ ನಿಷ್ಪಟಲೇ । ತ್ರಿಜಗದ್ಗಾಢಾಂಧಕಾರ ಸಪ್ತಾಶ್ವೇ ॥**
**ಕಂದರ್ಪಕೋಟಿಸದೃಶಂ । ಮೃತ್ಯುಂಜಯ ಪಶ್ಯ ವದನ ಮಾತ್ಮೀಯಂ ॥20॥**

ಭಾವಾರ್ಥ - ಮೂರು ಲೋಕಗಳ ಗಾಢಾಂಧಕಾರವನ್ನು ನಿವಾರಿಸುವ ಸೂರ್ಯನಂತೆ, ಕೋಟಿ ಮನ್ಮಥರಿಗೆ ಸಮಾನವಾಗಿರುವ, ಮಣಿಖಚಿತ ಕಿರೀಟವನ್ನು ಧರಿಸಿರುವ ಸ್ವಾಮಿ ಮೃತ್ಯುಂಜನೇ ನನ್ನನ್ನು ನಿನಗೆ ಪ್ರಿಯರಾದವರನ್ನು ಕಾಣುವಂತೆ ನೋಡುವವನಾಗು.

**ಕರ್ಪೂರ ಚೂರ್ಣಂ ಕಪಿಲಾಜ್ಯಪೂತಂ । ದಾಸ್ಯಾಮಿ ಕಾಲೇಯಸಮನ್ವಿತೈಶ್ಚ ॥**
**ಸಮುದ್ಭವಂ ಪಾವನ ಗಂಧಧೂಪಿತಂ । ಮೃತ್ಯುಂಜಯಾಂಗಂ ಪರಿಕಲ್ಪಯಾಮಿ ॥21॥**

ಭಾವಾರ್ಥ - ಚಂದನದ ಹುಡಿ, ಕರ್ಪೂರ, ಪವಿತ್ರವಾದ ಕಪಿಲೆ ವರ್ಣದ ಹಸುವಿನ ಶ್ರೇಷ್ಠವಾದ ತುಪ್ಪ, ಹಾಗೂ ಕಾಡಿಗೆಯೊಂದಿಗೆ ಹುಟ್ಟಿಕೊಂಡಿರುವ ಪಾವನವಾಗಿರುವ ಗಂಧ ಧೂಪಾದಿಗಳನ್ನು ಲೇಪಿಸಿಕೊಂಡವನಾಗಿರುವ ಆ ಮೃತ್ಯುಂಜಯ ಸ್ವಾಮಿಯ ಅಂಗಾಂಗಗಳನ್ನು ಸ್ಮರಿಸುವೆನು.

**ವರ್ತಿತ್ರಯೋಪೇತಮಖಂಡ ದೀಪ್ತ್ಯಾ । ತಮೋಹರಂ ಬಾಹ್ಯಮಥಾಂತರಂಚ ॥**
**ಸಾಜ್ಯಂ ಸಮಸ್ತಾಮರವರ್ಗಹೃದ್ಯಂ । ಸುರೇಶ ಮೃತ್ಯುಂಜಯ ವಂಶದೀಪಂ ॥22॥**

ತುಪ್ಪ ಸಹಿತವಾಗಿ ಮೂರು ಬತ್ತಿಗಳನ್ನು ಹೊಂದಿ ಅಖಂಡವಾಗಿ ಬೆಳಗುತ್ತಾ ಅಂತರಂಗ ಬಹಿರಂಗದಲ್ಲಿರುವ ಕತ್ತಲೆಯನ್ನು ಹೋಗಲಾಡಿಸುತ್ತಾ ಸಮಸ್ತ ಸುರಾಸುರರ ಹೃದಯದಲ್ಲಿ ನೆಲೆಯಾಗಿರುವ ದೇವಾದಿದೇವತೆಗಳ ಒಡೆಯನಾಗಿರುವ ಆ ಮೃತ್ಯುಂಜಯ ಸ್ವಾಮಿಗೆ ದೀಪವನ್ನು ಬೆಳಗಿಸುವೆ.

**ರಾಜಾನ್ನಂ ಮಧುರಾನ್ವಿತಂ ಚ ಮೃದುಲಂ ಮಾಣಿಕ್ಯ ಪಾತ್ರೇ ಸ್ಥಿತಂ । ಹಿಂಗೂ ಜೀರಕಸನ್ಮರೀಚಿಮಿಲಿತೈಃಶಾಕೈರನೇಕೈಃ ಶುಭೈಃ ॥ ಶಾಕಂ ಸಮ್ಯಗ ಪೂಪಸೂಪಸಹಿತಂ ಸದ್ಯೋಘೃತೇನಾಪ್ಲುತಂ । ಶ್ರೀ ಮೃತ್ಯುಂಜಯ ಪಾರ್ವತೀಪ್ರಿಯ ವಿಭೋ ಸಾಪೋಶನಂ ಭುಜ್ಯತಾಂ ॥23॥**

ಭಾವಾರ್ಥ - ಮಾಣಿಕ್ಯಮಯ ಪಾತ್ರೆಯಲ್ಲಿ ಮೃದು ಮಧುರವಾದ ರುಚಿಕರವಾಗಿರುವ ರಾಜಾನ್ನದೊಡನೆ ಹಿಂಗು, ಜೀರಿಗೆ, ಲವಂಗ, ಮೆಣಸು ಯುಕ್ತ ತರಕಾರಿಗಳಿಂದ ಮಾಡಿದ ಪದಾರ್ಥಗಳನ್ನು ತೊವ್ವೆ, ವಡೆ, ಪಾಯಸ ಸಹಿತವಾಗಿ ಕ್ಷಣದಲ್ಲೇ ತಯಾರಿಸಿದ ತುಪ್ಪದೊಡನೆ ಪಾರ್ವತೀ ದೇವಿಗೆ ಪ್ರಿಯನಾಗಿರುವ ಒಡೆಯ ಮೃತ್ಯುಂಜಯ ಸ್ವಾಮಿಯೇ ಸ್ವೀಕರಿಸು.

**ಕೂಶ್ಮಾಂಡವಾರ್ತಾ ಕಪಟೋಲಿಕಾನಾಂ । ಫಲಾನಿ ರಮ್ಯಾಣಿ ಚ ಕಾರವಲ್ಲ್ಯಾ ॥ ಸುಪಾಕಯುಕ್ತಾನಿ ಸ ಸೌರಭಾಣಿ । ಶ್ರೀಕಂಠ ಮೃತ್ಯುಂಜಯ ಭಕ್ಷಯೇಶ ॥24॥**

ಭಾವಾರ್ಥ - ಬದನೆ, ಹಾಗೂ ಕುಂಬಳಕಾಯಿಗಳಿಂದ ತಯಾರಿಸಲಾದ ಮತ್ತು ಉತ್ತಮವಾಗಿರುವ ಫಲವಸ್ತುಗಳಿಂದ ಕೂಡಿದ ಪರಿಮಳಯುಕ್ತ ಪಾಕಗಳನ್ನು ಈಶನೂ ಶ್ರೀಕಂಠನೂ ಆಗಿರುವ ಸ್ವಾಮಿ ಮೃತ್ಯುಂಜಯನೇ ಭಕ್ಷಿಸುವವನಾಗು.

**ಶೀತಲಂ ಮಧುರಂ ಸ್ವಚ್ಛಂ ಪಾವನಂ ವಾಸಿತಂ ಲಘು । ಮಧ್ಯೇ ಸ್ವೀಕುರು ಪಾನೀಯಂ ಶಿವ ಮೃತ್ಯುಂಜಯ ಪ್ರಭೋ ॥25॥**

ಭಾವಾರ್ಥ - ಒಡೆಯನೇ, ಶೀತಲವಾಗಿರುವ, ಶುಭ್ರವಾದ, ಮಧುರವಾಗಿರುವ, ಪಾವನವಾದಂತಹಾ, ಹಗುರವೂ, ತೆಳುವಾಗಿಯೂ, ಪರಿಮಳಯುತವಾಗಿಯೂ ಇರುವಂತಹ ಪಾನೀಯವನ್ನು ಮೃತ್ಯುಂಜಯ ಸ್ವಾಮಿಯೇ ನಡು ನಡುವೆ ಸ್ವೀಕರಿಸು.

**ಶರ್ಕರಾಮಿಲಿತಂ ಸ್ನಿಗ್ಧಂ ದುಗ್ಧಾನ್ನಂ ಗೋಘೃತಾನ್ವಿತಂ । ಕದಲೀ ಫಲ ಸಮ್ಮಿಶ್ರಂ ಭುಜ್ಯತಾಂ ಮೃತ್ಯುಸಂಹರ ॥26॥**

ಭಾವಾರ್ಥ - ಬಾಳೆಹಣ್ಣು, ಸಕ್ಕರೆ, ಹಸುವಿನ ತುಪ್ಪಗಳೊಂದಿಗೆ ದಪ್ಪಗಿನ ಹಾಲನ್ನು ಮಿಶ್ರ ಮಾಡಿದ ಅನ್ನವನ್ನು ಮೃತ್ಯುನಾಶಕನಾಗಿರುವ ಸ್ವಾಮಿ ಮೃತ್ಯುಂಜಯನೇ ಭಕ್ಷಿಸುವವನಾಗು.

**ಕೇವಲಮತಿ ಮಾಧುರ್ಯಂ । ದುಗ್ಧೈಃ ಸ್ನಿಗ್ಧೈಶ್ಚ ಶರ್ಕರಾಮಿಲಿತೈ ॥ ಏಲಾ ಮರೀಚಿಮಿಲಿತಂ । ಮೃತ್ಯುಂಜಯ ದೇವ ಭಕ್ಷ್ಯಂ ಪಾಯಸಂ ॥27॥**

ಭಾವಾರ್ಥ - ಸಂಪೂರ್ಣ ಅತಿ ಮಧುರವಾಗಿರುವ ಸಕ್ಕರೆ ಮಿಶ್ರಿತ ದಪ್ಪಗಿನ ಹಾಲು, ಏಲಕ್ಕಿ, ಲವಂಗಗಳನ್ನು ಸೇರಿಸಿ ತಯಾರಿಸಿದ ಪರಮಾನ್ನವನ್ನು ದೇವ ಮೃತ್ಯುಂಜಯನೇ ಸ್ವೀಕರಿಸು ಪ್ರಭುವೇ.

**ರಂಬಾ ಚೂತ ಕಪಿತ್ಥ ಫಲೈರ್ದ್ರಾಕ್ಷರಸಸ್ವಾದುಮ- ।**
**ತ್ಖರ್ಜೂರೈರ್ಮಧುರೇಕ್ಷುಖಂಡಶಕಲೈಃ ಸನ್ನಾರಿಕೇಲಾಂಬುಭಿಃ ॥ ಕರ್ಪೂರೇಣ ಸುವಾಸಿತೈರ್ಗುಡಜಲೈರ್ಮಾಧುರ್ಯಯುಕ್ತೈರ್ವಿಭೋ । ಶ್ರೀಮೃತ್ಯುಂಜಯ ಪೂರಯ ತ್ರಿಭುವನಾಧಾರಂ ವಿಶಾಲೋದರಂ ॥28॥**

ಭಾವಾರ್ಥ - ಬಾಳೆಹಣ್ಣು, ಮಾವಿನಹಣ್ಣು, ಬೇಲದಫಲ, ಹಲಸಿನಹಣ್ಣು, ದ್ರಾಕ್ಷಿ, ಖರ್ಜೂರ ಹಾಗೂ ರುಚಿಕರವಾದ ಕಬ್ಬಿನರಸ, ಎಳನೀರು, ಕರ್ಪೂರದ ಪರಿಮಳವುಳ್ಳ ಬೆಲ್ಲದ ನೀರು ಪಾನಕವನ್ನು ತ್ರಿಲೋಕದ ಆಧಾರ ಸ್ತಂಭನಾದ, ವಿಶಾಲವಾದ ಉದರವನ್ನು ಹೊಂದಿರುವ ಸ್ವಾಮಿ ಶ್ರೀ ಮೃತ್ಯುಂಜಯನೇ ಸ್ವೀಕರಿಸುವವನಾಗು ದೊರೆಯೇ.

**ಮನೋಜ್ಞರಂಭಾವನ ಖಂಡ ಖಂಡಿತಾ- । ನ್ರುಚಿಪ್ರದಾನ್ಸರ್ಷಪಜೀರಿಕಾಂಶ್ಚ ॥ ಸಸೌರಭಾನ್ಸೈಂಧವಸೇವಿತಾಂಶ್ಚ । ಗೃಹಾಣ ಮೃತ್ಯುಂಜಯ ಲೋಕವಂದ್ಯ ॥29॥**

ಭಾವಾರ್ಥ - ಮನೋಹರವಾಗಿರುವ ಬಾಳೆಯವನ, ಕಲ್ಲುಸಕ್ಕರೆ, ಪರಿಮಳಯುಕ್ತವಾಗಿರುವ ಪುಡಿ ಜೀರಿಗೆ ಹಾಗೂ ಸೈಂದುಪ್ಪುಗಳ ಮಿಶ್ರಣವನ್ನು ಲೋಕವಂದ್ಯನಾಗಿರುವ ಸ್ವಾಮಿ ಮೃತ್ಯುಂಜಯನೇ ಸ್ವೀಕರಿಸು ಪ್ರಭುವೇ.

**ಹಿಙ್ಗೂಜೀರಕ ಸಹಿತಂ । ವಿಮಲಾಮಲಕಂ ಕಪಿತ್ಥಮತಿಮಧುರಂ ॥**

**ಬಿಸಖಂಡಾಂಲ್ಲವಣಯುತಾ- । ನ್ಮೃತ್ಯುಂಜಯ ತೇಽರ್ಪಯಾಮಿ ಜಗದೀಶ ॥30॥**

ಭಾವಾರ್ಥ - ಹಿಙ್ಗು, ಜೀರಿಗೆ, ಸಹಿತವಾದ ಲವಣಯುಕ್ತ ನಿರ್ಮಲವಾಗಿರುವ ನೆಲ್ಲಿಯಕಾಯಿ, ಅತಿ ರುಚಿಕರವಾದ ಬೇಲದ ಹಣ್ಣುಗಳನ್ನು ಆ ಸ್ವಾಮಿ ಮೃತ್ಯುಂಜಯನಿಗೆ ಸಮರ್ಪಿಸುತ್ತಿದ್ದೇನೆ.

**ಏಲಾಶುಂಠೀ ಸಹಿತಂ । ದಧ್ಯನ್ನಂಚಾರು ಹೇಮಪಾತ್ರಸ್ಥಂ ॥**

**ಅಮೃತಪತಿನಿಧಿಮೌಢ್ಯಂ । ಮೃತ್ಯುಂಜಯ ಭುಜ್ಯತಾಂ ॥31॥**

ಭಾವಾರ್ಥ - ಏಲಕ್ಕಿ, ಶುಂಠೀ ಸಹಿತವಾಗಿ ಬಂಗಾರದ ಪಾತ್ರೆಯಲ್ಲಿ ಮೊಸರನ್ನವನ್ನು ಮೋಕ್ಷತ್ವದ ಅಧೀಶನಾದ ಮತ್ತು ಬಾಲಿಶಬುದ್ಧಿಯನ್ನು ಕಳೆಯುವವನಾದ ಹಾಗೂ ಸಂಪತ್ತನ್ನು ದಯಪಾಲಿಸುವ ಸ್ವಾಮಿ ಮೃತ್ಯುಂಜಯನೇ ಭಕ್ಷಿಸುವಂತವನಾಗು.

**ಜಂಭೀರನೀರಾಂಚಿತ ಶೃಂಗ ಬೇರಂ । ಮನೋಹರಾನಮ್ಲಶಲಾಟುಖಂಡಾನ್**

**ಮೃದೂಪದಂಶಾನ್ಸಹಸೋಪಭುಕ್ತ್ವ । ಮೃತ್ಯುಂಜಯ ಶ್ರೀಕರುಣಾ ಸಮುದ್ರ ॥32॥**

ಭಾವಾರ್ಥ - ರುಚಿಕರವಾಗಿರುವ ಮನೋಹರವಾಗಿರುವ ಲಿಂಬೆಯ ಹಣ್ಣು, ರಸಭರಿತವಾದ ಹಸಿಶುಂಠಿಯಬೇರನ್ನು ಕರುಣಾಸಮುದ್ರನಾಗಿರುವ ಸ್ವಾಮಿ ಮೃತ್ಯುಂಜಯನೇ ಸೇವಿಸುವವನಾಗು.

**ನಾಗರರಾಮಠಯುಕ್ತಂ । ಸುಲಲಿತ ಜಂಭೀರ ನೀರ ಸಂಪೂರ್ಣಂ ॥**

**ಮಥಿತಂ ಸೈಂಧವಸಹಿತಂ । ಪಿಬ ಹರ ಮೃತ್ಯುಂಜಯ ಕ್ರತುಧ್ವಂಸಿನ್ ॥33॥**

ಭಾವಾರ್ಥ - ಮನೋಹಾರವಾದ ಕೊನ್ನಾರಿಗಡ್ಡೆಯರಸ ಮತ್ತು ನಳನಳಿಸುವ ದಾಳಿಂಬಹಣ್ಣಿನರಸ, ಪುಡಿಮಾಡಿದ ಸೈಂದುಪ್ಪು ಸಹಿತವಾಗಿ ಪಾಪಹರನಾಗಿರುವ ಸ್ವಾಮಿ ಮೃತ್ಯುಂಜಯನೇ ಸೇವಿಸುವವನಾಗು.

**ಮಂದಾರಹೇಮಾಂಬುಜಗಂಧಯುಕ್ತೈ- । ರ್ಮಂದಾಕಿನೀನಿರ್ಮಲಪುಣ್ಯತೋಯೈಃ ॥**
**ಗೃಹಾಣ ಮೃತ್ಯುಂಜಯ ಪೂರ್ಣಕಾಮ । ಶ್ರೀಮತ್ಪರಾಪೋಶನಮಭ್ರಕೇಶ ॥34॥**

ಭಾವಾರ್ಥ - ಬಂಗಾರದ ವರ್ಣದ ತಾವರೆ ಹಾಗೂ ಪಾರಿಜಾತದ ಪರಿಮಳದಿಂದ ಕೂಡಿರುವ ಮಂದಾಕಿನೀ ನದಿಯ ಪವಿತ್ರ ಜಲದಿಂದ ಆಶಾಪಾಶ ವಿರಹಿತನಾಗಿರುವ ಶಿವನೇ, ಸ್ವಾಮಿ ಮೃತ್ಯುಂಜಯನೇ ಉತ್ತರಾಪೋಶನವನ್ನು ಸ್ವೀಕರಿಸುವವನಾಗು.

**ಗಗನಧುನೀವಿಮಲಜಲೈ- । ರ್ಮೃತ್ಯುಂಜಯ ಪದ್ಮರಾಗಪಾತ್ರಗತೈಃ ॥**
**ಮೃಗಮದ ಚಂದನ ಪೂರ್ಣಂ । ಪ್ರಕ್ಷಾಲಯ ಚಾರು ಹಸ್ತ ಪದಯುಗ್ಮಂ ॥35॥**

ಭಾವಾರ್ಥ - ಆಕಾಶದಿಂದ ದುಮ್ಮುಕ್ಕುವ ಪರಿಶುದ್ಧವಾದ ಗಂಗಾಜಲದೊಡನೆ ಕಸ್ತೂರೀಚಂದನ, ಗಂಧ ಪುನುಗು ಮಿಶ್ರಿತ ಜಲದಿಂದ ಕೆಂದಾವರೆಯನ್ನು ಹೋಲುವ ಸ್ವಾಮಿ ಮೃತ್ಯುಂಜಯನ ಮನೋಹರವಾದ ಕೈಕಾಲುಗಳನ್ನು ತೊಳೆಯುತ್ತೇನೆ.

**ಪುಂನಾಗಮಲ್ಲಿಕಾ ಕುಂದವಾಸಿತೈರ್ಜಾಹ್ನವೀಜಲೈಃ । ಮೃತ್ಯುಂಜಯ ಮಹಾದೇವ ಪುನರಾಚಮನಂ ಕುರು ॥36॥**

ಭಾವಾರ್ಥ - ದುಂಡುಮಲ್ಲಿಗೆ, ಸುರಗಿ ಪುಷ್ಪಗಳಿಂದ ಕೂಡಿರುವ ಗಂಗಾಜಲದಿಂದ ಮಹಾದೇವನೇ, ಸ್ವಾಮಿ ಮೃತ್ಯುಂಜಯನೇ ಪುನರಾಚನವನ್ನು ಮಾಡುವವನಾಗು.

**ಮೌಕ್ತಿಕಚೂರ್ಣಸಮೇತೈ- । ರ್ಮೃಗಮದ ಘನಸಾರವಾಸಿತೈಃ ಪೂಗೈಃ ॥**
**ಪರ್ಣೈಃ ಸ್ವರ್ಣಸಮಾನೈ- । ರ್ಮೃತ್ಯುಂಜಯ ತೇಽರ್ಪಯಾಮಿ ತಾಂಬೂಲಃ ॥37॥**

ಭಾವಾರ್ಥ - ಮುತ್ತಿನ ಹುಡಿ ಸಹಿತವಾದ ಅಮೋಘ ಪರಿಮಳಭರಿತವಾಗಿರುವ ಕಸ್ತೂರಿ, ಕರ್ಪೂರ, ಅಡಿಕೆಗಳನ್ನು ಬಂಗಾರಕ್ಕೆ ಸಮಾನವಾಗಿರುವ ವೀಳ್ಯದೆಲೆಯೊಂದಿಗೆ ಸ್ವಾಮಿ ಮೃತ್ಯುಂಜಯನೇ ನಿನಗರ್ಪಿಸುತ್ತಿರುವೆನು.

**ನೀರಾಜನಂ ನಿರ್ಮಲದೀಪ್ತಿಮಭಿದಿ- । ರ್ದೀಪಾಂಕುರೈರುಜ್ಜ್ವಲಮುಚ್ಛ್ರಿತೈಶ್ಚ ॥**
**ಘಂಟಾನಿನಾದೇನ ಸಮರ್ಪಯಾಮಿ । ಮೃತ್ಯುಂಜಯಾಯ ತ್ರಿಪುರಾಂತಕಾಯ ॥38॥**

ಭಾವಾರ್ಥ - ಉಜ್ವಲವಾಗಿ ಬೆಳಗುವ ನಿರ್ಮಲ ದೀಪ ಮತ್ತು ಮಂಗಲಮಯ ನೀಲಾಂಜನವನ್ನು ತ್ರಿಪುರಾಸುರ ಸಂಹಾರಿಯಾದ ಆ ಸ್ವಾಮಿ ಮೃತ್ಯುಂಜಯನಿಗೆ ಸಮರ್ಪಿಸುತ್ತಿರುವೆನು.

**ವಿರಿಂಚಿಮುಖ್ಯಾಮರಬೃಂದವಂದಿತೇ । ಸರೋಜಮತ್ಸ್ಯಾಂಕಿತ ಚಕ್ರ ಚಿಹ್ನ ತೇ ॥**
**ದದಾಮಿ ಮೃತ್ಯುಂಜಯ ಪಾದಪಂಕಜೇ । ಫಣೀಂದ್ರಭೂಷೇ ಪುನರರ್ಘ್ಯಮೀಶ್ವರ ॥39॥**

ಭಾವಾರ್ಥ - ಬ್ರಹ್ಮಾದಿದೇವಾಸುರ ಸಮೂಹದಿಂದ ವಂದಿಸಲ್ಪಡುವ, ಮೀನಿನ ಗುರುತಿನ ಚಕ್ರವನ್ನು ಹೊಂದಿದ, ಪಾದಗಳಲ್ಲಿ ಕಮಲದ ಗುರುತುಳ್ಳ, ನಾಗಾಭರಣ ಭೂಷಿತನಾದ ಈಶ್ವರನೇ, ಸ್ವಾಮಿ ಮೃತ್ಯುಂಜಯನೇ ಪುನರರ್ಘ್ಯವನ್ನು ಸ್ವೀಕರಿಸುವವನಾಗು.

**ಪುಂನಾಗ ನೀಲೋತ್ಪಲಕುಂದಜಾಜೀ- । ಮಂದಾರಮಲ್ಲೀ ಕರವೀರಪಂಕಜೈಃ ॥**
**ಪುಷ್ಪಾಂಜಲಿಂ ಬಿಲ್ವದಲೈಸ್ತುಲಸ್ಯಾ । ಮೃತ್ಯುಂಜಯಾಂಘ್ರೌ ವಿನಿವೇಶಯಾಮಿ ॥40॥**

ಭಾವಾರ್ಥ - ನಾಗಕೇಸರ, ನೀಲಿತಾವರೆ, ನೈದಿಲೆ, ಜಾಜಿಮಲ್ಲಿಗೆ, ಮಂದಾರ, ದುಂಡುಮಲ್ಲಿಗೆ, ಕರವೀರ, ತಾವರೆ, ಬಿಲ್ವದಳ, ತುಳಸಿಗಳನ್ನು ಆ ಸ್ವಾಮಿ ಮೃತ್ಯುಂಜಯನ ಚರಣಕಮಲಗಳಿಗೆ ಅರ್ಪಿಸುತ್ತಿರುವೆನು.

**ಪದೇ ಪದೇ ಸರ್ವ ತಮೋನಿಕೃಂತನಂ । ಪದೇ ಪದೇ ಸರ್ವ ಶುಭಪ್ರದಾಯಕಂ ॥**
**ಪ್ರದಕ್ಷಿಣಂ ಭಕ್ತಿಯುತೇನ ಚೇತನಾ । ಕರೋಮಿ ಮೃತ್ಯುಂಜಯ ರಕ್ಷ ರಕ್ಷ ಮಾಂ ॥41॥**

ಭಾವಾರ್ಥ - ಮತ್ತೆ ಮತ್ತೆ ಭಕ್ತರ ಅಜ್ಞಾನವೆನ್ನುವ ಎಲ್ಲಾ ಕತ್ತಲೆಯನ್ನು ಹೋಗಲಾಡಿಸುತ್ತಾ ಮತ್ತೆ ಮತ್ತೆ ಸರ್ವರಿಗೂ ಎಲ್ಲಾ ತರದ ಶುಭವನ್ನು ದಯಪಾಲಿಸುವ ಸ್ವಾಮಿ ಮೃತ್ಯುಂಜಯನೇ ಪುನಃಪುನಃ ಪ್ರದಕ್ಷಿಣೆ ಮಾಡುತ್ತಲಿರುವೆ. ರಕ್ಷಿಸು ದೊರೆಯೇ. ರಕ್ಷಿಸು.

**ನಮೋ ಗೌರೀಶಾಯ ಸ್ಫಟಿಕಧವಲಾಂಗಾಯ ಚ ನಮೋ । ನಮೋ ಲೋಕೇಶಾಯ ಸ್ತುತವಿಬುಧಲೋಕಾಯ ಚ ನಮಃ ॥**

**ನಮಃ ಶ್ರೀಕಂಠಾಯ ಕ್ಷಿಪತಪುರದೈತ್ಯಾಯ ಚ ನಮೋ । ನಮಃ ಫಾಲಾಕ್ಷಾಯ ಸ್ಮರಮದ ವಿನಾಶಾಯ ಚ ನಮಃ ॥42॥**

ಭಾವಾರ್ಥ - ಸ್ಫಟಿಕದಂತೆ ಬಿಳುಪಾಗಿರುವ ಅಂಗಗಳಿಂದ ಕೂಡಿದ ಗೌರೀಪತಿಗೆ ನಮಸ್ಕಾರಗಳು. ವಿದ್ವಜ್ಜನರಿಂದ ಸ್ತುತಿಸಲ್ಪಡುತ್ತಿರುವ ಲೋಕೇಶನಿಗೆ ನಮಸ್ಕಾರಗಳು. ಶ್ರೀಕಂಠನಿಗೆ ನಮಸ್ಕಾರಗಳು. ಮಹಾಕಾಲೇಶ್ವರನಿಗೆ ನಮಸ್ಕಾರಗಳು. ಫಾಲಾಕ್ಷನಿಗೆ ನಮಸ್ಕಾರಗಳು. ಮನ್ಮಥನ ಗರ್ವ ವಿನಾಶಕಗೆ ನಮಸ್ಕಾರಗಳು.

**ಸಂಸಾರೇ ಜನಿತಾಪರೋಗ ಸಹಿತೇ ತಾಪತ್ರಯಾಕ್ರಂದಿತೇ । ನಿತ್ಯಂ ಪುತ್ರ ಕಲತ್ರ ವಿತ್ತ ವಲಸತ್ಪಾಶೈರ್ನಿಬದ್ಧಂ ದೃಢಂ ॥ ಗರ್ವಾಂಧಂ ಬಹುಪಾಪವರ್ಗಸಹಿತಂ ಕಾರುಣ್ಯ ದೃಷ್ಟ್ಯಾ ವಿಭೋ । ಶ್ರೀ ಮೃತ್ಯುಂಜಯ ಪಾರ್ವತೀಪ್ರಿಯ ಸದಾ ಮಾಂ ಪಾಹಿ ಸರ್ವೇಶ್ವರ ॥43॥**

ಭಾವಾರ್ಥ - ರೋಗ ತಾಪಗಳಿಗೆ ಸಿಲುಕಿ ಸಂಸಾರದಲ್ಲಿ ನರಳುತ್ತಿರುವ, ಹೆಂಡತಿ, ಮಕ್ಕಳು, ಬಾಂಧವರು, ಸಂಪತ್ತುಗಳೆಂಬ ಮೋಹಪಾಶದ ಧೃಢವಾದ ಬಂಧನದಲ್ಲಿ ಸಿಲುಕಿ ಗರ್ವಿತನಾಗಿ ಅನೇಕಾನೇಕ ಪಾಪಕರ್ಮಗಳಿಂದ ಕೂಡಿದವನಾದ ನನ್ನನ್ನು ಕರುಣಾ ದೃಷ್ಟಿಯಿಂದ ಕಾಣುತ್ತಾ ಸರ್ವೇಶ್ವರನೇ, ಪಾರ್ವತೀಪ್ರಿಯನೇ, ಸ್ವಾಮಿ ಮೃತ್ಯುಂಜಯನೇ ಕಾಪಾಡು.

**ಸೌಧೇ ರತ್ನಮಯೇ ನವೋತ್ಪಲದಲಾಕೀರ್ಣೇ ಚ ತಲ್ಪಾಂತರೇ । ಕೌಶೇಯೇನ ಮನೋಹರೇಣ ಧವಲೇನಾಚ್ಛಾದಿತೇ ಸರ್ವಶಃ ॥ ಕರ್ಪೂರಾಂಚಿತ ದೀಪದೀಪ್ತಿಮಿಲಿತೇ ರಮ್ಯೋಪಧಾನದ್ವಯೇ । ಪಾರ್ವತ್ಯಾಃ ಕರಪದ್ಮಲಾಲಿತ ಪದಂ ಮೃತ್ಯುಂಜಯಂ ಭಾವಯೇ ॥44॥**

ಭಾವಾರ್ಥ - ರತ್ನಮಯವಾಗಿರುವ ಮಹಲಿನಲ್ಲಿ. ಮನೋಹರವಾಗಿರುವ ಬಿಳುಪಿನ ವಸ್ತ್ರಾಲಂಕೃತ ಆಸನದ ಮೇಲೆ, ಪ್ರಕಾಶಮಾನವಾಗಿ ಬೆಳಗುತ್ತಲಿರುವ ಪಾರ್ವತಿಯ ಕೋಮಲವಾದ ಕರಕಮಲಗಳಿಂದ ಪಾದಸೇವೆಯನ್ನು ಸ್ವೀಕರಿಸುತ್ತಲಿರುವ ಆ ಸ್ವಾಮಿ ಮೃತ್ಯುಂಜಯನನ್ನು ಸ್ಮರಿಸುತ್ತೇನೆ.

**ಚತುಶ್ಚತ್ವಾರಿಂಶದ್ವಿಲಸದುಪಚಾರೈರಭಿಮತೈ- । ರ್ಮನಃ ಪದ್ಮೇ ಭಕ್ತ್ಯಾ ಬಹಿರಪಿ ಚ ಪೂಜಾಂ ಶುಭಕರೀಂ ॥ ಕರೋತಿ ಪ್ರತ್ಯೂಷೇ ನಿಶಿ ದಿವಸ ಮಧ್ಯೇಽಪಿ ಚ ಪುಮಾ- । ನ್ಪ್ರಯಾತಿ ಶ್ರೀ ಮೃತ್ಯುಂಜಯ ಪದಮನೇಕಾದ್ಭುತ ಪದಂ ॥45॥**

ಭಾವಾರ್ಥ - ಈ ಮೊದಲು ಹೇಳಿದ ನಲುವತ್ತನಾಲ್ಕು ಪ್ರಶಸ್ತವಾಗಿರುವ ಉಪಚಾರಗಳಿಂದ ಹೃತ್ಕಮಲದಲ್ಲಿ ಮನಃಪೂರ್ವಕವಾಗಿ ಮಾಡುವ ಪೂಜೆ, ಬಹಿರಂಗವಾಗಿ ಮಾಡುವಾ ಪೂಜೆಯಷ್ಟೇ ಶುಭದಾಯಕ ಫಲಕಾರಿಯಾಗಿದೆಯಲ್ಲದೆ, ಪೂರ್ವಾಹ್ನ, ಮಧ್ಯಾಹ್ನ, ರಾತ್ರಿ ಕಾಲಗಳಲ್ಲಿ ಮಾಡುವ ಶ್ರೀ ಮೃತ್ಯುಂಜಯ ಸ್ವಾಮಿಯ ಪೂಜೆ ಅತ್ಯದ್ಭುತವಾಗಿರುವುದಾಗಿದೆ.

**ಪ್ರಾತರ್ಲಿಂಗಮುಮಾಪತೇರಹರಹಃ ಸಂದರ್ಶನಾತ್ಸ್ವರ್ಗದಂ । ಮಧ್ಯಾಹ್ನೇ ಹಯಮೇಧತುಲ್ಯ ಫಲದಂ ಸಾಯಂತನೇ ಮೋಕ್ಷದಂ ॥ ಭಾನೋರಸ್ತಮಯೇ ಪ್ರದೋಷಸಮಯೇ ಪಂಚಾಕ್ಷರಾರಾಧನಂ । ತತ್ಕಾಲತ್ರಯ ತುಲ್ಯಮಿಷ್ಟ ಫಲದಂ ಸದ್ಯೋಽನವದ್ಯಂ ದೃಢಂ ॥46॥**

ಭಾವಾರ್ಥ - ಉಷಃಕಾಲದಲ್ಲಿ ಉಮಾಪತಿಯಲಿಂಗವನ್ನು ರಹಸ್ಯವಾಗಿ ಉಪಾಸಿಸುವುದರಿಂದ ಸ್ವರ್ಗವನ್ನು ಸಂದರ್ಶಿಸಿದ ಫಲವು ದೊರಕುವುದು. ಮಧ್ಯಾಹ್ನ ಕಾಲದಲ್ಲಿ ಮಾಡುವ ಪೂಜೆಯಿಂದ ಅಶ್ವಮೇಧಯಾಗದ ಫಲವು ದೊರಕುವುದು. ಸಾಯಾಹ್ನ ಕಾಲದ ಆರಾಧನೆಯು ಮೋಕ್ಷ ಪ್ರದವಾದುದು. ಸೂರ್ಯಾಸ್ತಮಾನ ಕಾಲದ ಹಾಗೂ ಪ್ರದೋಷ ಕಾಲದಲ್ಲಿ ಮಾಡುವ ಆರಾಧನೆಯು ಪಂಚಾಕ್ಷರೀ ಆರಾಧನೆಗೆ ಸಮನಾಗಿರುವ ಫಲದಾಯಕವಾಗಿರುವುದು. ಸಮಯಾನುಸಾರವಾಗಿ ಆ

ಸ್ವಾಮಿ ಮೃತ್ಯುಂಜಯನನ್ನು ಆರಾಧಿಸುವುದರಿಂದ ಸಮಸ್ತ ಅಭೀಷ್ಟಾರ್ಥಗಳು ಸಿದ್ಧಿಯಾಗುವವು. ಇದು ನಿಶ್ಚಿತವಾದುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಮೃತ್ಯುಂಜಯ ಮಾನಸ ಪೂಜಾ ಸ್ತೋತ್ರಂ ಸಂಪೂರ್ಣಂ ॥

## 6.13 ಶ್ರೀ ಶಿವ ಪಂಚಾಕ್ಷರ ನಕ್ಷತ್ರ ಮಾಲಾ ಸ್ತೋತ್ರಂ

**ಶ್ರೀಮದಾತ್ಮನೇ ಗುಣೈಕಸಿಂಧವೇ ನಮಃ ಶಿವಾಯ । ಧಾಮಲೇಶಧೂತ ಕೋಕಬಂಧವೇ ನಮಃ ಶಿವಾಯ । ನಾಮಶೇಷಿತಾ ನಮದ್ಭವಾಂದವೇ ನಮಃ ಶಿವಾಯ । ಪಾಮರೇತರ ಪ್ರಧಾನ ಬಂಧವೇ ನಮಃ ಶಿವಾಯ ॥1॥**

ಭಾವಾರ್ಥ - ಯೋಗ್ಯವಾದ ಮನಸ್ಸನ್ನು ಹೊಂದಿರುವ ಗುಣಾಸಾಗರನೇ ಶಿವನೇ ನಮಸ್ಕಾರಗಳು. ಸೂರ್ಯತನಯನಾಗಿರುವ ಯಮನ ಬಂಧುವೇ ಶಿವನೇ ನಮಸ್ಕಾರಗಳು. ನಾಮ ಸ್ಮರಣೆಯ ಮೂಲಕ ನಮಸ್ಕರಿಸುವವರ ಬಂಧುವೇ ಶಿವನೇ ನಮಸ್ಕಾರಗಳು. ಅತ್ಯಂತ ಮೂಢರಿಗೂ ಬಂಧುವಾಗಿರುವ ಶಿವನೇ ನಮಸ್ಕಾರಗಳು.

**ಕಾಲಭೀತವಿಪ್ರಬಾಲಪಾಲತೇ ನಮಃ ಶಿವಾಯ । ಶೂಲಭಿನ್ನದುಷ್ಟದಕ್ಷ ಪಾಲ ನಮಃ ಶಿವಾಯ । ಮೂಲಕಾರಣಾಯ ಕಾಲಕಾಲ ನಮಃ ಶಿವಾಯ । ಪಾಲಯಾಧುನಾ ದಯಾಲವಾಲ ನಮಃ ಶಿವಾಯ ॥2॥**

ಭಾವಾರ್ಥ - ಯಮನ ಭೀತಿಗೊಳಗಾದ ಬಾಲಕ ನಚಿಕೇತನನ್ನು ರಕ್ಷಿಸಿದ ಶಿವನಿಗೆ ನಮಸ್ಕಾರಗಳು. ತ್ರಿಶೂಲದ ಘಾತದಿಂದ ತತ್ತರಿಸಿದ ದಕ್ಷನನ್ನು ಸಂರಕ್ಷಿಸಿದ ಶಿವನಿಗೆ ನಮಸ್ಕಾರಗಳು. ಸಮಸ್ತಕ್ಕೂ ಮೂಲಕಾರಣನೆನಿಸಿದ ಮಹಾಕಾಲ ಶಿವನಿಗೆ ನಮಸ್ಕಾರಗಳು. ದಯಾಸಾಗರನಾಗಿರುವ ಶಿವನೇ ನಮಸ್ಕಾರಗಳು. ನನ್ನನ್ನು ಪರಿಪಾಲಿಸುವವನಾಗು.

**ಇಷ್ಟವಸ್ತು ಮುಖ್ಯದಾನ ಹೇತವೇ ನಮಃ ಶಿವಾಯ । ದುಷ್ಟದೈತ್ಯ ವಂಶ ಧೂಮಕೇತವೇನಮಃ ಶಿವಾಯ । ಸೃಷ್ಟಿರಕ್ಷಣಾಯ ಕಾಲಕಾಲ ತೇ ನಮಃ ಶಿವಾಯ । ಅಷ್ಟಮೂರ್ತಯೇ ವೃಷೇಂದ್ರ ಕೇತವೇನಮಃ ಶಿವಾಯ ॥3॥**

ಭಾವಾರ್ಥ - ಬೇಡಿದ ವಸ್ತುಗಳನ್ನು ಪಡೆಯಲು ಕಾರಣನಾಗುವ ಶಿವನಿಗೆ ನಮಸ್ಕಾರಗಳು. ದುಷ್ಟ ಅಸುರರ ವಂಶ ನಾಶಕ್ಕೆ ಕಾರಣನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಸಮಸ್ತ ಬ್ರಹ್ಮಾಂಡವನ್ನು ಸಂರಕ್ಷಿಸುವ ಶಿವನಿಗೆ ನನ್ನ ನಮಸ್ಕಾರಗಳು. ಎಂಟು ಸ್ವರೂಪವನ್ನು ಹೊಂದಿ ವೃಷಭವನ್ನು ಬಾವುಟವಾಗಿ ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಆಪದದ್ರಿ ಭೇಧ ಟಂಕ ಹಸ್ತ ತೇ ನಮಃ ಶಿವಾಯ । ಪಾಪಹಾರಿದಿವ್ಯಸಿಂಧುಮಸ್ತ ತೇ ನಮಃ ಶಿವಾಯ । ಪಾಪಧಾರಿಣೇ ಲಸನ್ನ ಮಸ್ತ ತೇ ನಮಃ ಶಿವಾಯ । ಶಾಪದೋಷ ಖಂಡ ಪ್ರಶಸ್ತ ತೇ ನಮಃ ಶಿವಾಯ ॥4॥**

ಭಾವಾರ್ಥ - ಅಗ್ರಗಣ್ಯ ಪರ್ವತವನ್ನು ತುಂಡರಿಸಿದ ಯೋಗ್ಯವಾಗಿರುವ ಹಸ್ತಗಳನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಪಾಪಗಳನ್ನು ಹೋಗಲಾಡಿಸುವ ಸಾಗರದಂತಹಾ ಕೈಗಳನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ತಲೆಬಾಗದ ನಾಸ್ತಿಕರಿಗೆ ಆಪತ್ತುಗಳನ್ನು ನೀಡುವ ಶಿವನಿಗೆ ನನ್ನ ನಮಸ್ಕಾರಗಳು. ದೇವತಾ ಶಾಪದಿಂದ ಉದ್ಭವಿಸುವ ಸಮಸ್ತ ದೋಷಗಳನ್ನು ನಿವಾರಿಸುವುದರಲ್ಲಿ ಉತ್ತಮನಾದ ಶಿವನಿಗೆ ನನ್ನ ನಮಸ್ಕಾರಗಳು.

**ವ್ಯೋಮಕೇಶ ದಿವ್ಯ ಭವ್ಯ ರೂಪ ತೇ ನಮಃ ಶಿವಾಯ । ಹೇಮಮೇದಿನೀಧರೇಂದ್ರ ಚಾಪ ತೇ ನಮಃ ಶಿವಾಯ । ನಾಮಮಾತ್ರ ದಗ್ಧ ಸರ್ವಪಾಪ ತೇ ನಮಃ ಶಿವಾಯ । ಕಾಮನೈಕತಾನ ಹೃದ್ದುರಾಪ ತೇ ನಮಃ ಶಿವಾಯ ॥5॥**

ಭಾವಾರ್ಥ - ಉತ್ತಮವಾಗಿರುವ ತಲೆಗೂದಲನ್ನು ಧರಿಸಿರುವ ಶಿವನಿಗೆ ನನ್ನ ನಮಸ್ಕಾರಗಳು. ಮನೋಹರವಾದ ಬೃಹತ್ ಶರೀರವನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಬಂಗಾರದ ಬೆಟ್ಟದ ಹೊಳಪನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ನಾಮೋಚ್ಚಾರಣೆ ಮಾತ್ರದಿಂದ ಸಮಸ್ತ ಪಾಪಗಳನ್ನು ಭಸ್ಮ ಮಾಡುವ ಶಿವನಿಗೆ ನನ್ನ ನಮಸ್ಕಾರಗಳು. ಒಂದೇ ಗುರಿಯನ್ನು ಹೊಂದಿ

ಶ್ರದ್ಧಾಭಕ್ತಿಯಿಂದ ಭಜಿಸಿದವರ ಮನೋಕ್ಲೇಶಗಳನ್ನು ಸಂಹರಿಸುವ ಶಿವನಿಗೆ ನನ್ನ ನಮಸ್ಕಾರಗಳು. ಶಿವನಿಗೆ ನನ್ನ ನಮಸ್ಕಾರಗಳು.

**ಬ್ರಹ್ಮಮಸ್ತಕಾವಲೀ ನಿಬದ್ದತೇ ನಮಃ ಶಿವಾಯ । ಜಿಹ್ಮಗೇಂದ್ರಕುಂಡಲ ಪ್ರಸಿದ್ಧ ತೇ ನಮಃ ಶಿವಾಯ । ಬ್ರಹ್ಮಣೇ ಪ್ರಣೀತವೇದಪದ್ಧತೇ ನಮಃ ಶಿವಾಯ । ಜಿಂಹಕಾಲದೇಹದತ್ತ ಪದ್ಧತೇ ನಮಃ ಶಿವಾಯ ॥6॥**

ಭಾವಾರ್ಥ - ಬ್ರಹ್ಮನ ಶಿರವನ್ನು ಕತ್ತರಿಸಿದ ಶಿವನಿಗೆ ನನ್ನ ನಮಸ್ಕಾರಗಳು. ಸರ್ಪವನ್ನು ಕಿವಿಯಾಭರಣವಾಗಿ ಧರಿಸಿರುವ ಶಿವನಿಗೆ ನನ್ನ ನಮಸ್ಕಾರಗಳು. ವೇದೋಪನಿಷತ್ತುಗಳಿಂದ ಸ್ತುತಿಸಲ್ಪಡುವ ಪರಬ್ರಹ್ಮ ಸ್ವರೂಪನಾದ ಶಿವನಿಗೆ ನನ್ನ ನಮಸ್ಕಾರಗಳು. ಮಹಾಕಾಲ ಸ್ವರೂಪನಾದ ಒಡೆಯ ಶಿವನಿಗೆ ನನ್ನ ನಮಸ್ಕಾರಗಳು.

**ಕಾಮನಾಶನಾಯ ಶುದ್ಧ ಕರ್ಮಣೇ ನಮಃ ಶಿವಾಯ । ಸಾಮಗಾನಜಾಯ ಮಾನಶರ್ಮಣೇ ನಮಃ ಶಿವಾಯ । ಹೇಮಕಾಂತಿಚಾಕಚಕ್ಯ ವರ್ಮಣೇ ನಮಃ ಶಿವಾಯ । ಸಾಮಜಾಸುರಾಂಗಲಬ್ಧ ಚರ್ಮಣೇ ನಮಃ ಶಿವಾಯ ॥7॥**

ಭಾವಾರ್ಥ - ಅಜ್ಞಾನವನ್ನು ನಾಶಗೊಳಿಸುವ ಶಿವನಿಗೆ ನನ್ನ ನಮಸ್ಕಾರಗಳು. ಶುದ್ಧ ಶರೀರದವನಾದ ಶಿವನಿಗೆ ನನ್ನ ನಮಸ್ಕಾರಗಳು. ಸಾಮಗಾನದಿಂದ ಸ್ತುತಿಸಲ್ಪಡುವ ಶಿವನಿಗೆ ನನ್ನ ನಮಸ್ಕಾರಗಳು. ಬಂಗಾರದಂತೆ ಶೋಭಿಸುವ ಶಿವನಿಗೆ ನನ್ನ ನಮಸ್ಕಾರಗಳು. ಗಜಾಸುರನ ಶರೀರದಿಂದ ದೊರಕಿದ ವಸನಧಾರಿಯಾದ ಶಿವನಿಗೆ ನನ್ನ ನಮಸ್ಕಾರಗಳು.

**ಜನ್ಮ ಮೃತ್ಯು ಘೋರ ದುಃಖಹಾರಿಣೇ ನಮಃ ಶಿವಾಯ । ಚಿನ್ಮಯೈಕರೂಪದೇಹ ಧಾರಿಣೇ ನಮಃ ಶಿವಾಯ । ಮನ್ಮನೋರಥಾವಪೂರ್ತಿಕಾರಿಣೇ ನಮಃ ಶಿವಾಯ । ಸನ್ಮನೋಗತಾಯ ಕಾಮವೈರಿಣೇ ನಮಃ ಶಿವಾಯ ॥8॥**

ಭಾವಾರ್ಥ - ಜನ್ಮ ಮೃತ್ಯುಗಳ ಘೋರ ದುಃಖವನ್ನು ಪರಿಹರಿಸುವ ಶಿವನಿಗೆ ನನ್ನ ನಮಸ್ಕಾರಗಳು. ಚಿನ್ಮಯ ರೂಪದ ಶರೀರ ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಮನೋಭಿಲಾಷೆಗಳನ್ನು ಈಡೇರಿಸುವ ಶಿವನಿಗೆ ನನ್ನ

ನಮಸ್ಕಾರಗಳು. ಸಜ್ಜನರ ಮನದ ಕೆಟ್ಟ ಆಶಾಪಾಶಗಳನ್ನು ನಾಶಮಾಡುವ ಶಿವನಿಗೆ ನನ್ನ ನಮಸ್ಕಾರಗಳು.

**ಯಕ್ಷ ರಾಜಬಂಧವೇ ದಯಾಲವೇ ನಮಃ ಶಿವಾಯ । ದಕ್ಷ ಪಾಣಿಶೋಭಿಕಾಂಚನಾಲವೇ ನಮಃ ಶಿವಾಯ । ಪಕ್ಷಿರಾಜವಾಹಹೃಚ್ಛಯಾಲವೇ ನಮಃ ಶಿವಾಯ । ಅಕ್ಷಿಪಾಲ ವೇದ ಪೋತತಾಲವೇ ನಮಃ ಶಿವಾಯ ॥9॥**

ಭಾವಾರ್ಥ - ಯಕ್ಷ ರಾಜನ ಬಂಧುವಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ದಕ್ಷ ಯಜ್ಞ ನಾಶಕ ಶಿವನಿಗೆ ನನ್ನ ನಮಸ್ಕಾರಗಳು. ವಿಷ್ಣುವಿನ ಹೃತ್ಕಮಲದಲ್ಲಿರುವ ಶಿವನಿಗೆ ನನ್ನ ನಮಸ್ಕಾರಗಳು. ಅಕ್ಷಿಪಾಲನನ್ನು ವೇದಮಂತ್ರಗಳಿಂದ ಪಾವನಗೊಳಿಸಿದ ಶಿವನಿಗೆ ನನ್ನ ನಮಸ್ಕಾರಗಳು.

**ದಕ್ಷ ಹಸ್ತ ನಿಷ್ಠ ಜಾತವೇದಸೇ ನಮಃ ಶಿವಾಯ । ಅಕ್ಷರಾತ್ಮನೇ ನಮದ್ಬಿಡೌಜಸೇ ನಮಃ ಶಿವಾಯ । ದೀಕ್ಷಿತ ಪ್ರಕಾಶಿತಾತ್ಮ ತೇಜಸೇ ನಮಃ ಶಿವಾಯ । ಅಕ್ಷರಾಜವಾಹ ತೇ ಸತಾಂ ಗತೇ ನಮಃ ಶಿವಾಯ ॥10॥**

ಭಾವಾರ್ಥ - ದಕ್ಷನ ಕೈಯಲ್ಲಿ ಯಜ್ಞ ಮಾಡಿಸಿದವನಾದ ಶಿವನಿಗೆ ನನ್ನ ನಮಸ್ಕಾರಗಳು. ಅವಿನಾಶಿಯಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಸಮಸ್ತ ದಿಸೆಗಳಿಗೆ ವ್ಯಾಪಿಸಿ ಪ್ರಕಾಶ ಬೀರುವ ಶಿವನಿಗೆ ನನ್ನ ನಮಸ್ಕಾರಗಳು. ನಂದಿವಾಹನನಾಗಿ ಸಜ್ಜನರಿಗೆ ಮೋಕ್ಷ ಪ್ರದಾಯಕನಾಗಿರುವ ಆ ಶಿವನಿಗೆ ನನ್ನ ನಮಸ್ಕಾರಗಳು.

**ರಾಜತಾಜಲೇಂದ್ರಸಾನು ವಾಸಿನೇ ನಮಃ ಶಿವಾಯ । ರಾಜಮಾನನಿತ್ಯ ಮಂದಹಾಸಿನೇ ನಮಃ ಶಿವಾಯ । ರಾಜಕೋರ ಕಾವತಂಸಭಾಸಿನೇ ನಮಃ ಶಿವಾಯ । ರಾಜರಾಜಮಿತ್ರತಾಪ್ರಕಾಶಿನೇ ನಮಃ ಶಿವಾಯ ॥11॥**

ಭಾವಾರ್ಥ - ರಜತ ಪರ್ವತ ಶಿಖರ[ಹಿಮಾಲಯ ಪರ್ವತ ಶ್ರೇಣಿ]ದಲ್ಲಿ ನೆಲೆಯಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಅಗ್ರಗಣ್ಯನಾಗಿ ಸದಾ ಮಂದಹಾಸಭರಿತನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ನಾಗರಾಜಕುವರರ

ಭಯವನ್ನು ನಿವಾರಿಸುವವನಾದ ಶಿವನಿಗೆ ನನ್ನ ನಮಸ್ಕಾರಗಳು. ದೇವೇಂದ್ರ ಸಾಮ್ರಾಟನ ಮಿತ್ರ ಶಿವನಿಗೆ ನನ್ನ ನಮಸ್ಕಾರಗಳು.

**ದೀನಮಾನವಾಲಿಕಾಮಧೇನವೇ ನಮಃ ಶಿವಾಯ । ಸೂನಬಾಣದಾಹಕೃತ್ಕೃಶಾನವೇ ನಮಃ ಶಿವಾಯ । ಸ್ವಾನುರಾಗಭಕ್ತ ರತ್ನಸಾನವೇ ನಮಃ ಶಿವಾಯ । ದಾನವಾಂಧಕಾರಚಂಡ ಭಾನವೇ ನಮಃ ಶಿವಾಯ ॥12॥**

ಭಾವಾರ್ಥ - ಶರಣಾಗತರ ಮಾನ ರಕ್ಷಣೆಯ ಕಾಮಧೇನುವಿನಂತಿರುವ ಶಿವನಿಗೆ ನನ್ನ ನಮಸ್ಕಾರಗಳು. ಮನ್ಮಥದಹನಾಗ್ನಿಯ ಉರಿಯನ್ನು ಶಾಂತಗೊಳಿಸಿದವನಾದ ಶಿವನಿಗೆ ನನ್ನ ನಮಸ್ಕಾರಗಳು. ಒಲುಮೆಯಿಂದ ಆರಾಧಿಸುವ ಯೋಗ್ಯ ಭಕ್ತರ ಸಂರಕ್ಷಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಅಸುರರ ಅಜ್ಞಾನಾಂಧಕಾರವನ್ನು ತೊಲಗಿಸುವ ಶಿವನಿಗೆ ನನ್ನ ನಮಸ್ಕಾರಗಳು.

**ಸರ್ವಮಂಗಲಾ ಕುಚಾಗ್ರಶಾಯಿನೇ ನಮಃ ಶಿವಾಯ । ಸರ್ವದೇವತಾಗಣಾತಿಶಾಯಿನೇ ನಮಃ ಶಿವಾಯ । ಪೂರ್ವ ದೇವನಾಶ ಸಂವಿಧಾಯಿನೇನಮಃ ಶಿವಾಯ । ಸರ್ವ ಮನ್ಮನೋಜಭಂಗದಾಯಿನೇ ನಮಃ ಶಿವಾಯ ॥13॥**

ಭಾವಾರ್ಥ - ಸಮಸ್ತ ಮಂಗಲದಾಯಿನಿಯಾದ ಪಾರ್ವತಿಯ ಎದೆಯ ಮೇಲೆ ಪವಡಿಸಿರುವ ಶಿವನಿಗೆ ನನ್ನ ನಮಸ್ಕಾರಗಳು. ಸಮಸ್ತ ದೇವತಾ ಸಮೂಹದ ಅಗ್ರಗಣ್ಯನಾಗಿರುವವನಾದ ಶಿವನಿಗೆ ನನ್ನ ನಮಸ್ಕಾರಗಳು. ಸೂರ್ಯದೇವನ ಬೇಗೆಯನ್ನು ಶಾಂತಗೊಳಿಸುವ ಶಿವನಿಗೆ ನನ್ನ ನಮಸ್ಕಾರಗಳು. ಕಾಮದೇವನನ್ನು ಸಂಹರಿಸಿದವನಾದ ಶಿವನಿಗೆ ನನ್ನ ನಮಸ್ಕಾರಗಳು.

**ಸ್ತೋತ್ರಭಕ್ತಿತೋಽಪಿ ಭಕ್ತ ಪೋಷಿಣೇ ನಮಃ ಶಿವಾಯ । ಮಾಕರಂದಸಾರವರ್ಷಿಭಾಷಿಣೇ ನಮಃ ಶಿವಾಯ । ಏಕಬಿಲ್ವದಾನತೋಽಪಿ ತೋಷಿಣೇ ನಮಃ ಶಿವಾಯ । ನೈಕಜನ್ಮ ಪಾಪಜಾಲ ಶೋಷಿಣೇ ನಮಃ ಶಿವಾಯ ॥14॥**

ಭಾವಾರ್ಥ - ಕಿಂಚಿತ್ ಭಕ್ತಿ ಮಾಡಿದರೂ ಕೂಡಾ ಭಕ್ತರನ್ನು ಸಂರಕ್ಷಿಸುವವನಾದ ಶಿವನಿಗೆ ನನ್ನ ನಮಸ್ಕಾರಗಳು. ಅಮೃತಸಮಾನವಾದ ಹಿತವಚನದ

ಮಳೆಗರೆಯುವವನಾದ ಶಿವನಿಗೆ ನನ್ನ ನಮಸ್ಕಾರಗಳು. ಏಕ ಮಾತ್ರ ಬಿಲ್ವ ದಳವನ್ನು ಅರ್ಪಿಸಿದರೂ ಮುದಗೊಳ್ಳುವ ಶಿವನಿಗೆ ನನ್ನ ನಮಸ್ಕಾರಗಳು. ಪೂರ್ವ ಜನ್ಮ ಕೃತ ಪಾಪಸಮೂಹಗಳ ಪರಿಹಾರಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಸರ್ವಜೀವರಕ್ಷಣೈಕಶೀಲಿನೇ ನಮಃ ಶಿವಾಯ । ಪಾರ್ವತೀಪ್ರಿಯಾಯ ಭಕ್ತಪಾಲಿನೇ ನಮಃ ಶಿವಾಯ । ದುರ್ವಿದಗ್ಧ ದೈತ್ಯ ಸೈನ್ಯದಾರಿಣೇ ನಮಃ ಶಿವಾಯ । ಶರ್ವರೀಶಧಾರಿಣೇ ಕಪಾಲಿನೇ ನಮಃ ಶಿವಾಯ ॥15॥**

ಭಾವಾರ್ಥ - ಸಮಸ್ತ ಜೀವ ಕೋಟಿಗಳ ಸಂರಕ್ಷಣೆ ಮಾಡುವ ಗುಣ ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಪಾರ್ವತಿ ದೇವಿಯ ಪ್ರಿಯನಾಗಿ ಭಕ್ತ ಪರಿಪಾಲಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಮದದಿಂದ ಸೊಕ್ಕಿದ ದೈತ್ಯರ ಸೇನಾಸಮೂಹದ ನಾಶಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ನಾಗಾಭರಣನಾಗಿ ಕಪಾಲಧರನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಪಾಹಿಮಾಮುಮಾಮನೋಜ್ಞ ದೇಹ ತೇ ನಮಃ ಶಿವಾಯ । ದೇಹಿ ಮೇ ವರಂ ಸಿತಾದ್ರಿಗೇಹ ತೇ ನಮಃ ಶಿವಾಯ । ಮೋಹಿತರ್ಷಿಕಾಮಿನೀ ಸಮೂಹ ತೇ ನಮಃ ಶಿವಾಯ । ಸ್ನೇಹಿತ ಪ್ರಸನ್ನ ಕಾಮದೋಹ ತೇ ನಮಃ ಶಿವಾಯ ॥16॥**

ಭಾವಾರ್ಥ - ಉಮಾದೇವಿಗೆ ಸಂತಸವನ್ನೀಯುವ ಶರೀರವನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಬೆಳ್ಳಿ ಬೆಟ್ಟದ ಮೇಲೆ ನೆಲೆಯಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ನಲ್ಲೆಯ ಮೋಹಕ್ಕೊಳಗಾಗಿ ವೇಷಧಾರಿಯಾದ ಶಿವನಿಗೆ ನನ್ನ ನಮಸ್ಕಾರಗಳು. ಆಪ್ತರ ಪಾಲಿಗೆ ದಯೆಯುಳ್ಳವನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಮಂಗಲಪ್ರದಾಯ ಗೋತುರಂಗ ತೇ ನಮಃ ಶಿವಾಯ । ಗಂಗಯಾ ತರಂಗಿತೋತ್ತಮಾಂಗ ತೇ ನಮಃ ಶಿವಾಯ । ಸುರಂಗ ಪ್ರವೃತ್ತ ವೈರಿ ಭಂಗ ತೇ ನಮಃ ಶಿವಾಯ । ಅಂಗರಾಜಯೇ ಕುರೇಕುರಂಗ ತೇ ನಮಃ ಶಿವಾಯ ॥17॥**

ಭಾವಾರ್ಥ - ಗೋವು ಕುದುರೆಗಳನ್ನು ರಕ್ಷಿಸುತ್ತಾ ಶುಭವನ್ನು ಕರುಣಿಸುವ ಶಿವನಿಗೆ ನನ್ನ ನಮಸ್ಕಾರಗಳು. ಸುಂದರ ದೇಹದವನಾಗಿ ಭಾಗೀರಥಿಯನ್ನು ಶಿರದಲ್ಲಿ ಧರಿಸಿರುವವನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಸಾಗರದದಿಂದ ಉದ್ಭವಿಸಿದ ವೈರಿಯನ್ನು ನಾಶಗೊಳಿಸಿದ ಶಿವನಿಗೆ ನನ್ನ ನಮಸ್ಕಾರಗಳು. ಚಿಗರೆಯ ಚರ್ಮದಿಂದ ಶರೀರವನ್ನು ಅಲಂಕರಿಸಿಕೊಂಡಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಈಹಿತಕ್ಷಣಾಪ್ರದಾನಹೇತವೇ ನಮಃ ಶಿವಾಯ । ಅಹಿತಾಗ್ನಿ ಪಾಲಕೋಕ್ಷ ಕೇತವೇ ನಮಃ ಶಿವಾಯ । ದೇಹಕಾಂತಿಧೂತ ರೌಪ್ಯ ಧಾತವೇ ನಮಃ ಶಿವಾಯ । ಗೇಹದುಃಖ ಪುಂಜಧೂಮಕೇತವೇ ನಮಃ ಶಿವಾಯ ॥18॥**

ಭಾವಾರ್ಥ - ಕಂಡಕೂಡಲೇ ಆಶೆಗಳನ್ನು ಈಡೇರಿಸುವ ಶಿವನಿಗೆ ನನ್ನ ನಮಸ್ಕಾರಗಳು. ಪ್ರಳಯಾಗ್ನಿಗೆ ಕಾರಣವಾಗುವ ಶಿವನಿಗೆ ನನ್ನ ನಮಸ್ಕಾರಗಳು. ರಜತಕಣದಂತೆ ಶರೀರದ ಹೊಳಪುಳ್ಳ ಶಿವನಿಗೆ ನನ್ನ ನಮಸ್ಕಾರಗಳು. ಶರೀರದಲ್ಲಿನ ದುಃಖ ಸಮೂಹಗಳಿಗೆ ಧೂಮಕೇತುವಿನೋಪಾದಿಯಲ್ಲಿ ವಿನಾಶಕರನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ತ್ರ್ಯಕ್ಷದೀನಸತ್ಕೃಪಾಕಟಾಕ್ಷ ತೇ ನಮಃ ಶಿವಾಯ । ದಕ್ಷ ಸಪ್ತ ತಂತುನಾಶದಕ್ಷ ತೇ ನಮಃ ಶಿವಾಯ । ಋಕ್ಷರಾಜಬಾನುಪಾವಕಾಕ್ಷ ತೇ ನಮಃ ಶಿವಾಯ । ರಕ್ಷ ಮಾಂ ಪ್ರಪನ್ನ ಮಾತ್ರ ರಕ್ಷ ತೇ ನಮಃ ಶಿವಾಯ ॥19॥**

ಭಾವಾರ್ಥ - ಭಕ್ತನಾದ ತ್ರ್ಯಕ್ಷನನ್ನು ಅನುಗ್ರಹಿಸಿದವನಾದ ಶಿವನಿಗೆ ನನ್ನ ನಮಸ್ಕಾರಗಳು. ದಕ್ಷರಾಜನ ಏಳು ಸಂತತಿಯನ್ನು ನಾಶ ಮಾಡುವುದರಲ್ಲಿ ಸಮರ್ಥನೆನಿಸಿದ ಶಿವನಿಗೆ ನನ್ನ ನಮಸ್ಕಾರಗಳು. ಋಷ್ಯ ಪರ್ವತದ ಮೇಲ್ಭಾಗದಲ್ಲಿ ಅಗ್ನಿಯೋಪಾದಿಯಲ್ಲಿ ಶೋಭಾಯಮಾನನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಆರ್ತ ರಕ್ಷಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ನ್ಯಂಕುಪಾಣಯೇ ಶಿವಂಕರಾಯ ತೇ ನಮಃ ಶಿವಾಯ । ಸಂಕಟಾಬ್ಧಿತೀರ್ಣಕಿಂಕರಾಯ ತೇ ನಮಃ ಶಿವಾಯ । ಪಂಕಭೀಷಿತಾಭಯಂಕರಾಯ ತೇ ನಮಃ ಶಿವಾಯ । ಪಂಕಜಾನನಾಯ ಶಂಕರಾಯ ತೇ ನಮಃ ಶಿವಾಯ ॥20॥**

ಭಾವಾರ್ಥ - ಕಪಾಲವನ್ನು ಹಸ್ತದಲ್ಲಿ ಹಿಡಿದುಕೊಂಡಿರುವವ ಶಿವನಿಗೆ ನನ್ನ ನಮಸ್ಕಾರಗಳು. ದುಃಖಸಾಗರವನ್ನು ದಾಟುವ ಸೇತುವಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಸಂಸಾರವೆನ್ನುವ ಘೋರ ಕೆಸರನ್ನು ತೊಳೆಯುವವನಾದ ಶಿವನಿಗೆ ನನ್ನ ನಮಸ್ಕಾರಗಳು. ತಾವರೆಯಂತಹಾ ಮೊಗವನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಕರ್ಮಪಾಶನಾಶ ನೀಲಕಂಠ ತೇ ನಮಃ ಶಿವಾಯ । ಶರ್ಮದಾಯ ನರ್ಮಭಸ್ಮ ಕಂಠ ತೇ ನಮಃ ಶಿವಾಯ । ನಿರ್ಮಮರ್ಷಿ ಸೇವಿತೋಪಕಂಠ ತೇ ನಮಃ ಶಿವಾಯ । ಕುರ್ಮಹೇ ನತೀರ್ನಮದ್ವಿಕುಂಠ ತೇ ನಮಃ ಶಿವಾಯ ॥21॥**

ಭಾವಾರ್ಥ - ಕರ್ಮಗಳೆನ್ನುವ ಹಗ್ಗವನ್ನು ನಾಶಮಾಡುವವನಾದ ನೀಲಕಂಠನಾದ ಶಿವನಿಗೆ ನನ್ನ ನಮಸ್ಕಾರಗಳು. ಉತ್ತಮವಾಗಿರುವ ಭಸ್ಮವನ್ನು ಧರಿಸಿ ಸುಖವನ್ನು ದಯಪಾಲಿಸುವ ಶಿವನಿಗೆ ನನ್ನ ನಮಸ್ಕಾರಗಳು. ಅಹಂಕಾರ ರಹಿತರಾಗಿರುವ ಋಷಿ ಮುನಿಗಳಿಂದ ಸೇವೆಯನ್ನು ಸ್ವೀಕರಿಸುತ್ತಿರುವ ಶಿವನಿಗೆ ನನ್ನ ನಮಸ್ಕಾರಗಳು. ಆರ್ತರನ್ನು ರಕ್ಷಿಸಿ ಪರಿಪಾಲಿಸುವ ಶಿವನಿಗೆ ನನ್ನ ನಮಸ್ಕಾರಗಳು.

**ವಿಷ್ಟಪಾಧಿಪಾಯ ನಮ್ರ ವಿಷ್ಣವೇ ನಮಃ ಶಿವಾಯ । ಶಿಷ್ಟವಿಪ್ರಹೃದ್ಗುಹಾಚರಿಷ್ಣವೇ ನಮಃ ಶಿವಾಯ । ಇಷ್ಟ ವಸ್ತು ನಿತ್ಯ ತುಷ್ಟ ಜಿಷ್ಣವೇ ನಮಃ ಶಿವಾಯ । ಕಷ್ಟನಾಶನಾಯ ಲೋಜಿಷ್ಣವೇ ನಮಃ ಶಿವಾಯ ॥22॥**

ಭಾವಾರ್ಥ - ವೈಕುಂಠಾಧಿಪತಿ ಮಹಾವಿಷ್ಣುವಿನಿಂದ ಪ್ರಣಾಮಗಳನ್ನು ಸ್ವೀಕರಿಸುತ್ತಿರುವ ಶಿವನಿಗೆ ನನ್ನ ನಮಸ್ಕಾರಗಳು. ಜ್ಞಾನಿಗಳಾದ ಬ್ರಾಹ್ಮಣರ ಹೃದಯ ಮಂದಿರದಲ್ಲಿ ಸಂಚರಿಸುತ್ತಿರುವ ಶಿವನಿಗೆ ನನ್ನ ನಮಸ್ಕಾರಗಳು. ಇಷ್ಟ ಪಡುವ ವಸ್ತುಗಳನ್ನು ಅನುದಿನವೂ ಅರ್ಪಿಸುತ್ತಿರುವುದರಿಂದ ಪ್ರಸನ್ನನಾಗುವ

ಮನಸ್ಸನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಕಷ್ಟಗಳನ್ನು ಪರಿಹರಿಸುವ ಕೃಪಾಸಾಗರ ಶಿವನಿಗೆ ನನ್ನ ನಮಸ್ಕಾರಗಳು.

**ಅಪ್ರಮೇಯ ದಿವ್ಯ ಸುಪ್ರಭಾವ ತೇ ನಮಃ ಶಿವಾಯ । ಸತ್ಪ್ರಪನ್ನ ರಕ್ಷಸ್ವಭಾವ ತೇ ನಮಃ ಶಿವಾಯ । ಸ್ವಪ್ರಕಾಶ ನಿಸ್ತುಲಾನುಭಾವ ತೇ ನಮಃ ಶಿವಾಯ । ವಿಪ್ರಡಿಂಭದರ್ಶಿತಾರ್ದ್ರ ಭಾವ ತೇ ನಮಃ ಶಿವಾಯ ॥23॥**

ಭಾವಾರ್ಥ - ಸಾಮನ್ಯರ ಅರಿವಿಗೆ ನಿಲುಕಲಾರದ ದಿವ್ಯಪ್ರಕಾಶವನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಸದ್ಭಕ್ತರನ್ನು ಪರಿಪಾಲಿಸುತ್ತಾ ಸ್ವಯಂಪ್ರಭೆಯನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ಅಳತೆಗೆ ನಿಲುಕದ ಸಾಮರ್ಥ್ಯವುಳ್ಳವನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಬ್ರಾಹ್ಮಣರ ಪಾಲಿನ ದಯಾಸಾಗರನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಸೇವಕಾಯ ಮೇ ಮೃಡ ಪ್ರಸೀದ ತೇ ನಮಃ ಶಿವಾಯ । ಭಾವಲಭ್ಯ ತಾವಕಪ್ರಸಾದ ತೇ ನಮಃ ಶಿವಾಯ । ಪಾವಕಾಕ್ಷ ದೇವಪೂಜ್ಯಪಾದ ತೇ ನಮಃ ಶಿವಾಯ । ತಾವಕಾಂಘ್ರಿ ಭಕ್ತ ದತ್ತ ಮೋದ ತೇ ನಮಃ ಶಿವಾಯ ॥24॥**

ಭಾವಾರ್ಥ - ಸೇವಕನಾಗಿರುವ ನನಗೆ ಪ್ರಸನ್ನನಾಗುವ ಈಶ್ವರನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಅಗ್ನಿಯನ್ನು ಕಣ್ಣಲ್ಲಿ ಧರಿಸಿ ಭಕ್ತಿ ಭಾವದಿಂದ ಶರಣಾಗುವರಿಗೆ ಅನುಗ್ರಹಿಸುವ ಶಿವನಿಗೆ ನನ್ನ ನಮಸ್ಕಾರಗಳು. ಸಮಸ್ತ ದೇವಾನುದೇವತೆಗಳಿಂದ ಪೂಜಿಸಿಗೊಂಬ ಪರಮಪಾವನ ಚರಣಗಳನ್ನು ಹೊಂದಿರುವ ಶಿವನಿಗೆ ನನ್ನ ನಮಸ್ಕಾರಗಳು. ತನ್ನ ಪಾದಾರವಿಂದಗಳ ಆಶ್ರಯಹೊಂದಿದ ಭಕ್ತರಿಗೆ ಸುಖವನ್ನು ಅನುಗ್ರಹಿಸುವ ಶಿವನಿಗೆ ನನ್ನ ನಮಸ್ಕಾರಗಳು.

**ಭುಕ್ತಿಮುಕ್ತಿ ದಿವ್ಯ ಭೋಗದಾಯಿನೇ ನಮಃ ಶಿವಾಯ । ಶಕ್ತಿಕಲ್ಪಿತ ಪ್ರಪಂಚಭಾಗಿನೇ ನಮಃ ಶಿವಾಯ । ಭಕ್ತಸಂಕಟಾಪಹಾರಯೋಗಿನೇ ನಮಃ ಶಿವಾಯ । ಯುಕ್ತಸನ್ಮನಃಸರೋಜಯೋಗಿನೇ ನಮಃ ಶಿವಾಯ ॥25॥**

ಭಾವಾರ್ಥ - ಶ್ರೇಷ್ಟವಾಗಿರುವಂತಹ ಸೌಭಾಗ್ಯ ಮತ್ತು ಮೋಕ್ಷತ್ವವನ್ನು ಕರುಣಿಸುವ ಶಿವನಿಗೆ ನನ್ನ ನಮಸ್ಕಾರಗಳು. ಸ್ವಂತ ಶಕ್ತಿಯಿಂದ ಬ್ರಹ್ಮಾಂಡವನ್ನೇ ಸೃಷ್ಟಿಸಿದ ಶಿವನಿಗೆ ನನ್ನ ನಮಸ್ಕಾರಗಳು. ಭಕ್ತರ ಸಂಕಷ್ಟಗಳನ್ನು ಪರಿಹರಿಸುವ ಆತ್ಮಸಾಧಕ ಶಿವನಿಗೆ ನನ್ನ ನಮಸ್ಕಾರಗಳು. ತಪಸ್ವಿಗಳ ಮನೋಹರವಾದ ಮನಸ್ಸಿನ ತಾವರೆಯಂತಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಅಂತಕಾಂತಕಾಯ ಪಾಪಹಾರಿಣೇ ನಮಃ ಶಿವಾಯ । ಶಾಂತಮಾಯ ದಂತಿಚರ್ಮಧಾರಿಣೇ ನಮಃ ಶಿವಾಯ । ಸಂತತಾಶ್ರಿತವ್ಯಥಾವಿದಾರಿಣೇ ನಮಃ ಶಿವಾಯ । ಜಂತುಜಾತನಿತ್ಯ ಸೌಖ್ಯಕಾರಿಣೇ ನಮಃ ಶಿವಾಯ ॥26॥**

ಭಾವಾರ್ಥ - ಯಮನಿಗೇ ಯಮನಾಗಿ ಪಾಪಪರಿಹಾರಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಶಾಂತಮಾಯವೆನ್ನುವ ಆನೆಯ ಚರ್ಮವನ್ನು ಧರಿಸಿದವನಾದ ಶಿವನಿಗೆ ನನ್ನ ನಮಸ್ಕಾರಗಳು. ಸತತವಾಗಿ ತನ್ನನ್ನು ಆಶ್ರಯಿಸಿದವರ ಸಂಕಷ್ಟಗಳನ್ನು ಹೋಗಲಾಡಿಸುವ ಶಿವನಿಗೆ ನನ್ನ ನಮಸ್ಕಾರಗಳು. ಸಮಸ್ತ ಜೀವಿಗಳಿಗೆ ಎಡೆಬಿಡದೆ ಸೌಭಾಗ್ಯವನ್ನು ದಯಪಾಲಿಸುವ ಶಿವನಿಗೆ ನನ್ನ ನಮಸ್ಕಾರಗಳು.

**ಶೂಲಿನೇ ನಮೋನಮಃಕಪಾಲಿನೇ ನಮಃ ಶಿವಾಯ । ಪಾಲಿನೇ ವಿರಿಂಚಿತುಂಡಮಾಲಿನೇ ನಮಃ ಶಿವಾಯ । ಲೀಲಿನೇ ವಿಶೇಷರುಂಡ ಮಾಲಿನೇ ನಮಃ ಶಿವಾಯ । ಶೀಲಿನೇ ನಮಃ ಪ್ರಪುಣ್ಯಶಾಲಿನೇ ನಮಃ ಶಿವಾಯ ॥27॥**

ಭಾವಾರ್ಥ - ತ್ರಿಶೂಲಧರನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಬ್ರಹ್ಮನ ಕಪಾಲವನ್ನು ಧರಿಸಿಕೊಂಡಿರುವ ಶಿವನಿಗೆ ನನ್ನ ನಮಸ್ಕಾರಗಳು. ಸಮಸ್ತರ ರಕ್ಷಕನಾಗಿರುವ ಶಿವನಿಗೆ ನನ್ನ ನಮಸ್ಕಾರಗಳು. ಚತುರ್ಮುಖ ಬ್ರಹ್ಮನ ರುಂಡವನ್ನು ಮಾಲೆಯಾಗಿ ಧರಿಸಿರುವ ಶಿವನಿಗೆ ನನ್ನ ನಮಸ್ಕಾರಗಳು. ಲೀಲಾ ವಿಶೇಷನಾಗಿರುವ ರುಂಡಮಾಲಾಧರ ಶಿವನಿಗೆ ನನ್ನ ನಮಸ್ಕಾರಗಳು. ಸರ್ವಗುಣ ಸಂಪನ್ನ ಶಿವನಿಗೆ

ನನ್ನ ನಮಸ್ಕಾರಗಳು. ಅಪರಿಮಿತ ಮಹಾಪುಣ್ಯಶಾಲಿಯಾಗಿರುವ ಶಿವನಿಗೆ ನನ್ನ ನಮಸ್ಕಾರಗಳು.

**ಶಿವ ಪಂಚಾಕ್ಷರ ಮುದ್ರಾಂ । ಚತುಷ್ಪದೋಲ್ಲಾಸ ಪದ್ಮಮಣಿಘಟಿತಾ ॥**
**ನಕ್ಷತ್ರಮಾಲಿಕಾಮಿಹ । ದಧದುಪಕಂಠಂನರೋ ಭವೇತ್ಸೋಮಃ ॥28॥**

ಭಾವಾರ್ಥ - "ಓಂ ನಮಃ ಶಿವಾಯ"ವೆಂಬ ಶಿವಪಂಚಾಕ್ಷರಗಳಿಂದ ಕೂಡಿರುವ ಕಮಲಮಣಿಯಂತೆ ಸಂತಸದಾಯಕವಾಗಿರುವ ನಾಲ್ಕು ಪಂಕ್ತಿಗಳುಳ್ಳ ಈ ನಕ್ಷತ್ರಮಾಲಿಕೆಯ ಹಾರವನ್ನು ಯಾವಾತನು ಕಂಠದಲ್ಲಿ ಧರಿಸುವನೋ [ಕಂಠಸ್ಥನಾಗಿರುವನೋ] ಆತನು ಚಂದ್ರನೋಪಾದಿಯಲ್ಲಿ ವಿರಾಜಿಸುತ್ತಾ ಸಂತಸದಿಂದ ಇರುವನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಶಿವಪಂಚಾಕ್ಷರ ನಕ್ಷತ್ರ ಮಾಲಾಸ್ತೋತ್ರಂ ಸಂಪೂರ್ಣಂ ॥

## 6.14 ಶ್ರೀ ಶಿವಾಷ್ಟಕಂ

**ತಸ್ಮೈನಮಃ ಪರಮಕಾರಣಕಾರಣಾಯ । ದೀಪ್ತೋಜ್ವಲಜ್ವಲಿತ ಪಿಂಗಲಲೋಚನಾಯ ॥ ನಾಗೇಂದ್ರಹಾರಕೃತ ಕುಂಡಲ ಭೂಷಣಾಯ । ಬ್ರಹ್ಮೇಂದ್ರ ವಿಷ್ಣು ವರದಾಯ ನಮಃ ಶಿವಾಯ ॥1॥**

ಭಾವಾರ್ಥ - ಉಜ್ವಲಿತ ಅಗ್ನಿಯಂತಿರುವ, ಸಿಂಹ ಸದೃಶನಾಗಿರುವ, ಬೆಳಗುತ್ತಿರುವ ನಯನಗಳುಳ್ಳವನಾಗಿರುವ, ನಾಗೇಂದ್ರಹಾರನಾಗಿರುವ, ಕುಂಡಲಗಳಿಂದ ಅಲಂಕರಿಸಲ್ಪಟ್ಟವನಾದ, ಬ್ರಹ್ಮ, ವಿಷ್ಣು, ಇಂದ್ರರಿಗೆ ವರದಾಯಕನಾಗಿರುವ, ನಿಮಿತ್ತಗಳಿಗೆ ಪರಮ ನಿಮಿತ್ತನಾಗಿರುವ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಶ್ರೀಮತ್ಪ್ರಸನ್ನ ಶಶಿ ಪನ್ನಗ ಭೂಷಣಾಯ । ಶೈಲೇಂದ್ರಜಾ ವದನ ಚುಂಬಿತ ಲೋಚನಾಯ ॥ ಕೈಲಾಸ ಮಂದರ ಮಹೇಂದ್ರನಿಕೇತನಾಯ । ಲೋಕತ್ರಯಾರ್ತಿ ಹರಣಾಯ ನಮಃ ಶಿವಾಯ ॥2॥**

ಭಾವಾರ್ಥ - ಸಂತುಷ್ಟನೂ ಮನೋಹರನೂ ಆಗಿ ಚಂದ್ರ ಹಾಗೂ ಸರ್ಪಗಳಿಂದ ಅಲಂಕರಿಸಿಗೊಂಡು ಪರ್ವತ ರಾಜನ ತನಯೆ ಪಾರ್ವತಿಯ ಮುಖಾರವಿಂದವನ್ನು ಕಾಣುವ ನಯನಗಳನ್ನು ಹೊಂದಿ, ಕೈಲಾಸ ಮಂದರ ಪರ್ವತಗಳ ಅಗ್ರಗಣ್ಯ ನಿವಾಸಿಯಾಗಿರುವ, ಮೂರು ಲೋಕಗಳ ತಾಪಾದಿದುಃಖಗಳ ನಿವಾರಕನಾಗಿರುವ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಪದ್ಮಾವದಾತ ಮಣಿಕುಂಡಲಗೋವೃಷಾಯ । ಕೃಷ್ಣಾಗರು ಪ್ರಚುರಚಂದನ ಚರ್ಚಿತಾಯ ॥ ಭಸ್ಮಾನುಷಕ್ತ ವಿಕಚೋತ್ಪಲ ಮಲ್ಲಿಕಾಯ । ನಿಲಾಬ್ಜ ಕಂಠ ಸದೃಶಾಯ ನಮಃ ಶಿವಾಯ ॥3॥**

ಭಾವಾರ್ಥ - ತಾವರೆಯನ್ನು ಹೋಲುವ ಮನಮೋಹಕವಾದ ಮಣಿ ಕುಂಡಲಗಳನ್ನು ಧರಿಸಿಕೊಂಡಿರುವ, ವೃಷಭವನ್ನು ವಾಹನವನ್ನಾಗಿಸಿಕೊಂಡ, ಶ್ರೀಗಂಧ ಮತ್ತು ಚಂದನ, ಅಗರುಗಳನ್ನು ಲೇಪಿಸಿಕೊಂಡ, ಅಖಂಡ ಭಸ್ಮಧಾರಿಯಾದ, ಅರಳು ಮಲ್ಲಿಗೆ ತಾವರೆ ಪುಷ್ಪಗಳನ್ನು ಧರಿಸಿಕೊಂಡ, ನೀಲಿ ತಾವರೆಯ ಕೊರಳುಳ್ಳ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಲಂಬತ್ಸಪಿಂಗಲ ಜಟಾಮುಕುಟೋತ್ಕಟಾಯ । ದಂಷ್ಟ್ರಾಕರಾಲ ವಿಕಟೋತ್ಕಟ ಭೈರವಾಯ ॥ ವ್ಯಾಘ್ರಾಜಿನಾಂಬರಧರಾಯ ಮನೋಹರಾಯ । ತ್ರೈಲೋಕ್ಯನಾಥನಮಿತಾಯ ನಮಃ ಶಿವಾಯ ॥4॥**

ಭಾವಾರ್ಥ - ಜೋತಾಡುವ ಕಂದುಬಣ್ಣದ ಜಡೆಯಕಿರೀಟವನ್ನು ಹೊಂದಿದ, ಭಯವನ್ನು ಹುಟ್ಟಿಸುವ ಕೋರೆ ಹಲ್ಲುಗಳನ್ನು ಹೊಂದಿದ, ಭಯಕ್ಕೆ ಕಾರಣವಾಗುವ ಭೈರವ ರೂಪನಾದ, ಹುಲಿಯ ಚರ್ಮವನ್ನು ಧರಿಸಿಕೊಂಡು ಮನೋಹರ ಸ್ವರೂಪನಾಗಿರುವ, ಮೂರುಲೋಕಾಧೀಶರಿಂದ ವಂದಿಸಲ್ಪಡುವ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ದಕ್ಷ ಪ್ರಜಾಪತಿ ಮಹಾಮಖನಾಶನಾಯ । ಕ್ಷಿಪ್ರಂ ಮಹಾತ್ರಿಪುರ ದಾನವ ಘಾತನಾಯ ॥ ಬ್ರಹ್ಮೋರ್ಜಿತೋರ್ಧ್ವಗ ಕರೋಟಿ ನಿಕೃಂತನಾಯ । ಯೋಗಾಯ ಯೋಗ ನಮಿತಾಯ ನಮಃ ಶಿವಾಯ ॥5॥**

ಭಾವಾರ್ಥ - ದಕ್ಷಪ್ರಜಾಪತಿಯ ಮಹಾಯಜ್ಞ ನಾಶಕನಾದ, ತ್ರಿಪುರಾಸುರರನ್ನು ಅತಿ ಬೇಗನೆ ಸಂಹರಿಸಿದವನಾದ, ಬ್ರಹ್ಮನ ಮೇಲಿನ ಶಿರವನ್ನು ಕತ್ತರಿಸಿದವನಾದ, ಯೋಗಸ್ವರೂಪನಾಗಿ ಯೋಗವಂದ್ಯನಾದ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಸಂಸಾರ ಸೃಷ್ಟಿ ಘಟನಾಯ ಪರಿವರ್ತನಾಯ । ರಕ್ಷಃ ಪಿಶಾಚಗಣಸಿದ್ಧ ಸಮಾಕುಲಾಯ ॥ ಸಿದ್ಧೋರಗ ಗ್ರಹಗಣೇಂದ್ರ ನಿಷೇವಿತಾಯ । ಶಾರ್ದೂಲ ಚರ್ಮವಸನಾಯ ನಮಃ ಶಿವಾಯ ॥6॥**

ಭಾವಾರ್ಥ - ಬ್ರಹ್ಮಾಂಡದಲ್ಲಿನ ಸೃಷ್ಟಿಯಲ್ಲಿರುವ ಆಗುಹೋಗುಗಳನ್ನು ಬದಲಾಯಿಸುವವನಾದ, ಸಿದ್ಧ-ಸಾಧ್ಯರು,ಪಿಶಾಚಿ, ದೈತ್ಯ ಸಮೂಹದಿಂದ ಕೂಡಿಕೊಂಡಿರುವವನಾದ, ನಾಗ, ಗ್ರಹ, ಇಂದ್ರ, ಗಣ, ಸಿದ್ಧರುಗಳಿಂದ ಸೇವೆಯನ್ನು ಸ್ವೀಕರಿಸುವವನಾದ, ಹುಲಿಯ ಚರ್ಮವನ್ನೇ ವಸ್ತ್ರವನ್ನಾಗಿ ಧರಿಸಿಕೊಂಡ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಭಸ್ಮಾಂಗರಾಗ ಕೃತರೂಪ ಮನೋಹರಾಯ । ಸೌಮ್ಯಾವದಾತ ನಮಾಶ್ರಿತ ಮಾಶ್ರಿತಾಯ ॥ ಗೌರೀಕಟಾಕ್ಷ ನಯನಾರ್ಧ ನಿರೀಕ್ಷಣಾಯ । ಗೋಕ್ಷೀರಧಾರಧವಲಾಯ ನಮಃ ಶಿವಾಯ ॥7॥**

ಭಾವಾರ್ಥ - ಭಸ್ಮವನ್ನು ಲೇಪಿಸಿಕೊಂಡು ಮನೋಹರ ಸ್ವರೂಪದವನಾಗಿರುವ, ಪ್ರಶಾಂತವಾಗಿರುವ ಕಾನನಗಳನ್ನು ಆಶ್ರಯತಾಣಗಳನ್ನಾಗಿಸಿಕೊಂಡವನಾದ, ಅರ್ಧ ತೆರೆದ ಕಣ್ಣುಗಳಿಂದ ಸತಿ ಪಾರ್ವತಿಯ ಶೃಂಗಾರದ ನೋಟವನ್ನು ನಿರೀಕ್ಷಿಸುತ್ತಿರುವವನಾದ, ಹಸುವಿನ ಹಾಲಿನಂತೆ ಪರಿಶುದ್ಧ ವರ್ಣವನ್ನು ಹೊಂದಿರುವ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಆದಿತ್ಯ ಸೋಮವರುಣಾನಿಲಸೇವಿತಾಯ । ಯಜ್ಞಾಗ್ನಿ ಹೋತ್ರ ವರಧೂಮನಿಕೇತನಾಯ ॥ ಋಕ್ ಸಾಮವೇದ ಮುನಿಭಿಃ ಸ್ತುತಿಸಂಯುತಾಯ । ಗೋಪಾಯ ಗೋಪನಮಿತಾಯ ನಮಃ ಶಿವಾಯ ॥8॥**

ಭಾವಾರ್ಥ - ರವಿ-ಚಂದ್ರ-ವರುಣ-ವಾಯುಗಳಿಂದ ಸೇವೆಯನ್ನು ಸ್ವೀಕರಿಸುತ್ತಿರುವವನಾದ, ಯಜ್ಞಹೋಮಾಗ್ನಿಗಳಿಂದ ಆವರಿಸುವ ಪವಿತ್ರ ಹೊಗೆಯನ್ನು ನಿವಾಸವನ್ನಾಗಿಸಿಕೊಂಡಿರುವ, ಮುನಿಗಳಿಂದ ಋಗ್ವೇದ-ಸಾಮವೇದಗಳ ಮೂಲಕ ಸ್ತುತಿಸಲ್ಪಡುತ್ತಿರುವವನಾದ, ಸೂರ್ಯನೂ, ಸೂರ್ಯನಿಂದ ನಮಿಸಲ್ಪಡುವವನೂ ಆಗಿರುವ ಆ ಮಹಾ ಶಿವನಿಗೆ ನನ್ನ ನಮಸ್ಕಾರಗಳು.

**ಶಿವಾಷ್ಟಕಮಿದಂ ಪುಣ್ಯಂ ಯಃ ಪಠೇಚ್ಛಿವ ಸನ್ನಿಧೌ । ಶಿವಲೋಕಮವಾಪ್ನೋತಿ ಶಿವೇನ ಸಹಮೋದತೇ ॥9॥**

ಭಾವಾರ್ಥ - ಯಾವಾತನು ಪುಣ್ಯ ಪ್ರದಾಯಕವಾಗಿರುವಂತಹಾ ಈ ಶಿವಾಷ್ಟಕಗಳನ್ನು ಶಿವನ ಸನ್ನಿಧಾನದಲ್ಲಿ ಪಠಿಸುವನೋ ಅವನು ಶಿವಲೋಕವನ್ನು ಸೇರಿ ಶಿವನೊಡನೆ ಸುಖದಿಂದ ಇರುವನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಶಿವಾಷ್ಟಕಂ ಸಂಪೂರ್ಣಂ ॥

## 6.15 ಶ್ರೀ ದಕ್ಷಿಣಾಮೂರ್ತಿ ಸ್ತೋತ್ರಂ

**ಉಪಾಸಕಾನಾಂ ಯದುಪಾಸನೀಯ- । ಮುಪಾತ್ರವಾಸಂ ವಟಶಾಖಮೂಲೇ ॥ ತದ್ಧಾಮ ದಾಕ್ಷಿಣ್ಯ ಜುಷಾ ಸ್ವಮೂರ್ತ್ಯಾ । ಜಾಗರ್ತು ಚಿತ್ತೇ ಮಮ ಬೋಧರೂಪಂ ॥1॥**

ಭಾವಾರ್ಥ - ಸದ್ಗುರುವೇ,ಅರಳಿಮರದ ತಳಭಾಗದಲ್ಲಿ ದಕ್ಷಿಣಾಭಿಮುಖನಾಗಿ ನೆಲೆಯಾಗಿರುವ ನೀನು ಸಾಧಕರಿಗೆ ಸಾಧಕನು. ಹೀಗಿರುವ ಸ್ವಾಮಿಯೇ, ನನ್ನ ಮನಸ್ಸನ್ನು ಜಾಗ್ರತಗೊಳಿಸುವವನಾಗು.

**ಅದ್ರಾಕ್ಷಮ ಕ್ಷೀಣದಯಾನಿಧಾನ- । ಮಾಚಾರ್ಯಮಾದ್ಯಂ ವಟಮೂಲ ಭಾಗೇ ॥**
**ಮೌನೇನ ಮಂದಸ್ಮಿತ ಭೂಷಿತೇನ । ಮಹರ್ಷಿಲೋಕಸ್ಯ ತಮೋನುದಂತಂ ॥2॥**

ಭಾವಾರ್ಥ - ಯೋಗ ಮತ್ತು ಇಂದ್ರಿಯ ನಿಗ್ರಹ ಶಕ್ತಿಯವನಾಗಿರುವ ನೀನು ಅರಳಿ ಮರದ ಅಡಿಯಲ್ಲಿ ಮೌನವಾಗಿ ಮುಗುಳ್ನಗುತ್ತಾ ಕುಳಿತು ಮಹರ್ಷಿಲೋಕದ ಅಗ್ರಗಣ್ಯ ಆಚಾರ್ಯನಾಗಿ ಜಗತ್ತಿನ ಜ್ಞಾನಾಂಧಕಾರವನ್ನು ಹೋಗಲಾಡಿಸುತ್ತಿರುವೆ.

**ವಿದ್ರಾವಿತಾಶೇಷತಮೋಗಣೇನ । ಮುದ್ರಾವಿಶೇಷೇಣ ಮುಹುರ್ಮುನೀನಾಂ ॥**
**ನಿರಸ್ಯ ಮಾಯಾಂ ದಯಯಾವಿಧತ್ತೇ । ದೇವೋ ಮಹಾಂಸ್ತತ್ತ್ವಮಸೀತಿ ಬೋಧಂ ॥3॥**

ಭಾವಾರ್ಥ - ಸದ್ಗುರುದೇವನೇ, ನಿನ್ನ ವಿಶೇಷವಾದ ಮುದ್ರೆಯಿಂದ ಜಗತ್ತಿನ ಕಾಮನೆಗಳನ್ನು ಹೋಗಲಾಡಿಸಿ ಶ್ರೇಷ್ಠವಾದ "ಸಾಕ್ಷಾತ್ ನೀನೇ ಅದಾಗಿರುವೆ" ಎಂಬ ತತ್ವವನ್ನು ದಯಾಪೂರಿತನಗಿ ಬೋಧಿಸುತ್ತಲಿರುವೆ.

**ಅಪಾರ ಕಾರುಣ್ಯ ಸುಧಾತರಂಗೈ- । ರಪಾಂಗಪಾತೈರವಲೋಕಯಂತಂ ॥**
**ಕಠೋರಸಂಸಾರನಿದಾಘತಪ್ತಾ_ । ನ್ಮುನೀನಹಂ ನೌಮಿ ಗುರುಂ ಗುರೂಣಾಂ ॥4॥**

ಭಾವಾರ್ಥ - ಸದ್ಗುರುವೇ, ಅಧೋಗತಿಯಲ್ಲಿರುವ ನನ್ನನ್ನು ನಿನ್ನ ಅಪಾರವಾಗಿರುವ ಕರುಣಾಪೂರ್ಣ ದೃಷ್ಟಿಯಿಂದ ಕಾಣುವವನಾಗು. ಜಟಿಲವಾಗಿರುವ ಈ ಸಂಸಾರ ಜಂಜಾಟದಲ್ಲಿ ಸಿಲುಕಿ ಒದ್ದಾಡುತ್ತಲಿರುವ ನಾನು ಗುರುಗಳಿಗೆ ಪರಮಗುರುವಾಗಿರುವ ನಿನಗೆ ನಮಸ್ಕರಿಸುತ್ತಿರುವೆನು.

**ಮಾಮದ್ಯದೇವೋ ವಟಮೂಲವಾಸೀ । ಕೃಪಾವಿಶೇಷಾತ್ಕೃತ ಸಂವಿಧಾನಃ ॥**
**ಓಂಕಾರರೂಪಾಮುಪದಿಶ್ಯ ವಿದ್ಯಾ- । ಮಾವಿದ್ಯ ಕದ್ವಾಂತಮಪಾಕರೋತು ॥5॥**

ಭಾವಾರ್ಥ - ಅಶ್ವಥ್ಥ ವೃಕ್ಷದಲ್ಲಿ ನೆಲೆಯಾಗಿ ನಿನ್ನ ಕೃಪೆಯ ಮೇಲ್ಮೆಯಿಂದ ನನ್ನನ್ನು ಕಾಣುತ್ತಿರುವೆ. ಸದ್ಗುರುವೇ, ಓಂಕಾರಸ್ವರೂಪವಾದ ವಿದ್ಯೆಯನ್ನು ನನಗೆ ಬೋಧಿಸಿ ನನ್ನನ್ನು ವಿದ್ಯಾವಂತನನ್ನಾಗಿ ಮಾಡಿ ಉದ್ಧರಿಸು ಸ್ವಾಮೀ.

**ಕಲಾಭಿರಂದೋರಿವ ಕಲ್ಪಿತಾಂಗಂ । ಮುಕ್ತಾಕಲಾಪೈರಿವ ಬದ್ಧಮೂರ್ತಿಂ ॥**
**ಅಲೋಕಯೇ ದೇಶಿಕಮಪ್ರಮೇಯ । ಮನಾದ್ಯ ವಿದ್ಯಾತಿಮೀರ ಪ್ರಭಾತಂ ॥6॥**

ಭಾವಾರ್ಥ - ವ್ಯವಸ್ಥಿತವಾಗಿ ವಿವಿಧ ಕಲಾಶಕ್ತಿಗಳನ್ನು ಹೊಂದಿರುವ ಅಂಗಗಳಿಂದ ಕೂಡಿ ಮೂರ್ತಿಸ್ವರೂಪನಾಗಿರುವ ನೀನು ಅನಾದಿಯಾಗಿರುವ ವಿದ್ಯೆಗಳಿಂದ ಬೆಳಗುತ್ತಿದ್ದು ಅಗ್ರಗಣ್ಯ ಆಚಾರ್ಯೋತ್ತಮನಾಗಿ ಪರಬ್ರಹ್ಮನೂ ಆಗಿರುವೆ.

**ಸ್ವದಕ್ಷ ಜಾನುಸ್ಥಿತವಾಮಪಾದಂ । ಪಾದೋವರಾಲಂಕೃತಯೋಗಪಟ್ಟಂ ॥**
**ಅಪಸ್ಮೃತೇರಾಹಿತಪಾದ ಮಂಗೇ । ಪ್ರಣೌಮಿ ದೇವಂ ಪ್ರಣಿಧಾನವಂತಂ ॥7॥**

ಭಾವಾರ್ಥ - ಎಡಪಾದವನ್ನು ಮೋಣಕಾಲಿನ ಮೇಲಿರಿಸಿ ಯೋಗ ಸ್ಥಿಯಲ್ಲಿ ಧ್ಯಾನನಿರತನಾಗಿರುವ ಸದ್ಗುರು ದಕ್ಷಿಣಾಮೂರ್ತಿ ಸ್ವಾಮಿಯೇ ನಿನಗೆ ನಾನು ನಮಸ್ಕರಿಸುವೆನು.

**ತತ್ವಾರ್ಥ ಮಂತೇವಸತಾಮೃಷೀಣಾಂ । ಯುವಾಪಿ ಯಃ ಸನ್ನುಪದೇಷ್ಟುಮೀಷ್ಟೇ ॥**
**ಪ್ರಣೌಮಿ ತಂ ಪ್ರಾಕ್ತನಪುಣ್ಯಜಾಲೈ- । ರಾಚಾರ್ಯಮಾಶ್ಚರ್ಯ ಗುಣಾಧಿವಾಸಂ**
**॥8॥**

ಭಾವಾರ್ಥ - ಋಷಿ ಮುನಿಗಳಿಗೆ ಸೋಜಿಗವಾಗಿರುವ ಪರಮಾತ್ಮ ತತ್ವಗಳ ಅರ್ಥವನ್ನು ಉಪದೇಶ ಮಾಡುವ ಆಚಾರ್ಯ ಶೆರ್ೇಷ್ಠ ಸದ್ಗುರು ಶ್ರೀ ದಕ್ಷಿಣಾಮೂರ್ತಿಗೆ ನಾನು ನಮಸ್ಕರಿಸುವೆನು.

**ಏಕೇನ ಮುದ್ರಾಂ ಪರಶುಂ ಕರೇಣ । ಕರೇಣ ಚಾನ್ಯೇನ ಮೃಗಂ ದದಾನಃ ॥**
**ಸ್ವಜಾನು ವಿನ್ಯಸ್ತ ಕರಃ ಪುರಸ್ತಾ- । ದಾಚಾರ್ಯ ಚೂಡಾಮಣಿರಾವಿರಸ್ತು ॥9॥**

ಭಾವಾರ್ಥ - ಒಂದು ಹಸ್ತದಲ್ಲಿ ಜ್ಞಾನ ಮುದ್ರೆಯನ್ನು ಧರಿಸಿ ಮಗದೊಂದರಲ್ಲಿ ಪರಶುವನ್ನೂ ಹಿಡಿದು ಅಭಯ ಹಸ್ತನಾಗಿ ಮೊಣಕಾಲಿನ ತನಕ ಸಮ್ಮುಖನಾಗಿ ಆಚಾರ್ಯ ಶ್ರೇಷ್ಠ ಶ್ರೀ ದಕ್ಷಿಣಾಮೂರ್ತಿ ಅಲಂಕೃತಗೊಂಡವನಾಗಿದ್ದಾನೆ.

**ಅಲೇಪವಂತಂ ಮದನಾಂಗಭೂತ್ಯಾ । ಶಾರ್ದೂಲಕೃತ್ತ್ಯಾ ಹರಿದಾನವಂತಂ ॥**
**ಅಲೋಕಯೇ ಕಂಚನ ದೇಶಿಕೇಂದ್ರ- । ಮಜ್ಞಾನವಾರಾಕರಬಾಡಬಾಗ್ನಿಂ ॥10॥**

ಭಾವಾರ್ಥ - ವ್ಯಾಘ್ರದ ಚರ್ಮದಿಂದ ಅಂಗಾಂಗಗಳು ಅಲಂಕೃತವಾಗಿರುವ, ಅಜ್ಞಾನವನ್ನು ದಹಿಸುವ ಅಗ್ನಿಯೋಪಾದಿಯಲ್ಲಿ ಮಂಗಲದಾಯಕನಾದ ಅಗ್ರಗಣ್ಯ ಆಚಾರ್ಯ ಶ್ರೇಷ್ಠನನ್ನು ನೋಡುವವನಾಗು ಮನವೇ.

**ಚಾರುಸ್ಮಿತಂ ಸೋಮಕಲಾವತಂಸಂ । ವೀಣಾಧರಂ ವ್ಯಕ್ತ ಜಟಾಕಲಾಪಂ ॥**
**ಉಪಾಸತೇ ಕೇಚನ ಯೋಗಿನಸ್ತ್ವ- । ಮುಪಾತ್ತನಾದಾನುಭವ ಪ್ರಮೋದಂ ॥11॥**

ಭಾವಾರ್ಥ - ಮನೋಹರವಾಗಿರುವ ಚಂದ್ರನ ಪ್ರಕಾಶದಿಂದ ಹೊಳೆಯುವ, ವೀಣಾಪಾಣಿಯಾಗಿರುವ, ಜಟಾಧರನಾದ, ಮಧುರ ಧ್ವನಿಗಳ ಅನುಭವಿಸುವಿಕೆಯ ಹುರುಪನ್ನು ಕರುಣಿಸುವ ಯೋಗಿವರ್ಯ ಸದ್ಗುರು ಶ್ರೀ ದಕ್ಷಿಣಾಮೂರ್ತಿ ಸ್ವಾಮಿಯನ್ನು ನಾನು ಉಪಾಸಿಸುತ್ತೇನೆ.

**ಉಪಾಸತೇ ಯಂ ಮುನಯಃ ಶುಕಾದ್ಯಾ । ನಿರಾಶಿಷೋ ನಿರ್ಮಮತಾಧಿವಾಸಾಃ ॥**
**ತಂ ದಕ್ಷಿಣಾಮೂರ್ತಿತನುಂ ಮಹೇಶ- । ಮುಪಾಸ್ಮಹೇ ಮೋಹಮಹಾರ್ತಿ ಶಾಂತ್ಯೈ ॥12॥**

ಭಾವಾರ್ಥ - ಆಶಾಪಾಶವಿರಹಿತರಾದ ಶುಕಮುನಿಗಳೇ ಮೊದಲಾದ ಯೋಗಿ ಶ್ರೇಷ್ಠರುಗಳಿಂದ ಪೂಜಿಸಲ್ಪಡುವ, ಮಹಾಈಶ ಸ್ವರೂಪೀ ಸದ್ಗುರು ಶ್ರೀ ದಕ್ಷಿಣಾಮೂರ್ತಿಯನ್ನು ನನ್ನ ಭ್ರಾಂತಿಯನ್ನು ನಾಶಮಾಡಲೋಸುಗ ನಾನು ಆರಾಧಿಸುವೆನು.

**ಕಾಂತ್ಯಾ ನಿಂದಿತಕುಂದಕಂದರ್ಪ ನ್ಯಗ್ರೋಧಮೂಲೇ ವಸ- ।**
**ಸ್ಕಾರುಣ್ಯಾಮೃತವಾರಿಭಿರ್ಮುನಿಜನಂ ಸಂಭಾವಯನ್ವೀಕ್ಷಿತೈಃ ॥ ಮೋಹಾಧ್ವಾಂತ ವಿಭೇಧನಂ ವಿರಚಯನ್ಬೋಧೇನ ತತ್ತಾದೃಶಾ । ದೇವಸ್ತತ್ತ್ವಮಸೀತಿ ಬೋಧಯತು ಮಾಂ ಮುದ್ರಾವತಾ ಪಾಣಿನಾ ॥13॥**

ಭಾವಾರ್ಥ - ಸತಿಯಿಂದ ಕುತ್ಸಿತನಾಗಿ ಮನ್ಮಥನ ಶರವನ್ನು ದೂರೀಕರಿಸಿ ಆಲದಮರದ ತಳದಲ್ಲಿ ಜ್ಞಾನ ಮುದ್ರೆಯಿಂದ ಕುಳಿತಿರುವ ಆ ದಕ್ಷಿಣಾಮೂರ್ತಿ ಕಾರುಣ್ಯ ದೃಷ್ಟಿಯಿಂದ ಭಕ್ತರನ್ನು ನೋಡುತ್ತಾ ನನ್ನ ಆಶಾ ಪಾಶವನ್ನು ಕಳೆಯುವ "ಸಾಕ್ಷಾತ್ ನೀನೇ ಅದಾಗಿರುವೆ" ಎನ್ನುವ ಆ ಮಹಾ ತತ್ವವನ್ನು ಅನುಗ್ರಹಿಸುವವನಾಗು ಸದ್ಗುರುವೇ.

**ಅಗೌರ ನೇತ್ರೈರಲಲಾಟನೇತ್ರೈ- । ರಶಾಂತವೇಷ್ಟೈರಭುಜಂಗ ಭೂಷೈಃ ॥**
**ಅಬೋಧಮುದ್ರೈರನಪಾಸ್ತ ನಿದ್ರೈ- । ರಪೂರಕಾಮೈರಮರೈರಲಂ ನಃ ॥14॥**

ಭಾವಾರ್ಥ - ಪ್ರಶಾಂತಭಾವದಿಂದ ಕುಂದಿದ ಗೌರವರ್ಣದ ಕಣ್ಣಾಲಿಗಳು, ಹಾಗೂ ಹಣೆಯಲ್ಲಿ ಮೂರುಕಣ್ಣುಗಳನ್ನು ಹೊಂದಿದವನಾಗಿ, ಸರ್ಪಭೂಷಿತನಾಗಿ ಭಕ್ತರ ಅಭೀಷ್ಟಗಳನ್ನು ದಯಪಾಲಿಸುವ ಯೋಗ ನಿದ್ರೆಯಲ್ಲಿ, ಬೋಧಿಸುವ ಮುದ್ರೆಯಿಂದ ಕೂಡಿರುವ ಆ ಸದ್ಗುರು ದಕ್ಷಿಣಾಮೂರ್ತಿಗೆ ನಾನು ನಮಸ್ಕರಿಸುವೆನು.

**ದೈವತಾನಿ ಕತಿ ಸಂತಿ ಚಾವನೌ । ನೈವ ತಾನಿ ಮನಸೋ ಮತಾನಿ ಮೇ ॥**
**ದೀಕ್ಷಿತಂ ಜಡಧಿಯಾ ಮನುಗ್ರಹೇ । ದಕ್ಷಿಣಾಭಿಮುಖಮೇವ ದೈವತಂ ॥15॥**

ಭಾವಾರ್ಥ - ಚೈತನ್ಯಹೀನವಾಗಿರುವ ನನ್ನ ಮನಸ್ಸಿಗೆ ಧೈರ್ಯ ತುಂಬಲು ಕಟಿಬದ್ಧನಾಗಿರುವ ವನ ಸಂಚಾರಿಯಾದ ಆ ಸದ್ಗುರು ದೇವ ಶ್ರೀ ದಕ್ಷಿಣಾಮೂರ್ತಿಗೆ ನಾನು ನಮಸ್ಕರಿಸುವೆನು.

**ಮುದಿತಾಯ ಮುಗ್ಧರಶಿನಾವತಂಸಿನೇ । ಭಸಿತಾವಲೇಪರಮಣೀಯಮೂರ್ತಯೇ ॥**
**ಜಗದಿಂದ್ರಜಾಲರಚನಾ ಪಟೀಯಸೇ । ಮಹಸೇ ನಮೋಽಸ್ತು ವಟಮೂಲವಾಸಿನೇ ॥16॥**

ಭಾವಾರ್ಥ - ಸುಂದರನೂ, ಹರ್ಷಿತನೂ ಆಗಿ ತನ್ನ ಜಾದೂಆಟದಿಂದ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳಿಗೆ ಮಾಂತ್ರಿಕನ ಸ್ವರೂಪದಂತಿರುವ, ಶ್ರೇಷ್ಠನಾಗಿರುವ, ಭಸ್ಮ ಲೇಪಿತನಾಗಿ ಮನೋಹರನಾಗಿರುವ, ಅರಳಿಮರದ ಬುಡದ ನಿವಾಸಿಯಾಗಿರುವ ಆ ಸದ್ಗುರು ದೇವ ದಕ್ಷಿಣಾಮೂರ್ತಿಗೆ ನಾನು ನಮಸ್ಕರಿಸುವೆನು.

**ವ್ಯಾಲಂಬಿನೀಭಿಃ ಪರಿತೋ ಜಟಾಭಿಃ । ಕಲಾವಶೇಷಣ ಕಲಾಧರೇಣ ॥**
**ಪಶ್ಯಲ್ಲಲಾಟೇನ ಮುಖೇಂದ್ಯುನಾ ಚ । ಪ್ರಕಾಶಸೇ ಚೇತಸ ನಿರ್ಮಲಾನಾಂ ॥17॥**

ಭಾವಾರ್ಥ - ಬಿಲ್ಲು ಮೊದಲಾದ ಆಯುಧಗಳನ್ನು ಹಿಡಿದು ನಾಗ ಮತ್ತು ಚಂದ್ರರಿಂದ ಅಲಂಕರಿಸಲ್ಪಟ್ಟ, ಜಟೆಯನ್ನು ಧರಿಸಿದವನಾದ, ವಿಷೇಷವಾಗಿ ಹಣೆಯಲ್ಲಿ ಮೂರನೇ ಕಣ್ಣನ್ನು ಹೊಂದಿರುವ ಮನಮೋಹಕನಾದ ಆ ಸದ್ಗುರುದೇವ ದಕ್ಷಿಣಾಮೂರ್ತಿಗೆ ನಾನು ನಮಸ್ಕರಿಸುವೆನು.

**ಉಪಾಸಕಾನಾಂ ತ್ವಮುಮಾಸಹಾಯಃ । ಪೂರ್ಣೇಂದುಭಾವಂ ಪ್ರಕಟೀಕರೋಷಿ ॥**
**ಯದರ್ಯ ತೇ ದರ್ಶನ ಮಾತ್ರತೋ ಮೇ । ದ್ರವತ್ಯಹೋ ಮಾನಸ ಚಂದ್ರ ಕಾಂತಃ ॥18॥**

ಭಾವಾರ್ಥ - ಸತಿ ಉಮಾ ಸಮೇತನಾಗಿ, ಪೌರ್ಣಿಮೆಯ ಚಂದ್ರನಂತೆ ಪ್ರಕಾಶಯುತನಾಗಿ, ಸಾಧಕರಿಗೆ ಮನಸಿನಲ್ಲಿಯೇ ದರ್ಶನ ಭಾಗ್ಯವನ್ನು ಕರುಣಿಸುತ್ತಾ ಅವರ ಪಾಪಗಳನ್ನು ಕಳೆಯುವ ಆ ಸದ್ಗುರು ದೇವ ದಕ್ಷಿಣಾಮೂರ್ತಿಗೆ ನಾನು ನಮಸ್ಕರಿಸುವೆನು.

**ಯಸ್ತೇ ಪ್ರಸನ್ನಾ ಮನುಸಂದಧಾನೋ । ಮೂರ್ತಿಂ ಮುದಾ ಮುಗ್ಧ ಶಶಾಂಕ ಮೌಲೇಃ ॥ ಐಶ್ವರ್ಯಮಾಯುರ್ಲಭತೇ ಚ ವಿದ್ಯಾ- । ಮಂತೇ ಚ ವೇದಾಂತಮಹಾರಹಸ್ಯಂ ॥19॥**

ಭಾವಾರ್ಥ - ಮಂದಸ್ಮಿತನಾಗಿ, ಪ್ರಸನ್ನ ಮನೋಭಾವದಿಂದ ಕೂಡಿ, ಶ್ರದ್ಧಾ ಭಕ್ತಿಯಿಂದ ಸುಂದರನಾಗಿರುವ ದೇವನ, ಈ ದಕ್ಷಿಣಾಮೂರ್ತಿ ಸ್ತೋತ್ರಗಳನ್ನು ಧ್ಯಾನ ಮಾಡುವುದರಿಂದ ಐಶ್ವರ್ಯ, ಆಯುಸು, ವಿದ್ಯೆಗಳೊಂದಿಗೆ ವೇದಾಂತದ ಶ್ರೇಷ್ಟರಹಸ್ಯವು ಲಭಿಸುತ್ತದೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀದಕ್ಷಿಣಾಮೂರ್ತಿ ಸ್ತೋತ್ರಂ ಸಂಪೂರ್ಣಂ ॥

## 6.16 ದಶಶ್ಲೋಕೀ ಸಾಂಬ ಸ್ತುತಿಃ

**ಸಾಂಬೋ ನಃ ಕುಲದೈವತಂ ಪಶುಪತೇ ಸಾಂಬ ತ್ವದೀಯಾ ವಯಂ ।**
**ಸಾಂಬಂ ಸ್ತೌಮಿ ಸುರಾಸುರೋರಗಗಣಾಃ ಸಾಂಬೇನ ಸಂತಾರಿತಾಃ ॥**

**ಸಾಂಬಾಯಾಸ್ತು ನಮೋ ಮಯಾ ವಿರಚಿತಂ ಸಾಂಬಾತ್ಪರಂ ನೋ ಭಜೇ ।**
**ಸಾಂಬಸ್ಯಾನುಚರೋಽಸ್ಮ್ಯಹಂ ಮಮ ರತಿಃ ಸಾಂಬೇ ಪರಬ್ರಹ್ಮಣಿ ॥1॥**

ಭಾವಾರ್ಥ - ಸಾಂಬನಿಗಿಂತ ಅನ್ಯ ಕುಲದೇವರು ನನಗಿಲ್ಲ. ಸಾಂಬನೇ, ನಾನು ನಿನ್ನವನು. ನಾನು ಸಾಂಬನನ್ನು ಸ್ತುತಿಸುತ್ತಿರುವೆನು. ದೇವ-ದಾನವ-ನಾಗ-ಗಣಗಳು ಸಾಂಬನಿಂದ ರಕ್ಷಿಸಲ್ಪಡುತ್ತಿವೆ. ಸಾಂಬ ಸ್ತುತಿಯನ್ನು ನಾನು ರಚಿಸಿದ್ದಾಗಿದೆ. ಸಾಂಬನಿಗೆ ನಾನು ನಮಸ್ಕರಿಸುತ್ತಿರುವೆ. ಸಾಂಬನ ಹೊರತಾಗಿ ಅನ್ಯರನ್ನು ನಾನು ಭಜಿಸಲಾರೆ. ನಾನು ಸಾಂಬನ ಸೇವಕನಾಗಿರುವೆನು. ಆ ಪರಬ್ರಹ್ಮ ಸ್ವರೂಪನಾದ ಸಾಂಬನಲ್ಲಿ ನನ್ನ ಏಕಚಿತ್ತವೂ ಒಲುಮೆಯೂ ಸ್ಥಿರವಾಗಿದೆ.

**ವಿಷ್ಣ್ವಾದ್ಯಾಶ್ಚ ಪುರತ್ರಯಂ ಸುರಗಣಾ ಜೇತುಂ ನ ಶಕ್ತಾಃ ಸ್ವಯಂ ।**
**ಯಂ ಶುಭಂ ಭಗವನ್ವಯಂ ತು ಪಶವೋಽಸ್ಮಾಕಂ ತ್ವಮೇಮೇಶ್ವರಃ ॥**

**ಸ್ವಸ್ವಸ್ಥಾನ ನಿಯೋಜಿತಾಃ ಸಮನಸಃಸ್ವಸ್ಥಾ ಬಭೂವುಸ್ತತಾ ।**
**ಸ್ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥2॥**

ಭಾವಾರ್ಥ - ವಿಷ್ಣುವೇ ಆದಿಯಾಗಿ ಸಮಸ್ತ ದೇವತೆಗಳಿಂದಲೂ ತ್ರಿಪುರಗಳನ್ನು ಜೈಸಲು ಅಸಾಧ್ಯವಾಗಿ ಯಾವ ಶಂಭುವನ್ನು " ಸ್ವಾಮಿ ಭಗವಂತನೇ, ನಾವು ಕೇವಲ ಪಷು ಸಮಾನರು. ಪರಮಾತ್ಮನಾದ ನೀನೇ ನಮ್ಮ ದೊರೆಯಾಗಿರುವೆ. ನಮ್ಮನ್ನು ಕಾಪಾಡುವ ಹೊಣೆ ನಿನ್ನದಾಗಿದೆ" ಎಂಬುದಾಗಿ ಮೊರೆಯಿಟ್ಟು ತಮ್ಮ ಸ್ವಸ್ಥಾನದಲ್ಲಿ ನಿಶ್ಚಿಂತರಾದರೋ ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ಕ್ಷೋಣೀ ಮಸ್ಯರಥೋ ರಥಾಂಗಯುಗಲಂ ಚಂದ್ರಾರ್ಕಬಿಂಬದ್ವಯಂ ।**
**ಕೋದಂಡಃ ಕನಕಾಚಲೋ ಹರಿರಭೂದ್ಬಾಣೋ ವಿಧಿಃ ಸಾರಥಿಃ ॥**

**ತೂಣೀರೋ ಜಲಧಿರ್ಹಯಾಃ ಶ್ರುತಿ ಚ ಯೋ ಮೌರ್ವೀ ಭುಜಂಗಾಧಿಪ ।**
**ಸ್ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥3॥**

ಭಾವಾರ್ಥ - ಜಗತ್ತು ಯಾವಾತನ ರಥವಾಗಿರುವುದೋ, ರವಿ ಚಂದ್ರರ ಬಿಂಬದ್ವಯಗಳು ಯಾರ ರಥದ ಚಕ್ರಗಳಾಗಿವೆಯೋ ಕನಕಾಚಲವು ಯಾವಾತನ ಧನುಸ್ಸಾಗಿದೆಯೋ, ಹರಿಯೇ ಯಾರ ಧನುಸ್ಸಿಗೆ ಬಾಣವಾದನೋ, ಬ್ರಹ್ಮನು ಯಾವಾತನಿಗೆ ಸಾರಥಿಯಾದನೋ, ಸಾಗರವು ಯಾರಿಗೆ ಬತ್ತಳಿಕೆಯಾಯಿತೋ, ಯಾರಿಗೆ ಶೃತಿಗಳೇ ಕುದುರೆಗಳಾದವೋ, ಆದಿಶೇಷನು ಯಾರ ಬಿಲ್ಲಿಗೆಹಗ್ಗವಾದನೋ ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ಗೋವಿಂದಾಧಿಕಂ ನ ದೈವಮಿತಿ ಪ್ರೋಚ್ಚಾರ್ಯ ಹಸ್ತಾವುಭಾ ।**
**ವುದ್ಧೃತ್ಯಾಥ ಶಿವಸ್ಯ ಸನ್ನಿಧಿಗತೋ ವ್ಯಾಸೋ ಮುನೀನಾಂ ವರಃ ॥**

**ಯಸ್ಯ ಸ್ತಂಬಿತ ಪಾಣಿರಾನತಿಕೃತಾ ನಂದೀಶ್ವರೇಣಾಭವ ।**
**ತ್ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥4॥**

ಭಾವಾರ್ಥ - ಅಗ್ರಗಣ್ಯ ಮುನಿಶ್ರೇಷ್ಠರಾದ ಬಾದರಾಯಣರು ಗೋವಿಂದನಿಗಿಂತ ಯೋಗ್ಯ ದೇವರಿಲ್ಲ ಎಂಬುದಾಗಿ ತನ್ನೆರಡೂ ಕೈಗಳನ್ನು ಮೇಲೆತ್ತಿ ಪರಮೋಚ್ಚ ಸ್ವರದಿಂದ ಭಜಿಸುತ್ತಾ ಶಿವನ ಸಮೀಪಕ್ಕೆ ಬಂದಾಗ ಯಾವಾತನ ಹಸ್ತಗಳು ಸಾಂಬನಿಂದ ತಡೆಹಿಡಿಯಲ್ಪಟ್ಟವೋ ಅವು ಯಾವ ನಂದೀಶ್ವರನ ದಯೆಯಿಂದ ಮತ್ತೆ ಯಥಾಸ್ಥಿತಿಗೆ ತಲಪಿದವೋ ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ಯೇನಾ ಪಾದಿತ ಮಂಗಜಾಂಗಭಸಿತಂ ದಿವ್ಯಾಂಗರಾಗೈಃ ಸಮಂ ।**
**ಯೇನ ಸ್ವೀಕೃತಮಬ್ಜಸಂಭವಶಿರಃ ಸೌವರ್ಣಪಾತ್ರೈಃ ಸಮಂ ॥**

**ಯೇನಾಂಗೀಕೃತಮಚ್ಚ್ಯುತಸ್ಯನಯನಂ ಪೂಜಾರವಿಂದೈಃ ಸಮಂ ।**
**ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥5॥**

ಭಾವಾರ್ಥ - ಆಪಾದನೆಗೊಳಗಾಗಿದ್ದ ಮನ್ಮಥನ ಚಿತಾ ಭಸ್ಮವು ಯಾರ ಶರೀರಕ್ಕೆ ಲೇಪಿಸಿಕೊಳ್ಳುವ ಮೂಲಕ ಸುಗಂಧ ಭರಿತವಾಯಿತೋ, ಯಾವಾತನಿಂದ ಚತುರ್ಮುಖ ಬ್ರಹ್ಮನ ಶಿರವು ಸುವರ್ಣ ಪಾತ್ರೆಗೆ ಸಮಾನವಾಗಿ ಸ್ವೀಕರಿಸಲ್ಪಟ್ಟಿತೋ, ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ಆಕಾಶಶ್ಚಿಕುರಾಯತೇ ದಶದಿಶಾಭೋಗೋ ದುಕೂಲಾಯತೇ ।**
**ಶೀತಾಂಶುಃ ಪ್ರಸವಾಯತೇ ಸ್ಥಿರತರಾನಂದಃ ಸ್ವರೂಪಾಯ ತೇ ॥**

**ವೇದಾಂತೋ ನಿಲಯಾಯ ತೇ ಸುವಿನಯೋ ಯಸ್ಯ ಸ್ವಭಾವಾಯ ತೇ ।**
**ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥6॥**

ಭಾವಾರ್ಥ - ಆಕಾಶವೇ ಶಿರದ ಮೇಲಿನ ಕೂದಲಿನ ರೂಪದಲ್ಲಿರುವವನೂ, ದಶದಿಕ್ಕುಗಳನ್ನು ಉಡುಪಾಗಿ ಅನುಭವಿಸುವಾತನೂ, ಚಂದ್ರನನ್ನು ಪುಷ್ಪದೋಪಾದಿಯಲ್ಲಿ ಧರಿಸಿರುವವನೂ, ನಿತ್ಯಾನಂದ ರೂಪನೂ, ವೇದಾಂತಗಳನ್ನು ತನ್ನ ನೆಲೆಯಾಗಿಸಿಕೊಂಡವನೂ, ಉತ್ತಮ ವಿನಯ ಸ್ವಭಾವದವನೂ ಆದಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ವಿಷ್ಣುರ್ಯಸ್ಯ ಸಹಸ್ರನಾಮ ನಿಯಮಾದಂಭೋರುಹಾಣ್ಯರ್ಚಯ ।**
**ನ್ನೇಕೋನೋಪಚಿತೇಷು ನೇತ್ರ ಕಮಲಂ ನೈಜಂ ಪದಾಬ್ಜದ್ವಯೇ ॥**

**ಸಂಪೂಜ್ಯಾ ಸುರಸಂಹರತಿಂ ವಿದಲಯಂಸ್ತ್ರೈಲೋಕ್ಯ ಪಾಲೋಭವ।**
**ತ್ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥7॥**

ಭಾವಾರ್ಥ - ಶ್ರೀಹರಿಯು ಸಹಸ್ರನಾಮಗಳಿಂದ ಕಮಲಪುಷ್ಪಗಳ ಮೂಲಕ ಪರಶಿವನ ಅರ್ಚನೆಯನ್ನು ಕೈಗೊಳ್ಳುವಾಗ ಒಂದು ಕಮಲವು ಕಡಿಮೆಯಾಗಲಾಗಿ ತಾವರೆಯಂತಿರುವ ತನ್ನ ಕಣ್ಣನ್ನು ಭಕ್ತಿಯಿಂದ ಶಿವನ ಚರಣಾರವಿಂದಗಳಿಗೆ ಅರ್ಪಿಸಿ ಆರಾಧಿಸಿದ ಕಾರಣ ದೈತ್ಯ ದಾನವರನ್ನು ಸಂಹರಿಸಿ ತ್ರೈಲೋಕಾಧಿಪತಿಯಾದನು. ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ಶೌರಿಂ ಸತ್ಯಗಿರಿಂ ವರಾಹವಪುಷಂ ಪಾದಾಂಬುಜಾ ದರ್ಶನೇ ।**
**ಚಕ್ರೇಯೋ ದಯಯಾ ಸಮಸ್ತ ಜಗತಾಂ ನಾಥ ಶಿರೋ ದರ್ಶನೇ ॥**

**ಮಿಥ್ಯಾ ವಾಚಮ ಪೂಜ್ಯಮೇವ ಸತತಂ ಹಂಸ ಸ್ವರೂಪಂ ವಿಧಿಃ ।**
**ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥8॥**

ಭಾವಾರ್ಥ - ಪರಾಕ್ರಮಿಯೂ ಸತ್ಯವಂತನೂ ಆದ ವರಾಹರೂಪೀ ಶ್ರೀಹರಿಯು ಪರಶಿವನ ಚರಣಾರವಿಂದಗಳ ದರ್ಶನಕ್ಕಾಗಿ ಅಸತ್ಯ ನುಡಿದ ಕಾರಣ ಹಂಸ ಸ್ವರೂಪೀ ಬ್ರಹ್ಮನು ನಿರಂತರ ಆರಾಧನೆಗೆ ಅನರ್ಹನಾದನು. ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ಯಸ್ಯಾಸನ್ ಧರಣೀ ಜಲಾಗ್ನಿ ಪವನ ವ್ಯೋಮಾರ್ಕ ಚಂದ್ರಾದಯೋ ।**
**ವಿಖ್ಯಾತಾಸ್ತನವೋಽಷ್ಟಧಾ ಪರಿಣತಾ ನಾನ್ಯತ್ತತೋ ವರ್ತತೇ ॥**

**ಓಂಕಾರಾರ್ಥ ವಿವೇಚನೀ ಶೃತಿರಿಯಂ ಚಾಚಷ್ಟ ತುರ್ಯಂ ಶಿವಂ ।**
**ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥9॥**

ಭಾವಾರ್ಥ - ಯಾವಾತನಿಗೆ ಭೂಮಿ, ಬೆಂಕಿ, ಗಾಳಿ, ಆಕಾಶ, ರವಿ, ಚಂದ್ರರೆಂಬ ಶರೀರಗಳಿವೆಯೋ, ಅವುಗಳಿಗಿಂತ ಅನ್ಯ ಇಲ್ಲವೋ, ಓಂಕಾರದ ಅರ್ಥ ಮನಗಾಣಿಸುವ ವೇದಗಳು ಶಿವನನ್ನು ನಾಲ್ಕನೇಯ ಇರುವಿಕೆಯವನೆಂದು ಗುರುತಿಸಿವೆಯೋ ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಕರಣವು ಸಂತಸದಿಂದ ಕ್ರೀಡಿಸಲಿ.

**ವಿಷ್ಣು-ಬ್ರಹ್ಮ-ಸುರಾಧಿಪ-ಪ್ರಭೃತಯಃ ಸರ್ವೇಽಪಿ ದೇವಾ ಯದಾ ।**
**ಸಂಭೂತಾಜ್ಜಲಧೇರ್ವಿಷಾತ್ಪರಿಭವಂ ಪ್ರಾಪ್ತಾಸ್ತದಾ ಸತ್ವರಂ ॥**

**ತಾನಾರ್ತಾನ್ ಶರಣಾಗತಾನಿತಿ ಸುರಾನ್ಯೋಽ ರಕ್ಷದರ್ಧಕ್ಷಣಾ ।**
**ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥10॥**

ಭಾವಾರ್ಥ - ವಿಷ್ಣು ಬ್ರಹ್ಮ ಇಂದ್ರಾದಿ ದೇವದೇವತೆಯರೆಲ್ಲರೂ ಸಮುದ್ರಮಥನದಿಂದ ಹುಟ್ಟಿದ ಹಾಲಾಹಲವೆಂಬ ಘೋರ ವಿಷದಿಂದ ಪರಾಜಯ ಹೊಂದಲಾಗಿ ತನಗೆ ಶರಣು ಬಂದ ಕಾರಣ ವಿಪತ್ತಿಗೊಳಗಾಗಿರುವ ಅವರುಗಳನ್ನು ಯಾವ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಕಾಪಾಡಿದನೋ ಅಂತಹಾ ಪರಬ್ರಹ್ಮ ಸ್ವರೂಪೀ ಶಂಭುವಿನಲ್ಲಿ ನನ್ನ ಅಂತಃಕರಣವು ಸಂತಸದಿಂದ ಕ್ರೀಡಿಸಲಿ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ದಶಶ್ಲೋಕೀ ಸಾಂಬಸ್ತುತಿಃ ಸಂಪೂರ್ಣಂ ॥

## 6.17 ಶಿವಾಪರಾಧ ಕ್ಷಮಾಪಣ ಸ್ತೋತ್ರಂ

**ಆದೌ ಕರ್ಮ ಪ್ರಸಂಗಾತ್ಕಲಯತಿ ಕಲುಷಂ ಮಾತೃಕುಕ್ಷೌ ಸ್ಥಿತಂ ಮಾಂ ।**
**ವಿಣ್ಮೂತ್ರಾಮೇಧ್ಯಮಧ್ಯೇ ಕ್ವಥಯತಿ ನಿತರಾಂ ಜಾಠರೋ ಜಾತವೇದಾಃ ॥**

**ಯದ್ಯದ್ವೈ ತತ್ರ ದುಃಖಂ ವ್ಯಥಯತಿ ನಿತರಾಂ ಶಕ್ಯತೇ ಕೇನ ವಕ್ತುಂ- ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥1॥**

ಭಾವಾರ್ಥ - ಪೂರ್ವ ಜನ್ಮದಲ್ಲಿ ನಾನು ಮಾಡಿದ್ದ ಪಾಪ ಕರ್ಮಗಳ ಫಲವಾಗಿ ತಾಯಿಯ ಗರ್ಭದಲ್ಲಿ ಆ ಪಾಪ ಲೇಪಗಳು ನನ್ನನ್ನು ಬಹುವಾಗಿ ಕಾಡಿದವು. ಅಲ್ಲಿನ ಮಲ ಮೂತ್ರಾದಿ ಕಲ್ಮಷಗಳಲ್ಲಿ ನಾನು ಕಲುಷಿತನಾಗಿರಬೇಕಾಯಿತು. ತಾಯಿಯ ಜಠರಾಗ್ನಿಯು ನನ್ನನ್ನು ಬಹುವಾಗಿ ಬೇಯಿಸಿತು. ಅಲ್ಲಿ ನಾನೇನೇನು ಕಷ್ಟ ಕೋಟಲೆಗಳನ್ನು ಅಲ್ಲಿ ಅನುಭವಿಸಬೇಕಾಗಿ ಬಂತು ಎಂಬುದನ್ನು ಆರಿಂದ ತಾನೇ ವರ್ಣಿಸಲು ಸಾಧ್ಯ? ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ, ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಬಾಲ್ಯೇ ದುಃಖಾತಿರೇಕೋ ಮಲಲುಲಿತವಪುಃ ಸ್ತನ್ಯಪಾನೇ ಪಿಪಾಸಾ ।**
**ನೋ ಶಕ್ತಶ್ಚೇಂದ್ರಿಯೇಭ್ಯೋ ಭವಗುಣಜನಿತಾ ಜಂತವೋಮಾಂ ತುದಂತಿ॥**
**ನಾನಾರೋಗಾತಿದುಃಖಾದ್ರುದನಪರವಶಃ ಶಂಕರಂ ನ ಸ್ಮರಾಮಿ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥2॥**

ಭಾವಾರ್ಥ - ಬಾಲ್ಯದಲ್ಲಿ ನನ್ನಲ್ಲಿ ದುಃಖಗಳು ಅತಿಯಾಗಿದ್ದವು. ಮಲ ಮೆತ್ತಿದ ಶರೀರ, ಸದಾ ಸ್ತನ್ಯ ಪಾನದ ಬಲವಾಗಿದ್ದ ಬಯಕೆ, ನನ್ನ ಇಂದ್ರಿಯಗಳನ್ನು ನಾನೇ ನಿಗ್ರಹಿಸಿಕೊಳ್ಳಲಾಗದ ದುರ್ಬಲತೆ, ಅದರೊಂದಿಗೆ ತಾವು ಪೂರ್ವ ಜನ್ಮದಲ್ಲಿ ಮಾಡಿದ್ದ ಪಾಪಶೇಷಗಳ ಫಲದಿಂದ ಜನಿಸಿದ ಸೊಳ್ಳೆ, ನೊಣ, ಮೊದಲಾದ ಜಂತುಗಳು ನನ್ನನ್ನು ಬಹಳವಾಗಿ ಕಾಡಿದವು. ವಿವಿಧ ರೋಗಗಳು ನನ್ನನು ಬಾಧಿಸಿ ಅದರಿಂದಾಗಿ ನಾನು ರೋದಿಸುತ್ತಾ ಕೇವಲ ಸ್ವತಂತ್ರ ರಹಿತನಾಗಿ ಪರರ ವಶವರ್ತಿಯಾಗಿದ್ದೆ. ಇದರಿಂದಾಗಿ ನಾನು ಶಂಕರನನ್ನು ಸ್ಮರಣೆ ಮಾಡಲಿಲ್ಲ. ಹಾಗಾಗಿ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ,ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಪ್ರೌಢೋಽಹಂ ಯೌವನಸ್ಥೋ ವಿಷಯವಿಷಧರೈಃ ಪಂಚಭಿರ್ಮರ್ಮಸಂಧೌ ।**
**ದಷ್ಟೋ ನಷ್ಟೋ ವಿವೇಕಃಸುತಧನ ಯುವತಿಸ್ವಾದಸೌಖ್ಯೇ ನಿಷಣ್ಣಾಃ ॥**

**ಶೈವೀಚಿಂತಾವಿಹೀನಂ ಮಮಹೃದಯಮಹೋ ಮಾನಗರ್ವಾಧಿ ರೂಢಂ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥3॥**

ಭಾವಾರ್ಥ - ನಾನು ಬೆಳೆದು ಯುವಕನಾದಾಗ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆನ್ನುವ ಐದು ವಿಷ ಸರ್ಪಗಳು ನನ್ನ ಜೀವಸ್ಥಾನವನ್ನು ಕಚ್ಚಿದವು. ಈ ಕಾರಣದಿಂದಾಗಿ ನನ್ನಲ್ಲಿ ವಿವೇಕವೆಂಬುದು ಶೂನ್ಯವಾಯಿತು. ಕೇವಲ ಪತ್ನಿ ಮಕ್ಕಳು ಸಂಪತ್ತುಗಳ ಸುಖಾನುಭವದಲ್ಲಿಯೇ ಮಗ್ನನಾಗಿ ಕಾಲಕಳೆದೆ. ಈಶ್ವರೀಯ ಶಕ್ತಿಯ ಚಿಂತಾ ವಿಹೀನನಾದ ನನ್ನ ಹೃದಯದ ಪೂರ್ತಿ ಅಯ್ಯೋ! ಸೊಕ್ಕು ದರ್ಪಗಳಿಂದ ತುಂಬಿಕೊಂಡಿತು. ಸ್ವಾಮೀ, ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ವಾರ್ಧಕ್ಯೇಚೇಂದ್ರಿಯಾಣಾಂ ವಿಕತಗತಿಮತಿಶ್ಚಾಧಿದೈವಾದಿ ತಾಪೈಃ ।**
**ಪ್ರಾಪ್ತೈರೋಗೈರ್ವಿಯೋಗೈರ್ವ್ಯಸನಕೃಶತನೋರ್ಜ್ಞಪ್ತಿಹೀನಂಚ ದೀನಂ ॥**

**ಮಿಥ್ಯಾಮೋಹಾಭಿಲಾಷೈರ್ಭ್ರಮತಿ ಮಮ ಮನೋ ಧೂರ್ಜಟೇರ್ಧ್ಯಾನ ಶೂನ್ಯಂ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥4॥**

ಭಾವಾರ್ಥ - ಈ ನನ್ನ ಮುಪ್ಪಿನ ಸಮಯದಲ್ಲಿ ಇಂದ್ರಿಯಗಳ ಚಲನೆ, ಶಕ್ತಿ, ಮತ್ತು ನಿರ್ಣಯಗಳು ಕುಂಠಿತಗೊಂಡಿವೆ. ಇಷ್ಟದೇವತೆಯ ಕೋಪತಾಪಗಳಿಂದ ಪ್ರಾಪ್ತವಾಗಿರುವ ರೋಗ, ವಿಯೋಗಾದಿ ಮನೋವ್ಯಥೆಗಳ ಕಾರಣದಿಂದ ಶರೀರಶಕ್ತಿಯು ಇಳಿಮುಖವಾಗಿ ನನ್ನ ಜ್ಞಾನಶಕ್ತಿಯು ನಾಶವಾಗಿ ದುಃಖವನ್ನು ಅನುಭವಿಸುತ್ತಿದೆ. ಆದರೂ ಈ ನನ್ನ ಮನಸ್ಸು ಧೂರ್ಜಟಿಯನ್ನು ಧ್ಯಾನ ಮಾಡದೆ ವ್ಯರ್ಥವಾದ ಮೋಹಾಭಿಲಾಷೆಗಳ ಬೆನ್ನು ಹತ್ತಿ ತಿರುಗುತ್ತಿದೆ. ಆದ ಕಾರಣ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಸ್ನಾತ್ವಾ ಪ್ರತ್ಯೂಷಕಾಲೇ ಸ್ನಪನವಿಧಿವಿಧೌ ನಾಹೃತಂ ಗಾಂಗತೋಯಂ ।**
**ಪೂಜಾರ್ಥಂ ವಾ ಕದಾಚಿದ್ಬಹುರಗಹನಾತ್ ಅಖಂಡಬಿಲ್ವೀದಲಂವಾ ॥**

**ನಾನೀತಾ ಪದ್ಮಮಾಲಾ ಸರಸಿ ವಿಕಸಿತಾ ಗಂಧಧೂಪೈಸ್ತ್ವದರ್ಥಂ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥5॥**

ಭಾವಾರ್ಥ - ಉಷಃಕಾಲದಲ್ಲಿ ನಿತ್ಯನೈಮಿತ್ತಿಕಾದಿಗಳನ್ನು ಮುಗಿಸಿ, ಸ್ನಾನ ಮಾಡಿ ವಿಧಿಯುಕ್ತವಾಗಿ ನಿನ್ನ ಅಭಿಷೇಕಕ್ಕಾಗಿ ಗಂಗಾಜಲವನ್ನು ನಾನೆಂದೂ ತಂದವನಲ್ಲ. ಅಥವಾ ದಟ್ಟ ಕಾನನದೊಳಗೆ ಸಾಗಿ ನಿನ್ನ ಆರಾಧನೆಗಾಗಿ ತುಂಡಾಗದ ಬಿಲ್ವದಳನ್ನು ಅಕಸ್ಮಾತ್ತಾಗಿ ಕೂಡಾ ನಾನೆಂದೂ ಕೊಯಿದು ತಂದವನಲ್ಲ. ಸರೋವರದಲ್ಲಿ ಅರಳಿರುವ ಕಮಲ ಪುಷ್ಪಗಳನ್ನು ತಂದು ಗಂಧಾಧೂಪಗಳೊಂದಿಗೆ ನಿನಗರ್ಪಿಸುವ ಕಾರ್ಯವನ್ನು ನಾನೆಂದೂ ಮಾಡಿದವನಲ್ಲ. ಆದ ಕಾರಣ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ, ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ದುಗ್ಧೈರ್ಮರ್ಧ್ವಾಜ್ಯಯುಕ್ತೈರ್ದಧಿಗುಡಸಹಿತೈಃ ಸ್ನಾಪಿತಂ ನೈವ ಲಿಂಗಂ ।**
**ನೋ ಲಿಪ್ತಂ ಚಂದನಾದ್ಯೈಃ ಕನಕ ವಿರಚಿತೈಃ ಪೂಜಿತಂ ನ ಪ್ರಸೂನೈಃ ॥**

**ಧೂಪೈಃಕರ್ಪೂರದೀಪೈರ್ವಿವಿಧರಸಯುತೈರ್ನೈವ ಭಕ್ಷ್ಯೋಪಹಾರೈಃ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥6॥**

ಭಾವಾರ್ಥ - ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆಗಳಿಂದ ನಾನೆಂದೂ ಶಿವಲಿಂಗಕ್ಕೆ ಪಂಚಾಮೃತಾಭಿಶೇಕವನ್ನು ಮಾಡಿದವನಲ್ಲ. ಶ್ರೀಚಂದನಾದಿ ಪರಿಮಳಭರಿತ ದ್ರವ್ಯಗಳನ್ನು ನಾನೆಂದೂ ಶಿವಲಿಂಗಕ್ಕೆ ಲೇಪಿಸಿದವನಲ್ಲ. ಎಂದೂ ಸುವರ್ಣ ಪುಷ್ಪಗಳಿಂದ ಅರ್ಚಿಸಲಿಲ್ಲ. ಧೂಪದಿಂದಾಗಲೀ ಕರ್ಪೂರ ದೀಪದಿಂದಾಗಲೀ ನಾನೆಂದೂ ಆರತಿಯನ್ನು ಬೆಳಗಿದವನಲ್ಲ. ರಸಭರಿತವಾಗಿರುವ ಭಕ್ಷ್ಯಭೋಜ್ಯಗಳನ್ನು ನಾನೆಂದೂ ನಿವೇದಿಸಿದವನಲ್ಲ. ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ನೋ ಶಕ್ಯಂ ಸ್ಮಾರ್ತಕರ್ಮ ಪ್ರತಿಪದಗಹನೇ ಪ್ರತ್ಯವಾಯಾಕುಲಾಢ್ಯೇ ।**
**ಶ್ರೌತೇ ವಾರ್ತಾ ಕಥಂ ಮೇ ದ್ವಿಜಕುಲವಿಹಿತೇ ಬ್ರಹ್ಮ ಮಾರ್ಗಾನುಸಾರೇ ॥**

**ತತ್ವೇಽ ವಿಚಾರೈಃ ಶ್ರವಣಮನಯೋಃ ಕಿಂ ನಿಧಿಧ್ಯಾಸಿತವ್ಯಂ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥7॥**

ಭಾವಾರ್ಥ - ನನ್ನ ಹೆಜ್ಜೆ ಹೆಜ್ಜೆಗೂ ತಪ್ಪು ಹುಡುಕುವಿಕೆಯಿಂದಲೂ, ಅಡ್ಡಿ ಆತಂಕಗಳಿಂದಲೂ ಕೂಡಿದ ಅದ್ವೈತ ಸಂಪ್ರದಾಯಗಳ ಸ್ಮೃತಿಗಳಿಗೆ ಸಂಬಂಧಿಸಿದ ಕರ್ಮಗಳ ಅನುಷ್ಠಾನವೇ ನನ್ನ ಜ್ಞಾನಕ್ಕೆ ಹೊರತಾಗಿರುವಾಗ, ಇನ್ನು ವೇದ ಶಾಸ್ತ್ರಗಳಲ್ಲಿ ಬ್ರಾಹ್ಮಣರಿಗೆ ವಿಧಿಸಲಾಗಿರುವ ಬ್ರಹ್ಮ ಮಾರ್ಗದ ಅನುಷ್ಠಾನ ನನ್ನಿಂದ ಹೇಗೆ ತಾನೇ ಸಾಧ್ಯ? ವಿಮರ್ಶೆಯ ಮೂಲಕ ಕೇಳುವಿಕೆ ಹಾಗೂ ಚಿಂತನೆಗಳ ಸ್ವರೂಪವನ್ನೇ ನಾನಿನ್ನೂ ಅರಿತುಕೊಳ್ಳಲಸಾಧ್ಯವಾಗಿರುವಾಗ ನಿಧಿ ಧ್ಯಾಸನ

ನನ್ನಿಂದ ಎಂತು ತಾನೇ ಸಾಧ್ಯ? ಹೀಗಿರುವಾಗ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ, ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಧ್ಯಾತ್ವಾ ಚಿತ್ತೇ ಶಿವಾಖ್ಯಂ ಪ್ರಚುರತರಧನಂ ನೈವ ದತ್ತಂ ದ್ವಿಜೇಭ್ಯೋ ।**
**ಹವ್ಯಂ ತೇ ಲಕ್ಷ ಸಂಖ್ಯೈರ್ಹುತವಹವದನೇ ನಾರ್ಪಿತಂ ಬೀಜಮಂತ್ರೈಃ ॥**

**ನೋ ತಪ್ತಂ ಗಾಂಗತೀರೇ ವ್ರತಜಪನಿಯಮೈ ರುದ್ರಜಾಪ್ಯಂ ನ ಜಪ್ತಂ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥8॥**

ಭಾವಾರ್ಥ - ಶಿವನನ್ನು ಮನದಲ್ಲಿಯೇ ಧ್ಯಾನಿಸುತ್ತಾ ಬ್ರಾಹ್ಮಣರಿಗೆ ನಾನೆಂದೂ ಯಥೇಷ್ಟ ದಾನವನ್ನು ಎಂದೂ ಮಾಡಿದವನಲ್ಲ. ನಿನ್ನ ಬೀಜಮಂತ್ರವನ್ನು ಜಪ ಮಾಡುತ್ತಾ ನಿನ್ನ ಪ್ರೀತಿಗಾಗಿ ಯಜ್ಞಕುಂಡದಲ್ಲಿ ಲಕ್ಷ ಸಂಖ್ಯೆಯಲ್ಲಿ ಹವಿಸ್ಸನ್ನು ನಾನೆಂದೂ ಅರ್ಪಿಸಿದವನಲ್ಲ. ಗಂಗಾ ನದೀ ತಟಾಕದಲ್ಲಿ ಕುಳಿತು ವ್ರತ, ಜಪ, ನಿಯಮಾದಿಗಳ ಮೂಲಕವಾಗಿ ತಪ್ಪಸನ್ನು ಎಂದಿಗೂ ಮಾಡಿದವನಲ್ಲ. ಶ್ರೇಷ್ಠವಾದ ನಿನ್ನ ರುದ್ರ ಮಂತ್ರವನ್ನು ನಾನೆಂದೂ ಜಪಿಸಿದವನಲ್ಲ. ಆದರೂ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ, ಸ್ವಾಮೀ, ಹೇ!ಶಂಭುವೇ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ನಗ್ನೋ ನಿಸ್ಸಂಗಶುದ್ಧ ಸ್ತ್ರಿಗುಣ ವಿರಹಿತೋ ಧ್ವಸ್ತ ಮೋಹಾಂಧಕಾರೋ ।**
**ನಾಸಾಗ್ರೇ ನ್ಯಸ್ತ ದೃಷ್ಟಿರ್ವಿದಿತಭವಗುಣೋ ನೈವ ದೃಷ್ಟಃ ಕದಾಚಿತ್ ॥**

**ಉನ್ಮನ್ಯಾವಸ್ಥಯಾ ತ್ವಾಂ ವಿಗತಕಲಿಮಲಂ ಶಂಕರಂ ನ ಸ್ಮರಾಮಿ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥9॥**

ಭಾವಾರ್ಥ - ದಿಗಂಬರನೂ ಸಂಗರಹಿತನೂ, ಶುದ್ಧನೂ, ತ್ರಿಗುಣ ವಿರಹಿತನೂ, ಆಶಾಪಾಶಗಳಿಂದ ಹೊರತಾದವನೂ, ಮೂಗಿನ ತುದಿಭಾಗಕ್ಕೆ ನೆಟ್ಟ ದೃಷ್ಟಿಯನ್ನು ಹೊಂದಿರುವವನೂ ಆದ ಸಂಸಾರದ ರೂಪದ ಬಗ್ಗೆ ಅರಿವು ಉಳ್ಳವನಾದ ನಿನ್ನನ್ನು ನಾನು ಎಂದೂ ದರ್ಶನ ಮಾಡಿದವನಲ್ಲ. ಏಕೋಧ್ಯಾನದಿಂದ ಮಂಗದಾಯಕನಾಗಿರುವ ಮತ್ತು ದರಿದ್ರ ಲಕ್ಷ್ಮಿಯನ್ನು ದೂರೀಕರಿಸುವ ನಿನ್ನನ್ನು

ನಾನೆಂದೂ ಸ್ಮರಿಸಿದವನಲ್ಲ. ಆದುದರಿಂದ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ,ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಸ್ಥಿತ್ವಾ ಸ್ಥಾನೇ ಸರೋಜೇ ಪ್ರಣವಮಯಮರುತ್ಕುಂಭಿತೇ ಸೂಕ್ಷ್ಮ ಮಾರ್ಗೇ ।**
**ಶಾಂತೇ ಸ್ವಾಂತೇ ಪ್ರಲೀನೇ ಪ್ರಕಟಿತ ವಿಭವೇ ದಿವ್ಯರೂಪೇ ಶಿವಾಖ್ಯೇ ॥**

**ಲಿಂಗಜ್ಞೇ ಬ್ರಹ್ಮವಾಕ್ಯೇ ಸಕಲತನುಗತಂ ಶಂಕರಂ ನ ಸ್ಮರಾಮಿ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥10॥**

ಭಾವಾರ್ಥ - ಪದ್ಮಾಸನದಲ್ಲಿ ಕುಳಿತು ಪ್ರಣವ ಮಂತ್ರವನ್ನು ಉಚ್ಚರಿಸುತ್ತಾ ಪ್ರಾಣ ವಾಯುವನ್ನು ಸುಷುಮ್ನ ಮಾರ್ಗದಲ್ಲಿ ನಿರೋಧಿಸಿ ಮನಸ್ಸನ್ನು ಪ್ರಶಾಂತಗೊಳಿಸಿ ನಿನ್ನ ಮಹಿಮೆಯನ್ನು ತೋರ್ಪಡಿಸುವ ಓಂಕಾರವನ್ನು ಪ್ರಕಾಶಮಯವೂ ಪರಬ್ರಹ್ಮ ಸ್ವರೂಪವೂ ಆದ ಸಾಕ್ಷಿರೂಪದ ಚೈತನ್ಯ ಶಕ್ತಿಯಲ್ಲಿ ಲೀನಗೊಳಿಸಿ ಸಮಸ್ತ ದೇಹಗಳಲ್ಲೂ ಅಂತರ್ಯಾಮಿಯಾಗಿರುವ ಶಂಕರನಾದ ನಿನ್ನನ್ನು ನಾನೆಂದೂ ಸಮಾಧಿ ಸ್ಥಿತಿಯಲ್ಲಿ ಧ್ಯಾನ ಮಾಡಿದ್ದಿಲ್ಲ. ಆದರೂ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ,ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಹೃದ್ಯಂ ವೇದಾಂತವೇದ್ಯಂ ಹೃದಯ ಸರಸಿಜೇ ದೀಪ್ತ ಮುದ್ಯತ್ಪ್ರಕಾಶಂ ।**
**ಸತ್ಯಂ ಶಾಂತ ಸ್ವರೂಪಂ ಸಕಲಮುನಿಮನಃಪದ್ಮಷಂಡೈಕವೇದ್ಯಂ ॥**

**ಜಾಗ್ರತ್ಸ್ವಪ್ನೇ ಸುಷುಪ್ತೌ ತ್ರಿಗುಣ ವಿರಹಿತಂ ಶಂಕರಂ ನ ಸ್ಮರಾಮಿ ।**
**ಕ್ಷಂತವ್ಯೋಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ ॥11॥**

ಭಾವಾರ್ಥ - ಮನಮೋಹಕನೂ, ವೇದಾಂತಗಳಿಂದ ತಿಳಿಯಲ್ಪಡುವವನೂ, ಹೃತ್ಕಮಲದಲ್ಲಿ ಬೆಳಗುತ್ತಿರುವನೂ, ಪ್ರಕಾಮಯನೂ, ಸತ್ಯನೂ ಶಾಂತ ಸ್ವರೂಪನೂ, ಮುನಿಗಳ ಹೃತ್ಕಮಲಕ್ಕೆ ಮಾತ್ರಾ ತಿಳಿಯಲ್ಪಡುವವನೂ, ಜಾಗ್ರತ್-ಸ್ವಪ್ನ-ಸುಷುಪ್ತಿಗಳೆನ್ನುವ ಮೂರು ಅವಸ್ತಾತ್ರಯಗಳಲ್ಲಿಯೂ ತ್ರಿಗುಣ ರಹಿತನಾಗಿರುವವನೂ ಆಗಿರುವ ಮಂಗಲಮಯ ಸ್ವರೂಪನಾಗಿರುವ ಶಂಕರನೇ

ನಿನ್ನನ್ನು ನಾನೆಂದೂ ಸ್ಮರಿಸಲಿಲ್ಲ. ಆದ ಕಾರಣ ಹೇ!ಶಂಕರನೇ, ಹೇ!ಮಹಾದೇವನೇ, ಹೇ!ಶಿವನೇ,ಸ್ವಾಮೀ, ಹೇ!ಶಂಭುವೇ,ನನ್ನ ಸರ್ವಾಪರಾಧಗಳನ್ನು ಕ್ಷಮಿಸು.

**ಚಂದ್ರೋದ್ಭಾಸಿತಶೇಖರೇ ಸ್ಮರಹರೇ ಗಂಗಾಧರೇ ಶಂಕರೇ ।**
**ಸರ್ಪೈರ್ಭೂಷಿತಕಂಠಕರ್ಣವಿವರೇ ನೇತ್ರೋತ್ಥ ವೈಶ್ವಾನರೇ ॥**

**ದಂತಿತ್ವಕ್ಕೃತಸುಂದರಾಂಬರಧರೇ ತ್ರೈಲೋಕ್ಯಸಾರೇ ಹರೇ ।**
**ಮೋಕ್ಷಾರ್ಥಂ ಕುರು ಚಿತ್ತ ವೃತ್ತಿ ಮಚಲಾ ಅನ್ಯೈಸ್ತು ಕಿಂ ಕರ್ಮಭಿಃ ॥12॥**

ಭಾವಾರ್ಥ - ಚಂದ್ರನಂತೆ ಉಜ್ವಲವಾಗಿ ಪ್ರಕಾಶಿಸುತ್ತಿರುವ ಹಣೆಯುಳ್ಳವನೂ, ಮನ್ಮಥನ ಸಂಹಾರಿಯೂ, ಗಂಗೆಯನ್ನು ಧರಿಸಿರುವವನೂ, ಸುಖದಾಯಕನೂ, ಕೊರಳು-ಕಿವಿಗಳನ್ನು ನಾಗಗಳಿಂದ ಅಲಂಕರಿಸಿಕೊಂಡವನೂ, ನಯನಗಳಲ್ಲಿ ಅಗ್ನಿಯನ್ನು ಉದ್ಭವಿಸಿಕೊಂಡವನೂ, ಆನೆಯ ಚರ್ಮವನ್ನು ಮನೋಹರವಾಗಿರುವ ವಸ್ತ್ರದಂತೆ ಧರಿಸಿಕೊಂಡವನೂ, ಮೂರು ಲೋಕಗಳ ಸಾರರೂಪನೂ, ಆಗಿರುವ ಹರನಲ್ಲಿ ಮನಸ್ಸನ್ನು ರೂಢಿಸಿಕೊಂಡು, ಮೋಕ್ಷ ಸಂಪದವನ್ನು ಪಡೆಯಲೋಸುಗವಾಗಿ ಸ್ಥಿರಗೊಳಿಸುವವನಾಗು. ಉಳಿದ ಕಾರ್ಯಗಳಿಂದ ಏನು ಪ್ರಯೋಜನವಿದೆ?

**ಕಿಂ ವಾಽನೇನ ಧನೇನ ವಾಜಿಕರಿಭಿಃ ಪ್ರಾಪ್ತೇನ ರಾಜ್ಯೇನ ಕಿಂ ।**
**ಕಿಂ ವಾ ಪುತ್ರ ಕಲತ್ರ ಮಿತ್ರ ಪಶುಭಿರ್ದೇಹೇನ ಗೇಹೇನ ಕಿಂ ॥**

**ಜ್ಞಾತ್ವೈ ತತ್ ಕ್ಷಣಭಂಗುರಂ ಸಪದಿರೇ ತ್ಯಾಜ್ಯಂ ಮನೋ ದೂರತಃ ।**
**ಸ್ವಾತ್ಮಾರ್ಥಂ ಗುರುವಾಕ್ಯತೋ ಭಜ ಭಜ ಶ್ರೀ ಪಾರ್ವತೀ ವಲ್ಲಭಂ ॥13॥**

ಭಾವಾರ್ಥ - ಸ್ವಾಮಿಯೇ! ಈ ಸಂಪತ್ತಿನಿಂದಾಗಲೀ, ಆನೆ ಕುದುರೆಗಳಿಂದಾಗಲೀ, ಅಥವಾ ಭೂಮಿ ಪ್ರಾಪ್ತಿಯಿಂದಾಗಲೀ, ಏನು ಪ್ರಯೋಜನವಿದೆ? ಮಗ, ಮಡದಿ, ಸ್ನೇಹಿತರು, ಬಂಧುಗಳು, ಶರೀರ, ಪಶುಗಳು, ಮನೆ, ಮಠಗಳು, ಇತ್ಯಾದಿಗಳಿಂದ ಏನು ಪ್ರಯೋಜನವಿದೆ? ಎಲೈ ಮನವೇ!ಇವೆಲ್ಲವುಗಳು ಕ್ಷಣಿಕವೆಂದು ಅರ್ಥವಿಸಿಕೊಂಡು ಬೇಗನೆ ತ್ಯಜಿಸುವುದು ಬುದ್ಧಿವಂತಿಕೆ. ಬದಲಾಗಿ ಆತ್ಮ ಸಾಕ್ಷಾತ್ಕಾರಕ್ಕಾಗಿ ಗುರು

ವಾಕ್ಯವಿದೆಂದು ಸ್ವೀಕರಿಸಿ ಶ್ರೀ ಪಾರ್ವತೀಪತಿಯಾಗಿರುವ ಮಹಾದೇವನನ್ನು ಪುನಃಪುನಃ ಸ್ತುತಿಸುವವನಾಗು.

**ಪೌರೋಹಿತ್ಯಂ ರಜನಿ ಚರಿತಂ ಗ್ರಾಮಣೀತ್ವಂ ನಿಯೋಗೋ ।**
**ಮಾಠಾಪತ್ಯಂ ಹ್ಯನೃತವಚನಂ ಸಾಕ್ಷಿವಾದಃ ಪರಾನ್ನಂ ॥**

**ಬ್ರಹ್ಮದ್ವೇಷಃ ಖಲಜನರತಿಃ ಪ್ರಾಣಿನಾಂ ನಿರ್ದಯತ್ವಂ ।**
**ಮಾ ಭೂದೇವಂ ಮಮ ಪಶುಪತೇ ಜನ್ಮ ಜನ್ಮಾಂತರೇಷು ॥14॥**

ಭಾವಾರ್ಥ - ಹೇ ಸ್ವಾಮಿಯೇ! ಪುರೋಹಿತವೃತ್ತಿಯ ನಿಶಾ ಸಂಚಾರ, ಗ್ರಾಮಾಧಿಕಾರಿಯಾಗಿ ಪ್ರತಿನಿಧಿತ್ವದ ಕಾರ್ಯ, ಮಠಾಧಿಪತಿಯ ಕೆಲಸ, ಸುಳ್ಳು ಹೇಳುವ ಕೆಲಸ, ವಿವಾದಗಳಲ್ಲಿ ಸಾಕ್ಷಿ ಹೇಳುವ ಕಾರ್ಯ, ಭಿಕ್ಷಾ ವೃತ್ತಿ, ಬ್ರಾಹ್ಮಣರಲ್ಲಿ ವೈರತ್ವ, ದುರ್ಜನರುಗಳ ಸಂಘ, ಪ್ರಾಣಿಗಳ ಬಗ್ಗೆ ನಿರ್ದಯತ್ವ, ಮತ್ತು ಭೂಮಿಯ ಒಡೆತನ, ಹೇ!ಪಶುಪತಿಯೇ ನನಗೆ ಜನ್ಮ ಜನ್ಮಾಂತರಗಳಲ್ಲಿಯೂ ಪ್ರಾಪ್ತವಾಗದೆ ಇರಲಿ.

**ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂಯಾತಿ ಕ್ಷಯಂ ಯೌವನಂ ।**
**ಪ್ರತ್ಯಾಯಾಂತಿ ಗತಾಃ ಪುನರ್ನ ದಿವಸಾಃ ಕಾಲೋ ಜಗದ್ಭಕ್ಷಕಃ ॥**

**ಲಕ್ಷ್ಮೀಸ್ತೋಯತರಂಗ ಭಂಗ ಚಪಲಾ ವಿದ್ಯುಚ್ಚಲಂ ಜೀವಿತಂ ।**
**ತಸ್ಮಾನ್ಮಾಂ ಶರಣಾಗತಂ ಶರಣದ ತ್ವಂ ರಕ್ಷ ರಕ್ಷಾಧುನಾ ॥15॥**

ಭಾವಾರ್ಥ - ಸ್ವಾಮಿಯೇ, ನೋಡು ನೋಡುತ್ತಿರುವ ಹಾಗೆ ದಿನದಿಂದ ದಿನಕ್ಕೆ ನನ್ನ ಆಯುಷ್ಯವು ಸವೆದು ಹೋಗುತ್ತಲಿದೆ. ನನ್ನ ಯೌವನದ ದಿವಸಗಳು ನಶಿಸುತ್ತಿವೆ. ಹೌದು,ಕಳೆದು ಹೋದ ಆ ದಿವಸಗಳು ಮತ್ತೆಂದೂ ತಿರುಗಿ ಬಾರವು. ದೇವನೇ,ವೇಳೆಯು ಜಗತ್ತನ್ನು ಭುಂಜಿಸುತ್ತಲಿದೆ. ಲಕ್ಷ್ಮಿಯಾದರೋ ನೀರಿನ ಅಲೆಗಳಂತೆ ಅಲೆದಾಡುವ ಸ್ವಭಾವದವಳು. ಜೀವನವಿದು ಮಿಂಚಿನಂತೆ ಹೊಯ್ದಾಡುತ್ತಿದ್ದು ಕ್ಷಣಿಕವಾಗಿದೆ. ಆದುದರಿಂದ, ಎಲೈ

ಸಂರಕ್ಷಕನೇ!ಮೊರೆಹೊಕ್ಕವನಾದ ನನ್ನನು ಈವಾಗಲೇ ರಕ್ಷಿಸುವವನಾಗು. ತನ್ಮೂಲಕ ನನ್ನನ್ನು ಉದ್ಧರಿಸು ಪ್ರಭುವೇ!

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶಿವಾಪರಾಧ ಕ್ಷಮಾಪಣ ಸ್ತೋತ್ರಂ ಸಂಪೂರ್ಣಂ ॥

## 6.18 ಶ್ರೀ ವೇದಸಾರ ಶಿವ ಸ್ತವಃ

**ಪಶೂನಾಂ ಪತಿಂ ಪಾಪನಾಶಂ ಪರೇಶಂ । ಗಜೇಂದ್ರಸ್ಯ ಕೃತ್ತಿಂ ವಸಾನಂ ವರೇಣ್ಯಂ ॥ ಜಟಾಜೂಟ ಮಧ್ಯೇ ಸ್ಫುರದ್ಗಾಂಗವಾರಿಂ । ಮಹಾದೇವಮೇಕಂ ಸ್ಮರಾಮಿ ಸ್ಮರಾರಿಂ ॥1॥**

ಭಾವಾರ್ಥ - ಸಮಸ್ತಜೀವಜಗತ್ತಿನಒಡೆಯನೂ, ಪಾಪನಾಶಕನೂ, ಪರಮೇಶ್ವರನೂ, ಆನೆಯಚರ್ಮವನ್ನು ಹೊದ್ದುಕೊಂಡವನೂ, ಅಗ್ರಗಣ್ಯನೂ, ತನ್ನ ಜಡೆಯ ಮಧ್ಯದಲ್ಲಿ ಗಂಗೆಯನ್ನು ಧರಿಸಿದವನೂ, ಸರಸಾಟಿಯಿಲ್ಲದವನೂ, ಮನ್ಮಥನ ವೈರಿಯೂ, ಆಗಿರುವ ಶ್ರೀಮನ್ಮಹಾದೇವನನ್ನು ನಾನು ಸ್ಮರಿಸುತ್ತೇನೆ.

**ಮಹೇಶಂ ಸುರೇಶಂ ಸುರಾರಾರ್ತಿನಾಶಂ । ವಿಭುಂ ವಿಶ್ವನಾಥಂ ವಿಭೂತ್ಯಂಗಭೂಷಂ ॥ ವಿರೂಪಾಕ್ಷಮಿಂದ್ವರ್ಕವಹ್ನಿತ್ರಿನೇತ್ರಂ । ಸದಾನಂದಮೀಡೇ ಪ್ರಭುಂ ಪಂಚವಕ್ತ್ರಂ ॥2॥**

ಭಾವಾರ್ಥ - ಮಹೇಶ್ವರನೂ, ಸೂರ್ಯಚಂದ್ರಾಗ್ನಿಗಳನ್ನು ಕಣ್ಣುಗಳನ್ನಾಗಿಸಿಕೊಂಡವನೂ, ದೇವತೆಗಳ ಒಡೆಯನೂ, ದೇವತೆಗಳ ಶತ್ರುಗಳನ್ನು ನಾಶಮಾಡಿದವನೂ, ಸ್ವಾಮಿಯೂ, ವಿರೂಪಾಕ್ಷನೂ, ಸರ್ವ ವ್ಯಾಪಕನೂ, ವಿಭೂತಿಯಿಂದ ಅಲಂಕೃತನಾಗಿರುವವನೂ, ನಿತ್ಯಾನಂದ ಸ್ವರೂಪನೂ, ಪಂಚಮೊಗದವನೂ ಆಗಿರುವ ಪ್ರಭು ಭಗವಾನ್ ಶ್ರೀಮನ್ಮಹಾದೇವನನ್ನು ನಾನು ಸ್ತುತಿಸುವೆನು.

**ಗಿರೀಶಂ ಗಣೇಶಂ ಗಲೇ ನೀಲವರ್ಣಂ । ಗವೇಂದ್ರಾಧಿರೂಢಂ ಗುಣಾತೀತರೂಪಂ ॥ ಭವಂ ಭಾಸ್ಕರಂ ಭಸ್ಮನಾ ಭೂಷಿತಾಂಗಂ । ಭವಾನೀ ಕಲತ್ರಂ ಭಜೇ ಪಂಚವಕ್ತ್ರಂ ॥3॥**

ಭಾವಾರ್ಥ - ಗಿರಿಗಳದೊರೆಯೂ, ಗಣಗಳಾಧಿಪತಿಯೂ, ನೀಲಕಂಠನೂ, ವೃಷಭಾರೂಢನೂ, ಗುಣಗಳಿಗೆ ಹೊರತಾದ ಅಗಣಿತರೂಪನೂ, ಬ್ರಹ್ಮಾಂಡದ ಸೃಷ್ಟಿಗೆ ಆದಿ ಕಾರಣನೂ, ಪ್ರಕಾಶರೂಪಿಯೂ, ಭಸ್ಮವನ್ನು ಧರಿಸಿಕೊಂಡವನೂ, ಪಾರ್ವತೀ ದೇವಿಯ ಪತಿಯೂ, ಪಂಚವದನನೂ ಆಗಿರುವ ಶ್ರೀಮನ್ಮಹಾದೇವನನ್ನು ನಾನು ಭಜಿಸುವೆನು.

**ಶಿವಾಕಾಂತ ಶಂಭೋ ಶಶಾಂಕಾರ್ಧಮೌಲೇ । ಮಹೇಶಾನ ಶೂಲಿನ್ ಜಟಾಜೂಟಧಾರಿನ್ ॥ ತ್ವಮೇಕೋ ಜಗದ್ವ್ಯಾಪಿಕೋ ವಿಶ್ವರೂಪಃ । ಪ್ರಸೀದ ಪ್ರಸೀದ ಪ್ರಭೋ ಪೂರ್ಣರೂಪ ॥4॥**

ಭಾವಾರ್ಥ - ಹೇ!ಗೌರೀವಲ್ಲಭನೇ, ಶಂಭುವೇ, ಮಹಾದೇವನೇ, ಚಂದ್ರಮೌಳೀಶ್ವರನೇ, ಮಹೇಶ್ವರನೇ, ತ್ರಿಶೂಲಧಾರಿಯೇ, ಜಿಗುಟಾಗಿರುವತಲೆಗೂದಲುಗಳನ್ನುಧರಿಸಿರುವಾತನೇ, ಬ್ರಹ್ಮಾಂಡಸ್ವರೂಪನೇ, ಜಗದ್ವ್ಯಾಪಕನೇ, ಪೂರ್ಣರೂಪಿಯೇ, ದೊರೆಯೆ, ಒಡೆಯನೇ ಪ್ರಸನ್ನನಾಗು. ಪ್ರಸನ್ನನಾಗು.

**ಪರಾತ್ಮಾನಮೇಕಂ ಜಗದ್ಬೀಜಮಾದ್ಯಂ । ನಿರೀಹಂ ನಿರಾಕಾರಮೋಂಕಾರವೇದ್ಯಂ ॥ ಯತೋಜಾಯತೇ ಪಾಲ್ಯತೇ ಯೇನ ವಿಶ್ವಂ । ತಮೀಶಂ ಭಜೇ ಲೀಯತೇ ಯತ್ರ ವಿಶ್ವಂ ॥5॥**

ಭಾವಾರ್ಥ - ಪರಮಾತ್ಮನೂ, ಸರಿಸಾಟಿಯಿಲ್ಲದಏಕರೂಪಿಯೂ, ಆದಿಪುರುಷನೂ, ಜಗತ್ತಿನ ನಿಯಾಮಕನೂ, ನಿಷ್ಕಿರ್ಯನೂ, ಆಶಾಪಾಶರಹಿತನೂ, ನಿರಾಕಾರನೂ,

ಓಂಕಾರದಮೂಲಕ ತಿಳಿಯತಕ್ಕವನೂ, ಬ್ರಹ್ಮಾಂಡದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣೀಭೂತನೂ ಆಗಿರುವ ಶ್ರೀಮನ್ಮಹಾದೇವನನ್ನು ನಾನು ಭಜಿಸುವೆನು.

**ನ ಭೂಮಿರ್ನ ಚಾಪೋ ನ ವಹ್ನಿರ್ನವಾಯು । ರ್ನ ಚಾಕಾಶಮಾಸ್ತೇ ನ ತಂದ್ರಾ ನ ನಿದ್ರಾ ॥ ನ ಗ್ರೀಷ್ಮೋ ನ ಶೀತಂ ನ ದೇಶೋ ನವೇಶೋ । ನ ಯಸ್ಯಾಸ್ತಿ ಮೂರ್ತಿಸ್ತ್ರಿಮೂರ್ತಿಂ ತ ಮೀಡೇ ॥6॥**

ಭಾವಾರ್ಥ - ಪೃಥ್ವೀಅಪ್ತೇಜೋ ವಾಯ್ವಾಕಾಶಗಳೆಂಬ ಪಂಚಭೂತಗಳಿಂದ ವಿಭಿನ್ನವಾದವನೂ, ಆಯಾಸ, ನಿದ್ರೆ, ಶೀತೋಷ್ಣಗಳಹೊರತಾಗಿರುವವನೂ, ದೇಶಕಾಲಾದಿಗಳನ್ನುಮೀರಿರುವವನೂ, ಅಮೂರ್ತಸ್ವರೂಪಿಯೂ, ತ್ರಿಮೂರ್ತಿಯೂ ಆಗಿರುವ ಆ ಶ್ರೀಮನ್ಮಹಾದೇವನನ್ನು ನಾನು ಸ್ತುತಿಸುವೆನು.

**ಅಜಂಶಾಶ್ವತಂ ಕಾರಣಂ ಕಾರಣಾನಾಂ । ಶಿವಂ ಕೇವಲಂ ಭಾಸಕಂ ಭಾಸಕಾನಾಂ ॥ ತುರೀಯಂ ತಮಃಪಾರಮಾದ್ಯಂತಹೀನಂ । ಪ್ರಪದ್ಯೇ ಪರಂ ಪಾವನಂ ದ್ವೈತಹೀನಂ ॥7॥**

ಭಾವಾರ್ಥ - ಅನಾದಿಪುರುಷನೂ, ಅವಿನಾಶಿಯೂ, ಮೂಲಗಳಿಗೆ ಮೂಲನೂ, ಶಿವನೂ, ಕಲ್ಯಾಣಸ್ವರೂಪನೂ, ಜ್ಯೋತಿಗಳಿಗೆ ಜ್ಯೋತಿಯಾದವನೂ, ವೇದನಾದಾತೀತನೂ, ಅಜ್ಞಾನಾಂಧಕಾರಗಳಿಗೆ ಹೊರತಾದವನೂ, ಆದಿ ಅಂತ್ಯಗಳಿಲ್ಲದವನೂ, ಜೀವಾತ್ಮ ಪರಮಾತ್ಮರೆಂಬ ದ್ವೈತ ರಹಿತನೂ, ಪರಮಪಾವನನೂ, ಅದ್ವೈತ ಸ್ವರೂಪನೂ ಆಗಿರುವ ಶಿವನಿಗೆ ಶರಣಾಗುವೆನು.

**ನಮಸ್ತೇ ನಮಸ್ತೇ ವಿಭೋ ವಿಶ್ವಮೂರ್ತೇ । ನಮಸ್ತೇ ನಮಸ್ತೇ ಚಿದಾನಂದಮೂರ್ತೇ ॥ ನಮಸ್ತೇ ನಮಸ್ತೇ ತಪೋಯೋಗಗಮ್ಯ । ನಮಸ್ತೇ ನಮಸ್ತೇ ಶ್ರುತಿಜ್ಞಾನಗಮ್ಯ ॥8॥**

ಭಾವಾರ್ಥ - ಹೇ ದೊರೆಯೇ,ಹೇ ವಿಶ್ವಸ್ವರೂಪನೇ ನಿನಗೆ ನನ್ನ ನಮಸ್ಕಾರಗಳು. ಹೇ ಚಿದಾನಂದ ಸ್ವರೂಪನೇ, ನಿನಗೆ ನನ್ನ ನಮಸ್ಕಾರಗಳು. ತಪಯೋಗಳಿಗೆ ತಲಪಲು ಸಾಧ್ಯವಾಗುವವನೇ ನಿನಗೆ ನನ್ನ ನಮಸ್ಕಾರಗಳು. ವೇದ ಶಾಸ್ತ್ರಾದಿಗಳಿಂದ ತಿಳಿದುಕೊಳ್ಳಲು ಸಾಧ್ಯವಾಗುವಾತನೇ ನಿನಗಿದೋ ನನ್ನ ನಮಸ್ಕಾರಗಳು. ಪುನರಪಿ ಪುನರಪಿ ನಮಸ್ಕಾರಗಳು.

**ಪ್ರಭೋ ಶೂಲಪಾಣೇ ವಿಭೋ ವಿಶ್ವನಾಥ । ಮಹಾದೇವ ಶಂಭೋ ಮಹೇಶ ತ್ರಿನೇತ್ರ ॥ ಶಿವಾಕಾಂತ ಶಾಂತ ಸ್ಮರಾರೇ ಪುರಾರೇ । ತ್ವದನ್ಯೋ ವರೇಣ್ಯೋ ನ ಮಾನ್ಯೋ ನ ಗಣ್ಯಃ ॥9॥**

ಭಾವಾರ್ಥ - ಹೇದೊರೆಯೇ, ತ್ರಿಶೂಲಧಾರಿಯೇ, ಪ್ರಭುವೇ, ವಿಶ್ವಾಧೀಶನೇ, ಮಹಾದೇವನೇ, ಶಂಭುವೇ, ಎಲೈಮಹೇಶ್ವರನೇ, ತ್ರಿನಯನನೇ, ಗೌರೀಶನೇ, ಶಾಂತಸ್ವರೂಪನೇ, ಮನ್ಮಥಾಂತಕನೇ, ತ್ರಿಪುರಾರಿಯೇ, ನಿನಗಿಂತ ಅಗ್ರಗಣ್ಯರು ಅನ್ಯರಿಲ್ಲ. ಶ್ರೇಷ್ಠರೂ ಇಲ್ಲ. ಕೀರ್ತಿವಂತರೂ ಅನ್ಯರಿಲ್ಲ.

**ಶಂಭೋ ಮಹೇಶ ಕರುಣಾಮಯ ಶೂಲಪಾಣೇ । ಗೌರೀಪತೇ ಪಶುಪತೇ ಪಶುಪಾಶನಾಶಿನ್ ॥ ಕಾಶೀಪತೇ ಕರುಣಯಾ ಜಗದೇತದೇಕ- । ಸ್ತ್ವಂ ಹಂಸಿ ಪಾಸಿ ವಿದಧಾಸಿ ಮಹೇಶ್ವರೋಽಸಿ ॥10॥**

ಭಾವಾರ್ಥ - ಎಲೈಶಂಭುವೇ, ಮಹೇಶ್ವರನೇ, ಕರುಣಾಮಯಿಯೇ, ತ್ರಿಶೂಲಪಾಣಿಯೇ, ಗೌರೀವಲ್ಲಭನೇ, ಜೀವಜಗತ್ತಿನ ಆಶಾಪಾಶ ವಿಮೋಚಕನೇ, ಅಜ್ಞಾನದ ಕತ್ತಲನ್ನು ಕಳೆಯುವವನೇ, ನೀನೊರ್ವನೇಪ್ರಾಪಂಚಿಕಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ನಿಮಿತ್ತನಾದವನಾಗಿರುವೆ. ಸ್ವಾಮಿಯೇ ಸರ್ವಸ್ವಕ್ಕೂ ನೀನೊರ್ವನೇ ಒಡೆಯನಾದವನು. ನೀನೇ ಮಹೇಶ್ವರನು.

**ತ್ವತ್ತೋ ಜಗದ್ಭವತಿ ದೇವ ಭವ ಸ್ಮರಾರೇ । ತ್ವಯ್ಯೇವ ತಿಷ್ಠತಿ ಜಗನ್ಮೃಡ ವಿಶ್ವನಾಥ ॥ ತ್ವಯ್ಯೇವ ಗಚ್ಛತಿ ಲಯಂ ಜಗದೇಶದೀಶ । ಲಿಂಗಾತ್ಮಕೇ ಹರ ಚರಾಚರವಿಶ್ವರೂಪಿನ್ ॥11॥**

ಭಾವಾರ್ಥ - ಹೇದೇವನೇ, ಶಂಕರನೇ, ಮದನಸಂಹಾರಕನೇ, ಶಿವನೇ, ನಿನ್ನಿಂದಲೇ ಬ್ರಹ್ಮಾಂಡವು ಹುಟ್ಟಿ ನೀನು ವಿಶ್ವಪತಿಯೆನಿಸಿರುವೆ. ಈಶನೇ, ಹರನೇ, ಮೃಡನೇ ಚರಾಚರ ಜಗತ್ತಿನ ದೊರೆಯೇ, ಬ್ರಹ್ಮಾಂಡವೆಲ್ಲವೂ ಕದಲದೆ ನಿನ್ನಲ್ಲೇ ಇದೆ. ಲಿಂಗಸ್ವರೂಪದ ಈ ಬ್ರಹ್ಮಾಂಡವು ನಿನ್ನಲ್ಲಿಯೇ ಲಯವನ್ನು ಹೊಂದುವುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ವೇದಸಾರ ಶಿವಸ್ತೋತ್ರಂ ಸಂಪೂರ್ಣಂ ॥

## 6.19 ಅಭಿಲಾಷಾಷ್ಟಕಂ

**ಏಕಂ ಬ್ರಹ್ಮೈವಾದ್ವಿತೀಯಂ ಸಮಸ್ತಂ ಸತ್ಯಂ ಸತ್ಯಂ ನೇಹನಾನಾಸ್ತಿ ಕಿಂಚಿತ್ ।**
**ಏಕೋ ರುದ್ರೋ ನ ದ್ವಿತೀಯೋಽವಸ್ಥೇ ತಸ್ಮಾದೇಕಂ ತ್ವಾಂ ಪ್ರಪದ್ಯೇ ಮಹೇಶಂ ॥1॥**

ಭಾವಾರ್ಥ - ಸಕಲವೂ ಒಂಟಿಯೂ ಅಸಮಾನವೂ ಆಗಿರುವ ಬ್ರಹ್ಮವೇ ಆಗಿದೆ. ದಿಟವಾಗಿಯೂ ಈ ವಿಶ್ವದಲ್ಲಿ ಅದರ ಹೊರತಾದದ್ದು ಬೇರೆ ಯಾವುದೂ ಇಲ್ಲ. ಪರಮೇಶ್ವರನು ಒಬ್ಬನೇ ಇರುವುದಾಗಿದೆ. ಎರಡನೇಯದು ಇನ್ಯಾವುದೂ ಇಲ್ಲ. ಆದ ಕಾರಣ ಮಹಾ ಈಶನಾಗಿರುವ ನಿನ್ನಲ್ಲಿ ನಾನು ಆಶ್ರಯ ಪಡೆಯುತ್ತೇನೆ.

**ಏಕಃ ಕರ್ತಾ ತ್ವಂ ಹಿ ಸರ್ವಸ್ಯ ಶಂಭೋ ನಾನಾರೂಪೇಷ್ವೇಕರೂಪೋಽಸ್ಯ ರೂಪಃ ।**
**ಯದ್ವತ್ ಪ್ರತ್ಯಜ್ಞರ್ಕ ಏಕೋಽಪ್ಯನೇಕ- ಸ್ತಸ್ಮಾನ್ಯಂ ತ್ವಾಂ ವಿನೇಶಂ ಪ್ರಪದ್ಯೇ ॥2॥**

ಭಾವಾರ್ಥ - ಎಲೈ!ಸುಖವನ್ನು ದಯಪಾಲಿಸುವಾತನೇ, ಸತ್ಯವಾಗಿಯೂ ನೀನೋರ್ವನೇ ಸೃಷ್ಟಿದಾತ. ಪ್ರಪಂಚಕ್ಕೆಲ್ಲಾ ಓರ್ವನೇ ಸೂರ್ಯನಿರುವುದಾದರೂ ಆತನು ನಾನಾ ರೀತಿಯ ಪ್ರತಿರೂಪದಲ್ಲಿ ಹಲವು ಸೂರ್ಯರಂತೆ ಭಾಸವಾಗುವಂತೆ ನೀನು ನಿರಾಕಾರನಾದರೂ ನಾನಾರೂಪಗಳಲ್ಲಿ ಐಕ್ಯರೂಪವಾಗಿರುವೆ. ಆದ ಕಾರಣ ನಿನ್ನ ಹೊರತಾಗಿ ಅನ್ಯರಾರಲ್ಲಿಯೂ ನಾನು ಆಶ್ರಯ ಪಡೆಯಲಾರೆ.

**ರಜ್ಜ್ವಾ ಸರ್ಪಃ ಶುಕ್ತಿ ಕಾಯಾಂ ಚ ರೂಪ್ಯಂ ನೀರಂ ಪುರುಸ್ತಾನ್ಮೃಗಾಖ್ಯೇ ಮರೀಚೌ । ಯದ್ವತ್ತದ್ವದ್ವಿಷ್ವಗೇಷ ಪ್ರಪಂಚೋ ಯಸ್ಮಿನ್ ಜ್ಞಾತೇ ತಂ ಪ್ರಪದ್ಯೇ ಮಹೇಶಂ ॥3॥**

ಭಾವಾರ್ಥ - ಹಾವು ಹಗ್ಗದ ಹಾಗೆ ಕಾಣುವ ನೋಟ, ಬೆಳ್ಳಿಯ ಹಾಗೆ ಕಾಣುವ ಕಪ್ಪೆಚಿಪ್ಪಿನ ನೋಟ, ಮರೀಚಿಕೆಯೊಳು ಕಾಣುವ ನೀರು, ಇವೆಲ್ಲವೂ ಯಾವ ರೀತಿಯಾಗಿ ದಿಟವಲ್ಲವೋ, ಹಾಗೆಯೇ ಯಾವಾತನನ್ನು ತಿಳಿದುಕೊಂಡರೆ ವಿಶ್ವವೆಲ್ಲವೂ ಮಯಾರೂಪದಲ್ಲಿ ಕಾಣುವುದೋ ಅಂತಹಾ ಮಹಾ ಈಶನಲ್ಲಿ ನಾನು ಆಶ್ರಯ ಪಡೆಯುವೆನು.

**ತೋಯೇ ಶೈತ್ಯಂ ದಾಹಕತ್ವಂ ಚ ವಹ್ನೌ ತಾಪೋ ಭಾನೊ ಶೀತಭಾನೌ ಪ್ರಸಾದಃ । ಪುಷ್ಪೇ ಗಂಧೋ ದುಗ್ಧಮಧ್ಯೇ ಚ ಸರ್ಪಿ- ರ್ಯತ್ತಚ್ಛಂಭೋ ತ್ವಂ ತತಸ್ತ್ವಾಂ ಪ್ರಪದ್ಯೇ ॥4॥**

ಭಾವಾರ್ಥ - ಎಲೈ!ಸುಖವನ್ನು ಕರುಣಿಸುವಾತನೇ, ನೀರಿನೊಳಗಿರುವ ಶೈತ್ಯವು ನೀನು,ಅಗ್ನಿಯೊಳಗಣ ಬೇಗೆಯ ಗುಣವು ನೀನು,ಸೂರ್ಯನೊಳಗಿರುವ ಕಾವು ನೀನು,ಚಂದ್ರನಲ್ಲಿರುವ ಆನಂದವೂ ನೀನೇ, ಹೂವಿನಲ್ಲಿರುವ ಪರಿಮಳ, ಹಾಲಿನೊಳಗಿರುವ ನವನೀತವು ನೀನು. ಹೀಗಿರುವ ಕಾರಣ ನಿನ್ನಲ್ಲಿ ನಾನು ಆಶ್ರಯ ಪಡೆಯುವೆನು.

**ಶಬ್ದಂಗೃಹ್ಣಾಸ್ಯಶ್ರುತಿಸ್ತ್ವಂ ಹಿ ಜಿಘ್ರೇ- ರಘ್ರಾಣಸ್ತ್ವಂ ವ್ಯಂಘ್ರಿರಾಯಾಸಿ ದೂರಾನ್ । ವ್ಯಕ್ಷಃ ಪಶ್ಯೇಸ್ತ್ವಂ ರಸಜ್ಞೋಪ್ಯ ಜಿಹ್ವಃ ಕಸ್ತ್ವಾಂ ಸಮ್ಯಗ್ವೇತ್ತ್ಯತಸ್ತ್ವಾಂ ಪ್ರಪದ್ಯೇ ॥5॥**

ಭಾವಾರ್ಥ - ಶ್ರವಣೇಂದ್ರಿಯಗಳ ಸಹಾಯವಿಲ್ಲದೆ ಶಬ್ದಗಳನ್ನು ನೀನು ಕೇಳಬಲ್ಲೆ. ವಾಸನೇಂದ್ರಿಯವಿಲ್ಲದೆ ನೀನು ವಾಸನೆಯನ್ನು ಅನುಭವಿಸಬಲ್ಲೆ. ಕಾಲುಗಳು ಇಲ್ಲದೆಯೂ ನೀನು ದೂರಕ್ರಮಿಸಬಲ್ಲೆ. ನಯನಗಳಿಲ್ಲದೆಯೂ ನೀನು ಎಲ್ಲವನ್ನೂ ಕಾಣಬಲ್ಲೆ. ನಾಲಿಗೆಯಿಲ್ಲದೆಯೂ ನೀನು ರುಚಿ ನೋಡಬಲ್ಲೆ. ಪೂರ್ಣವಾಗಿ

ನಿನ್ನನ್ನು ತಿಳಿಯಬಲ್ಲವರು ಯಾರಿದ್ದಾರೆ? ಆದಕಾರಣ ನಿನ್ನಲ್ಲಿ ನಾನು ಆಶ್ರಯ ಪಡೆಯುವೆನು.

**ನೋ ವೇದಸ್ತ್ವಾಮೀಶ ಸಾಕ್ಷಾದ್ಧಿ ವೇದ ನೋ ವಾ ವಿಷ್ಣುರ್ನೋ ವಿಧಾತಾಖಿಲಸ್ಯ । ನೋ ಯೋಗೀಂದ್ರಾ ನೇಂದ್ರಮುಖ್ಯಾಶ್ಚ ದೇವಾ ಭಕ್ತೋ ವೇದ ತ್ವಾಮತಸ್ತ್ವಾಂ ಪ್ರಪದ್ಯೇ ॥6॥**

ಭಾವಾರ್ಥ - ವೇದಗಳು ಸಹಾ ನಿನ್ನನ್ನು ಪ್ರತ್ಯಕ್ಷವಾಗಿ ತಿಳಿಯಲಾರವು. ಬ್ರಹ್ಮನಾಗಲೀ, ವಿಷ್ಣುವಾಗಲೀ, ಮಹರ್ಷಿಗಳಾಗಲೀ, ಇಂದ್ರಾದಿ ದೇವರ್ಕಳಾಗಲೀ ನಿನ್ನನ್ನು ತಿಳಿದುಕೊಳ್ಳಲಾರವು. ಆದರೆ ನಿನ್ನ ನೈಜ ಭಕ್ತನು ನಿನ್ನನ್ನು ತಿಳಿಯಬಲ್ಲನು. ಆದಕಾರಣ ನಿನ್ನಲ್ಲಿ ನಾನು ಆಶ್ರಯ ಪಡೆಯುವೆನು.

**ನೋ ತೇ ಗೋತ್ರಂ ನಾಪಿ ಜನ್ಮಾಪಿ ನಾಖ್ಯಾ ನೋ ವಾ ರೂಪಂ ನೈವ ಶೀಲಂ ನ ದೇಶಃ । ಇತ್ಥಂಭೂತೋಽಪೀಶ್ವರಸ್ತ್ವಂ ತ್ರಿಲೋಕ್ಯಾಃ ಸರ್ವಾನ್ಕಾಮಾನ್ಪೂರಯೇಸ್ತದ್ಭಜೇ ತ್ವಾಂ ॥7॥**

ಭಾವಾರ್ಥ - ನಿನಗೆ ಕುಲಜಾತಿಗಳಿಲ್ಲ, ಹುಟ್ಟುಸಾವುಗಳಿಲ್ಲ, ಹೆಸರು ಇಲ್ಲ, ಆಕಾರವಿಲ್ಲ, ಮಾನಾಪಮಾನವಿಲ್ಲ, ನಾಡು ಇಲ್ಲ, ಆದಾಗ್ಯೂ ನೀನು ಮೂಲೋಕಗಳಿಗೆ ದೊರೆಯು. ಎಲ್ಲರ ಬಯಕೆಗಳನು ಈಡೇರಿಸುವಾತನು ನೀನು. ಆದಕಾರಣ ನಾನು ನಿನ್ನನ್ನು ಸ್ತುತಿಸುವೆನು.

**ತ್ವತ್ತಃ ಸರ್ವಂ ತ್ವಂ ಹಿ ಸರ್ವಂ ಸ್ಮರಾರೇ ತ್ವಂ ಗೌರೀಶಸ್ತ್ವಂ ಚ ನಗ್ನೋಽತಿ ಶಾಂತಃ । ತ್ವಂ ವೈ ವೃದ್ಧಸ್ತ್ವಂ ಯುವಾ ತ್ವಂ ಚ ಬಾಲ- ಸ್ತತ್ತ್ವಂ ಯತ್ಕಿಂ ನಾಸ್ಯತಸ್ತ್ವಾನ್ನತೋಽಸ್ಮಿ ॥8॥**

ಭಾವಾರ್ಥ - ಹೇ!ಮನ್ಮಥವೈರಿಯೇ, ನಿನ್ನಿಂದಲೇ ನೀನು ಹುಟ್ಟು ಪಡೆದೆ. ಸಮಸ್ತವೂ ನೀನೇ ಆಗಿರುವೆ. ನೀನು ಗೌರೀಕಾಂತನು. ಬಿರುದುಗಳಿಲ್ಲದ ದಿಗಂಬರನು. ಅಂತೆಯೇ ಪ್ರಶಾಂತ ಸ್ವರೂಪನು. ನೀನು ವೃದ್ಧನು,ಯುವಕನು,ಬಾಲಕನು. ನಿನ್ನ ಹೊರತಾಗಿ ಪ್ರಪಂಚದಲ್ಲೇನೂ ಇಲ್ಲ. ಆದಕಾರಣನಿನಗೆ ನಾನು ನಮಿಸುವೆನು.

॥ ಇತಿ ಅಭಿಲಾಷಾಷ್ಟಕಂ ಸಂಪೂರ್ಣಂ ॥

## 6.20 ದಾರಿದ್ರ್ಯ ದುಃಖದಹನ ಸ್ತೋತ್ರಂ

**ವಿಶ್ವೇಶ್ವರಾಯ ನರಕಾರ್ಣವತಾರಣಾಯ ಕರ್ಣಾಮೃತಾಯ ಶಶಿಶೇಖರಭೂಷಣಾಯ । ಕರ್ಪೂರಕುಂದಧವಲಾಯ ಜಟಾಧರಾಯ ದಾರಿದ್ರ್ಯದುಃಖದಹನಾಯ ನಮಃಶಿವಾಯ ॥1॥**

ಭಾವಾರ್ಥ - ಜಗದೀಶ್ವರನೂ, ಪಾಪಸಾಗರದಿಂದ ಪಾರು ಮಾಡುವಾತನೂ, ಕಿವಿಗಳಿಗೆ ಅಮೃತ ರೂಪಿಯೂ, ಚಂದ್ರನನ್ನು ತಲೆಯಲ್ಲಿ ಧರಿಸಿಕೊಂಡು ಬೆಳಗುವಾತನೂ, ಮಲ್ಲಿಗೆ ಹಾಗೂ ಕರ್ಪೂರದಂತೆ ನಿರ್ಮಲವಾಗಿರುವವನೂ, ಜಟಾಧಾರಿಯೂ, ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಗೌರೀಪ್ರಿಯಾಯ ರಜನೀಶ ಕಲಾಧರಾಯ ಕಾಲಾಂತಕಾಯ ಭುಜಗಾಧಿಪ ಕಂಕಣಾಯ । ಗಂಗಾಧರಾಯ ಗಜರಾಜವಿಮರ್ಧನಾಯ ದಾರಿದ್ರ್ಯದುಃಖದಹನಾಯ ನಮಃಶಿವಾಯ ॥2॥**

ಭಾವಾರ್ಥ - ಗೌರೀದೇವಿಯ ಮೆಚ್ಚಿನವನೂ, ಚಂದ್ರನ ಕಲೆಯನ್ನು ಧರಿಸಿರುವಾತನೂ, ಸಂಹಾರಕಾರನೂ, ನಾಗರಾಜನನ್ನು ಬಳೆಯಂತೆ ಧಾರಣೆ ಮಾಡಿಕೊಂಡಾತನೂ, ಗಂಗೆಯನ್ನು ಧರಿಸಿಕೊಂಡಿರುವಾತನೂ, ಗಜರಾಜನ ಸೊಕ್ಕನ್ನು ಮುರಿದಾತನೂ, ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಭಕ್ತಿಪ್ರಿಯಾಯ ಭವರೋಗ ಭಯಾಪಹಾಯ ಉಗ್ರಾಯ ದುರ್ಗಭವಸಾಗರತಾರಣಾಯ । ಜ್ಯೋತಿರ್ಮಯಾಯ ಪುನರುದ್ಭವವಾರಣಾಯ ದಾರಿದ್ರ್ಯದುಃಖದಹನಾಯ ನಮಃಶಿವಾಯ ॥3॥**

ಭಾವಾರ್ಥ - ಭಕ್ತಿಯನ್ನು ಮೆಚ್ಚುವಾತನೂ, ಸಂಸಾರಸಾಗರದ ಭೀತಿಯನ್ನು ನಾಶಮಾಡುವಾತನೂ, ಭಯಂಕರ ರೂಪಿಯೂ, ಕಷ್ಟಸಾಧ್ಯವಾಗಿರುವ ಸಂಸಾರ ಸಾಗರದಿಂದ ರಕ್ಷಿಸುವಾತನೂ, ಜ್ಯೋತಿರ್ಮಯಸ್ವರೂಪನೂ, ಮರುಹುಟ್ಟನ್ನು

ಹೋಗಲಾಡಿಸುವವನೂ, ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಚರ್ಮಾಂಬರಾಯ ಶವಭಸ್ಮ ವಿಲೇಪನಾಯ ಭಾಲೇಕ್ಷಣಾಯ ಫಣಿಕುಂಡಲಮಂಡಿತಾಯ । ಮಂಜೀರಪಾದಯುಗಲಾಯ ಜಟಾಧರಾಯ ದಾರಿದ್ರ್ಯದುಃಖದಹನಾಯ ನಮಃಶಿವಾಯ ॥4॥**

ಭಾವಾರ್ಥ - ಚರ್ಮವನ್ನು ವಸನದಂತೆ ಧರಿಸಿದಾತನೂ, ಶವದ ಬೂದಿಯನ್ನು ಮೈಗೆ ಲೇಪಿಸಿಕೊಂಡಿರುವಾತನೂ, ಹಣೆಯಲ್ಲಿ ಕಣ್ಣು ಉಳ್ಳವನೂ, ಕಿವಿಗಳಿಗೆ ನಾಗಕುಂಡಲಗಳನ್ನು ಧರಿಸಿ ಶೋಭಿಸುವಾತನೂ, ಚರಣದ್ವಯಗಳಲ್ಲಿ ಗೆಜ್ಜೆಗಳನ್ನು ಹೊಂದಿರುವಾತನೂ, ಜಟಾಧಾರಿಯೂ ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಪಂಚಾನನಾಯ ಫಣಿರಾಜ ವಿಭೂಷಣಾಯ ಹೇಮಾಂಶುಕಾಯ ಭುವನತ್ರಯಮಂಡನಾಯ । ಆನಂದ ಭೂಮಿವರದಾಯ ತಮೋಹರಾಯ ದಾರಿದ್ರ್ಯದುಃಖದಹನಾಯ ನಮಃಶಿವಾಯ ॥5॥**

ಭಾವಾರ್ಥ - ಐದುಮೊಗದವನಾಗಿ, ನಾಗರಾಜವಿಭೂಷಿತನೂ, ಬಂಗಾರಮಯವಾಗಿರುವ ಉತ್ತರೀಯವನ್ನು ಧರಿಸಿಕೊಂಡಿರುವಾತನೂ, ಮೂರುಲೋಕಗಳಲ್ಲಿಯೂ ಪ್ರಕಾಶಿಸುವಾತನೂ, ಆನಂದಕ್ಕೆ ಆಶ್ರಯದಾತನೂ, ವರದಾಯಕನೂ, ಅಜ್ಞಾನವೆಂಬ ಅಂಧಕಾರವನ್ನು ನಾಶಗೊಳಿಸುವಾತನೂ, ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಭಾನುಪ್ರಿಯಾಯ ದುರಿತಾರ್ಣವತಾರಣಾಯ ಕಾಲಾಂತಕಾಯ ಕಮಲಾಸನಪೂಜಿತಾಯ । ನೇತ್ರತ್ರಯಾಯ ಶುಭಲಕ್ಷಣ ಲಕ್ಷಿತಾಯ ದಾರಿದ್ರ್ಯದುಃಖದಹನಾಯ ನಮಃಶಿವಾಯ ॥6॥**

ಭಾವಾರ್ಥ - ಸೂರ್ಯನಿಗೆ ಬೇಕಾದವನೂ, ಅನೀತಿಸಾಗರವನ್ನು ದಾಟಿಸುವಾತನೂ, ಲಯಕಾರಕನೂ, ಬ್ರಹ್ಮನಿಗೆ ಆರಾಧ್ಯನೂ, ಮುಕ್ಕಣ್ಣನೂ, ಸುಲಕ್ಷಣಯುತನೂ, ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ರಾಮಪ್ರಿಯಾಯ ರಘುನಾಥವರಪ್ರದಾಯ ನಾಗಪ್ರಿಯಾಯ ನಗರಾಜನಿಕೇತನಾಯ ।**
**ಪುಣ್ಯಾಯ ಪುಣ್ಯಚರಿತಾಯ ಸುರಾರ್ಚಿತಾಯ ದಾರಿದ್ರ್ಯದುಃಖದಹನಾಯ**
**ನಮಃಶಿವಾಯ ॥7॥**

ಭಾವಾರ್ಥ - ರಾಮನಿಗೆ ಬೇಕಾದವನೂ, ರಾಮನಿಗೆ ಅನುಗ್ರಹಿಸಿದಾತನೂ, ನಾಗನನ್ನು ಮೆಚ್ಚಿದಾತನೂ, ನಾಗರಾಜನಿಗೆ ಆಶ್ರಯವನ್ನಿತ್ತವನೂ, ಪುಣ್ಯ ರೂಪಿಯೂ, ಪಾವನ ಚರಿತನೂ, ದೇವಾನುದೇವರ್ಕಳಿಂದ ಆರಾಧಿಸಲ್ಪಡುವಾತನೂ ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಮುಕ್ತೀಶ್ವರಾಯ ಫಲದಾಯ ಗಣೇಶ್ವರಾಯ ಗೀತಪ್ರಿಯಾಯ**
**ವೃಷಭೇಶ್ವರವಾಹನಾಯ । ಮಾತಂಗಚರ್ಮವಸನಾಯ ಮಹೇಶ್ವರಾಯ**
**ದಾರಿದ್ರ್ಯದುಃಖದಹನಾಯ ನಮಃಶಿವಾಯ ॥8॥**

ಭಾವಾರ್ಥ - ಮುಕ್ತಿಗೆ ಪ್ರಭು ಸ್ವರೂಪನೂ, ಇಷ್ಟಾರ್ಥ ಫಲದಾಯಕನೂ, ಗಣಗಳಿಗೆ ಅಧೀಶ್ವರನೂ, ಸಂಗೀತ ಪ್ರಿಯನೂ, ವೃಷಭವಾಹನನೂ, ಗಜ ಚರ್ಮಾಂಬರಧಾರಿಯೂ, ಪರಮೇಶ್ವರನೂ ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ಗೌರೀವಿಲಾಸಭುವನಾಯ ಮಹೋದಯಾಯ ಪಂಚಾನನಾಯ ಶರಣಾಗತ ರಕ್ಷಕಾಯ**
**। ಶರ್ವಾಯ ಸರ್ವಜಗತಾಮಧಿಪಾಯ ತಸ್ಮೈ ದಾರಿದ್ರ್ಯದುಃಖದಹನಾಯ**
**ನಮಃಶಿವಾಯ ॥9॥**

ಭಾವಾರ್ಥ - ಗೌರೀದೇವಿಗೆ ಆನಂದಸ್ವರೂಪಿಯೂ, ಮುಕ್ತಿ ಪ್ರದಾಯಕನೂ, ಪಂಚಮುಖಿಯೂ, ಶರಣಾಗತ ಪರಿಪಾಲಕನೂ, ಪ್ರಳಯಾಂತಕನೂ, ಸಮಸ್ತ

ಬ್ರಹ್ಮಾಂಡಕ್ಕೆ ಪ್ರಭುವೂ, ಬಡತನದ ಬೇಗುದಿಯನ್ನು ಸುಡುವಾತನೂ ಆಗಿರುವ ಶಿವನಿಗೆ ನನ್ನ ನಮನಗಳು.

**ವಸಿಷ್ಠೇನ ಕೃತಂ ಸ್ತೋತ್ರಂ ಸರ್ವರೋಗ ನಿವಾರಣಂ । ಸರ್ವಸಂಪತ್ಕರಂ ಶೀಘ್ರಂ ಪುತ್ರಪೌತ್ರಾದಿವರ್ಧನಂ । ತ್ರಿಸಂಧ್ಯಂ ಯಃ ಪಠೇನ್ನಿತ್ಯಂ ಸಹಿಸ್ವರ್ಗಮವಾಪ್ನುಯಾತ್ ॥10॥**

ಭಾವಾರ್ಥ - ವಸಿಷ್ಟ ಮಹರ್ಷಿಗಳಿಂದ ರಚಿಸಲ್ಪಟ್ಟ ಈ ಸ್ತೋತ್ರವು ಸಮಸ್ತರೋಗಗಳನ್ನು ನಿವಾರಿಸುವುದಲ್ಲದೆ ಶೀಘ್ರವಾಗಿ ಸರ್ವ ಸಂಪದವನ್ನು ನೀಡುವುದು. ಮತ್ತು ಮಕ್ಕಳು, ಮೊಮ್ಮಕ್ಕಳಾದಿ ಸಂತತಿಯು ವರ್ಧಿಸುವುದು. ಈ ತೋತ್ರವನ್ನು ದಿನನಿತ್ಯವೂ ಮೂರು ಸಂಧ್ಯಾ ಸಮಯಗಳಲ್ಲಿ ಓದುವವನು ಸ್ವರ್ಗವಾಸವನ್ನು ಪಡೆಯುವನು.

॥ ಇತಿ ದಾರಿದ್ರ್ಯದುಃಖದಹನ ಸ್ತೋತ್ರಂ ಸಂಪೂರ್ಣಂ ॥

## 6.21 ಅಸಿತಕೃತ ಶಿವ ಸ್ತೋತ್ರಂ

**ಜಗದ್ಗುರೋ ನಮಸ್ತುಭ್ಯಂ ಶಿವಾಯ ಶಿವದಾಯಚ ।**
**ಯೋಗೀಂದ್ರಾಣಾಂ ಚ ಯೋಗೀಂದ್ರ ಗುರೂಣಾಂ ಗುರವೇ ನಮಃ ॥1॥**

ಭಾವಾರ್ಥ - ಬ್ರಹ್ಮಾಂಡಕ್ಕೆ ಗುರುವಾಗಿರುವಾತನೇ ನಿನಗೆ ನನ್ನ ನಮನಗಳು. ನೀನು ಮಂಗಲಕರನು. ಅಂತೆಯೇ ಮಂಗಲವನ್ನು ದಯಪಾಲಿಸುವಾತನು. ನೀನು ಯೋಗೀಂದ್ರರಲ್ಲಿ ಯೋಗೀಂದ್ರನು. ಗುರುಗಳಿಗೆ ಗುರುವು. ನಿನಗಿದೋ ನನ್ನ ನಮನಗಳು.

**ಮೃತ್ಯೋರ್ಮೃತ್ಯು ಸ್ವರೂಪೇಣ ಮೃತ್ಯುಸಂಸಾರಖಂಡನ ।**
**ಮೃತ್ಯೋರೀಶ ಮೃತ್ಯುಬೀಜ ಮೃತ್ಯುಂಜಯ ನಮೋಸ್ತುತೇ ॥2॥**

ಭಾವಾರ್ಥ - ನೀನು ಮೃತ್ಯುವಿಗೆ ಮೃತ್ಯುಸ್ವರೂಪನಾಗಿ ಜನನಮರಣಾದಿ ಸ್ವರೂಪದ ಸಂಸಾರವನ್ನು ಮುರಿಯುವವನು. ಹೇ!ಮೃತ್ಯುವಿನ ಅಧೀಶ್ವರನೇ, ಮೃತ್ಯುವಿಗೆ ಬೀಜ ಸ್ವರೂಪನೇ, ಮೃತ್ಯುಂಜಯನೇ, ನಿನಗಿದೋ ನನ್ನ ನಮನಗಳು.

**ಕಾಲರೂಪಂ ಕಲಯತಾಂ ಕಾಲಕಾಲೇಶ ಕಾರಣ ।**
**ಕಾಲಾದತೀತ ಕಾಲಸ್ಥ ಕಾಲಕಾಲ ನಮೋಸ್ತುತೇ ॥3॥**

ಭಾವಾರ್ಥ - ನೀನು ಅಂತ್ಯವನ್ನು ಲೆಕ್ಕಿಸುವವರ ಗುರಿಗೆ ಸಂಭವರೂಪನಾದ ಯಮರೂಪೀ ಪರಮೇಶ್ವರನು. ನೀನು ಮೃತ್ಯುವಿಗೆ ಮೃತ್ಯು ಸ್ವರೂಪನು. ನೀನು ಒಡೆಯನು. ಹಾಗೂ ಸಕಲಕ್ಕೂ ನಿಮಿತ್ತನು. ನೀನು ಯಮನಿಗೆ ಯಮಸ್ವರೂಪಿಯು. ಹೇ! ಮೃತ್ಯುವಿನ ಮೃತ್ಯುವೇ, ನಿನಗಿದೋ ನನ್ನ ನಮನಗಳು.

**ಗುಣಾತೀತ ಗುಣಾಧಾರ ಗುಣಬೀಜ ಗುಣಾತ್ಮಕಃ ।**
**ಗುಣೇಶ ಗುಣಿನಾಂ ಬೀಜ ಗುಣಿನಾಂ ಗುರವೇ ನಮಃ ॥4॥**

ಭಾವಾರ್ಥ - ಹೇ! ಗುಣಗಳಿಗೆ ಮೀರಿದವನೇ, ಗುಣಗಳಿಗೆ ಆಶ್ರಯನಾಗಿರುವವನೇ, ಗುಣಗಳಿಗೆ ಕಾರಣನಾದವನೇ, ಗುಣಸ್ವಭಾವನೇ, ಗುಣಾಧೀಶನೇ ಮತ್ತು ಗುಣವುಳ್ಳವುಗಳಿಗೆ ಆದಿ ನಿಮಿತ್ತನಾದವನೇ, ನೀನು ಸಮಸ್ತ ಗುಣವಂತರಿಗೆ ಗುರುವಾದವನು. ನಿನಗಿದೋ ನನ್ನ ನಮನಗಳು.

**ಬ್ರಹ್ಮಸ್ವರೂಪ ಬ್ರಹ್ಮಜ್ಞ ಬ್ರಹ್ಮಭಾವೇಚ ತತ್ಪರಃ ।**
**ಬ್ರಹ್ಮ ಬೀಜಸ್ವರೂಪೇಣ ಬ್ರಹ್ಮ ಬೀಜ ನಮೋಸ್ತುತೇ ॥5॥**

ಭಾವಾರ್ಥ - ಹೇ! ಬ್ರಹ್ಮಸ್ವರೂಪಿಯೇ, ತತ್ವಜ್ಞಾನಿಯೇ, ವೇದಾದಿಗಳ ತರ್ಕದಲ್ಲಿ ನಿರತನಾದವನೇ, ನೀನು ವೇದಗಳಿಗೆ ಮೂಲಕಾರಣನಿರುವೆ. ಆದಕಾರಣ ನೀನು ತತ್ವಗಳ ಉಗಮವೆನಿಸಿರುವೆ. ನಿನಗಿದೋ ನನ್ನ ನಮನಗಳು.

**ಇತಿ ಸ್ತುತ್ವಾ ಶಿವಂ ನತ್ವಾ ಪುರಸ್ತಸ್ಥೌ ಮುನೀಶ್ವರಃ ।**
**ದೀನವತ್ಸಾಶ್ರುನೇತ್ರಶ್ಚ ಪುಲಕಾಂಚಿತ ವಿಗ್ರಹಃ ॥6॥**

ಭಾವಾರ್ಥ - ಈ ರೀತಿಯಾಗಿ ಸ್ತೋತ್ರಮಾಡಿ ಶಿವನಿಗೆ ನಮಿಸಿದ ಬಳಿಕ ಮುನೀಶ್ವರನಾದ ಅಸಿತನು ಆತನ ಸಮ್ಮುಖಕ್ಕೆ ಬಂದು ನಿಂದನು. ದುಃಖಿತನಾದ ಅವನ ಕಣ್ಣುಗಳಿಂದ ಜಲಧಾರೆಯು ಸುರಿಯತೊಡಗಿತು. ದೇಹವಿಡೀ ರೋಮಾಂಚನಗೊಂಡವು.

**ಅಸಿತೇನ ಕೃತಂ ಸ್ತೋತ್ರಂ ಭಕ್ತಿಯುಕ್ತಶ್ಚ ಯಃ ಪಠೇತ್ ।**
**ವರ್ಷಮೇಕಂ ಹವಿಷ್ಯಾನ್ನ ಶ್ರೀಶಂಕರಸ್ಯ ಮಹಾತ್ಮನಃ ॥7॥**

ಭಾವಾರ್ಥ - ಅಸಿತ ಮುನಿಯಿಂದ ಮಾಡಲ್ಪಟ್ಟ ಭಗವಾನ್ ಶಂಕರನ ಈ ಸ್ತುತಿಯನ್ನು ಭಕ್ತಿಯಿಂದ ಯಾವಾತನು ಅನುದಿನವೂ ಓದುವನೋ ಮತ್ತು ಒಂದು ವರ್ಷದ ತನಕ ನಿತ್ಯವೂ ಹವಿಷ್ಯಾನ್ನವನ್ನು ಉಂಡು ಇರುವನೋ-

**ಸ ಲಭೇದ್ವೈಷ್ಣವಂ ಪುತ್ರಂ ಜ್ಞಾನಿನಂ ಚಿರಜೀವಿನಂ ।**
**ಭವೇದ್ಧನಾಢ್ಯೋ ದುಃಖೀ ಚ ಮೂಕೋ ಭವತಿ ಪಂಡಿತಃ ॥8॥**

ಭಾವಾರ್ಥ - ಅಂತಹವನುವಿದ್ವಾಂಸನಾಗಿಯೂ, ಮೃತ್ಯು ರಹಿತನಾಗಿಯೂ, ವಿಷ್ಣು ಭಕ್ತನಾಗಿಯೂ ಇರುವ ಪುತ್ರನನ್ನು ಪಡೆಯುವನು. ಸಂಪತ್ತಿನ ಕೊರತೆಯಿಂದ ದುಃಖಿತನಾದವನು ಧನಾಢ್ಯನಾಗುವನು. ಮೂಕನು ವಿದ್ವಾಂಸನಾಗುವನು.

**ಅಭಾರ್ಯೋ ಲಭತೇ ಭಾರ್ಯಾಂ ಸುಶೀಲಾಂ ಚ ಪತಿವ್ರತಾಂ ।**
**ಇಹಲೋಕೇ ಸುಖಂ ಭುಕ್ತ್ವಾ ಯಾತ್ಯಂತೇ ಶಿವ ಸನ್ನಿಧಿಂ ॥9॥**

ಭಾವಾರ್ಥ - ಸತಿ ವಿಹೀನನು ಸದ್ಗುಣ ಸಂಪನ್ನಳಾಗಿ ಪತಿವ್ರತೆಯಾಗಿರುವ ಸತಿಯನ್ನು ಹೊಂದುವನು. ಅಲ್ಲದೆ ಅವನು ಇಹಲೋಕದಲ್ಲಿ ಸುಖವನ್ನು ಅನುಭವಿಸಿ ಅಂತ್ಯದಲ್ಲಿ ಶಿವನ ಸನ್ನಿಧಾನವನ್ನು ಸೇರುವನು.

**ಇದಂ ಸ್ತೋತ್ರಂ ಪುರಾದತ್ತಂ ಬ್ರಹ್ಮಣಾ ಚ ಪ್ರಚೇತಸೇ ।**
**ಪ್ರಚೇತಸಾ ಸ್ವಪುತ್ರಾಯಾಸಿತಾಯ ದತ್ತಮುತ್ತಮಂ ॥10॥**

ಭಾವಾರ್ಥ - ಪೂರ್ವಕಾಲದಲ್ಲಿ ಬ್ರಹ್ಮನು ಉತ್ತಮವಾಗಿರುವ ಈ ಸ್ತುತಿಯನ್ನು ಪ್ರಚೇತಸನಿಗೆ ಉಪದೇಶಿಸಿದನು. ನಂತರ ಪ್ರಚೇತಸನು ತನ್ನ ಮಗನಾದ ಅಸಿತನಿಗೆ ಉಪದೇಶಿಸಿದನು.

॥ ಇತಿ ಅಸಿತಕೃತ ಶಿವ ಸ್ತೋತ್ರಂ ಸಂಪೂರ್ಣಂ ॥

## 6.22 ಶಿವರಕ್ಷಾ ಸ್ತೋತ್ರಂ

**ಅಸ್ಯ ಶ್ರೀ ಶಿವರಕ್ಷಾ ಸ್ತೋತ್ರ ಮಂತ್ರಸ್ಯ ಯಾಜ್ಞವಲ್ಕ್ಯ ಋಷಿಃ । ಶ್ರೀ ಸದಾಶಿವೋ ದೇವತಾ । ಅನುಷ್ಟುಪ್ ಛಂದಃ । ಶ್ರೀ ಸದಾಶಿವ ಪ್ರೀತ್ಯರ್ಥಂ ಶಿವರಕ್ಷಾ ಸ್ತೋತ್ರ ಜಪೇ ವಿನಿಯೋಗಃ ॥**

ಬಾವಾರ್ಥಃ- ಈ ಶಿವರಕ್ಷಾ ಸ್ತೋತ್ರವೆನ್ನುವ ಮಂತ್ರಕ್ಕೆ ಯಾಜ್ಞವಲ್ಕ್ಯ ಮಹರ್ಷಿಯು ಋಷಿಯಾಗಿದ್ದು ಶ್ರೀ ಸದಾಶಿವನು ದೇವತೆಯಾಗಿದ್ದು ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಶ್ರೀ ಸದಾಶಿವನ ಒಲುಮೆಗಾಗಿ ಶಿವರಕ್ಷಾ ಸ್ತೋತ್ರವನ್ನು ಜಪದಲ್ಲಿ ತೊಡಗಿಸಿಕೊಳ್ಳುವುದಾಗಿದೆ.

**ಚರಿತಂ ದೇವದೇವಸ್ಯ ಮಹಾದೇವಸ್ಯ ಪಾವನಂ ।**
**ಅಪಾರ ಪರಮೋದಾರಂ ಚತುರ್ವರ್ಗಸ್ಯ ಸಾಧನಂ ॥1॥**

ಭಾವಾರ್ಥ - ದೇವಾಧಿದೇವನಾಗಿರುವ ಮಹಾದೇವನ ಪಾವನಮಯವಾಗಿರುವ ಈ ಚರಿತ್ರೆಯು ವಿಶಾಲವೂ, ಉತ್ತಮವೂ ಆಗಿದ್ದು ಧರ್ಮಾರ್ಥ, ಕಾಮ, ಮೋಕ್ಷಗಳೆನ್ನುವ ಚತುರ್ವರ್ಗಗಳಿಗೂ ಅನುಸರಿಸಲು ಯೋಗ್ಯ ಸಲಕರಣೆಯಾಗಿದೆ.

**ಗೌರೀವಿನಾಯಕೋಪೇತಂ ಪಂಚವಕ್ತ್ರಂ ತ್ರಿನೇತ್ರಕಂ ।**
**ಶಿವಂ ಧ್ಯಾತ್ವಾ ದಶಭುಜಂ ಶಿವರಕ್ಷಾಂ ಪಠೇನ್ನರಃ ॥1॥**

ಭಾವಾರ್ಥ - ಗೌರೀಗಣಪತಿಯರೊಡಗೂಡಿರುವವನೂ, ಐಮೊಗವುಳ್ಳವನೂ, ಮುಕ್ಕಣ್ಣನೂ, ಹತ್ತು ತೋಳುಗಳನ್ನು ಹೊಂದಿರುವಾತನೂ, ಆದ ಶಿವನನ್ನು ಸ್ತುತಿಸಿ ಮನುಜನು ಶಿವರಕ್ಷಾ ಮಂತ್ರವನ್ನು ಪಠಿಸಬೇಕು.

**ಗಂಗಾಧರಃ ಶಿರಃ ಪಾತು ಭಾಲಮರ್ಧೇಂದು ಶೇಖರಃ ।**
**ನಯನೇ ಮದನ ಧ್ವಂಸೀಕರ್ಣೌ ಸರ್ಪ ವಿಭೂಷಣಃ ॥2॥**

ಭಾವಾರ್ಥ - ಗಂಗೆಯನ್ನು ಧರಿಸಿದಾತನು ನನ್ನ ತಲೆಯನ್ನೂ, ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿದಾತನು ನನ್ನ ಹಣೆಯನ್ನೂ, ಮನ್ಮಥನನ್ನು ಸಂಹರಿಸಿದಾತ ನನ್ನ ಕಣ್ಣುಗಳನ್ನೂ, ಸರ್ಪವನ್ನು ಆಭರಣವಾಗಿ ಧರಿಸಿಕೊಂಡಾತನು ನನ್ನ ಕಿವಿಗಳನ್ನೂ ರಕ್ಷಿಸಲಿ.

**ಘ್ರಾಣಂ ಪಾತು ಪುರಾರಾತಿರ್ಮುಖಂ ಪಾತು ಜಗತ್ಪತಿಃ ।**
**ಜಿಹ್ವಾಂ ವಾಗೀಶ್ವರಃ ಪಾತು ಕಂಧರಾಂ ಶಿತಿಕಂಧರಃ ॥4॥**

ಭಾವಾರ್ಥ - ತ್ರಿಪುರಾಸುರ ಸಂಹಾರಿಯು ನನ್ನ ಮೂಗನ್ನೂ, ಜಗದಧೀಶನು ನನ್ನ ಮುಖವನ್ನೂ, ವಾಕ್ಕಿಗೆ ಅಧಿಪತಿಯಾಗಿರುವಾತನು ನನ್ನ ನಾಲಿಗೆಯನ್ನೂ, ಕರಿದಾದ ಕೊರಳುಳ್ಳಾತ ನನ್ನ ಕೊರಳನ್ನು ರಕ್ಷಿಸಲಿ.

**ಶ್ರೀಕಂಠಃ ಪಾತು ಮೇ ಕಂಠಂ ಸ್ಕಂಧೌ ವಿಶ್ವ ಧುರಂಧರಃ ।**
**ಭುಜೌ ಭೂಭಾರ ಸಂಹರ್ತಾ ಕರೌ ಪಾತು ಪಿನಾಕಧೃಕ್ ॥5॥**

ಭಾವಾರ್ಥ - ಶ್ರೀಕಂಠನು ನನ್ನ ಕುತ್ತಿಗೆಯನ್ನೂ, ಜಗದಾಧಾರನು ನನ್ನ ಹೆಗಲುಗಳನ್ನೂ, ಭೂಭಾರವನ್ನು ಅಪಹರಿಸಿದಾತನು ನನ್ನ ತೋಳುಗಳನ್ನೂ, ಪಿನಾಕವೆಂಬ ಧನುರ್ಧರನು ನನ್ನ ಹಸ್ತಗಳನ್ನೂ ರಕ್ಷಿಸಲಿ.

**ಹೃದಯಂ ಶಂಕರಃ ಪಾತು ಜಠರಂ ಗಿರಿಜಾಪತಿಃ ।**
**ನಾಭಿಂ ಮೃತ್ಯುಂಜಯಃ ಪಾತು ಕಟೀ ವ್ಯಾಘ್ರಾಜಿನಾಂಬರಃ ॥6॥**

ಭಾವಾರ್ಥ - ಶಂಕರನು ನನ್ನ ಹೃದಯವನ್ನೂ, ಗಿರಿಜಾಕಾಂತನು ನನ್ನ ಉದರವನ್ನೂ, ಮೃತ್ಯುವನ್ನು ಜಯಿಸಿದಾತನು ನನ್ನ ಹೊಕ್ಕಳವನ್ನೂ, ಹುಲಿಯ ಚರ್ಮವನ್ನು ಹೊದ್ದಾತನು ನನ್ನ ಸೊಂಟವನ್ನೂ ರಕ್ಷಿಸಲಿ.

**ಸಕ್ಥಿನೀ ಪಾತು ದೀನಾರ್ತ ಶರಣಾಗತ ವತ್ಸಲ ।**

**ಊರೂ ಮಹೇಶ್ವರಃ ಪಾತು ಜಾನುನೀ ಜಗದೀಶ್ವರಃ ॥7॥**

ಭಾವಾರ್ಥ - ದರಿದ್ರರೂ, ದುಃಖಿತರೂ ಆಶ್ರಯವನ್ನು ಹೊಂದ ಬಯಸುವವರೂ ಆದವರಲ್ಲಿ ಕರುಣೆಯುಳ್ಳಾತನು ನನ್ನ ತೊಡೆಯ ಮೇಲ್ಭಾಗವನ್ನೂ, ಮಹೇಶ್ವರನು ನನ್ನ ತೊಡೆಗಳನ್ನೂ, ವಿಶ್ವೇಶ್ವರನು ನನ್ನ ಮೊಣಕಾಲುಗಳನ್ನೂ ರಕ್ಷಿಸಲಿ.

**ಜಂಘೇಪಾತು ಜಗತ್ಕರ್ತಾ ಗುಲ್ಫೌಪಾತು ಗಣಾಧಿಪಃ ।**

**ಚರಣೌ ಕರುಣಾಸಿಂಧುಃ ಸರ್ವಾಂಗಾನಿ ಸದಾಶಿವಃ ॥8॥**

ಭಾವಾರ್ಥ - ಜಗತ್ಕರ್ತನು ನನ್ನ ಮೀನಗಂಡಗಳನ್ನೂ, ಗಣಗಳ ಅಧಿನಾಯಕನು ನನ್ನ ಪಾದಗಳ ಗಂಟುಗಳನ್ನೂ, ಕರುಣಾಸಾಗರನು ನನ್ನ ಪಾದಗಳನ್ನೂ, ಸದಾಶಿವನು ನನ್ನ ದೇಹದ ಎಲ್ಲಾ ಭಾಗಗಳನ್ನೂ ರಕ್ಷಿಸಲಿ.

**ಏತಾಂ ಶಿವಬಲೋ ಪೇತಾಂ ರಕ್ಷಾಂ ಯಃ ಸುಕೃತೀಪಠೇತ್ ।**

**ಸಭುಕ್ತ್ವಾ ಸಕಲಾನ್ಕಾಮಾನ್ ಶಿವಸಾಯುಜ್ಯ ಮಾಪ್ನುಯಾತ್ ॥9॥**

ಭಾವಾರ್ಥ - ಈ ತೆರನಾದ ಶಿವಬಲವನ್ನು ಹೊಂದಿರುವ ರಕ್ಷಾಸ್ತೋತ್ರವನ್ನು ಭಾಗ್ಯವಂತನಾಗಿರುವ ಯಾವಾತನು ಓದುವನೋ ಅವನು ಸಮಸ್ತ ಇಚ್ಛೆಗಳನ್ನು ಭೋಗಿಸಿ ಶಿವ ಸನ್ನಿಧಿಯಾಗಿರುವ ಮೋಕ್ಷವನ್ನು ಹೊಂದುವನು.

**ಗ್ರಹಭೂತ ಪಿಶಾಚಾದ್ಯಾಸ್ತ್ರೈಲೋಕ್ಯೇ ವಿಚರಂತಿ ಯೇ ।**

**ದೂರಾದಾಶು ಫಲಾಯಂತೇ ಶಿವನಾಮಾಭಿರಕ್ಷಣಾತ್ ॥10॥**

ಭಾವಾರ್ಥ - ಶಿವನಾಮದ ಶಕ್ತಿಯಿಂದ ಸುತ್ತುಮುತ್ತಲೂ ಸರ್ವ ದಿಕ್ಕುಗಳಲ್ಲಿಯೂ ರಕ್ಷಣೆದೊರಕಿ ಮೂರು ಲೋಕಗಳಲ್ಲಿ ತಿರುಗಾಡುವ ಯಾ ಸಂಚರಿಸುವ ದುಷ್ಟಗ್ರಹಗಳು, ಭೂತಪಿಶಾಚಾದಿಗಳು ಶೀಘ್ರವಾಗಿ ದೂರದಿಂದಲೇ ಪಲಾಯನಗೈಯುವವು.

**ಅಭಯಂಕರ ನಾಮೇದಂ ಕವಚಂ ಪಾರ್ವತೀ ಪತೇಃ ।**
**ಭಕ್ತ್ಯಾಬಿಭರ್ತಿ ಯಃ ಕಂಠೇ ತಸ್ಯ ವಶ್ಯಂ ಜಗತ್ರಯಂ ॥11॥**

ಭಾವಾರ್ಥ - ಪಾರ್ವತೀದೇವಿಯ ಕಾಂತನಾಗಿರುವ ಶಂಕರನ ಈ ಕವಚವು ಹೆದರಿಕೆಯನ್ನು ನಾಶಗೊಳಿಸುವ ಹೆಸರುಳ್ಳದ್ದಾಗಿದೆ. ಈ ಕವಚವನ್ನು ಭಕ್ತಿಶ್ರದ್ಧಾಯುಕ್ತನಾಗಿ ಕುತ್ತಿಗೆಯಲ್ಲಿ ಧರಿಸುವಾತನಿಗೆ ಮೂರುಲೋಕಂಗಳೂ ವಶವಾಗುವವು.

**ಇಮಾಂ ನಾರಾಯಣಃ ಸ್ವಪ್ನೇ ಶಿವರಕ್ಷಾಂ ಯಥಾದಿಶತ್ ।**
**ಪ್ರಾತರುತ್ಥಾಯ ಯೋಗೀಂದ್ರೋ ಯಾಜ್ಞವಲ್ಕ್ಯಸ್ತಥಾಽಲಿಖಿತ್ ॥12॥**

ಈ ಶಿವರಕ್ಷಾಸ್ತೋತ್ರವನ್ನು ನಾರಾಯಣನು ಯಾಜ್ಞವಲ್ಕ್ಯ ಮುನಿಗೆ ಯಾವ ರೀತಿಯಲ್ಲಿ ಹೇಳ್ದನೋ ಹಾಗೆಯೇ ಮಹಾತ್ಮನಾದ ಯಾಜ್ಞವಲ್ಕ್ಯ ಮುನಿಯು ಉಷಃಕಾಲದಲೆದ್ದು ಅಕ್ಷರಶಃ ಬರೆದನು.

॥ ಇತಿ ಶಿವರಕ್ಷಾ ಸ್ತೋತ್ರಂ ಸಂಪೂರ್ಣಂ ॥

## 6.23 ಹಿಮಾಲಯ ಕೃತ ಶಿವ ಸ್ತೋತ್ರಂ

**ಹಿಮಾಲಯ ಉವಾಚಃ-** ಹಿಮಾಲಯನು ಹೇಳಿದನುಃ-

**ತ್ವಂ ಬ್ರಹ್ಮಾ ಸೃಷ್ಟಿಕರ್ತಾ ಚ ತ್ವಂ ವಿಷ್ಣುಃ ಪರಿಪಾಲಕಃ ।**
**ತ್ವಂ ಶಿವಃ ಶಿವದೋಽನಂತಃ ಸರ್ವಸಂಹಾರಕಾರಕಃ ॥1॥**

ಭಾವಾರ್ಥ - ಸ್ವಾಮೀ, ಭಗವಂತನೇ, ನೀನು ಸೃಷ್ಟಿಕರ್ತ ಬ್ರಹ್ಮನೇ ಆಗಿರುವೆ. ಅಂತೆಯೇ ಜಗತ್ತಿನ ಪರಿಪಾಲಕನಾಗಿರುವ ವಿಷ್ಣುವೂ ಆಗಿರುವೆ. ಹಾಗೆಯೇ ಸಮಸ್ತವನ್ನೂ ಸಂಹರಿಸುವ ಅಂತ್ಯರಹಿತನೂ ಶುಭದಾಯಕನೂ ಆಗಿರುವ ಮಹಾದೇವ ಶಿವನೂ ಆಗಿರುವೆ.

**ತ್ವಮೀಶ್ವರೋ ಗುಣಾತೀತೋ ಜ್ಯೋತಿರೂಪಃಸನಾತನಃ ।**
**ಪ್ರಕೃತಃ ಪ್ರಕೃತೀಶಶ್ಚ: ಪ್ರಾಕೃತಃ ಪ್ರಕೃತೇ ಪರಃ ॥2॥**

ಭಾವಾರ್ಥ - ನೀನು ಆಳುವಾತನೂ, ತತ್ವ-ರಜ-ತಮೋ ಗುಣಗಳಿಗೆ ನಿಲುಕದವನೂ, ದೀಪ್ತಿರೂಪಿಯೂ ಆಗರುವೆ. ನೀನು ನಿಸರ್ಗವೂ ನಿಸರ್ಗದ ದೊರೆಯೂ ಆಗಿರುವೆ. ನೀನು ಮೂಲ ದ್ರವ್ಯ ಸ್ವರೂಪನಾದಾಗ್ಯೂ ಸ್ವಭಾವಧರ್ಮದಿಂದ ಹೊರತಾಗಿರುವೆ.

**ನಾನಾರೂಪವಿಧಾತಾ ತ್ವಂ ಭಕ್ತಾನಾಂ ಧ್ಯಾನ ಹೇತವೇ ।**
**ಯೇಷು ರೂಪೇಷು ಯತ್ಪ್ರೀತಿಸ್ತತ್ತದ್ರೂಪಂ ಬಿಭರ್ಷಿ ಚ ॥3॥**

ಭಾವಾರ್ಥ - ಭಕ್ತರು ಸ್ತುತಿಸಲೋಸುಗ ನೀನು ವಿವಿಧ ಅವತಾರಗಳನ್ನು ಧರಿಸಿರುವೆ. ಯಾವ್ಯಾವ ಅವತಾರಗಳಲ್ಲಿ ಯಾರ ಕುರಿತು ಮೆಚ್ಚುಗೆಯುಂಟಾಯಿತೋ ಅವರುಗಳಿಗಾಗಿ ಆಯಾ ಅವತಾರಗಳನ್ನು ತಾಳಿರುವೆ.

**ಸೂರ್ಯಸ್ತ್ವಂ ಸೃಷ್ಟಿ ಜನಕ ಆಧಾರಃ ಸರ್ವ ತೇಜಸಾಂ ।**
**ಸೋಮಸ್ತ್ವಂ ಸಸ್ಯಪಾತಂ ಚ ಸತತಂ ಶೀತ ರಶ್ಮಿನಾ ॥4॥**

ಭಾವಾರ್ಥ - ನೀನು ಬ್ರಹ್ಮಾಂಡದ ಉಗಮವಾದ ಸೂರ್ಯ ಸ್ವರೂಪನು. ಸಮಸ್ತ ಪೌರುಷಗಳಿಗೆ ಆಧಾರನಾಗಿರುವೆ. ನೀನು ಶೀತಲಕಿರಣಗಳಿಂದ ನಿರಂತರ ಸಸ್ಯ ಸಂಪತ್ತನ್ನು ಸಂರಕ್ಷಿಸುವ ಚಂದ್ರನೂ ಆಗಿರುವೆ.

**ವಾಯುಸ್ತ್ವಂ ವರುಣಸ್ತ್ವಂ ಚ ವಿದ್ವಾಂಶ್ಚ ವಿದುಷಾಂ ಗುರುಃ ।**
**ಮೃತ್ಯುಂಜಯೋ ಮೃತ್ಯುಮೃತ್ಯುಃ ಕಾಲಕಾಲೋ ಯಮಾಂತಕಃ ॥5॥**

ಭಾವಾರ್ಥ - ವಾಯುವೇ ನೀನು. ನೀನೇ ವರುಣನು. ವಿದ್ವಾಂಸನೂ ವಿದ್ವಾಂಸರಿಗೆ ಗುರುವೂ ನೀನೇ ಆಗಿರುವೆ. ನೀನು ಕಾಲನನ್ನು ಗೆದ್ದವನು. ಕಾಲನಿಗೆ ಮಹಾಕಾಲನು. ಮೃತ್ಯುವಿಗೆ ನೀನು ಮೃತ್ಯು ಸ್ವರೂಪನು. ಯಮನಿಗೆ ನೀನು ಯಮನೂ ಆದವನು.

**ವೇದಸ್ತ್ವಂ ವೇದಕರ್ತಾ ಚ ವೇದವೇದಾಂಗ ಪಾರಗಃ ।**
**ವಿದುಷಾಂ ಜನಕಸ್ತ್ವಂ ಚ ವಿದ್ವಾಂಶ್ಚ ವಿದುಷಾಂ ಗುರುಃ ॥6॥**

ಭಾವಾರ್ಥ - ವೇದಗಳು ನೀನು. ವೇದಕರ್ತಾರನೂ, ವೇದವೇದಾಂಗಾದಿಗಳ ಪಾರಂಗತನೂ ನೀನೇ ಆಗಿರುವೆ. ಪಂಡಿತರ ಪಿತೃಸ್ವರೂಪನು ನೀನು. ಪಂಡಿತರ ಗುರುವೂ ನೀನೇ ಆಗಿರುವೆ.

**ಮಂತ್ರಸ್ತ್ವಂ ಹಿ ಜಪಸ್ತ್ವಂ ಹಿ ತಪಸ್ತ್ವಂ ತತ್ಫಲಪ್ರದಃ ।**
**ವಾಕ್ ತ್ವಂ ರಾಗಾಧಿ ದೇವೀ ತ್ವಂ ತತ್ಕರ್ತಾ ತದ್ಗುರುಃ ಸ್ವಯಂ ॥7॥**

ಭಾವಾರ್ಥ - ಜಪತಪಾದಿಮಂತ್ರಗಳು ನೀನೇ ಆಗಿರುವೆ. ಅಂತೆಯೇ ಅವುಗಳಿಗೆ ಫಲವನ್ನು ಒದಗಿಸುವಾತನೂ ನೀನೇ. ವಾಕ್ಕುವು ನೀನು. ಮಮತೆಗೆ ಅಧಿದೈವವು ನೀನು. ಜನ್ಮದಾತೃವೂ, ಗುರುವೂ ನೀನೇ ಆಗಿರುವೆ.

**ಅಹೋ ಸರಸ್ವತೀ ಬೀಜ ಕಸ್ತ್ವಾಂ ಸ್ತೋತು ಮಹೇಶ್ವರಃ ।**
**ಇತ್ಯೇವ ಮುಕ್ತ್ವಾ ಶೈಲೇಂದ್ರಸ್ತಸ್ಥೌ ಧೃತ್ವಾ ಪದಾಂಬುಜಂ ॥8॥**

ಭಾವಾರ್ಥ - ಸಂಬೋಧನಾ ಸರಸ್ವತಿಗೆ ಬೀಜ ಸ್ವರೂಪನಾಗಿರುವ ಒಡೆಯನೇ! ಇಲ್ಲಿ ನಿನ್ನನ್ನು ಅದಾರು ಸ್ತೋತ್ರಮಾಡಬಲ್ಲರು ಎನ್ನುತ್ತಾ ಪರ್ವತರಾಜನಾಗಿರುವ ಹಿಮವಂತನು ಮಹಾದೇವ ಶಿವನ ಅಡಿದಾವರೆಗಳನ್ನು ಶಿರದಲ್ಲಿ ಧರಿಸಿದನು.

**ತತ್ರೋವಾಸ ತಮಾಭೋಧ್ಯ ಚಾವರುಹ್ಯ ವೃಷಾಚ್ಛಿವಃ ।**
**ಸ್ತೋತ್ರಮೇತನ್ಮಹಾಪುಣ್ಯಂ ತ್ರಿಸಂಧ್ಯಂ ಯಃ ಪಠೇನ್ನರಃ ॥9॥**

ಭಾವಾರ್ಥ - ಭಗವಂತನಾಗಿರುವ ಶಿವನು ನಂದಿಯ ಮೇಲೆ ಕುಳಿತು ಆ ಪರ್ವತರಾಜನಿಗೆ ಉಪದೇಶಿಸತೊಡಗಿದನು. "ಯಾರು ಈ ಪರಮ ಪಾವನವಾಗಿರುವ ಸ್ತೋತ್ರಗಳನ್ನು ದಿನದ ಮೂರೂ ಸಂಧ್ಯಾಸಮಯಗಳಲ್ಲಿ ಪಠಿಸುತ್ತಾನೋ ಆತನು. .

**ಮುಚ್ಯ್ಯತೇ ಸರ್ವ ಪಾಪೇಭ್ಯೋ ಭಯೇಭ್ಯಶ್ಚ ಭವಾರ್ಣವೇ ।**
**ಅಪುತ್ರೋ ಲಭತೇ ಪುತ್ರಂ ಮಾಸಮೇಕಪಠೇದ್ಯದಿ ॥10॥**

ಭಾವಾರ್ಥ - ಸಂಸಾರಸಾಗರದಲ್ಲಿ ಇದ್ದವನಾದಾಗ್ಯೂ ಸಮಸ್ತ ಪಾಪಗಳಿಂದ ಹಾಗೂ ಭೀತಿಗಳಿಂದ ವಿಮುಕ್ತನಾಗುವನು. ಅಲ್ಲದೆ ಸಂತತಿ ವಿಹೀನನು ಒಂದು ಮಾಸ ಪಠಿಸಿದ್ದೇ ಆದರೆ ಸಂತತಿಯನ್ನು ಹೊಂದುವನು.

**ಭಾರ್ಯಾಹೀನೋ ಲಭೇದ್ಭಾರ್ಯಾಂ ಸುಶೀಲಾಂ ಸುಮನೋಹರಾಂ ।**
**ಚಿರಕಾಲಗತಂ ವಸ್ತು ಲಭತೇ ಸಹಸಾ ಧ್ರುವಂ ॥11॥**

ಭಾವಾರ್ಥ - ಪತ್ನಿ ವಿರಹಿತನಿಗೆ ಸುಶೀಲಳೂ, ಪರಮಸುಂದರಿಯೂ ಆಗಿರುವ ಪತ್ನಿಯು ದೊರಕುವಳು. ಅಲ್ಲದೆ ಆತನು ಬಹುಸಮಯದಿಂದ ಕಳೆದುಕೊಂಡಿರುವ ವಸ್ತುಗಳನ್ನು ಕೂಡಾ ಆತ ಖಚಿತವಾಗಿ ಪಡೆಯುವನು.

**ರಾಜ್ಯಭ್ರಷ್ಟೋ ಲಭೇದ್ರಾಜ್ಯಂ ಶಂಕರಸ್ಯ ಪ್ರಸಾದತಃ ।**
**ಕಾರಾಗಾರೇ ಸ್ಮಶಾನೇ ಚ ಶತ್ರುಗ್ರಸ್ತೇಽತಿಸಂಕಟೇ ॥12॥**

ಭಾವಾರ್ಥ - ರಾಜ್ಯಾದಿ ಸ್ಥಾನಮಾನಾದಿಗಳನ್ನು ಕಳೆದುಕೊಂಡವನು ಭಗವಂತನಾದ ಮಹಾದೇವನ ಪರಮಪ್ರಸಾದದಿಂದ ರಾಜ್ಯವನ್ನು ಪುನರಪಿ ಪಡೆಯುವನು. ಬಂದೀಖಾನೆಯಲ್ಲಿ, ಸ್ಮಶಾನದಲ್ಲಿ, ವೈರಿಗಳವಶದಲ್ಲಿರುವಾಗ ಮತ್ತು ಅತಿ ದುಃಖಿತನಾಗಿರುವಾಗ. . .

**ಗಭೀರೇಽತಿಜಲಾಕೀರ್ಣೇ ಭಗ್ನಪೋತೇ ವಿಷಾದತೇ ।**
**ರಣಮಧ್ಯೇ ಮಹಾಭೀತೇ ಹಿಂಸ್ರಜಂತುಸಮನ್ವಿತೇ ॥13॥**

ಭಾವಾರ್ಥ - ಅತ್ಯಧಿಕ ಜಲದಿಂದ ಕೂಡಿದ ಆಳವಾದ ಮಹಾಜಲಾಶಯದಲ್ಲಿ ನೌಕೆಯು ಒಡೆದಿರುವಾಗ, ವಿಷಭಕ್ಷಣೆಯಾದಾಗ, ಅತಿ ಘೋರಸಂಗ್ರಾಮದಲ್ಲಿ ಸಿಲುಕಿದಾಗ, ಘಾತುಕ ಪಶುಗಳಿಂದ ಕೂಡಿದಾಗ. . . .

**ಯಃ ಪಠೇಚ್ಛ್ರದ್ಧಯಾ ಸಮ್ಯಕ್ ಸ್ತೋತ್ರ ಮೇತಜ್ಜಗದ್ಗುರೋ।**
**ಸರ್ವತೋ ಮುಚ್ಯತೇ ಸ್ತುತ್ವಾ ಶಂಕರಸ್ಯ ಪ್ರಸಾದತಃ ॥14॥**

ಭಾವಾರ್ಥ - ಈ ಸ್ತುತಿಯನ್ನು ಪಠಿಸಿ ಮನುಜನು ಭಗವಾನ್ ಶಂಕರನ ಮಹಾಪ್ರಸಾದದಿಂದ ಸಮಸ್ತ ಭೀತಿಗಳಿಂದ ಮುಕ್ತನಾಗುವನು.

॥ ಇತಿ ಹಿಮಾಲಯಕೃತ ಶಿವಸ್ತೋತ್ರಂ ಸಂಪೂರ್ಣಂ ॥

## 6.24 ವಿಶ್ವನಾಥಾಷ್ಟಕಂ

**ಗಂಗಾತರಂಗ ರಮಣಿಯ ಜಟಾ ಕಲಾಪಂ ಗೌರೀ ನಿರಂತರ ವಿಭೂಷಿತ ವಾಮಭಾಗಂ ।**
**ನಾರಾಯಣ ಪ್ರಿಯ ಮನಂಗ ಮದಾಪಹಾರಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥1॥**

ಭಾವಾರ್ಥ - ಯಾರ ಮನೋಹರವಾದ ಕೇಶಸಮೂಹವು ಗಂಗೆಯ ತೆರೆಗಳಿಂದ ಶೋಭಿಸುತ್ತಿದೆಯೋ, ಯಾವಾತನ ಎಡಭಾಗದಲ್ಲಿ ಪಾರ್ವತಿಯು ನಿರಂತರ ನೆಲೆಯಾಗಿರುವಳೋ, ಯಾವಾತನು ನಾರಾಯಣನಿಗತಿಪ್ರಿಯನೋ, ಯಾರು ಮನ್ಮಥನ ಗರ್ವವನ್ನು ಭಂಗಗೊಳಿಸಿದರೋ ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ವಾಚಾಮಗೋಚರಮನೇಕಗುಣಸ್ವರೂಪಂ ವಾಗೀಶವಿಷ್ಣುಸುರಸೇವಿತಪಾದ ಪೀಠಂ ।**
**ವಾಮೇನವಿಗ್ರಹವರೇಣ ಕಲತ್ರವಂತಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥2॥**

ಭಾವಾರ್ಥ - ಯಾವಾತನು ಮಾತುಗಳಿಂದ ವರ್ಣಿಸಲಸಾಧ್ಯನೋ, ಯಾರು ಸತ್ವ, ರಜ, ತಮೋಗುಣಾದಿ ಬಹು ಸ್ವರೂಪಿಯೋ, ಯಾರ ಚರಣಗಳನ್ನು ಬ್ರಹ್ಮ, ವಿಷ್ಣುವೇ ಆದಿಯಾಗಿ ಅನ್ಯರೆಲ್ಲರು ಆರಾಧಿಸುವರೋ, ಯಾವಾತನ ಎಡಬದಿಯಯಲ್ಲಿ ಗೌರೀದೇವಿಯು ನೆಲೆಯಾಗಿರುವಳೋ, ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ಭೂತಾದಿಪಂ ಭುಜಗಭೂಷಣಭೂಷಿತಾಂಗಂ ವ್ಯಾಘ್ರಾಜಿನಾಂಬರಧರಂ ಜಟಿಲಂ ತ್ರಿನೇತ್ರಂ । ಪಾಶಾಕುಶಾಭಯವರಪ್ರದಶೂಲಪಾಣಿಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥3॥**

ಭಾವಾರ್ಥ - ಯಾವಾತನು ಪ್ರಾಣಿಗಳಿಗೆ [ಜೀವಿಗಳಿಗೆ] ಅಧಿಪತಿಯೋ, ಯಾವಾತನ ಶರೀರವು ಸರ್ಪಾಲಂಕೃತವಾಗಿದೆಯೋ, ಯಾವಾತನು ಹುಲಿಯ ಚರ್ಮವನ್ನು ಧರಿಸಿಕೊಂಡಿರುವನೋ, ಯಾರ ಕೇಶರಾಶಿಯು ಸುಕ್ಕಾಗಿ ಸುತ್ತಿರುವುದೋ, ಯಾವಾತನು ಮುಕ್ಕಣ್ಣನಾಗಿರುವನೋ, ಯಾರು ಹಸ್ತಗಳಲ್ಲಿ ಪಾಶ, ಅಂಕುಶ, ಶೂಲಗಳನ್ನು ಧರಿಸಿಕೊಂಡು ಅಭಯವನ್ನು ನೀಡುತ್ತಲಿರುವನೋ ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ಶೀತಾಂಶುಶೋಭಿತಕಿರೀಟವಿರಾಜಮಾನಂ ಭಾಲೇಕ್ಷಣಾನಲವಿಶೋಷಿತಪಂಚಬಾಣಂ । ನಾಗಾದಿಪಾರಚಿತಭಾಸುರಕರ್ಣಪೂರಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥4॥**

ಭಾವಾರ್ಥ - ಚಂದ್ರನ ತೇಜಸ್ಸಿನಿಂದ ಯಾರ ಕಿರೀಟವು ಪ್ರಕಾಶಿಸುತ್ತಲಿದೆಯೋ, ಯಾವಾತನು ತನ್ನಹಣೆಗಣ್ಣಿನ ಅಗ್ನಿಯಿಂದ ಮನ್ಮಥನನ್ನು ದಹಿಸಿ ಭಸ್ಮೀಕರಿಸಿದನೋ, ಯಾವಾತನ ಕರ್ಣಕುಂಡಲವು ಸರ್ಪಾಲಂಕೃತವಾಗಿ ಉಜ್ಜ್ವಲವಾಗಿ ಮಿನುಗುತ್ತಲಿರುವುದೋ, ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ಪಂಚಾನನಂ ದುರಿತಮತ್ತ ಮತಂಗಜಾನಾಂ ನಾಗಾಂತಕಂ ದನುಜಪುಂಗವಪನ್ನಗಾನಾಂ । ದಾವಾನಲಂ ಮರಣಶೋಕಜರಾಟವೀನಾಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥5॥**

ಭಾವಾರ್ಥ - ಯಾರು ಐಮೊಗನೋ, ಯಾರು ಅನೀತಿಯೆನ್ನುವ ಮದ್ದಾನೆಯನ್ನು ಸಂಹರಿಸುವ ಸಿಂಹದಂತಿರುವನೋ, ಯಾವಾತನು ಅಸುರಕುಲವೆನ್ನುವ ಸರ್ಪಸಮೂಹಕ್ಕೆ ಗರುಡರೂಪದ ಯಮ ಸ್ವರೂಪಿಯೋ, ಹುಟ್ಟು, ಸಾವು, ಮುಪ್ಪುಗಳೆನ್ನುವಗೊಂಡಾರಣ್ಯಕ್ಕೆ ಕಾಡ್ಗಿಚ್ಚಿನಂತಿರುವನೋ ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ತೇಜೋಮಯಂ ಸಗುಣನಿರ್ಗುಣಮದ್ವಿತೀಯ-ಮಾನಂದಕಂದಮಪರಾಜಿತಮಪ್ರಮೇಯಂ । ನಾದಾತ್ಮಕಂ ಸಕಲನಿಷ್ಕಲಮಾತ್ಮರೂಪಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥6॥**

ಭಾವಾರ್ಥ - ಯಾರು ಸತ್ವಗುಣ ಪರಿಪೂರ್ಣನೋ, ಯಾವಾತನು ಗುಣಸಹಿತನೂ ಗುಣವಿರಹಿತನೂ ಆಗಿರುವನೋ, ಯಾರು ಏಕಮಾತ್ರನೋ, ಆನಂದಮಯನೋ, ಯಾರು ಸೋಲರಿಯದವನೋ, ಯಾರು ಗಹನವಾದವನೋ, ಯಾ ವಾತನು ಮಧುರಸ್ವರಗಳಲ್ಲಿ ನೆಲೆಯಾಗಿರುವನೋ, ಯಾರು ಕಾಂತಿಯುತನೂ ಕಾಂತಿರಹಿತನೂ ಆಗಿರುವನೋ, ಯಾರು ಜೀವಾತ್ಮರೂಪಿಯೋ ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ಆಶಾಂವಿಹಾಯ ಪರಿಹೃತ್ಯ ಪರಸ್ಯ ನಿಂದಾಂ ಪಾಪೇ ರತಿಂ ಚ ಸುನಿವಾರ್ಯ ಮನಃ ಸಮಾಧೌ । ಆದಾಯ ಹೃತ್ಕಮಲಮಧ್ಯಗತಂ ಪರೇಶಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥7॥**

ಭಾವಾರ್ಥ - ಸಮಸ್ತ ಆಶೆಗಳನ್ನು ವರ್ಜಿಸಿ, ಅನ್ಯರ ನಿಂದೆಯನ್ನು ತೊರೆದು, ಹೀನಕೃತ್ಯಗಳನ್ನು ದೂರೀಕರಿಸಿ, ಮನವನ್ನು ಯೋಗನಿದ್ರೆಯ ಕಡೆಗೆ ತಿರುಗಿಸಿ, ತನ್ನ ಹೃತ್ಕಮಲ ಮಧ್ಯಗತನಾಗಿರುವ ಪರಮೇಶ್ವರನನ್ನು ಧ್ಯಾನಿಸುತ್ತಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ರಾಗಾದಿದೋಷರಹಿತಂ ಸ್ವಜನಾನುರಾಗಂ ವೈರಾಗ್ಯಶಾಂತಿನಿಲಯಂ ಗಿರಿಜಾಸಹಾಯಂ । ಮಾಧುರ್ಯಧೈರ್ಯಸುಭಗಂ ಗರಲಾಭಿರಾಮಂ ವಾರಾಣಸೀಪುರಪತಿಂ ಭಜವಿಶ್ವನಾಥಂ ॥8॥**

ಭಾವಾರ್ಥ - ಯಾವಾತನು ಮೋಹಾದಿದೋಷ ವಿರಹಿತನೋ, ಯಾವಾತನಿಗೆ ಭಕ್ತರ ಬಗೆಗೆ ಅನುರಾಗವಿರುವುದೋ, ಯಾವಾತನು ಶಾಂತಿ ವೈರಾಗ್ಯಾದಿಗಳಿಗೆ ನೆಲೆಯಾಗಿರುವನೋ, ಯಾರು ಪಾರ್ವತೀದೇವಿಯ ಒಡನಾಡಿಯೋ, ಯಾರು ಧೈರ್ಯ, ಮಾಧುರ್ಯತೆಯೇ ಮೊದಲಾದ ಉತ್ತಮ ಗುಣಗಳಿಂದ ಬೆಳಗುತ್ತಲಿರುವನೋ, ಯಾರ

ಕಂಠದಲ್ಲಿ ವಿಷವು ಅಲಂಕೃತವಾಗಿದೆಯೋ, ಅಂತಹಾ ಕಾಶೀ ಕ್ಷೇತ್ರಾಧೀಶನಾಗಿರುವ ವಿಶ್ವನಾಥನನ್ನು ಭಜಿಸು ಮನವೇ.

**ವಾರಾಣಸೀಪುರಪತೇಃ ಸ್ತವನಂ ಶಿವಸ್ಯ ವ್ಯಾಖ್ಯಾತ ಮಷ್ಟಕ ಮಿದಂ ಪಠತೇ ಮನುಷ್ಯಾಃ । ವಿದ್ಯಾಂ ಶ್ರೀಯಂ ವಿಪುಲ ಸೌಖ್ಯಮನಂತ ಕೀರ್ತಿಂ ಸಂಪ್ರಾಪ್ಯ ದೇಹವಿಲಯೇ ಲಭತೇ ಚ ಮೋಕ್ಷಂ ॥9॥**

ಭಾವರ್ಥಃ- ಕಾಶೀ ಕ್ಷೇತ್ರಾಧೀಶ ಮಹಾದೇವ ಶಂಕರನ ಕುರಿತಾಗಿ ಹೇಳಲಾದ ಈ ಎಂಟು ಶ್ಲೋಕಗಳ ಸ್ತುತಿಯನ್ನು ಓದುವ ಮನುಜನು ವಿದ್ಯೆ, ಸಂಪತ್ತು, ಅತಿಶಯವಾದ ಸೌಖ್ಯ ಮತ್ತು ಅಂತ್ಯವಿಲ್ಲದ ಘನತೆಯನ್ನು ಹೊಂದಿ ದೇಹಾಂತ್ಯದ ಬಳಿಕ ಮುಕ್ತಿಯನ್ನು ಹೊಂದುವನು.

**ವಿಶ್ವನಾಥಾಷ್ಟಕಮಿದಂ ಯಃ ಪಠೇಚ್ಛಿವಸನ್ನಿಧೌ । ಶಿವಲೋಕಮವಾಪ್ನೋತಿ ಶಿವೇನ ಸಹಮೋದತೇ ॥10॥**

ಭಾವಾರ್ಥ - ಈ ವಿಶ್ವನಾಥಾಷ್ಟಕವನ್ನು ಶಿವನ ಸನ್ನಿಧಾನದಲ್ಲಿ ಓದುವ ಮನುಜರು ಶಿವ ಸಾನ್ನಿಧ್ಯವನ್ನು ಹೊಂದುವರಲ್ಲದೆ ಶಿವನೊಡನೆ ಸಂತಸಭರಿತರಾಗಿರುವರು.

॥ ಇತಿ ವಿಶ್ವನಾಥಾಷ್ಟಕಂ ಸಂಪೂರ್ಣಂ ॥

## 6.25 ಶ್ರೀ ಶಿವ ಸ್ತೋತ್ರಂ

**ನಿಖಿಲಭುವನಜನ್ಮಸ್ಥೇಮಭಂಗಪ್ರರೋಹಾಃ ಅಕಲಿತಮಹಿಮಾನಃ ಕಲ್ಪಿತಾ ಯತ್ರ ತಸ್ಮಿನ್ । ಸುವಿಮಲಗಗನಾಭೇ ಈಶಸಂಸ್ಥೇಽಪ್ಯನೀಶೇ ಮಮಭವತು ಭವೇಽಸ್ಮಿನ್ ಭಾಸುರೋ ಭಾವಬಂಧಃ ॥1॥**

ಭಾವಾರ್ಥ - ಆ ಮಹಾದೇವಶಿವನ ಹಿರಿಮೆಯನ್ನು ವರ್ಣಿಸಲಸದಳ. ಅವನು ನಿರ್ಮಲತ್ವದಲ್ಲಿ ಆಗಸವನ್ನು ಹೋಲುವವನು. ಆತನಲ್ಲಿ ಸಮಸ್ತಬ್ರಹ್ಮಾಂಡದ ಉತ್ಪತ್ತಿ, ಪಾಲನೆ, ವಿನಾಶದ ಹೊಣೆಯು ವ್ಯವಸ್ಥೆಗೊಳಿಸಲ್ಪಟ್ಟಿದೆ. ಬ್ರಹ್ಮಾಂಡಕ್ಕೆಲ್ಲಾ ಆತನೇ ದೊರೆಯಾದರೂ ತನಗನ್ಯ ಒಡೆಯರಿಲ್ಲದ ಆ

ಮಹಾದೇವ ಶಿವನ ಚರಣ ಕಮಲಗಳಲ್ಲಿ ನನ್ನ ಬಾಳನ್ನು ಉಜ್ವಲಗೊಳಿಸುವ ಅನನ್ಯ ಭಕ್ತಿಯು ನೆಲೆಗೊಳ್ಳಲಿ.

**ನಿಹತನಿಖಿಲಮೋಹೇಽಧೀಶತಾ ಯತ್ರ ರೂಢಾ ಪ್ರಕಟಿತಪರಪ್ರೇಮ್ಣಾ ಯೋ ಮಹಾದೇವಸಂಜ್ಞಃ । ಅಶಿಥಿಲಪರಿರಂಭಃ ಪ್ರೇಮರೂಪಸ್ಯ ಯಸ್ಯ ಹೃದಿ ಪ್ರಣಯತಿ ವಿಶ್ವಂ ವ್ಯಾಜಮಾತ್ರಂ ವಿಭುತ್ವಂ ॥2॥**

ಭಾವಾರ್ಥ - ಆಶಾಪಾಶವನ್ನು ನಾಶಗೊಳಿಸುವ ಶಿವನಲ್ಲಿ ಒಡೆತನವು ನೆಲೆಗೊಂಡಿರುವುದು. ಬಹಿರಂಗವಾಗುವ ವಿಶಾಲವಾಗಿರುವ ಅನುರಾಗದಿಂದ ಆತನಿಗೆ ಮಹಾದೇವನೆನ್ನುವ ನಾಮವು ಸಲ್ಲುತ್ತಿದೆ. ಆ ಶಿವನ ಉತ್ಕೃಷ್ಟವಾಗಿರುವ ಅನುರಾಗದಿಂದ ಕೂಡಿರುವ ಲಿಂಗನವು ಬ್ರಹ್ಮಾಂಡದ ಒಡೆತನವೂ ಕೂಡಾ ಒಂದು ಭ್ರಾಂತಿ ಎನ್ನುವ ಇಂಗಿತವನ್ನು ಹೃದಯದಲ್ಲಿ ಉಂಟು ಮಾಡುವುದು.

**ವಹತಿ ವಿಪುಲವಾತಃ ಪೂರ್ವಸಂಸ್ಕಾರರೂಪಃ ಪ್ರಮಥತಿ ಬಲವೃಂದಂ ಘೂರ್ಣಿತೇವೋರ್ಮಿಮಾಲಾ । ಪ್ರಚಲತಿ ಖಲು ಯುಗ್ಮಂ ಯುಷ್ಮದಸ್ಮತ್ಪ್ರತೀತಂ ಅತಿವಿಕಲಿತರೂಪಂ ನೌಮಿ ಚಿತ್ತಂ ಶಿವಸ್ಥಂ ॥3॥**

ಭಾವಾರ್ಥ - ಝಂಝಾವಾತವು ಬೀಸಿ ಅಲೆಯನ್ನು ಎಬ್ಬಿಸುವ ರೀತಿಯಲ್ಲಿ ಪ್ರಾಚೀನ ಸಂಸ್ಕಾರವೆನ್ನುವ ಝಂಝಾವಾತವು ಬೀಸಿ "ನಾನು" "ನೀನು" ಎನ್ನುವ ಅಲೆಗಳನ್ನು ನಿರ್ಮಿಸಿದೆ. ಆ ಪರಶಿವನಲ್ಲಿ ಆ ರೀತಿಯಲ್ಲಿ ಮುದುಡಿಕೊಂಡಿರುವ ರೂಪದ ಮನವನ್ನು ನಾನು ನಮಿಸುವೆನು.

**ಜನಕ ಜನಿತ ಭಾವೋ ವೃತ್ತಯಃ ಸಂಸ್ಕೃತಾಶ್ಚ ಅಗಣನಬಹುರೂಪೋ ಯತ್ರ ಏಕೋ ಯಥಾರ್ಥಃ । ಶಮಿತವಿಕೃತಿವಾತೇ ಯತ್ರ ನಾಂತರ್ಬಹಿಶ್ಚ ತಮಹಹ ಹರಮೀಡೇ ಚಿತ್ತವೃತ್ತೇರ್ನಿರೋಧಂ ॥4॥**

ಭಾವಾರ್ಥ - ಯಾವೆಡೆ ಹುಟ್ಟಿಗೆ ಕಾರಣವಾದ, ಉತ್ಪತ್ತಿಯಾಗಿರುವ ಉದ್ದೇಶ, ಪವಿತ್ರವಾಗಿರುವ ಕಾರ್ಯಗಳು, ಮತ್ತು ಅಸಂಖ್ಯಾತ ಸ್ವರೂಪಗಳು, ಒಂದೇ ಜ್ಞಾನದಲ್ಲಿ ಐಕ್ಯವಾಗುವವೋ, ಯಾವಕಡೆ ಒಳಗೆ-ಹೊರಗೆ ಎಂಬ ಇಂಗಿತ

ಅಂತ್ಯವಾಗುವುದೋ, ವರ್ತನೆಗಳೆಂಬ ಅಲೆಗಳು ಯಾವ ಕಡೆ ಪ್ರಶಾಂತವಾಗುವವೋ, ಆ ರೀತಿಯ ಮನೋ ವರ್ತನೆಗಳನ್ನು ನಿಗ್ರಹಿಸುವ ಆ ಮಹಾದೇವ ಶಿವನಿಗೆ ನಾನು ನಮಿಸುವೆನು.

**ಗಲಿತತಿಮಿರಮಾಲಃ ಶುಭ್ರತೇಜಪ್ರಕಾಶಃ ಧವಲಕಮಲಶೋಭಃ ಜ್ಞಾನಪುಂಜಾಟ್ಟಹಾಸಃ । ಯಮಿಜನಹೃದಿಗಮ್ಯೋ ನಿಷ್ಕಲಂ ಧ್ಯಾಯಮಾನಃ ಪ್ರಣತಮವತು ಮಾಂ ಸಃಮಾನಸೋ ರಾಜಹಂಸಃ॥5॥**

ಭಾವಾರ್ಥ - ಅಜ್ಞಾನಗಳ ಸರಣಿ ಯಾವಾತನಲ್ಲಿ ಕಳೆದು ಹೋಗುವುದೋ, ನಿರ್ಮಲ ಕಿರಣಗಳಿಂದ ಬೆಳಗುತ್ತಾ ಬೆಳ್ದಾವರೆಯಂತೆ ಯಾವಾತನು ಪ್ರಕಾಶಿಸುವನೋ ಯಾರ ಘರ್ಜನೆಯು ಜ್ಞಾನವನ್ನು ಉದ್ದೀಪನಗೊಳಿಸುವುದೋ, ಯಾರನ್ನು ಅನವರತ ಧ್ಯಾನದಿಂದ ತಮ್ಮ ಹೃದಯಾಂತರಾಳದಲ್ಲಿ ವಿದ್ವದ್ಜನರು ಅರಿತುಕೊಂಡಿರುವರೋ, ಆ ತೆರನಾದ ಮನೋ ಸಾಗರದಲ್ಲಿ ಸಂಚರಿಸುತ್ತಲಿರುವ ಮಹಾದೇವನೆಂಬ ಅರಸಂಚೆಯು ನಮಸ್ಕರಿಸುತ್ತಲಿರುವ ನನ್ನನ್ನು ಅನವರತವೂ ರಕ್ಷಿಸಲಿ.

**ದುರಿತದಲನದಕ್ಷಂ ದಕ್ಷಜಾದತ್ತದೋಷಂ ಕಲಿತಕಲಿಕಲಂಕಂ ಕಮ್ರಕಹ್ಲಾರಕಾಂತಂ । ಪರಹಿತಕರಣಾಯ ಪ್ರಾಣಪ್ರಚ್ಛೇದಪ್ರೀತಂ ನತನಯನನಿಯುಕ್ತಂ ನೀಲಕಂಠಂ ನಮಾಮಃ ॥6॥**

ಭಾವಾರ್ಥ - ಯಾರು ನಮ್ಮ ಸಂಕಷ್ಟಗಳನ್ನು ಹೋಗಲಾಡಿಸುವುದರಲ್ಲಿ ನಿಪುಣನೋ, ಯಾರಿಗೆ ತನ್ನ ಮಗಳನ್ನು ದಕ್ಷನು ಧಾರೆಯೆರೆದನೋ, ಯಾರು ಕಲಿಯ ಕಲ್ಮಶಗಳನ್ನು ಪರಿಹರಿಸುವರೋ, ಯಾರು ಬೆಳ್ದಾವರೆಯಂತೆ ಮನೋಹರವಾಗಿರುವರೋ, ಯಾವಾತನು ಅನ್ಯರ ಒಳಿತಿಗಾಗಿ ತನ್ನ ಜೀವವನ್ನು ತೆರಲು ಸಿದ್ಧನಾಗಿರುವನೋ, ಯಾರ ಕರುಣಾದೃಷ್ಟಿಯು ದೀನದರಿದ್ರರ ಮೇಲಿರುವುದೋ ಅಂತಹಾ ಮಹಾದೇವ ನೀಲಕಂಠ ಶಿವನಿಗೆ ನಾನು ಅನವರತವೂ ನಮಿಸುತ್ತಲಿರುವೆನು.

॥ ಇತಿ ಶ್ರೀ ಶಿವ ಸ್ತೋತ್ರಂ ಸಂಪೂರ್ಣಂ ॥

----- ****** -----

# 7 ಶ್ರೀ ಮಹಾವಿಷ್ಣು ಸ್ತೋತ್ರಗಳು

## 7.1 ಶ್ರೀ ವಿಷ್ಣು ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃ ಸ್ಮರಾಮಿ ಭವಭೀತಿ ಮಹಾರ್ತಿ ಶಾಂತ್ಯೈ । ನಾರಾಯಣಂ ಗರುಡ ವಾಹನಮಬ್ಜನಾಭಂ ॥ ಗ್ರಾಹಾಭಿಭೂತ ವರವಾರಣ ಮುಕ್ತಿಹೇತುಂ । ಚಕ್ರಾಯುಧಂ ತರುಣ ವಾರಿಜಪತ್ರನೇತ್ರಂ ॥1॥**

ಭಾವಾರ್ಥ - ಜಲವನ್ನು ಆಶ್ರಯತಾಣವನ್ನಾಗಿಸಿ ಕೊಂಡಿರುವವನೂ, ಗರುಡನನ್ನು ವಾಹನವನ್ನಾಗಿಸಿಕೊಂಡವನೂ, ತಾವರೆಯನ್ನು ಹೊಕ್ಕುಳಿನಲ್ಲಿ ಹೊಂದಿರುವವನೂ, ಮೊಸಳೆಯ ಹಿಡಿತಕ್ಕೆ ಸಿಲುಕಿದ ಗಜೇಂದ್ರನನ್ನು ಪಾರು ಮಾಡಿದವನೂ, ಚಕ್ರವನ್ನು ಆಯುಧವನ್ನಾಗಿ ಹೊಂದಿರುವವನೂ, ಎಳೆಯ ಕಮಲದ ಎಸಳನ್ನು ಹೋಲುವ ಕಣ್ಣುಗಳುಳ್ಳವನೂ, ಆಗಿರುವ ಶ್ರೀ ಮಹಾವಿಷ್ಣುವನ್ನು ಸಂಸಾರ ಭೀತಿಯೆಂಬ ಮಹಾ ಸಂಕಷ್ಟ ನಿವಾರಣೆಗಾಗಿ ಉಷಃಕಾಲದಲ್ಲಿ ನಾನು ಸ್ಮರಿಸುವೆನು.

**ಪ್ರಾತರ್ನಮಾಮಿ ಮನಸಾ ವಚಸಾ ಮೂರ್ಧ್ನಾ । ಪಾದಾರವಿಂದ ಯುಗಲಂ ಪರಮಸ್ಯ ಪುಂಸಃ ॥ ನಾರಾಯಣಸ್ಯ ನರಕಾರ್ಣವ ತಾರಣಸ್ಯ । ಪಾರಾಯಣ-ಪ್ರವಣ ವಿಪ್ರ ಪರಾಯಣಸ್ಯ ॥2॥**

ಭಾವಾರ್ಥ - ವೇದಾದಿ ಸದ್ಗ್ರಂಥ ಪಠಣಗಳಲ್ಲಿ ನಿರತರಾಗಿರುವ ಶ್ರೇಷ್ಠ ಬ್ರಾಹ್ಮಣರ ಉತ್ಕೃಷ್ಠವೆನಿಸಿದ ಅವಸ್ಥೆಯಾಗಿರುವ ಮೋಕ್ಷ ತಾಣಕ್ಕೆ ತಲಪಿಸಲು ನರಕದ ಕಡಲನ್ನು ದಾಟಿಸುವ ಪರಮಪುರುಷನೆನಿಸಿದ ಆ ಶ್ರೀಮನ್ನಾರಾಯಣನ ಅಡಿದಾವರೆಗಳನ್ನು ಮಾತು, ಮನಸ್ಸುಗಳಿಂದ ಕೂಡಿ ಶಿರವಾಗಿ ನಾನು ವಂದಿಸುವೆನು.

**ಪ್ರಾತರ್ಭಜಾಮಿ ಭಜತಾಮ ಭಯಂಕರಂ ತಂ । ಪ್ರಾಕ್ ಸರ್ವಜನ್ಮಕೃತ ಪಾಪ ಭಯಾಪಹೃತ್ಯೈ ॥ ಯೋ ಗ್ರಾಹ ವಕ್ತ್ರ ಪತಿತಾಂಘ್ರಿ ಗಜೇಂದ್ರ ಘೋರ- । ಶೋಕ ಪ್ರಣಾಶನಕರೋ ಧೃತ ಶಂಖ ಚಕ್ರಃ ॥3॥**

ಭಾವಾರ್ಥ - ಮೊಸಳೆಯ ಬಾಯಿಗೆ ಕಾಲುಗಳು ಸಿಲುಕಿ ಅತಿಯಾದ ದುಃಖಕ್ಕೆ ಈಡಾಗಿ ಕಾಪಾಡಲು ಮೊರೆಯಿಟ್ಟ ಗಜೇಂದ್ರನ ದುಃಖವನ್ನು ನಿವಾರಿಸಿದ, ಹಸ್ತಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದು ಎಲ್ಲರಿಗೆ ಅಭಯ ಪ್ರಧಾನ ಮಾಡುವ ಆ ಮಹಾ ವಿಷ್ಣುವನ್ನು ನನ್ನ ಹಿಂದಿನ ಎಲ್ಲಾ ಜನ್ಮಗಳಲ್ಲಿ ನಾನು ಮಾಡಿರಬಹುದಾದ ಪಾಪಗಳ ದೋಷವನ್ನು ನಿವಾರಿಸಲು ಉಷಃಕಾಲದಲ್ಲಿ ಭಜಿಸುತ್ತೇನೆ.

**ಶ್ಲೋಕತ್ರಯಮಿದಂ ಪುಣ್ಯಂ ಪ್ರಾತಃಕಾಲೇ ಪಠೇನ್ನರಃ ।**
**ಲೋಕತ್ರಯಗುರುಸ್ತಸ್ಮೈ ದದ್ಯಾದಾತ್ಮಪದಂ ಹರಿಃ ॥4॥**

ಭಾವಾರ್ಥ - ಯಾವಾತನು ಪ್ರಾತಃಕಾಲದಲ್ಲಿ ಪುಣ್ಯದಾಯಕವಾಗಿರುವ ಈ ಮೂರು ಶ್ಲೋಕಗಳನ್ನು ಓದುವನೋ ಅಂತಹಾ ಮನುಜನಿಗೆ ತ್ರಿಲೋಕಾಧಿಪತಿಯಾಗಿರುವ ಜಗದಾದಿ ಗುರುವಾಗಿರುವ ಹರಿಯ ಆತ್ಮದಲ್ಲಿ ಸ್ಥಾನವು ದೊರಕುತ್ತದೆ.

॥ ಇತಿ ಶ್ರೀ ವಿಷ್ಣು ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 7.2 ಶ್ರೀ ರಮೇಶ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃಸ್ಮರಾಮಿ ವರಕುಂಡಲ ಶೋಭಿಗಂಡಂ । ಶೀತಾಂಶು ಮಂಡಲ ಮುಖಂ ಸಿತ ವಾರಿಜಾಕ್ಷಂ ॥ ಆತಾಮ್ರ ಕಮ್ರ ಮುದಿತಾಧರ ಬಿಂಬ ಜೃಂಭಂ । ಧ್ಯಾತೃ ಪ್ರಹರ್ಷಕರ ಹಾಸ ರಸಂ ರಮೇಶಂ ॥1॥**

ಭಾವಾರ್ಥ - ಕುಂಡಲಗಳ ಅಲಂಕಾರದಿಂದ ಶೋಭಿಸುತ್ತಿರುವ ಕೆನ್ನೆಗಳನ್ನು ಹೊಂದಿರುವವನೂ, ಚಂದ್ರಮಂಡಲವನ್ನು ಹೋಲುವ ಮೊಗವುಳ್ಳವನೂ, ಬಿಳಿಯ ಕಮಲಗಳನ್ನು ಹೋಲುವ ಕಣ್ಣುಗಳುಳ್ಳವನೂ, ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವನೂ, ತನ್ನನ್ನು ಧ್ಯಾನಿಸುವರಿಗೆ ಸಂತೋಷವನ್ನು ಕರುಣಿಸುವನೂ,

ನಗುಮೊಗದವನೂ ಆಗಿರುವ ಆ ರಮೇಶನನ್ನು ನಾನು ಉಷಃಕಾಲದಲ್ಲಿ ಸ್ಮರಿಸುತ್ತೇನೆ.

**ಪ್ರಾತರ್ಭಜಾಮಿ ಧೃತಕೌಸ್ತುಭ ಕಂಬುಕಂಠಂ । ಸ್ಫೀತಾತ್ಮವಕ್ಷಸಿ ವಿರಾಜಿತ ಭೂರಿಹಾರಂ ॥ ಭೀತ ಸ್ವಭಕ್ತ ಭಯಭಂಜನ ಪಾಣಿ ಪದ್ಮಂ । ಶಾತೋದರಾರ್ಪಿತ ಜಗದ್ಭರಮಬ್ಜನಾಭಂ ॥2॥**

ಭಾವಾರ್ಥ - ಶಂಖವನ್ನು ಹೋಲುವ ಕೊರಳಲ್ಲಿ ಕೌಸ್ತುಭಮಣಿಯನ್ನು ಧರಿಸಿದವನೂ, ಶೋಭಿಸುತ್ತಿರುವ ಬಹುಹಾರಗಳನ್ನು ತನ್ನ ಉಬ್ಬಿದ ಎದೆಯಲ್ಲಿ ಧರಿಸಿರುವವನೂ, ಭೀತಿಗೊಳಗಾದ ತನ್ನ ಭಕ್ತರ ಅಂಜಿಕೆಗಳನ್ನು ಪರಿಹರಿಸಲೋಸುಗ ಹಸ್ತದಲ್ಲಿ ಕಮಲವನ್ನು ಹಿಡಿದವನೂ, ಆದಿ ಶೇಷನಿಗೆ ಬ್ರಹ್ಮಾಂಡದ ಹೊರೆಯನ್ನು ನೀಡಿದವನೂ, ಕಮಲನಾಭನೂ ಆಗಿರುವ ರಮಾಪತಿಯನ್ನು ನಾನು ಉಷಃಕಾಲದಲ್ಲಿ ಭಜಿಸುತ್ತೇನೆ.

**ಪ್ರಾತರ್ನಮಾಮಿ ಶುಭಕಿಂಕಿಣಿ ಮೇಖಲಾಂಗಂ । ಪೀತಾಂಬರಂ ಕರಿಕರೋರುಮುದಾರ ಜಾನುಂ ॥ ಧ್ಯಾತಾಂಘ್ರಿ ಯುಗ್ಮರುಚಿರಂ ಜಿತಕಂಜಜಾತ- । ವಾತಾದಿ ದೇವ ವರ ಮೌಲಿಮಣಿಂ ಮುಕುಂದಂ ॥3॥**

ಭಾವಾರ್ಥ - ಶ್ರೇಷ್ಠವಾದ ಕಿರುಗೆಜ್ಜೆಗಳಿಂದ ಕೂಡಿರುವ ಸೊಂಟದ ಪಟ್ಟಿಯನ್ನು ಹೊಂದಿದ, ಹಳದಿ ವಸನಧಾರಿಯಾದ, ಆನೆಯ ಸೊಂಡಿಲನ್ನು ಹೋಲುವ ತೊಡೆಯನ್ನು ಹೊಂದಿರುವ, ಮನೋಹರವಾದ ಮೊಣಕಾಲುಗಳುಳ್ಳ, ಧ್ಯಾನಿಸಲ್ಪಡುವ ಸುಂದರ ಅಡಿದಾವರೆಯುಳ್ಳ, ಬ್ರಹ್ಮ, ವಾಯುವೇ ಆದಿಯಾದ ದೇವದೇವತೆಯರಿಂದ ಶ್ರೇಷ್ಠನಾಗಿರುವ ಮುಕುಂದನನ್ನು ನಾನು ಉಷಃಕಾಲದಲ್ಲಿ ನಮಸ್ಕರಿಸುವೆ.

**ವಾದಿರಾಜ ಯತಿ ಪ್ರೋಕ್ತಂ ಶ್ಲೋಕತ್ರಯಮಿದಂ ಸದಾ ।**
**ಪ್ರಾತಃಕಾಲೇ ಪಠೇನ್ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥4॥**

ಭಾವಾರ್ಥ - ವಾದಿರಾಜಯತಿವರ್ಯರಿಂದ ತಿಳಿಸಲ್ಪಟ್ಟಿರುವ ಈ ಮೂರು ಶ್ಲೋಕಗಳನ್ನು ಉಷ,ಕಾಲದಲ್ಲಿ ಪಠಣ ಮಾಡುವ ಮನುಜನು ಸಮಸ್ತ ಕೆಡುಕುಗಳಿದ ವಿಮುಕ್ತನಾಗುವನು.

॥ ಇತಿ ಶ್ರೀ ರಮೇಶ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 7.3 ಶ್ರೀ ವಿಷ್ಣೋರಷ್ಟಾವಿಂಶತಿನಾಮ ಸ್ತೋತ್ರಂ

**ಅರ್ಜುನ ಉವಾಚಃ- ಕಿಂ ನು ನಾಮ ಸಹಸ್ರಾಣಿ ಜಪಂತೆ ಚ ಪುನಃ ಪುನಃ ।**
**ಯಾನಿ ನಾಮಾನಿ ದಿವ್ಯಾನಿ ತಾನಿ ಚಾಸ್ಸ್ವಕ್ಷ್ವ ಕೇಶವ ॥1॥**

ಭಾವಾರ್ಥ - ಅರ್ಜುನನು ಕೇಳುವನುಃ ಕೇಶವಾ! ಮನುಜರು ಒಂದೇ ತೆರನಾಗಿ ನಿನ್ನ ಒಂದು ಸಾವಿರ ನಾಮಗಳನ್ನು ಯಾಕಾಗಿ ಪುನಃ ಪುನಃ ಜಪಿಸುತ್ತಾರೆ? ನಿನ್ನ ಆ ದಿವ್ಯ ನಾಮಗಳ ಬಗ್ಗೆ ವಿವರಿಸಿ ಹೇಳುವಂತವನಾಗು.

**ಭಗವಾನುವಾಚಃ- ಮತ್ಸ್ಯಂ ಕೂರ್ಮಂ ವರಾಹಂ ಚ ವಾಮನಂ ಚ ಜನಾರ್ದನಂ ।**
**ಗೋವಿಂದಂ ಪುಂಡರೀಕಾಕ್ಷಂ ಮಾಧವಂ ಮಧುಸೂದನಂ ॥2॥**

ಭಾವಾರ್ಥ - ಭಗವಂತನು ಹೇಳುತ್ತಾನೆ. ಅರ್ಜುನಾ, ಮತ್ಸ್ಯ, ಕೂರ್ಮ, ವರಾಹ, ವಾಮನ, ಜನಾರ್ದನ, ಗೋವಿಂದ, ಪುಂಡರೀಕಾಕ್ಷ, ಮಾಧವ, ಮಧುಸೂದನ-----

**ಪದ್ಮನಾಭಂ ಸಹಸ್ರಾಕ್ಷಂ ವನಮಾಲಿಂ ಹಲಾಯುಧಂ । ಗೋವರ್ಧನಂ ಹೃಷೀಕೇಶಂ**
**ವೈಕುಂಠಂ ಪುರುಷೋತ್ತಮಂ ॥3॥**

ಭಾವಾರ್ಥ - ಪದ್ಮನಾಭ, ಸಹಸ್ರಾಕ್ಷ, ವನಮಾಲಿ, ಹಲಾಯುಧ, ಗೋವರ್ಧನ, ಹೃಷೀಕೇಶ, ವೈಕುಂಠ, ಪುರುಷೋತ್ತಮ--------

**ವಿಶ್ವರೂಪಂ ವಾಸುದೇವಂ ರಾಮಂ ನಾರಾಯಣಂ ಹರಿಂ ।**
**ದಾಮೋದರಂ ಶ್ರೀಧರಂ ಚ ವೇದಾಂಗಂ ಗರುಢಧ್ವಜಂ ॥4॥**

ಭಾವಾರ್ಥ - ವಿಶ್ವರೂಪ, ವಾಸುದೇವ, ರಾಮ, ನಾರಾಯಣ, ಹರಿ, ದಾಮೋದರ, ಶ್ರೀಧರ, ವೇದಾಂಗ, ಗರುಢಧ್ವಜ------

**ಅನಂತಂ ಕೃಷ್ಣಗೋಪಾಲಂ ಜಪತೋ ನಾಸ್ತಿ ಪಾತಕಂ ।**
**ಗವಾಂ ಕೋಟಿಪ್ರದಾನಸ್ಯ ಅಶ್ವಮೇಧಶತಸ್ಯ ಚ ॥5॥**

ಭಾವಾರ್ಥ - ಅನಂತ, ಕೃಷ್ಣಗೋಪಾಲ ಎಂಬೀ ಇಪ್ಪತ್ತೆಂಟು ನಾಮಗಳನ್ನು ಜಪಿಸುವಂತಹವನ ಪಾಪಗಳೆಲ್ಲಾ ನಶಿಸಿ ಹೋಗುತ್ತವೆ. ಆತನಿಗೆ ಒಂದು ಕೋಟಿ ಗೋದಾನ, ಒಂದು ನೂರು ಅಶ್ವಮೇಧ ಯಾಗ ಮಾಡಿದರೆ ದೊರಕುವ ಫಲವು ಲಭಿಸುತ್ತದೆ.

**ಕನ್ಯಾದಾನ ಸಹಸ್ರಾಣಾಂ ಫಲ ಪ್ರಾಪ್ನೋತಿ ಮಾನವಾಃ ।**
**ಅಮಾಯಾಂ ವಾ ಪೌರ್ಣಿಮಾಸ್ಯಾಮೇಕಾದಶ್ಯಾಂ ತಥೈವ ಚ ॥6॥**

ಭಾವಾರ್ಥ - ಮತ್ತು ಒಂದು ಸಾವಿರ ಕನ್ಯಾದಾನ ಮಾಡಿದ ಫಲವು ಮಾನುಜರಿಗೆ ದೊರಕುವುದು. ಅಮವಾಸ್ಯೆ,ಹುಣ್ಣಿಮೆ,ಮತ್ತು ಏಕಾದಶಿಗಳಂದು ಮತ್ತು ಅದೇರೀತಿ--

**ಸಂಧ್ಯಾಕಾಲೇ ಸ್ಮರೇನ್ನಿತ್ಯಂ ಪ್ರಾತಃಕಾಲೇ ತಥೈವ ಚ ।**
**ಮಧ್ಯಾಹ್ನೇ ಚ ಜಪೇನ್ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ॥7॥**

ಭಾವಾರ್ಥ - ಪ್ರತಿದಿನ ಸಾಯಂಕಾಲ,ಮುಂಜಾನೆ,ಮತ್ತು ಮದ್ಯಾಹ್ನದ ಸಮಯಗಳಲ್ಲಿ ಈ ನಾಮಗಳನ್ನು ಜಪಿಸುವ ಮಾನವರು ಸಮಸ್ತ ಪಾಪಗಳಿಂದ ವಿಮುಕ್ತರಾಗುತ್ತಾರೆ.

॥ ಇತಿ ಶ್ರೀ ವಿಷ್ಣೋರಷ್ಟಾವಿಂಶತಿನಾಮ ಸ್ತೋತ್ರಂ ಸಂಪೂರ್ಣಂ ॥

## 7.4 ಶ್ರೀ ವಿಷ್ಣೋಃ ಷೋಡಶನಾಮ ಸ್ತೋತ್ರಂ

**ಔಷಧೇ ಚಿಂತಯೇದ್ವಿಷ್ಣುಂ ಭೋಜನೇಚ ಜನಾರ್ಧನಂ ।**
**ಶಯನೇ ಪದ್ಮನಾಭಂಚ ವಿವಾಹೇ ಚ ಪ್ರಜಾಪತಿಂ ॥1॥**

ಭಾವಾರ್ಥ - ಔಷಧಿಯನ್ನು ಸ್ವೀಕರಿಸುವ ಕಾಲದಲ್ಲಿ ವಿಷ್ಣುವನ್ನು, ಆಹಾರವನ್ನು ಸ್ವೀಕರಿಸುವಾಗ ಜನಾರ್ಧನನನ್ನು,ಮಲಗುವ ಸಮಯದಲ್ಲಿ ಪದ್ಮನಾಭನನ್ನು, ವಿವಾಹದ ಸಮಯದಲ್ಲಿ ಪ್ರಜಾಪತಿಯನ್ನು ಸ್ಮರಿಸಬೇಕು.

**ಯುದ್ಧೇ ಚಕ್ರಧರಂದೇವಂ ಪ್ರವಾಸೇ ಚ ತ್ರಿವಿಕ್ರಮಂ ।**
**ನಾರಾಯಣಂ ತನು ತ್ಯಾಗೇ ಶ್ರೀಧರಂ ಪ್ರಿಯಸಂಗಮೇ ॥2॥**

ಭಾವಾರ್ಥ - ಯುದ್ಧ ಕಾಲದಲ್ಲಿ ಚಕ್ರಧರ ದೇವನನ್ನು,ಪ್ರವಾಸ ಸಮಯದಲ್ಲಿ ತ್ರಿವಿಕ್ರಮನನ್ನು, ಶರೀರ ತ್ಯಾಗ ಮಾಡುವಾಗ ನಾರಾಯಣನನ್ನು, ಪ್ರೀತಿಯ ವ್ಯಕ್ತಿಗಳು ಸೇರುವಾಗ ಶ್ರೀಧರನನ್ನು ಸ್ಮರಿಸಬೇಕು.

**ದುಃಸ್ವಪ್ನೇ ಸ್ಮರ ಗೋವಿಂದಂ ಸಂಕಟೇ ಮಧುಸೂಧನಂ ।**
**ಕಾನನೇ ನಾರಸಿಂಹಂ ಚ ಪಾವಕೇ ಜಲಶಾಯಿನಂ ॥3॥**

ಭಾವಾರ್ಥ - ಘೋರ ಕನಸ್ಸುಗಳನ್ನು ಕಂಡಾಗ ಗೋವಿಂದನನ್ನು,ಸಂಕಷ್ಟದ ಸಮಯದಲ್ಲಿ ಮಧುಸೂಧನನನ್ನು,ಘೋರಾರಣ್ಯದಲ್ಲಿ ನಾರಸಿಂಹನನ್ನು, ಅಗ್ನಿ ದುರಿತದಲ್ಲಿ ಜಲಶಾಯಿಯನ್ನು ಸ್ಮರಿಸಬೇಕು.

**ಜಲಮಧ್ಯೇ ವರಾಹಂ ಚ ಪರ್ವತೇ ರಘುನಂದನಂ ।**
**ಗಮನೇ ವಾಮನಂ ಚೈವ ಸರ್ವ ಕಾರ್ಯೇಷು ಮಾಧವಂ ॥4॥**

ಭಾವಾರ್ಥ - ನೀರಿನ ನಡುವೆ ಸಿಲುಕಿದಾಗ ವರಾಹರೂಪಿಯನ್ನು, ಪರ್ವತ ಪ್ರದೇಶದಲ್ಲಿ ರಘುನಂದನನನ್ನು, ದಾರಿಯಲ್ಲಿ ಸಾಗುತ್ತಿರುವ ಸಮಯದಲ್ಲಿ ವಾಮನನನ್ನು, ಮತ್ತು ಸಮಸ್ತ ಕಾರ್ಯಗಳಲ್ಲಿ ಮಾಧವನನ್ನು ಸ್ಮರಿಸಬೇಕು.

**ಷೋಡಶೈತಾನಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।**
**ಸರ್ವ ಪಾಪವಿನಿರ್ಮುಕ್ತೋ ವಿಷ್ಣು ಲೋಕೇ ಮಹೀಯತೇ ॥5॥**

ಭಾವಾರ್ಥ - ಉಷಃ ಕಾಲದೊಳೆದ್ದು ಈ ಹದಿನಾರು ನಾಮಗಳನ್ನು ಯಾರು ಪಠಿಸುವರೋ ಅವರು ತಮ್ಮ ಎಲ್ಲ ಪಾಪಗಳಿಂದ ವಿಮುಕ್ತಿ ಹೊಂದಿ ವಿಷ್ಣು ಲೋಕದಲ್ಲಿ ಉನ್ನತ ಪದವಿಯನ್ನು ಹೊಂದುವರು. ಈ ಭುವಿಯಲಿ ಇರುವಷ್ಟು ಸಮಯ ಸುಖ-ಶಾಂತಿಯನ್ನು ಅನುಭವಿಸುವರು.

॥ ಇತಿ ಶ್ರೀ ವಿಷ್ಣೋಃ ಷೋಡಶನಾಮ ಸ್ತೋತ್ರಂ ಸಂಪೂರ್ಣಂ ॥

## 7.5 ಸಂಕಷ್ಟನಾಶನ ವಿಷ್ಣು ಸ್ತೋತ್ರಂ

**ನಾರದ ಉವಾಚಃ-** ನಾರದರು ಹೇಳಿದರುಃ-

**ಪುನರ್ದೈತ್ಯಂ ಸಮಾಯಾಂತಂ ದೃಷ್ಟ್ವಾ ದೇವಾಃ ಸವಾಸವಾಃ ।**
**ಭಯಪ್ರಕಂಪಿತಾಃ ಸರ್ವೇ ವಿಷ್ಣುಂ ಸ್ತೋತುಂ ಪ್ರಚಕ್ರಮುಃ ॥1॥**

ಭಾವಾರ್ಥ - ಪುನಃ ಬರುತ್ತಿರುವ ದೈತ್ಯರನ್ನು ಕಂಡು ಇಂದ್ರನೊಟ್ಟಿಗೆ ದೇವತೆಯರೆಲ್ಲರೂ ಭೀತಿಗೊಳಗಾಗಿ ವಿಷ್ಣುವನ್ನು ಸ್ತುತಿಸಲು ಪ್ರಾರಂಬಿಸಿದರು.

ದೇವಾ ಊಚುಃ- ದೇವತೆಗಳು ಹೇಳುವರುಃ-

**ನಮೋ ಮತ್ಸ್ಯಕೂರ್ಮಾದಿ ನಾನಾ ಸ್ವರೂಪೈಃ ಸದಾಭಕ್ತ ಕಾರ್ಯೋ ದ್ಯತಾಯಾರ್ತಿ ಹಂತ್ರೇ ।**
**ವಿಧಾತ್ರಾದಿ ಸರ್ಗಸ್ಥಿತಿಧ್ವಂಸಕರ್ತೆ ಗದಾಶಂಖಪದ್ಮಾದಿ ಹಸ್ತಾಯ ತೇಸ್ತು ॥2॥**

ಭಾವಾರ್ಥ - ಮತ್ಸ್ಯ-ಕೂರ್ಮ ಮೊದಲಾದ ನಾನಾಸ್ವರೂಪಗಳಿಂದ ಸಮಸ್ತಕಾಲವೂ ಭಕ್ತರ ಕಾರ್ಯಗಳಲ್ಲಿ ನಿರತನಾಗಿ ಅವರ ದುರಭಿಮಾನವನ್ನು ಅಳಿಸಿ ಉತ್ಪತ್ತಿ, ಸ್ಥಿತಿ, ಮತ್ತು ನಾಶಗಳಿಗೆ ಸ್ವಾಮಿಯಾದವನೂ, ಕೈಗಳಲ್ಲಿ ಗದೆ, ಶಂಖ, ಪದ್ಮ, ಚಕ್ರಗಳನ್ನು ಹಿಡಿದಿರುವವನೂ ಆಗಿರುವ ವಿಷ್ಣುವೇ ನಿನಗೆ ಪ್ರಣಾಮಗಳು.

**ರಮಾವಲ್ಲಭಾಯಾಸುರಾಣಾಂ ನಿಹಂತ್ರೇ ಭುಜಂಗಾರಿಯಾನಾಯ ಪೀತಾಂಬರಾಯ ।**
**ಮಖಾದಿಕ್ರಿಯಾಪಾಕಕರ್ತ್ರೆ ವಿಕರ್ತ್ರೆ ಶರಣ್ಯಾಯ ತಸ್ಮೈ ನತಾಃ ಸ್ಮೋ ನತಾ ಸ್ಮಃ ॥3॥**

ಭಾವಾರ್ಥ - ರಮಾವಲ್ಲಭನಿಗೆ, ಅಸುರ ಸಂಹಾರಕನಿಗೆ, ಗರುಢವಾಹನನಿಗೆ, ಪೀತಾಂಬರಧಾರಿಗೆ, ಯಜ್ಞಾದಿ ಕಾರ್ಯಗಳ ಪ್ರತಿಫಲದಾಯಕನಿಗೆ, ಶರಣರನ್ನು ರಕ್ಷಿಸುವವನಿಗೆ ನಾವು ನಮಸ್ಕರಿಸುವೆವು.

**ನಮೋ ದೈತ್ಯಸಂತಾಪಿತಾಮರ್ತ್ಯ ದುಃಖಾಚಲ ಧ್ವಂಸದಂಭೋಲಯೇ ವಿಷ್ಣವೇ ತೇ ।**
**ಭುಜಂಗೇಶತಲ್ಪೇಶಯಾರ್ಕ ಚಂದ್ರ ದ್ವಿನೇತ್ರಾಯ ತಸ್ಮೈ ನತಾಃ ಸ್ಮೋ ನತಾ ಸ್ಮಃ ॥4॥**

ಭಾವಾರ್ಥ - ದೈತ್ಯರ ಉಪಟಳದಿಂದ ಕ್ಷೋಭೆಗೊಳಗಾದ, ಮರ್ತ್ಯರ ದುಃಖವೆಂಬ ಅತ್ಯುನ್ನತಪ್ರದೇಶವನ್ನು ನಾಶಗೊಳಿಸುವ, ಗರ್ವಗಳಿಗೆ ಲಯಕಾರಿಯಾಗಿರುವ ವಿಷ್ಣುವೇ, ಶೇಷಶಾಯಿಯೇ, ಸೂರ್ಯ-ಚಂದ್ರರನ್ನು ಕಣ್ಣುಗಳನ್ನಾಗಿ ಮಾಡಿಕೊಂಡಿರುವವನೇ ನಿನಗೆ ನಮಸ್ಕರಿಸುವೆವು.

॥ ಇತಿ ಸಂಕಷ್ಟನಾಶನ ವಿಷ್ಣುಸ್ತೋತ್ರಂ ಸಂಪೂರ್ಣಂ ॥

## 7.6 ಶ್ರೀ ವಿಷ್ಣು ಶತನಾಮಸ್ತೋತ್ರಂ

**ನಾರದ ಉವಾಚಃ-** ನಾರದರು ಹೇಳಿದ್ದುಃ-

**ಓಂ ವಾಸುದೇವಂ ಹೃಷೀಕೇಶಂ ವಾಮನಂ ಜಲಶಾಯಿನಂ ।**
**ಜನಾರ್ಧನಂ ಹರಿಂ ಕೃಷ್ಣಂ ಶ್ರೀವಕ್ಷಂ ಗರುಢ ಧ್ವಜಂ ॥1॥**

ಭಾವಾರ್ಥ - ವಾಸುದೇವ, ಹೃಷೀಕೇಶ, ವಾಮನ, ಜಲಧಿಶಯನ, ಜನಾರ್ಧನ, ಹರಿ, ಕೃಷ್ಣ, ಶ್ರೀವಕ್ಷ, ಗರುಢಧ್ವಜ. . .

**ವಾರಾಹಂ ಪುಂಡರೀಕಾಕ್ಷಂ ನೃಸಿಂಹಂ ನರಕಾಂತಕಂ ।**
**ಅವ್ಯಕ್ತಂ ಶಾಶ್ವತಂ ವಿಷ್ಣುಮನಂತಮಜಮವ್ಯಯಂ ॥2॥**

ಭಾವಾರ್ಥ - ವಾರಾಹ, ಪುಂಡರೀಕಾಕ್ಷ, ನೃಸಿಂಹ, ನರಕಾಂತಕ, ಅವ್ಯಕ್ತ, ಶಾಶ್ವತ, ವಿಷ್ಣು, ಅನಂತ, ಅಜ, ಅವ್ಯಯ. . . .

**ನಾರಾಯಣಂ ಗದಾಧ್ಯಕ್ಷಂ ಗೋವಿಂದಂ, ಕೀರ್ತಿಭಾಜನಂ ।**
**ಗೋವರ್ಧನೋದ್ಧರಂ ದೇವಂ ಭೂಧರಂ ಭುವನೇಶ್ವರಂ ॥3॥**

ಭಾವಾರ್ಥ - ನಾರಾಯಣ, ಗದಾಧ್ಯಕ್ಷ, ಗೋವಿಂದ, ಕೀರ್ತಿಭಾಜನ, ಗೋವರ್ಧನೋದ್ಧಾರಕ ದೇವ, ಭೂಧರ, ಭುವನೇಶ್ವರ. . . . .

**ವೇತ್ತಾರಂ, ಯಜ್ಞಪುರುಷಂ ಯಜ್ಞೇಶಂ ಯಜ್ಞವಾಹಕಂ ।**
**ಚಕ್ರಪಾಣಿಂ ಗದಾಪಾಣಿಂ ಶಂಖಪಾಣಿಂ ನರೋತ್ತಮಂ ॥4॥**

ಭಾವಾರ್ಥ - ವೇತ್ತಾರ, ಯಜ್ಞಪುರುಷ, ಯಜ್ಞೇಶ, ಯಜ್ಞವಾಹಕ, ಚಕ್ರಪಾಣಿ, ಗದಾಪಾಣಿ, ಶಂಖಪಾಣಿ, ನರೋತ್ತಮ. . . . . .

**ವೈಕುಂಠಂ ದುಷ್ಟದಮನಂ ಭೂಗರ್ಭಂ ಪೀತವಾಸಂ ।**
**ತ್ರಿವಿಕ್ರಮಂ ತ್ರಿಕಾಲಜ್ಞಂ ತ್ರಿಮೂರ್ತಿಂ ನಂದಿಕೇಶ್ವರಂ ॥5॥**

ಭಾವಾರ್ಥ - ವೈಕುಂಠ, ದುಷ್ಟದಮನ, ಭೂಗರ್ಭ, ಪೀತಾಂಬರಧಾರಿ, ತ್ರಿವಿಕ್ರಮ, ತ್ರಿಕಾಲಜ್ಞ, ತ್ರಿಮೂರ್ತಿ, ನಂದಿಕೇಶ್ವರ. . . .

**ರಾಮಂ ರಾಮಂ ಹಯಗ್ರೀವಂ ಭೀಮಂ ರೌದ್ರಂ ಭವೋದ್ಭವಂ ।**
**ಶ್ರೀಪತಿಂ ಶ್ರೀಧರಂ ಶ್ರೀಶಂ ಮಂಗಲಂ ಮಂಗಲಾಯುಧಂ ॥6॥**

ಭಾವಾರ್ಥ - ರಾಮ, ಪರಶುರಾಮ, ಹಯಗ್ರೀವ, ಭೀಮ, ರೌದ್ರ, ಭವೋಧ್ಭವ, ಶ್ರೀಪತಿ, ಶ್ರೀಧರ, ಶ್ರೀಶ, ಮಂಗಲ, ಮಂಗಲಾಯುಧ. . .

**ದಾಮೋದರಂ ದಮೋಪೇತಂ ಕೇಶವಂ ಕೇಶಿಸೂದನಂ ।**
**ವರೇಣ್ಯಂ ವರದಂ ವಿಷ್ಣುಮಾನಂದಂ ವಸುದೇವಜಂ ॥7॥**

ಭಾವಾರ್ಥ - ದಾಮೋದರ, ದಮೋಪೇತ, ಕೇಶವ, ಕೇಶಿಸೂದನ, [ಕೇಶಿ ರಕ್ಕಸನ ಹರಣಗೈದವ], ವರೇಣ್ಯ, ವರದ, ವಿಷ್ಣು, ಆನಂದ, ವಸುದೇವಜ [ವಸುದೇವ ತನಯ]. . . . . .

**ಹಿರಣ್ಯರೇತಸಂ ದೀಪ್ತಂ ಪುರಾಣಂ ಪುರುಷೋತ್ತಮಂ ।**
**ಸಕಲಂ ನಿಷ್ಕಲಂ ಶುದ್ಧಂ ನಿರ್ಗುಣಂ ಗುಣಶಾಶ್ವತಂ ॥8॥**

ಭಾವಾರ್ಥ - ಹಿರಣ್ಯರೇತ, ದೀಪ್ತ, ಪುರಾಣ, ಪುರುಷೋತ್ತಮ, ಸಕಲಕಲಾ ನಿಧಿ, ನಿಷ್ಕಲ, ಶುದ್ಧ, ನಿರ್ಗುಣ, ಶಾಶ್ವತ. . . . .

**ಹಿರಣ್ಯತನುಸಂಕಾಶಂ ಸೂರ್ಯಾಯುತಸಮಪ್ರಭಂ ।**
**ಮೇಘಶ್ಯಾಮಂ ಚತುರ್ಬಾಹುಂ ಕುಶಲಂ ಕಮಲೇಕ್ಷಣಂ ॥9॥**

ಭಾವಾರ್ಥಃ ಹಿರಣ್ಮಯಿ, ಸೂರ್ಯಾಯುತಸಮಪ್ರಭ, ಮೇಘಶ್ಯಾಮ, ಚತುರ್ಬಾಹು, ಕುಶಲ, ಕಮಲನಯನ. . . .

**ಜ್ಯೋತಿರೂಪಮರೂಪಂ ಚ ಸ್ವರೂಪಂ ರೂಪಸಂಸ್ಥಿತಂ ।**
**ಸರ್ವಜ್ಞಂ ಸರ್ವರೂಪಸ್ಥಂ ಸರ್ವೇಶಂ ಸರ್ವತೋ ಮುಖಂ ॥10॥**

ಭಾವಾರ್ಥ - ಜ್ಯೋತಿರೂಪ, ಅರೂಪ, ಸ್ವರೂಪ, ರೂಪಸಂಸ್ಥಿತ, ಸರ್ವಜ್ಞ, ಸರ್ವರೂಪಸ್ಥ, ಸರ್ವೇಶ, ಸರ್ವತೋಮುಖ . . . . . .

**ಜ್ಞಾನಂ ಕೂಟಸ್ಥಮಚಲಂ ಜ್ಞಾನದಂ ಪರಮಂ ಪ್ರಭುಂ ।**
**ಯೋಗೀಶಂ ಯೋಗನಿಷ್ಣಾತಂ ಯೋಗಿನಂ ಯೋಗರೂಪಿಣಂ ॥11॥**

ಭಾವಾರ್ಥ - ಜ್ಞಾನ, ಕೂಟಸ್ಥ, ಅಚಲ, ಜ್ಞಾನದ, ಪರಮಪ್ರಭು, ಯೋಗೀಶ, ಯೋಗನಿಷ್ಣಾತ, ಯೋಗಿ, ಯೋಗರೂಪಿ . . . . . . . . . .

**ಈಶ್ವರಂ ಸರ್ವಭೂತಾನಂ ವಂದೇ ಭೂತಮಯಂ ಪ್ರಭುಂ ।**
**ಇತಿ ನಾಮಶತಂ ದಿವ್ಯಂ ವೈಷ್ಣವಂ ಖಲು ಪಾಪಹಂ ॥12॥**

ಭಾವಾರ್ಥ - ಈಶ್ವರ, ಸರ್ವಭೂತ, ಭೂತಮಯ, ಪ್ರಭು ಎನ್ನುವ ಈ ನಾಮಶತವು ಶತನಾಮಗಳ ಸ್ತೋತ್ರವಾಗಿ ದಿವ್ಯವಾಗಿದ್ದು, ವಿಷ್ಣು ಸಂಬಂಧ ಹೊಂದಿದ್ದು ಖಚಿತವಾಗಿ ಸರ್ವಪಾಪ ಪರಿಹಾರಕವಾಗಿದೆ.

**ವ್ಯಾಸೇನ ಕಥಿತಂ ಪೂರ್ವಂ ಸರ್ವಪಾಪಪ್ರಣಾಶನಂ ।**
**ಯಃ ಪಠೇತ್ಪ್ರಾತರುತ್ಥಾಯ ಸ ಭವೇದ್ವೈಷ್ಣವೋ ನರಃ ॥13॥**

ಭಾವಾರ್ಥ - ಈ ಹಿಂದೆ ವ್ಯಾಸರಿಂದ ಹೇಳಲಾಗಿರುವ ಸಮಸ್ತ ಬಗೆಯ ಪಾಪಗಳನ್ನು ನಾಶಗೊಳಿಸುವ ಈ ಸ್ತೋತ್ರವನ್ನು ಮುಂಜಾನೆ ಎದ್ದು ಯಾವ ಮನುಜರು ಪಠಿಸುತ್ತಾರೋ ಅವರು ವಿಷ್ಣುವಿನ ನಿಜಭಕ್ತರೆನಿಸುವರು.

**ಸರ್ವಪಾಪ ವಿಶುದ್ಧಾತ್ಮಾ ವಿಷ್ಣುಸಾಯುಜ್ಯಮಾಪ್ನುಯಾತ್ ।**
**ಚಾಂದ್ರಾಯಣ ಸಹಸ್ರಾಣಿ ಕನ್ಯಾದಾನಶತಾನಿ ಚ ॥14॥**

ಭಾವಾರ್ಥ - ಯಾವಾತನು ಈ ಸ್ತೋತ್ರವನ್ನು ಶ್ರದ್ಧೆಯಿಂದ, ಭಕ್ತಿಯಿಂದ, ಅನುದಿನವೂ ಪಾರಾಯಣ ಮಾಡುವನೋ, ಆ ಮನುಷ್ಯನು ಸಮಸ್ತಪಾಪಗಳಿಂದ ವಿಮುಕ್ತನಾಗಿ ವಿಷ್ಣು ಸಾಯುಜ್ಯವನ್ನು ಪಡೆಯುವನು. ಅಲ್ಲದೆ ಆತನು ಒಂದು ನೂರು ಕನ್ಯಾದಾನ, ಒಂದು ಸಾವಿರ ಚಾಂದ್ರಾಯಣ ವ್ರತಗಳನ್ನು . . .

**ಗವಾಂ ಲಕ್ಷಸಹಸ್ರಾಣಿ ಮುಕ್ತಿಭಾಗೀ ಭವೇನ್ನರಃ ।**
**ಅಶ್ವಮೇಧಾಯುತಂ ಪುಣ್ಯಂ ಫಲಂ ಪ್ರಾಪ್ನೋತಿ ಮಾನವಃ ॥15॥**

ಭಾವಾರ್ಥ - ಹಾಗೆಯೇ ಸಹಸ್ರಲಕ್ಷ ಗೋದಾನಗಳ, ಮತ್ತು ಸಹಸ್ರ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯಫಲವನ್ನು ಹೊಂದುವುದರ ಮೂಲಕ ಮೋಕ್ಷವನ್ನು ಪಡೆಯುವನು.

॥ ಇತಿ ಶ್ರೀವಿಷ್ಣು ಶತನಾಮ ಸ್ತೋತ್ರಂ ಸಂಪೂರ್ಣಂ ॥

## 7.7 ಶ್ರೀ ಅಚ್ಯುತಾಷ್ಟಕಂ

**ಅಚ್ಯುತಂ ಕೇಶವಂ ವಿಷ್ಣುಂ ಹರಿಂ ಸತ್ಯಂ ಜನಾರ್ದನಂ ।**
**ಹಂಸಂ ನಾರಾಯಣಂ ಚೈವಮೇತನ್ನಾಮಾಷ್ಟಕಂ ಪಠೇತ್ ॥1॥**

ಭಾವಾರ್ಥ - ಅಚ್ಯುತ, ಕೇಶವ, ವಿಷ್ಣು, ಹರಿ, ಸತ್ಯ, ಜನಾರ್ದನ, ಹಂಸ, ಹಾಗೂ ನಾರಾಯಣ ಎಂಬ ಎಂಟು ನಾಮಗಳನ್ನು ಪಠಣ ಮಾಡಬೇಕು.

**ತ್ರಿಸಂಧ್ಯಂ ಯಃ ಪಠೇನ್ನಿತ್ಯಂ ದಾರಿದ್ರ್ಯಂ ತಸ್ಯ ನಶ್ಯತಿ ।**
**ಶತ್ರು ಸೈನ್ಯಂ ಕ್ಷಯಂ ಯಾತಿ ದುಃಸ್ವಪ್ನಃ ಸುಸ್ವಪ್ನೋ ಭವೇತ್ ॥2॥**

ಭಾವಾರ್ಥ - ಈ ಅಷ್ಟಕವನ್ನು ಮೂರು ಸಂಧ್ಯಾಕಾಲಗಳಲ್ಲಿ ಪಠಣ ಮಾಡುವವನ ಬಡತನ ನಾಶವಾಗುವುದು. ಶತ್ರು ಸೈನ್ಯವು ಅಳಿದು ಹೋಗುವುದು. ಕೆಟ್ಟ ಕನಸು ಉತ್ತಮ ಫಲವನ್ನು ಕೊಡುವುದು.

**ಗಂಗಾಯಾಂ ಮರಣಂ ಚೈವ ದೃಢಾ ಭಕ್ತಿಸ್ತು ಕೇಶವೇ ।**
**ಬ್ರಹ್ಮ ವಿದ್ಯಾ ಪ್ರಭೋಧಶ್ಚ ತಸ್ಮಾನ್ನಿತ್ಯಂ ಪಠೇನ್ನರಃ ॥3॥**

ಭಾವಾರ್ಥ - ಗಂಗಾನದೀ ತೀರದಲ್ಲಿ ಮರಣ ಹೊಂದಿದ ಫಲ ಲಭಿಸುವುದು. ಕೇಶವನಲ್ಲಿ ಅಚಲವಾದ ಭಕ್ತಿಯುಂಟಾಗುವುದು. ಬ್ರಹ್ಮ ವಿದ್ಯೆಯ ಜ್ಞಾನವುಂಟಾಗುವುದು. ಆದ್ದರಿಂದ ಇದನ್ನು ಅನುದಿನವೂ ಪಠಿಸಬೇಕು.

॥ ಇತಿ ಶ್ರೀ ಅಚ್ಯುತಾಷ್ಟಕಂ ಸಂಪೂರ್ಣಂ ॥

## 7.8 ಶ್ರೀ ಹರಿನಾಮಾಷ್ಟಕಂ

**ಶ್ರೀ ಕೇಶವಾಚ್ಯುತ ಮುಕುಂದ ರಥಾಂಗಪಾಣೇ । ಗೋವಿಂದ ಮಾಧವ ಜನಾರ್ದನ ದಾನವಾರೇ ॥ ನಾರಾಯಣಾಮರಪತೇ ತ್ರಿಜಗನ್ನಿವಾಸೇ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥1॥**

ಭಾವಾರ್ಥ - ಶ್ರೀಕೇಶವ, ಅಚ್ಯುತ, ಮುಕುಂದ, ಚಕ್ರಪಾಣಿ, ಗೋವಿಂದ, ಮಾಧವ, ಜನಾರ್ದನ, ದಾನವಾರಿ, ನಾರಾಯಣ, ಅಮರಪತಿ, ತ್ರಿಲೋಕವಾಸಿ, ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀದೇವದೇವ ಮಧುಸೂದನ ಶಾರ್ಙಪಾಣೇ । ದಾಮೋದರಾರ್ಣವನಿಕೇತನ ಕೈಟಭಾರೇ ॥ ವಿಶ್ವಂಬರಾಭರಣ ಭೂಷಿತ ಭೂಮಿ ಪಾಲ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥2॥**

ಭಾವಾರ್ಥ - ಶ್ರೀ ದೇವರದೇವ, ಮಧುವೆಂಬ ದಾನವಾಂತಕ, ಧನುರ್ಧಾರಿ, ದಾಮೋದರ, ಸಾಗರಸಂಬಂಧಿ, ಅನಿಕೇತನ, ಕೈಟಭಾರಿ, ಬ್ರಹ್ಮಾಂಡವನ್ನು ಆವರಿಸಿದವ, ಸರ್ವಾಭರಣ ಭೂಷಿತ, ಭೂಮಿಪಾಲಕ ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀಪದ್ಮಲೋಚನ ಗದಾಧರ ಪದ್ಮನಾಭ । ಪದ್ಮೇಶ, ಪದ್ಮಪಾವನ, ಪದ್ಮಪಾಣೇ ॥ ಪೀತಾಂಬರಾಂಬರಾಂಬರರುಚೇ ರುಚಿರಾವತಾರ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥3॥**

ಭಾವಾರ್ಥ - ಶ್ರೀಪದ್ಮನನಯನ, ಗದಾಧಾರಿ, ಕಮಲನಾಭ, ಕಮಲೇಶ, ಕಮಲಚರಣ, ಪವಿತ್ರ, ಕಮಲಹಸ್ತ, ಪೀತಾಂಬರಧಾರಿ, ಸುಂದರಾವತಾರಿ ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀಕಾಂತ, ಕೌಸ್ತುಭಧರಾರ್ತಿಹರಾಬ್ಜಪಾಣೇ, ವಿಷ್ಣೋ ತ್ರಿವಿಕ್ರಮ ಮಹೀಧರ ಧರ್ಮಸೇತೋ ॥ ವೈಕುಂಠವಾಸ ವಸುಧಾಧಿಪ ವಾಸುದೇವ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥4॥**

ಭಾವಾರ್ಥ - ಲಕ್ಷ್ಮೀಕಾಂತ, ಕೌಸ್ತುಭಮಾಲಾಧಾರಿ, ಸಂಕಷ್ಟನಾಶನ, ಕಮಲಹಸ್ತ, ವಿಷ್ಣು, ತ್ರಿಲೋಕದೊಡೆಯ, ಬುವಿಯನ್ನು ಧರಿಸಿದವ, ಧರ್ಮಸೇತು, ವೈಕುಂಠವಾಸಿ, ಭೂಪತಿ ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀನಾರಸಿಂಹ ನರಕಾಂತಕ ಕಾಂತಮೂರ್ತೇ । ಲಕ್ಷ್ಮೀಪತೇ ಗರುಡವಾಹನ ಶೇಷಶಾಯಿನ್ ॥ ಕೇಶಿಪ್ರಣಾಶನ ಸುಕೇಶ ಕಿರೀಟ ಮೌಲೇ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥5॥**

ಭಾವಾರ್ಥ - ನರಸಿಂಹ, ನರಕದೊಡೆಯ, ಶ್ರೇಷ್ಠಮೂರ್ತಿ, ಲಕ್ಷ್ಮೀಶ, ಗರುಡವಾಹನ, ಶೇಷಶಾಯಿ, ಕೇಶಿದೈತ್ಯಾರಿ, ಸುಂದರವಾದ ಕೂದಲುಗಳೇ ಕಿರೀಟವಾಗಿರುವವ, ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀವತ್ಸಲಾಂಛನ ಸುರರ್ಷಭ ಶಂಖಪಾಣೇ । ಕಲ್ಪಾಂತವಾರಿಧಿ ವಿಹಾರೇ ಹರೇ ಮುರಾರೇ ॥ ಯಜ್ಞೇಶ ಯಜ್ಞಮಯ ಯಜ್ಞಭುಗಾದಿ ದೇವ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥6॥**

ಭಾವಾರ್ಥ - ಶ್ರೀವತ್ಸವನ್ನು ಲಾಂಛನವಾಗಿಸಿಕೊಂಡವ, ದೇವಶ್ರೇಷ್ಠ, ಶಂಖಪಾಣಿ, ಕಲ್ಪದ ಅಂತ್ಯವೆಂಬ ಸಾಗರದಲ್ಲಿ ವಿಹರಿಸುವವ, ಹರಿ, ಮುರಾರಿ, ಯಜ್ಞೇಶ, ಯಜ್ಞಮಯ, ಯಜ್ಞ ದ್ರವ್ಯಗಳನ್ನು ಸ್ವೀಕರಿಸುವವ, ಆದಿದೇವ ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀರಾಮ ರಾವಣರಿಪೋ ರಘುವಂಶಕೇತೋ । ಸೀತಾಪತೇ ದಶರಥಾತ್ಮಜ ರಾಜಸಿಂಹ ॥ ಸುಗ್ರೀವಮಿತ್ರ ಮೃಗವೇಧನ ಚಾಪಪಾಣೇ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥7॥**

ಭಾವಾರ್ಥ - ಶ್ರೀರಾಮ, ರಾವಣಾರಿ, ರಘುವಂಶಕಿರಣ, ಸೀತಾಪತಿ, ದಶರಥತನಯ, ರಾಜರುಗಳಲ್ಲಿ ಸಿಂಹಸದೃಶ, ಸುಗ್ರೀವ ಸಖ, ಕಾಂಚನ ಮೃಗವನ್ನು ಕೊಂದವ, ಧನುರ್ಧಾರಿ ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಶ್ರೀಕೃಷ್ಣ ವೃಷ್ಣಿವರ ಯಾದವ ರಾಧಿಕೇಶ । ಗೋವರ್ಧನೋದ್ಧರಣ ಕಂಸ ವಿನಾಶ ಶೌರೇ ॥ ಗೋಪಾಲ ವೇಣುಧರ, ಪಾಂಡುಸುತೈಕ ಬಂಧೋ । ಜಿಹ್ವೇ ಜಪೇತಿ ಸತತಂ ಮಧುರಾಕ್ಷರಾಣಿ ॥8॥**

ಭಾವಾರ್ಥ - ಶ್ರೀಕೃಷ್ಣ, ವೃಷ್ಣಿವಂಶಶ್ರೇಷ್ಠ, ಯಾದವ, ರಾಧಿಕಾಪತಿ, ಗೋವರ್ಧನೋದ್ಧಾರಿ, ಕಂಸಾರಿ, ಶೌರಿ, ಗೋಪಾಲ, ವೇಣುವನ್ನು ಧರಿಸಿದವ, ಪಾಂಡುತನಯರ ಏಕೈಕ ಬಂಧು ಎಂಬೀ ಮಧುರಾಕ್ಷರಗಳನ್ನು ನಾಲಿಗೆಯೇ ಯಾವಾಗಲೂ ಜಪಿಸು.

**ಇತ್ಯಷ್ಟಕಂ ಭಗವತಃ ಸತತಂ ನರೋ ಯೋ । ನಾಮಾಂಕಿತಂ ಪಠತಿ ನಿತ್ಯಮನನ್ಯಚೇತಾಃ ॥ ವಿಷ್ಣೋಃ ಪರಂ ಪದಮುಪೈತಿ ಪನರ್ನಜಾತು । ಮಾತುಃ ಪಯೋಧರರಸಂ ಪಿಬತೀಹ ಸತ್ಯಂ ॥9॥**

ಭಾವಾರ್ಥ - ಭಗವಂತನ ನಾಮಗಳಿಂದ ಕೂಡಿದ ಈ ಅಷ್ಟಕಗಳನ್ನು ಯಾವಾತನು ಅನುದಿನವೂ ಅನನ್ಯ ಮನಸ್ಸಿನಿಂದ ಪಠಿಸುವನೋ ಅವನು ಶ್ರೇಷ್ಠಪದವಿಯಾದ ವಿಷ್ಣುಸಾಯುಜ್ಯವನ್ನು ಹೊಂದುವನು ಮತ್ತು ಮರಳಿ ಜನ್ಮವ ತಾಳಿ ತಾಯಿಯ ಮೊಲೆಹಾಲು ಸೇವಿಸಲಾರನೆಂಬುದು ಪರಮ ಸತ್ಯವು.

॥ ಇತಿ ಶ್ರೀ ಹರಿನಾಮಾಷ್ಟಕಂ ಸಂಪೂರ್ಣಂ ॥

## 7.9 ಶ್ರೀ ವಿಷ್ಣು ಷಟ್ಪದಿ

**ಅವಿನಯಮಪನಯ ವಿಷ್ಣೋದಮಯ ಮನಃ ಶಮಯ ವಿಷಯಮೃಗತೃಷ್ಣಾಂ ।**
**ಭೂತದಯಾಂ ವಿಸ್ತಾರಯ ತಾರಯ ಸಂಸಾರ ಸಾಗರತಃ ॥1॥**

ಭಾವಾರ್ಥ - ಹೇ ವಿಷ್ಣು! ನನ್ನ ಅವಿಧೇಯತೆಯನ್ನು ನೀಗಿಸು. ನನ್ನ ಮನವನ್ನು ಪಳಗಿಸು. ನನ್ನಲ್ಲಿರುವ ವಿಷಯಸುಖಗಳೆಂಬ ಬಿಸಿಲ್ಗುದುರೆಯನ್ನು ಶಾಂತಗೊಳಿಸು. ನನ್ನಲ್ಲಿ ಅಡಕವಾಗಿರುವ ಭೂತದಯೆಯನ್ನು ಬೆಳೆಸು. ಹಾಗೆಯೇ ಈ ಸಂಸಾರಸಾಗರದಿಂದ ನನ್ನನ್ನು ಪಾರುಮಾಡು.

**ದಿವ್ಯಧುನೀ ಮಕರಂದೇ ಪರಿಮಲ ಪರಿಭೋಗ ಸಚ್ಚಿದಾನಂದೇ ।**
**ಶ್ರೀಪತಿಪದಾರವಿಂದೇ ಭವಭಯಖೇದಚ್ಛಿದೇ ವಂದೇ ॥2॥**

ಭಾವಾರ್ಥ - ದೇವನದಿಯೂ ದಿವ್ಯನದಿಯೂ ಆಗಿರುವ ಗಂಗೆಯು ಯಾರ ಪಾದಕಮಲಗಳಲ್ಲಿ ಮಕರಂದದಂತಿರುವಳೋ, ಸಚ್ಚಿದಾನಂದವು ಪರಿಮಳ ಸ್ವರೂಪವಾಗಿ ಯಾವುದರಲ್ಲಿದೆಯೋ, ಸಾಂಸಾರಿಕ ಭಯ ದುಃಖಗಳನ್ನು ನಾಶಗೊಳಿಸುವ ಶಕ್ತಿ ಯಾವುದರಲ್ಲಿದೆಯೋ, ಅಂತಹಾ ಲಕ್ಷ್ಮೀಕಾಂತನ ಚರಣಕಮಲಗಳಿಗಾನು ವಂದಿಸುವೆ.

**ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಂ ।**
**ಸಾಮುದ್ರೋ ಹಿ ತರಂಗಃ ಕ್ವಚನ ಕಿಂ ಸಮುದ್ರೋ ನ ತಾರಗಃ ॥3॥**

ಭಾವಾರ್ಥ - ಹೇ ದೊರೆಯೇ!ನನ್ನ ನಿನ್ನದೆಂಬ ದ್ವೈತತತ್ವ ಭಾವನೆಗಳೆಲ್ಲ ನೀಗಿದ ಮೇಲೆ ನಾನು ನಿನ್ನವನಾದರೂ ನೀನು ನನ್ನವನಾಗಲಿಲ್ಲ. ಯಾಕೆಂದರೆ ತರಂಗವು[ಅಲೆಗಳು] ಸಮುದ್ರದ್ದಾಗಿದೆಯೇ ಹೊರತು ತರಂಗದಿಂದ ಸಾಗರವು ಉಂಟಾಗಲಾರದು.

**ಉದ್ಧೃತನಗ ನಗಭಿದನುಜ ದನುಜಕುಲಾಮಿತ್ರ ಮಿತ್ರಶಶಿದೃಷ್ಟೇ ।**
**ದೃಶ್ಟೇ ಭವತಿ ಪ್ರಭವತಿ ಕಿಂ ಭವತಿರಸ್ಕಾರಃ ॥4॥**

ಭಾವಾರ್ಥ - ಹೇ!ಗೋವರ್ಧನೋದ್ಧಾರಿಯೇ, ಉಪೇಂದ್ರನೇ, ದೈತ್ಯಕುಲಾರಿಯೇ, ಸೂರ್ಯಚಂದ್ರರನ್ನು ಕಣ್ಣುಗಳನ್ನಾಗಿ ಹೊಂದಿರುವವನೇ, ಸಮಸ್ತ ಲೋಕದೊಡೆಯಾ, ನಿನ್ನಂತಹಾ ದೊರೆಯ ದರ್ಶನವಾದ ಮೇಲೆ ಸಾಂಸಾರಿಕ ತಿರಸ್ಕಾರ ಉಂಟಾಗಲಾರದೇ ಸ್ವಾಮೀ?

**ಮತ್ಸ್ಯಾದಿಭಿರವತಾರೈರವತಾಽವತಾ ಸದಾ ವಸುಧಾಂ ।**
**ಪರಮೇಶ್ವರ ಪರಿಪಾಲ್ಯೋ ಭವತಾ ಭವತಾಪಭೀತೋಽಹಂ ॥5॥**

ಭಾವಾರ್ಥ - ಸ್ವಾಮಿ ಪರಮೇಶ್ವರನೇ, ಮತ್ಸ್ಯಾದಿ ನಾನಾವತಾರರೂಪಗಳಿಂದ ಅವತಾರವೆತ್ತಿದ ನೀನು ನಿರಂತರ ಬ್ರಹ್ಮಾಂಡದ ರಕ್ಷಕನಾಗಿರುವೆ. ಸಂಸಾರದಲ್ಲಿನ ಭವತಾಪಗಳಿಗೆ ಸಿಲುಕಿ ಭೀತನಾಗಿರುವ ನನ್ನನ್ನು ಕಾಪಾಡಲು ನೀನು ಶಕ್ತನಿರುವೆ.

**ದಾಮೋದರ ಗುಣಮಂದಿರ ಸುಂದರವದನಾರವಿಂದ ಗೋವಿಂದ ।**
**ಭವಜಲಧಿಮಥನಮಂದರ ಪರಮಂ ದರಮಪನಯ ತ್ವಂ ಮೇ ॥6॥**

ಭಾವಾರ್ಥ - ಎಲೈ, ದಾಮೋದರನೇ, ಗುಣಮಂದಿರನೇ, ಸುಂದರವದನಾರವಿಂದನೇ, ಗೋವಿಂದನೇ, ಸಂಸಾರ ಸಾಗರವನ್ನು ಮಥಿಸುವ ಮಂದರಾಚಲಸ್ವರೂಪನೇ, ನನ್ನ ಮಹಾಭೀತಿಯನ್ನು ನೀನು ದೂರೀಕರಿಸು.

**ನಾರಾಯಣ ಕರುಣಾಮಯ ಶರಣಂ ಕರವಾಣಿ ತಾವಕೌ ಚರಣೌ ।**
**ಇತಿ ಷಟ್ಪದೀ ಮದೀಯೇ ವದನಸರೋಜೇ ಸದಾವಸತು ॥7॥**

ಭಾವಾರ್ಥ - ಹೇ ನಾರಾಯಣಾ, ಕರುಣಾಮಯಿಯೇ, ನಾನು ಎಲ್ಲಾ ರೀತಿಯಲ್ಲೂ ನಿನ್ನ ಪದಾರವಿಂದಗಳಲ್ಲಿ ಶರಣಾಗಿರುವೆ. ಷಟ್ಪದಿಯಲ್ಲಿರುವ ಈ ಸ್ತೋತ್ರಗಳು ದುಂಬಿಯಂತೆ ಸದಾ ನನ್ನ ಮುಖಕಮಲದಲ್ಲಿ ನೆಲೆಯಾಗಿರಲಿ.

॥ ಇತಿ ಶ್ರೀ ಆಚಾರ್ಯ ಶಂಕರಭಗವತ್ಪಾದ ಕೃತ ವಿಷ್ಣು ಷಟ್ಪದಿ ಸ್ತೋತ್ರಂ ಸಂಪೂರ್ಣಂ ॥

## 7.10 ಶ್ರೀ ದೀನಬಂಧ್ವಷ್ಟಕಂ

**ಯಸ್ಮಾದಿದಂ ಜಗದುದೇತಿ ಚತುರ್ಮುಖಾದ್ಯಂ । ಯಸ್ಮಿನ್ನವಸ್ಥಿತಮಶೇಷಮಶೇಷ ಮೂಲೇ ॥ ತತ್ರೋಪಯಾತಿ ವಿಲಯಂ ಚ ಸಮಸ್ತ ಮಂತೇ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥1॥**

ಭಾವಾರ್ಥ - ಯಾವ ಪರಮಾತ್ಮನಿಂದ ಬ್ರಹ್ಮನೇ ಆದಿಯಾಗಿ ಬ್ರಹ್ಮಾಂಡಲ್ಲಿ ಜೀವಜಗತ್ತು ಉತ್ಪತ್ತಿಯಾಗಿದೆಯೋ, ಯಾವ ಪರಮೇಶ್ವರನಲ್ಲಿ ಸಮಸ್ತ ವಿಶ್ವವು ಒಳಗೊಂಡಿದೆಯೋ, ಯಾರಲ್ಲಿ ಜಗತ್ತಿನ ಸರ್ವ ಸಂಸಾರದ ಅಸ್ತಿತ್ವವಿದೆಯೋ, ಅಂತ್ಯದಲ್ಲಿ ಜಗತ್ತು ಯಾರಲ್ಲಿ ಲೀನವಾಗುವುದೋ ಅಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಚಕ್ರಂ ಸಹಸ್ರಕರಚಾರು ಕರಾರವಿಂದೇ । ಗುರ್ವೀ ಗದಾದರವರಶ್ಚ ವಿಭಾತಿ ಯಸ್ಯ ॥ ಪಕ್ಷೀಂದ್ರ ಪೃಷ್ಟಪರಿರೋಪಿತಪಾದ ಪದ್ಮೋ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥2॥**

ಭಾವಾರ್ಥ - ಯಾರ ಕರಕಮಲಗಳಲ್ಲಿ ಸೂರ್ಯಕಿರಣಸದೃಶ ಚಕ್ರವೂ ಭಾರವಾಗಿರುವಂತಹಾ ಗದೆಯೂ, ಹಾಗೂ ಶ್ರೇಷ್ಠವಾದ ಶಂಖವು ಬೆಳಗುತ್ತಲಿದೆಯೋ, ಯಾವಾತನು ಪಕ್ಷಿರಾಜ ಗರುಡನ ಬೆನ್ನ ಮೇಲೆ ತನ್ನ ಚರಣಕಮಲದ್ವಯಗಳನ್ನು ಇರಿಸಿರುವನೋ ಅಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಯೇನೋದ್ಧೃತಾ ವಸುಮತೀ ಸಲಿಲೇ ನಿಮಗ್ನಾ । ನಗ್ನಾ ಚ ಪಾಂಡವವಧೂಃ ಸ್ಥಗಿತಾ ದುಕೂಲೈಃ ॥ ಸಮ್ಮೋಚಿತೋ ಜಲಚರಸ್ಯ ಮುಖಾದ್ಗಜೇಂದ್ರೋ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥3॥**

ಭಾವಾರ್ಥ - ಜಲಾಂತರ್ಗತವಾಗಿದ್ದ ಭೂಮಿಯನ್ನು ಉದ್ಧರಿಸಿದವನೂ, ಪಾಂಡವ ವಧು ದ್ರೌಪದಿಯನ್ನು ಬತ್ತಲುಗೊಳಿಸುವ ಯತ್ನವನ್ನು ಸ್ಥಗಿತಗೊಳಿಸಿ ಹಲವಾರು ವಸನಗಳಿಂದ ರಕ್ಷಿಸಿದವನೂ, ಮೊಸಳೆಯ ಬಾಯಿಯಲ್ಲಿ ಸಿಲುಕಿದ ಗಜರಾಜನಿಗೆ

ಜೀವದಾನವಿತ್ತವನೂ ಆಗಿರುವ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಯಸ್ಯಾರ್ದ್ರದೃಷ್ಟಿವಶತಸ್ತು ಸುರಾಃ ಸಮೃದ್ಧಿಂ । ಕೋಪೇಕ್ಷಣೇನ ದನುಜಾ ವಿಲಯಂ ವ್ರಜಂತಿ ॥ ಭೀತಾಶ್ಚರಂತಿ ಚ ಯತೋಽರ್ಕಯಮಾನಿಲಾದ್ಯಾಃ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥4॥**

ಭಾವಾರ್ಥ - ಯಾವಾತನ ಸ್ನೇಹಪೂರಿತ ದೃಷ್ಟಿಯಿಂದ ದೇವತೆಗಳು ಸಕಲೈಶ್ವರ್ಯ ಹೊಂದುವರೋ, ಯಾರ ಕೋಪ ಪೂರಿತ ದೃಷ್ಟಿಯಿಂದ ದಾನವರು ನಾಶ ಹೊಂದುವರೋ, ಸೂರ್ಯ ಚಂದ್ರ ಯಮ, ವಾಯುವೇ ಮೊದಲಾದವರು ಯಾರ ಭಯಕ್ಕೊಳಗಾಗಿ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿರುವರೋ ಅಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಗಾಯಂತಿ ಸಾಮ ಕುಶಲಾ ಯಮಜಂ ಮಖೇಷು । ಧ್ಯಾಂತಿ ಧೀರಮತಯೋ ಯತಯೋ ವಿವಿಕ್ತೇ ॥ ಪಶ್ಯಂತಿ ಯೋಗಿಪುರುಷಾಃ ಪುರುಷಂ ಶರೀರೇ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥5॥**

ಭಾವಾರ್ಥ - ಸಾಮವೇದ ಗಾಯನ ಕುಶಲಿಗರು ಯಜ್ಞಗಳಲ್ಲಿ ಜನ್ಮರಹಿತನಾಗಿರುವ ಭಗವಂತನ ಗುಣವನ್ನು ಹಾಡುವರು. ಧೀರ ಬುದ್ಧಿಯ ಸಂನ್ಯಾಸಿಗಳು ಏಕಾಂತದಲ್ಲಿ ಭಗವಂತನ ಧ್ಯಾನ ಮಾಡುವರು. ಯೋಗಿ ಪುರುಷರಾದರೋ ತಮ್ಮ ದೇಹದ ಆತ್ಮದಲ್ಲಿ ಆತನ ಸಾಕ್ಷಾತ್ಕಾರ ಹೊಂದುವರು. ಅಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಆಕಾರರೂಪ ಗುಣಯೋಗವಿವರ್ಜಿತೋಽಪಿ । ಭಕ್ತಾನುಕಂಪನ ನಿಮಿತ್ತ ಗೃಹೀತಮೂರ್ತಿಃ ॥ ಯಃ ಸರ್ವಗೋಽಪಿ ಕೃತ್ಯಶೇಶಶರೀರಶಯ್ಯೋ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥6॥**

ಭಾವಾರ್ಥ - ಆಕಾರ, ರೂಪ. ಗುಣಾದಿ ರಹಿತನಾಗಿರುವಾಗ್ಯೂ, ಭಕ್ತರ ಬಗ್ಗೆ ಅನುಕಂಪಿತನಾಗಿ ಅವರಿಗೆ ಕರುಣಿಸುವ ಸಲುವಾಗಿ ನಾನಾವತಾರಗಳನ್ನು ಧರಿಸಿದವನೂ, ಹಾಗೂ ಸರ್ವ ವ್ಯಾಪಿಯಾಗಿದ್ದಾಗ್ಯೂ ಶೇಶಶಾಯಿಯಾದವನೂ, ಆಗಿರುವಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಯಸ್ಯಾಂಘ್ರಿಪಂಕಜಮನಿದ್ರಮುನೀಂದ್ರವೃಂದೈರ್- । ಆರಾಧ್ಯತೇ ಭವದಾವಾನಲ ದಾಹಶಾಂತ್ಯೈ ॥ ಸರ್ವಾಪರಾಧಮ ವಿಚಿಂತ್ಯ ಮಮಾಖಿಲಾತ್ಮಾ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥7॥**

ಭಾವಾರ್ಥ - ಉತ್ಸಾಹಭರಿತರಾದ ಮುನಿಸಮೂಹವು ದುಃಖರೂಪದ ಸಂಸಾರಿಕ ದಾವಾಗ್ನಿಯನ್ನು ಶಾಂತಗೊಳಿಸಲು ಯಾವಾತನ ಚರಣಾರವಿಂದಗಳನ್ನು ಆರಾಧಿಸುವರೋ, ಸರ್ವಾಪರಾಧಗಳನ್ನು ಕ್ಷಮಿಸಿ ಯಾರು ಸಮಸ್ತ ವಿಶ್ವಕ್ಕೆ ಆತ್ಮ ಸ್ವರೂಪನಾಗಿ ದೀನಬಂಧುವಾಗಿರುವನೋ ಅಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

**ಯನ್ನಾಮಕೀರ್ತನಪರಃ ಶ್ವಪಚೋಽಪಿ ನೂನಂ । ಹಿತ್ವಾಽಖಿಲಂ ಕಲಿಮಲಂ ಭುವನಂ ಪುನಾತಿ ॥ ದಗ್ಧ್ವಾಮಮಾಘಮಖಿಲಂ ಕರುಣೇಕ್ಷಣೇನ । ದೃಗ್ಗೋಚರೋ ಭವತು ಮೇಽದ್ಯ ಸ ದೀನಬಂಧುಃ ॥8॥**

ಭಾವಾರ್ಥ - ಯಾರ ನಾಮ ಸಂಕೀರ್ತನೆಯಲ್ಲಿ ತೊಡಗಿ ಚಾಂಡಾಲನು ಕೂಡಾ ಖಚಿತವಾಗಿಯೂ ತನ್ನ ಸಂಪೂರ್ಣ ಪಾಪಗಳನ್ನು ಕಳೆದು ಜಗತ್ತನ್ನು ಪಾವನಗೊಳಿಸುವನೋ, ಯಾವ ದೀನಬಂಧು ಭಗವಂತನು ತನ್ನ ಕರುಣಾಪೂರಿತ ದೃಷ್ಟಿಯಿಂದ ನನ್ನ ಸಮಸ್ತ ಪಾಪಗಳನ್ನು ಭಸ್ಮೀಕರಿಸಬಲ್ಲನೋ ಅಂತಹಾ ದುಃಖಿತರ ಪರಮಾಪ್ತನಾದ ಭಗವಂತನು ಈದಿನ ನನ್ನ ದೃಷ್ಟಿಗೆ ಪ್ರತ್ಯಕ್ಷದರ್ಶನವೀಯಲಿ.

॥ ಇತಿ ಶ್ರೀ ದೀನಬಂಧ್ವಷ್ಟಕಂ ಸಂಪೂರ್ಣಂ ॥

## 7.11 ಶ್ರೀಮದಚ್ಯುತಾಷ್ಟಕ ಸ್ತೋತ್ರಂ

**ಅಚ್ಯುತಾಚ್ಯುತ ಹರೇ ಪರಮಾತ್ಮನ್ । ರಾಮಕೃಷ್ಣ ಪುರುಷೋತ್ತಮ ವಿಷ್ಣೋ ॥ ವಾಸುದೇವ ಭಗವನ್ನನಿರುದ್ಧ । ಶ್ರೀಪತೇ ಶಮಯ ದುಃಖಮಶೇಶಂ ॥1॥**

ಭಾವಾರ್ಥ - ಹೇ! ಅಚ್ಯುತಾ, ಚ್ಯುತಿಯಿಲ್ಲದವನೇ, ಹರಿಯೇ, ಪರಮಾತ್ಮಾ, ರಾಮಾ, ಕೃಷ್ಣಾ, ಪುರುಷೋತ್ತಮಾ, ವಿಷ್ಣುವೇ, ವಾಸುದೇವನೇ, ಭಗವಂತನೇ, ಅನಿರುದ್ಧನೇ, ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ವಿಶ್ವಮಂಗಲ ವಿಭೋ ಜಗದೀಶ । ನಂದನಂದನನೃಸಿಂಹ ನರೇಂದ್ರ ॥ ಮುಕ್ತಿದಾಯಕ ಮುಕುಂದ ಮುರಾರೇ । ಶ್ರೀಪತೇ ಶಮಯ ದುಃಖಮಶೇಶಂ ॥2॥**

ಭಾವಾರ್ಥ - ಪ್ರಪಂಚಕ್ಕೆ ಮಂಗಲದಾಯಕನಾಗಿರುವ ಪ್ರಭುವೇ, ಜಗದೊಡೆಯನೇ, ನಂದಗೋಪನ ಸುತನೇ, ನಾರಸಿಂಹನೇ, ನರೇಂದ್ರನೇ, ಮುಕ್ತಿದಾಯಕನೇ, ಮುಕುಂದನೇ, ಮುರಾರಿಯೇ, ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ರಾಮಚಂದ್ರ ರಘುನಾಯಕ ದೇವ । ದೀನನಾಥ ದುರಿತಕ್ಷಯಕಾರಿನ್ ॥ ಯಾದವೇಂದ್ರ ಯದುಭೂಷಣ ಯಜ್ಞ । ಶ್ರೀಪತೇ ಶಮಯ ದುಃಖಮಶೇಶಂ ॥3॥**

ಭಾವಾರ್ಥ - ರಾಮಚಂದ್ರನೇ, ರಘುನಾಯಕನೇ, ದೇವಾ, ದೀನರಕ್ಷಕನೇ, ಪಾಪನಾಶಕನೇ, ಯಾದವವರೇಣ್ಯನೇ, ಯದುಕುಲಭೂಷಣನೇ, ಯಜ್ಞ ಸ್ವರೂಪನೇ ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ದೇವಕೀತನಯ ದುಃಖದಾವಾಗ್ನೇ । ರಾಧಿಕಾರಮಣ ರಮ್ಯ ಸುಮುಹೂರ್ತೇ ॥ ದುಃಖಮೋಚನ ದಯಾರ್ಣವನಾಥ । ಶ್ರೀಪತೇ ಶಮಯ ದುಃಖಮಶೇಶಂ ॥4॥**

ಭಾವಾರ್ಥ - ದೇವಕೀಸುತನೇ, ದುಃಖಗಳಿಗೆ ಕಾಡ್ಗಿಚ್ಚಿನಂತಿರುವವನೇ, ರಾಧಾರಮಣನೇ, ರಮ್ಯನೇ, ಸುಂದರ ಮೂರ್ತಿಯೇ ದುಃಖವನ್ನು ದೂರೀಕರಿಸುವವನೇ, ದಯಾಸಾಗರನೇ, ದೊರೆಯೇ ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ಗೋಪಿಕಾವದನಚಂದ್ರ ಚಕೋರ । ನಿತ್ಯ ನಿರ್ಗುಣನಿರಂಜನ ಜಿಷ್ಣೋ ॥**
**ಪೂರ್ಣರೂಪ ಜಯಶಂಕರ ಶರ್ವ । ಶ್ರೀಪತೇ ಶಮಯ ದುಃಖಮಶೇಶಂ ॥5॥**

ಭಾವಾರ್ಥ - ಗೋಪಿಕಾಸ್ತ್ರೀಯರ ಮುಖಚಂದ್ರಕ್ಕೆ ಚಕೋರದಂತೆ ಶೋಭಿಸುವವನೇ, ನಿತ್ಯನೇ, ಗುಣಾತೀತನೇ, ವಿಷ್ಣುವೇ, ಪರಿಪೂರ್ಣನೇ, ಜಯಶಂಕರನೇ, ಶರ್ವನೇ, ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ಗೋಕುಲೇಶ ಗಿರಿಧಾರಣಧೀರ । ಯಾಮುನಾಚ್ಛತಟಖೇಲನ ವೀರ ॥ ನಾರದಾದಿ ಮುನಿವಂದಿತ ಪಾದ । ಶ್ರೀಪತೇ ಶಮಯ ದುಃಖಮಶೇಶಂ ॥6॥**

ಭಾವಾರ್ಥ - ಗೋಕುಲಾಧೀಶನೇ, ಗೋವರ್ಧನಗಿರಿಧಾರಿಯೇ, ಧೀರನೇ, ಯಮುನಾ ನದಿ ದಂಡೆಯ ಮೇಲಾಡುವ ವೀರನೇ, ನಾರದಾದಿ ಮುನಿ ವೃಂದದವರಿಂದ ಪೂಜಿಸಲ್ಪಡುವ ಪಾದಗಳನ್ನು ಹೊಂದಿರುವವನೇ ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ದ್ವಾರಕಾಧಿಪ ದುರಂತ ಗುಣಾಬ್ಧೇ । ಪ್ರಾಣನಾಥ ಪರಿಪೂರ್ಣ ಭವಾರೇ ॥**
**ಜ್ಞಾನಗಮ್ಯ ಗುಣಸಾಗರ ಬ್ರಹ್ಮನ್ । ಶ್ರೀಪತೇ ಶಮಯ ದುಃಖಮಶೇಶಂ ॥7॥**

ಭಾವಾರ್ಥ - ದ್ವಾರಕಾಧೀಶನೇ, ದುರ್ಗುಣಗಳನ್ನು ನಾಶಗೊಳಿಸುವ ಗುಣಸಾಗರನೇ ಪ್ರಾಣನಾಥನೇ, ಪೂರ್ಣ ಸ್ವರೂಪನೇ, ಸಂಸಾರ ಸಾಗರದಿಂದ ಮೇಲೆತ್ತುವವನೇ, ಜ್ಞಾನಕ್ಕೆ ತಲಪಲು ಸಾಧ್ಯವಾಗಿರುವವನೇ, ಗುಣನಿಧಿಯೇ, ಬ್ರಹ್ಮನೇ, ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ದುಷ್ಟ ನಿರ್ದಲನ ದೇವ ದಯಾಲೋ । ಪದ್ಮನಾಭ ಧರಣೀಧರ ಧರ್ಮಿನ್ ॥**
**ರಾವಣಾಂತಕ ರಮೇಶ ಮುರಾರೇ । ಶ್ರೀಪತೇ ಶಮಯ ದುಃಖಮಶೇಶಂ ॥8॥**

ಭಾವಾರ್ಥ - ದುಷ್ಟ ಸಂಹಾರಕನೇ, ದೇವನೇ, ದಯಾಳುವೇ, ನಾಭಿಯಲ್ಲಿ ತಾವರೆಯನ್ನು ಧರಿಸಿಕೊಂಡಿರುವವನೇ, ಭೂಮಿಯನ್ನು ಧರಿಸಿಕೊಂಡಿರುವವನೇ, ಧರ್ಮಾತ್ಮನೇ, ರಾವಣ ವೈರಿಯೇ, ಲಕ್ಷ್ಮೀಪತಿಯೇ, ಮುರನ ಶತ್ರುವೇ, ಶ್ರೀಪತಿಯೇ ನನ್ನ ದುಃಖಗಳನ್ನು ಶೇಷರಹಿತವನ್ನಾಗಿಸಿ ಶಾಂತಿಯನ್ನು ಕರುಣಿಸು ಸ್ವಾಮಿಯೇ.

**ಅಚ್ಯುತಾಷ್ಟಕಮಿದಂ ರಮಣೀಯಂ । ನಿರ್ಮಿತಂ ಭವಭಯಂ ವಿಹಂತಂ ॥ ಯಃ ಪಠೇದ್ವಿಷಯವೃತ್ತಿ ನಿವೃತ್ತಿರ್ । ಜನ್ಮ ದುಃಖಮಖಿಲಂ ಸ ಜಹಾತಿ ॥9॥**

ಭಾವಾರ್ಥ - ಮನೋಹರವಾಗಿ ರಚಿಸಲ್ಪಟ್ಟ ಈ ಅಚ್ಯುತಾಷ್ಟಕವು ಸಾಂಸಾರಿಕ ಹಾಗೂ ಪ್ರಾಪಂಚಿಕ ಭಯವನ್ನು ನಾಶಗೊಳಿಸುವಂತಹದ್ದಾಗಿದೆ. ಇದನ್ನು ಯಾವಾತನು ಪಠಿಸುತ್ತಾನೋ ಆತನ ಸಮಸ್ತ ವಸ್ತು ಸ್ಥಿತಿ ದೋಷಗಳೂ ನಿವೃತ್ತಿಯಾಗುವವು. ಜನ್ಮಾದಿ ದುಃಖಗಳು ನಾಶವಾಗುವವು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಅಚ್ಯುತಾಷ್ಟಕ ಸ್ತೋತ್ರಂ ಸಂಪೂರ್ಣಂ ॥

## 7.12 ಶ್ರೀ ಹರಿ ಪ್ರಾರ್ಥನಾ ಶ್ಲೋಕಂ

**ನಿತ್ಯೋತ್ಸವೋ ನಿತ್ಯದಾನಂ ನಿತ್ಯ ಶ್ರೀರ್ನಿತ್ಯತೋ ಜಯಃ ।**
**ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥1॥**

ಭಾವಾರ್ಥ - ಸಮಸ್ತ ಸುಲಕ್ಷಣಗಳಿಗೆ ಆಶ್ರಯದಾತನಾದ ಭಗವಾನ್ ಶ್ರೀಹರಿಯನ್ನು ಅನುದಿನವೂ ಹೃದಯದಲ್ಲಿ ಧಾರಣೆ ಮಾಡಿಕೊಂಡವರಿಗೆ ಪ್ರತಿ ದಿವಸವೂ ಉತ್ಸವವು, ಪ್ರತಿದಿವಸವೂ ದಾನವು, ಶಾಶ್ವತವಾದ ಸಂಪದವು, ಪ್ರತಿ ದಿವಸವೂ ಗೆಲುವಿನ ಅನುಭವವಾಗುವವು.

**ಆಸೀನಸ್ಯ ಶಯಾನಸ್ಯ ತಿಷ್ಠತೋ ವ್ರಜತೋಽಪಿ ವಾ ।**

**ರಮಸ್ವ ಪುಂಡರೀಕಾಕ್ಷ ಹೃದಯೇ ಮಮ ಸರ್ವದಾ ॥2॥**

ಭಾವಾರ್ಥ - ಹೇ! ಪುಂಡರೀಕಾಕ್ಷನೇ, ಮಲಗಿರುವ, ಎದ್ದಿರುವ, ಕುಳಿತಿರುವ, ನಿಂತಿರುವ, ನಡೆಯುತ್ತಲಿರುವ, ನನ್ನ ಹೃತ್ಕಮಲದಲ್ಲಿ ಸದಾಕಾಲವೂ ನೀನು ವಿಹರಿಸುತ್ತಿರು.

**ಸರ್ವತಶ್ಚೈವ ಸರ್ವಾತ್ಮನ್ ಸರ್ವಾವಸ್ಥಾಸು ಚಾಚ್ಯುತ ।**

**ರಮಸ್ವ ಪುಂಡರೀಕಾಕ್ಷ ನೃಸಿಂಹ ಹೃದಯೇ ಮಮ ॥3॥**

ಭಾವಾರ್ಥ - ಕಮಲನಯನನಾಗಿರುವ ನರಹರಿಯೇ, ಸಮಸ್ತರೊಳಗಿರುವ ಅವಿನಾಶಿಯೇ, ನನ್ನ ಎಲ್ಲಾ ತೊಂದರೆಗಳಲ್ಲಿ ಕೂಡಾ ನೀನು ಎಲ್ಲಾ ರೀತಿಯಿಂದ ನನ್ನ ಎದೆಯೊಳಗೆ ವಿಹರಿಸುತ್ತಿರು.

**ಕರಾವಲಂಬನಂ ದೇಹಿ ನೃಸಿಂಹ ಕಮಲೇಕ್ಷಣ ।**

**ಭವ ಪಂಕಾರ್ಣವೇ ಘೋರೇ ಮಜ್ಜತೋ ಮಮ ಶಾಶ್ವತ ॥4॥**

ಭಾವಾರ್ಥ - ಕಮಲವನ್ನು ಹೋಲುವ ನಯನಗಳನ್ನು ಹೊಂದಿರುವ ನರಹರಿಯೇ,ನಾಶರಹಿತನೇ, ಸಂಸಾರವೆಂಬ ಘೋರ ರಾಡಿಯ ಕೂಪದಲ್ಲಿ ಮುಳುಗುತ್ತಿರುವ ನನಗೆ ನಿನ್ನ ಹಸ್ತದಾಸರೆಯನ್ನು ಕೊಟ್ಟು ಉದ್ಧರಿಸು ಸ್ವಾಮೀ.

**ತ್ರಾಹಿ ತ್ರಾಹಿ ಜಗನ್ನಾಥ ನರಸಿಂಹಾಚ್ಯುತಾವ್ಯಯ ।**

**ಉದ್ಧರಾಸ್ಮಾನ್ ಮುರಾರೇ ತ್ವಂ ದುಃಖ ಸಂಸಾರಸಾಗರಾತ್ ॥5॥**

ಭಾವಾರ್ಥ - ಜಗದೊಡೆಯನೇ, ನರಹರಿಯೇ, ನಾಶವಿಲ್ಲದವನೇ, ಪತನವಿಲ್ಲದಾತನೇ, ಮುರಾಂತಕನೇ, ದುಃಖಮಯವಾದ ಈ ಸಂಸಾರ ಎನ್ನುವ ಸಾಗರದಿಂದ ನಮ್ಮನ್ನು ಹಿಡಿದೆತ್ತಿ ಉದ್ಧರಿಸು ಸ್ವಾಮೀ.

**ಯಃ ಸರ್ವ ಗುಣ ಸಂಪೂರ್ಣಃ ಸರ್ವದೋಷ ವಿವರ್ಜಿತಃ ।**

**ಪ್ರೀಯತಾಂ ಗುರುದೇವೋಯಂ ನೃಸಿಂಹಃ ಪರಮಃ ಸುಹೃತ್ ॥6॥**

ಭಾವಾರ್ಥ - ಸಮಸ್ತ ಗುಣಗಳಿಂದ ತುಂಬಿದವನಾದ, ಯಾವುದೊಂದೂ ದೋಷಗಳಿಲ್ಲದಿರುವ, ಚಿರಕಾಲೀನ ಆಪ್ತಗೆಳೆಯನೂ ಆಗಿರುವ ಗುರುದೇವನಾಗಿರುವ ನರಹರಿಯು ಸದಾಪರಮ ಸಂತುಷ್ಟನಾಗಿರಲಿ.

**ಮಂಗಲಂ ಭಗವಾನ್ ವಿಷ್ಣುಃ ಮಂಗಲಂ ಮಧುಸೂದನಃ ।**
**ಮಂಗಲಂ ದೇವಕೀ ಪುತ್ರೋ ಮಂಗಲಂ ಗರುಡ ಧ್ವಜಃ ॥7॥**

ಭಾವಾರ್ಥ - ಭಗವಾನ್ ವಿಷ್ಣುವು ಮಂಗಲವನ್ನು ಕರುಣಿಸಲಿ. ಮಧುವೆಂಬ ಅಸುರನನ್ನು ಹತ್ಯೆ ಗೈದವನು ಶುಭವನ್ನು ನೀಡಲಿ. ದೇವಕೀತನಯನು ಆನಂದವನ್ನು ದಯಪಾಲಿಸಲಿ. ಗರುಡ ಧ್ವಜನಾದ ಶ್ರೀ ಹರಿಯು ಅದೃಷ್ಟವನ್ನು ತರಲಿ.

॥ ಇತಿ ಶ್ರೀ ಹರಿ ಪ್ರಾರ್ಥನಾ ಶ್ಲೋಕಂ ಸಂಪೂರ್ಣಂ ॥

## 7.13 ವಿಷ್ಣು ಪಂಜರ ಸ್ತೋತ್ರಂ

**ಓಂ ಅಸ್ಯ ಶ್ರೀ ವಿಷ್ಣು ಪಂಜರ ಸ್ತೋತ್ರ ಮಹಾ ಮಂತ್ರಸ್ಯ । ನಾರದ ಋಷಿಃ । ಅನುಷ್ಟುಪ್ ಛಂದಃ । ವಿಷ್ಣುಃ ಪರಮಾತ್ಮಾ ದೇವತಾ । ಅಹಂ ಬೀಜಂ । ಸೋಽಹಂ ಶಕ್ತಿಃ । ಓಂ ಹ್ರೀಂ ಕೀಲಕಂ । ಮಮ ಸರ್ವದೇಹ ರಕ್ಷಣಾರ್ಥಂ ಜಪೇ ವಿನಿಯೋಗಃ ॥**

ಭಾವಾರ್ಥ - ಈ ವಿಷ್ಣು ಪಂಜರ ಸ್ತೋತ್ರಕ್ಕೆ ನಾರದರು ಋಷಿಯಾಗಿದ್ದಾರೆ. ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಶ್ರೀ ಮಹಾವಿಷ್ಣು ಪರಮಾತ್ಮನು ಇದರ ದೇವತೆ. ನಾನು [ನಾರದರು] ಬೀಜ. ಅವನೇ[ಪರಮಾತ್ಮ]ನಾನೆಂಬುದು ಇದರ ಶಕ್ತಿರೂಪ. ಓಂ ಹ್ರೀಂ ಎಂಬುದು ಕೀಲಕವು[ಚಿಲಕ]. ನನ್ನ ಶರೀರದ ಸಮಸ್ತ ಅಂಗಗಳ ರಕ್ಷಣಾರ್ಥ ಇದನ್ನು ಜಪದಲ್ಲಿ ಉಪಯೋಗಿಸುವೆನು.

**॥ ಅಥ ಧ್ಯಾನಂ ॥ ಪರಂ ಪರಸ್ಮಾತ್ಪ್ರಕೃತೇರನಾದಿಮೇಕಂ । ನಿವಿಷ್ಟಂ ಬಹುಧಾ ಗುಹಾಯಾಂ ॥ ಸರ್ವಾಲಯಂ ಸರ್ವ ಚರಾಚರಸ್ಥಂ । ನಮಾಮಿ ವಿಷ್ಣುಂ ಜಗದೇಕನಾಥಂ ॥1॥**

ಭಾವಾರ್ಥ - ಅಗ್ರಗಣ್ಯರಲ್ಲಿ ಅಗ್ರಗಣ್ಯನೂ, ಪ್ರಕೃತಿಯಿಂದಲೂ ಅನಾದಿಯಾದವನೂ, ಹೆಚ್ಚಾಗಿ ರಹಸ್ಯನಾಗಿರುವನೂ, ಸಮಸ್ತವನ್ನೂ ಒಳಗೊಂಡಿರುವಂತಹವನೂ, ಸಕಲ ಚರಾಚರ ಸ್ಥಾವರ ಜಂಗಮಗಳಲ್ಲಿ ಇರುವಂತಹವನೂ, ಜಗತ್ತಿನ ಏಕ ಮಾತ್ರಾ ಒಡೆಯನೂ ಆಗಿರುವಂತಹಾ ಮಹಾಶಕ್ತಿ ಸ್ವರೂಪನಾಗಿರುವ ವಿಷ್ಣುವಿಗೆ ನಾನು ನಮಸ್ಕರಿಸುವೆನು.

**ಓಂ ವಿಷ್ಣುಪಂಜರಕಂ ದಿವ್ಯಂ ಸರ್ವದುಷ್ಟ ನಿವಾರಣಂ ।**
**ಉಗ್ರತೇಜೋ ಮಹಾವೀರ್ಯಂ ಸರ್ವಶತ್ರು ನಿಕೃಂತನಂ ॥2॥**

ಭಾವಾರ್ಥ - ವಿಷ್ಣು ಪಂಜರವೆಂಬ ಈ ಮಹಾಸ್ತೋತ್ರವು ಸಕಲ ದುರಿತಗಳನ್ನು ನಿವಾರಿಸುವಂತಹದೂ ತೀವ್ರವಾಗಿರುವ ಪ್ರಭಾವವಿರುವಂತಹದೂ ಮಹಾಶಕ್ತಿಯುಳ್ಳದ್ದೂ ಸಕಲ ಶತ್ರುಗಳನ್ನು ವಿನಾಶಗೊಳಿಸುವಂತಹದೂ ಆಗಿದೆ.

**ತ್ರಿಪುರಂ ದಹ್ಯಮಾನಸ್ಯ ಹರಸ್ಯ ಬ್ರಹ್ಮಣೋದಿತಂ ।**
**ತದಹಂ ಸಂಪ್ರವಕ್ಷ್ಯಾಮಿ ಆತ್ಮರಕ್ಷಾಕರಂ ನೃಣಾಂ ॥3॥**

ಭಾವಾರ್ಥ - ತ್ರಿಪುರಗಳನ್ನು ದಹಿಸಿದ ಹರನಿಗೆ ಬ್ರಹ್ಮನು ಹೇಳ್ದ ಮಾನವರ ಆತ್ಮರಕ್ಷಣೆ ಮಾಡುವಂತಹದಗಿರುವ ಇದನ್ನು ನಾನು ನಿನಗೆ ಹೇಳುತ್ತಿರುವೆನು.

**ಪಾದೌರಕ್ಷತು ಗೋವಿಂದೋ ಜಂಘೇಚೈವ ತ್ರಿವಿಕ್ರಮಃ ।**
**ಊರೂ ಮೇ ಕೇಶವಃ ಪಾತು, ಕಟಿಂ ಚೈವ ಜನಾರ್ದನಃ ॥4॥**

ಭಾವಾರ್ಥ - ಗೋವಿಂದನು ಪಾದಗಳನ್ನು ರಕ್ಷಿಸಲಿ. ತ್ರಿವಿಕ್ರಮನು ಮೀನ ಖಂಡಗಳನ್ನು ಕಾಪಾಡಲಿ. ಕೇಶವನು ತೊಡೆಗಳನ್ನು ರಕ್ಷಿಸಲಿ. ಕಟಿಭಾಗವನ್ನು ಜನಾರ್ದನನು ರಕ್ಷಿಸಲಿ.

**ನಾಭಿಂ ಚೈವಾಚ್ಯುತಃ ಪಾತು ಗುಹ್ಯಂ ಚೈವ ತು ವಾಮನಃ ।**
**ಉದರಂ ಪದ್ಮನಾಭಶ್ಚ ಪೃಷ್ಠಂ ಚೈವ ತು ಮಾಧವಃ ॥5॥**

ಭಾವಾರ್ಥ - ಹೊಕ್ಕುಳನ್ನು ಅಚ್ಯುತನು ರಕ್ಷಿಸಲಿ. ಗುಪ್ತಾಂಗಗಳನ್ನು ವಾಮನನು ಕಾಪಾಡಲಿ. ಹೊಟ್ಟೆಯನ್ನು ಪದ್ಮನಾಭನು ರಕ್ಷಿಸಲಿ. ಮಾಧವನು ಬೆನ್ನನ್ನು ಕಾಪಾಡಲಿ.

**ವಾಮಪಾರ್ಶ್ವಂ ತಥಾ ವಿಷ್ಣುರ್ದಕ್ಷಿಣಂ ಮಧುಸೂದನಃ ।**
**ಬಾಹ್ವೇ ವಾಸುದೇವಶ್ಚ ಹೃದಿ ದಾಮೋದರಸ್ತಥಾ ॥6॥**

ಭಾವಾರ್ಥ - ವಿಷ್ಣುವು ಎಡಪಾರ್ಶ್ವವನ್ನೂ, ಮಧುಸೂದನನು ಬಲ ಪಾರ್ಶ್ವವನ್ನೂ ರಕ್ಷಿಸಲಿ. ಭುಜಗಳನ್ನು ವಾಸುದೇವನು ಕಾಪಾಡಲಿ. ದಾಮೋದರನು ಹೃದಯವನ್ನು ಕಾಪಾಡಲಿ.

**ಕಂಠಂ ರಕ್ಷತು ವಾರಾಹಃ ಕೃಷ್ಣಶ್ಚ ಮುಖಮಂಡಲಂ ।**
**ಮಾಧವಃ ಕರ್ಣಮೂಲೇ ತು ಹೃಷಿಕೇಶಶ್ಚ ನಾಸಿಕೆ ॥7॥**

ಭಾವಾರ್ಥ - ಕೊರಳನ್ನು ವರಾಹನು ಕಾಪಾಡಲಿ. ಕೃಷ್ಣನು ಮುಖವರ್ತುಲವನ್ನು ರಕ್ಷಿಸಲಿ. ಕಿವಿಗಳನ್ನು ಮಾಧವನ್ನು ರಕ್ಷಿಸಲಿ. ಹೃಷಿಕೇಶನು ಮೂಗನ್ನು ರಕ್ಷಿಸಲಿ.

**ನೇತ್ರೇ ನಾರಾಯಣೋ ರಕ್ಷೇಲ್ಲಲಾಟಂ ಗರುಡಧ್ವಜಃ ।**
**ಕಪೋಲೌ ಕೇಶವೋ ರಕ್ಷೇದ್ವೈಕುಂಠಃ ಸರ್ವತೋ ದಿಶಂ ॥8॥**

ಭಾವಾರ್ಥ - ಕಣ್ಣುಗಳನ್ನು ನಾರಾಯಣನೂ, ಹಣೆಯನ್ನು ಗರುಡಧ್ವಜನೂ ರಕ್ಷಿಸಲಿ. ಗಲ್ಲವನ್ನು ಕೇಶವನು ಕಾಪಾಡಲಿ. ಸಮಸ್ತ ದಿಕ್ಕುಗಳಲ್ಲಿಯೂ ವೈಕುಂಠನು ರಕ್ಷಿಸಲಿ.

**ಶ್ರೀವತ್ಸಾಂಕಶ್ಚ ಸರ್ವೇಶಾಮಂಗಾನಾಂ ರಕ್ಷಕೋ ಭವೇತ್ ।**
**ಪೂರ್ವಸ್ಯಾಂ ಪುಂಡರೀಕಾಕ್ಷ ಆಗ್ನೇಯ್ಯಾಂ ಶ್ರೀಧರಸ್ತಥಾ ॥9॥**

ಭಾವಾರ್ಥ - ಶ್ರೀವತ್ಸದ ಚಿನ್ಹೆಯುಳ್ಳವನು ಸರ್ವ ಅಂಗಗಳ ರಕ್ಷಕನಾಗಿರಲಿ. ಹಾಗೆಯೇ ಪೂರ್ವದಲ್ಲಿ ಪುಂಡರೀಕನೂ, ಆಗ್ನೇಯದಲ್ಲಿ ಶ್ರೀಧರನೂ ರಕ್ಷಿಸಲಿ.

**ದಕ್ಷಿಣೇ ನಾರಸಿಂಹಶ್ಚ ನೈಋತ್ಯಾಂ ಮಾಧವೋಽವತು ।**
**ಪುರುಷೋತ್ತಮೊ ಮೇ ವಾರುಣ್ಯಾಂ ವಾಯವ್ಯಾಂಚ ಜನಾರ್ದನಃ ॥10॥**

ಭಾವಾರ್ಥ - ದಕ್ಷಿಣದಲ್ಲಿ ನಾರಸಿಂಹನೂ, ನೈಋತ್ಯದಲ್ಲಿ ಮಾಧವನೂ, ಪಶ್ಚಿಮದಲ್ಲಿ ಪುರುಷೋತ್ತಮನೂ, ವಾಯವ್ಯದಲ್ಲಿ ಜನಾರ್ದನನೂ ರಕ್ಷಿಸಲಿ.

**ಗದಾದರಸ್ತು ಕೌಬೇರ್ಯಾಮೀಶಾನ್ಯಾಂ ಪಾತು ಕೇಶವಃ ।**
**ಆಕಾಶೇಚ ಗದಾ ಪಾತು ಪಾತಾಲೇ ಚ ಸುದರ್ಶನಃ ॥11॥**

ಭಾವಾರ್ಥ - ಉತ್ತರದಲ್ಲಿ ಗದಾದರನೂ, ಈಶಾನ್ಯದಲ್ಲಿ ಕೇಶವನೂ, ಆಕಾಶದಲ್ಲಿ ಗದೆಯೂ, ಪಾತಾಳದಲ್ಲಿ ಸುದರ್ಶನವೂ ಕಾಪಾಡಲಿ.

**ಸನ್ನದ್ಧಃ ಸರ್ವಗಾತ್ರೇಷು ಪ್ರವಿಷ್ಟೋ ವಿಷ್ಣುಪಂಜರಃ ।**
**ವಿಷ್ಣು ಪಂಜರ ವಿಷ್ಟೋಽಹಂ ವಿಚರಾಮಿ ಮಹೀತಲೇ ॥12॥**

ಭಾವಾರ್ಥ - ಸರ್ವಾಂಗಗಳಲ್ಲೂ ವಿಷ್ಣು ಪಂಜರವು ತಯಾರಾಗಿ ಕುಳಿತಿರಲಿ. ವಿಷ್ಣುವು ಪಂಜರದೊಳಗಿದ್ದುಕೊಂಡು ನಾನು ಭುವಿಯಲ್ಲಿ ಸಂಚರಿಸುತ್ತಿರುವೆನು.

**ರಾಜದ್ವಾರೇಪಥೇ ಘೋರೇ ಸಂಗ್ರಾಮೆ ಶತ್ರು ಸಂಕಟೆ ।**
**ನದೀಷು ಚರಣೇಚೈವ ಚೋರವ್ಯಾಘ್ರ ಭಯೇಷು ಚ ॥13॥**

ಬಾವಾರ್ಥಃ- ಅರಮನೆಯ ದ್ವಾರದಲ್ಲಿ, ಘೋರಕಾನನದಲ್ಲಿ, ಭೀಕರ ಕಾಳಗದಲ್ಲಿ, ಶತ್ರುಗಳ ಉಪಟಳದ ಸಂಕಷ್ಟಕಾಲದಲ್ಲಿ, ನದಿಗಳಲ್ಲಿ, ಯುದ್ಧಗಳಲ್ಲಿ, ಕಳ್ಳರ ಮತ್ತು ಹುಲಿಯ ಬಗೆಗಿನ ಅಂಜಿಕೆಯಲ್ಲಿ. .

**ಡಾಕಿನಿ ಪ್ರೇತಭೂತೇಷು ಭಯಂ ತಸ್ಯ ನ ಜಾಯತೇ ।**
**ರಕ್ಷ ರಕ್ಷ ಮಹಾದೇವ ರಕ್ಷ ರಕ್ಷ ಜನೇಶ್ವರ ॥14॥**

ಭಾವಾರ್ಥ - ಭೂತ ಪ್ರೇತ ಡಾಕಿನೀಗಳ ಭೀತಿಯಿರದಂತೆ ಹೇ! ಪರಮಾತ್ಮನೇ, ಜನೇಶ್ವರನೇ ರಕ್ಷಿಸು, ರಕ್ಷಿಸು.

**ಜಲೇ ರಕ್ಷತು ವಾರಾಹಃ ಸ್ಥಲೇ ರಕ್ಷತು ವಾಮನಃ ।**
**ರಕ್ಷಂತು ದೇವತಾಃ ಸರ್ವಾ ಬ್ರಹ್ಮ ವಿಷ್ಣು ಮಹೇಶ್ವರಾಃ ॥15॥**

ಭಾವಾರ್ಥ - ನೀರಿನಲ್ಲಿ ವರಾಹರೂಪನೂ, ನೆಲೆಯಲ್ಲಿ ವಾಮನನೂ ಕಾಪಾಡಲಿ. ಬ್ರಹ್ಮ ವಿಷ್ಣು ಮಹೇಶ್ವರಾದಿ ಸರ್ವ ದೇವತೆಗಳೂ ರಕ್ಷಿಸಲಿ.

**ಅಟವ್ಯಾಂ ನಾರಸಿಂಹಶ್ಚ ಸರ್ವತಃ ಪಾತು ಕೇಶವಃ ।**
**ದಿವಾ ರಕ್ಷತು ಮಾಂ ಸೂರ್ಯೋ ರಾತ್ರೌ ರಕ್ಷತು ಚಂದ್ರಮಾಃ ॥16॥**

ಭಾವಾರ್ಥ - ಅಡವಿಯಲ್ಲಿ ನಾರಸಿಂಹನೂ, ಎಲ್ಲೆಡೆಗಳಲ್ಲಿಯೂ ಕೇಶವನೂ ಕಾಪಾಡಲಿ. ಹಗಲು ಸೂರ್ಯನೂ, ರಾತ್ರಿ ಕಾಲದಲ್ಲಿ ಚಂದ್ರನೂ ನನ್ನನ್ನು ರಕ್ಷಿಸಲಿ.

**ರೋಗ ವಿಘ್ನಹತಶ್ಚೈವ ಬ್ರಹ್ಮಹಾ ಗುರುತಲ್ಪಗಃ ।**
**ಪಂಥಾನಂ ದುರ್ಗಮಂ ರಕ್ಷೇತ್ಸರ್ವಮೇವ ಜನಾರ್ದನಃ ॥17॥**

ಭಾವಾರ್ಥ - ರೋಗಾದಿ ಅಡೆ ತಡೆಗಳಲ್ಲಿ ಬ್ರಹ್ಮಹತ್ಯಾ ದೋಷದಲ್ಲಿ, ಗುರುಗಳ ಹಾಸಿಗೆಯನ್ನು ಬಳಸಿದ ದೋಷದಲ್ಲಿ ಹಾಗೂ ಕಷ್ಟಸಾಧ್ಯವಾಗಿರುವ ಹಾದಿಯಲ್ಲಿ ಎಲ್ಲಾ ರೀತಿಯಲ್ಲೂ ಜನಾರ್ದನನು ಕಾಪಾಡಲಿ.

**ಸ್ತ್ರೀಹಂತಾ ಬಾಲಘಾತೀ ಚ ಸುರಾಪೋ ವೃಷಲೀಪತಿಃ ।**
**ಮುಚ್ಯತೇ ಸರ್ವ ಪಾಪೇಭ್ಯೋ ಯಃ ಪಠೇನ್ನಾತ್ರ ಸಂಶಯಃ ॥18॥**

ಭಾವಾರ್ಥ - ಸ್ತ್ರೀಯರನ್ನು ಹಾಗೂ ಮಕ್ಕಳನ್ನು ಪೀಡಿಸಿದವನು ಸುರಾಪಾನಿಯು ಕುಲಘಾತಕನು ಇತ್ಯಾದಿ ಯಾರೇ ಆಗಿದ್ದರೂ ಈ ಸ್ತೋತ್ರವನ್ನು ಪಠಿಸುವುದರಿಂದ ಸರ್ವ ಪಾಪಗಳಿಂದಲೂ ವಿಮುಕ್ತಿಹೊಂದುವುದರಲ್ಲಿ ಸಂಶಯವಿಲ್ಲ.

**ಅಪುತ್ರೋ ಲಭತೇ ಪುತ್ರಂ ಧನಾರ್ಥೀ ಲಭತೇ ಧನಂ ।**
**ವಿದ್ಯಾರ್ಥೀ ಲಭತೇ ವಿದ್ಯಾಂ ಮೋಕ್ಷಾರ್ಥೀ ಲಭತೇ ಗತಿಂ ॥19॥**

ಭಾವರ್ಥಃ- ಸಂತಾನ ವಿಹೀನರು ಸಂತಾನವನ್ನೂ, ಧನಾಪೇಕ್ಷಿಗಳು ಧನವನ್ನೂ, ವಿದ್ಯಾರ್ಥಿಯು ವಿದ್ಯೆಯನ್ನೂ, ಮೋಕ್ಷವನ್ನು ಅಪೇಕ್ಷಿಸುವವರು ಸದ್ಗತಿಯನ್ನೂ ಹೊಂದುವರು.

**ಯಸ್ತ್ವಿದಂ ಪಠತೇ ಸ್ತೋತ್ರಂ ವಿಷ್ಣು ಪಂಜರ ಮುತ್ತಮಂ ।**

**ಅಪದೋ ಹರತೇ ನಿತ್ಯಂ ವಿಷ್ಣು ಸ್ತೋತ್ರಾರ್ಥ ಸಂಪದಾ ॥20॥**

ಭಾವಾರ್ಥ - ವಿಷ್ಣು ಪಂಜರ ಸ್ತೋತ್ರದ ಪಠನವು ಉತ್ತಮ ಫಲದಾಯಕವಾಗಿದ್ದು ಇದನ್ನು ಪಠಿಸುವುದರಿಂದ ವಿಷ್ಣುವೆಂಬ ಅರ್ಥ ಸಂಪದದಿಂದ ಅನುದಿನವೂ ಆಪತ್ತುಗಳು ನಾಶವಾಗುವವು.

**ಗೋಸಹಸ್ರ ಫಲಂ ತಸ್ಯ ವಾಜಪೇಯ ಶತಸ್ಯ ಚ ।**

**ಮುಚ್ಯತೇ ಸರ್ವ ಪಾಪೇಭ್ಯೋ ವಿಷ್ಣು ಲೋಕಂ ಸ ಗಚ್ಛತಿ ॥21॥**

ಸಾವಿರ ಗೋದಾನ ಮಾಡಿದ ಫಲವೂ ವಾಜಪೇಯ ಯಾಗ ಮಾಡಿದ ಫಲವೂ ಲಭಿಸಿ ಆತನು ಸರ್ವ ಪಾಪಗಳಿಂದ ವಿಮುಕ್ತನಾಗಿ ವಿಷ್ಣು ಸಾಯುಜ್ಯವನ್ನು ಪಡೆಯುವನು.

**ಅಶ್ವಮೇಧ ಸಹಸ್ರಸ್ಯ ಫಲಂಪ್ರಾಪ್ನೋತಿ ಮಾನವಃ ।**

**ಸರ್ವಕಾಮಂ ಲಭೇದಸ್ಯ ಪಠಣಾನ್ನಾತ್ರ ಸಂಶಯಃ ॥22॥**

ಭಾವಾರ್ಥ - ಇದನ್ನು ಪಠಿಸುವುದರಿಂದ ಸಾವಿರ ಅಶ್ವಮೇಧ ಯಾಗಗಳನ್ನು ಮಾಡಿದ ಫಲವು ದೊರಕುವುದರೊಡನೆ ಆತನ ಸಮಸ್ತ ಕಾಮನೆಗಳು ಈಡೇರುವವು.

**ಜಲೇ ವಿಷ್ಣುಃ ಸ್ಥಲೇ ವಿಷ್ಣುರ್ವಿಷ್ಣುಃಪರ್ವತಮಸ್ತಕೇ ।**

**ಜ್ವಾಲಮಾಲಾಕುಲೇ ವಿಷ್ಣುಃ ಸರ್ವಂವಿಷ್ಣುಮಯಂಜಗತ್ ॥23॥**

ಭಾವಾರ್ಥ - ನೀರಿನಲ್ಲಿಯೂ ನೆಲೆಯಲ್ಲಿಯೂ ಪರ್ವತಶಿಖರದಲ್ಲಿಯೂ ಜ್ವಾಲೆಯಲ್ಲಿಯೂ ವಿಷ್ಣುವು ಸ್ಥಿರವಾಗಿದ್ದು ಸಕಲ ಬ್ರಹ್ಮಾಂಡವೂ ವಿಷ್ಣುಮಯವಾಗಿದೆ. ಆ ಮಂಗಲಸ್ವರೂಪೀ ಮಹಾವಿಷ್ಣುವಿಗೆ ನಾನು ನಮಿಸುವೆ.

॥ ಇತಿ ವಿಷ್ಣು ಪಂಜರ ಸ್ತೋತ್ರಂ ಸಂಪೂರ್ಣಂ ॥

## 7.14 ಶ್ರೀ ಅಚ್ಯುತ ನಾಮಾಷ್ಟಕಂ

**ಅಚ್ಯುತಂ ಕೇಶವಂ ವಿಷ್ಣುಂ ಹರಿಂ ಸತ್ಯಂ ಜನಾರ್ದನಂ ।**

**ಹಂಸಂ ನಾರಾಯಣಂ ಚೈವಮೇತಾನ್ನಾಮಾಷ್ಟಕಂ ಪಠೇತ್ ॥1॥**

ಭಾವಾರ್ಥ - ಅಚ್ಯುತ, ಕೇಶವ, ವಿಷ್ಣು, ಹರಿ, ಸತ್ಯ, ಜನಾರ್ದನ, ಹಂಸ, ನಾರಾಯಣ ಎಂಬ ಈ ಎಂಟು ನಾಮಾವಳಿಗಳನ್ನು ಪಠಿಸಬೇಕು.

**ತ್ರಿಸಂಧ್ಯಂ ಯಃಪಠೇನ್ನಿತ್ಯಂ ದಾರಿದ್ರ್ಯಂ ತಸ್ಯ ನಶ್ಯತಿ ।**
**ಶತ್ರು ಸೈನ್ಯ ಕ್ಷಯಂ ಯಾತಿ ದುಃಸ್ವಪ್ನಃ ಸುಸ್ವಪ್ನೋ ಭವೇತ್ ॥2॥**

ಭಾವಾರ್ಥ - ಈ ನಾಮಾವಲಿಗಳನ್ನು ಮೂರು ಸಂಧ್ಯಾ ಕಾಲಗಳಲ್ಲಿ ಯಾರು ಪಠಿಸುವರೋ ಅಂತಹವರ ದಾರಿದ್ರ್ಯ, ವು ಅಳಿದು ಹೋಗುವುದು. ಮತ್ತು ಅವರ ವೈರಿ ಸೈನ್ಯವು ನಾಶವಾಗುವುದು. ಅವರ ಕೆಟ್ಟ ಸ್ವಪ್ನಗಳು ಉತ್ತಮ ಸ್ವಪ್ನಗಳಾಗಿ ಫಲ ದೊರಕುವುದು.

**ಗಂಗಾಯಾಂ ಮರಣಂ ಚೈವ ದೃಡಾ ಭಕ್ತಿಸ್ತು ಕೇಶವೇ ।**
**ಬ್ರಹ್ಮ ವಿದ್ಯಾ ಪ್ರಬೋಧಶ್ಚ ತಸ್ಮಾನಿತ್ಯಂ ಪಠೇನ್ನರಃ ॥3॥**

ಭಾವಾರ್ಥ - ಅಂತಹವರ ಮರಣವು ಗಂಗಾ ತಟಾಕದಲ್ಲಿ ಸಂಭವಿಸಿದ ಫಲ ದೊರಕುವುದು. ಹಾಗೆಯೇ ಕೇಶನಲ್ಲಿ ಅಚಲವಾದ ಭಕ್ತಿಯುಂಟಾಗುವುದು. ಅವರಿಗೆ ಬ್ರಹ್ಮ ವಿದ್ಯೆಯ ಜ್ಞಾನವುಂಟಾಗುವುದು. ಆದ ಕಾರಣ ಇದನ್ನು ಅನುದಿನವೂ ಪಠಿಸಬೇಕು.

॥ ಇತಿ ಅಚ್ಯುತ ನಾಮಾಷ್ಟಕಂ ಸಂಪೂರ್ಣಂ ॥

## 7.15 ಶ್ರೀ ಹರಿ ಶರಣಾಷ್ಟಕಂ

**ಧ್ಯೇಯಂ ವದಂತಿ ಶಿವಮೇವ ಹಿ ಕೇಚಿದನ್ಯೇ । ಶಕ್ತಿಂ ಗಣೇಶಮಪರೇ ತು ದಿವಾಕರಂ ವೈ ॥ ರೂಪೈಸ್ತು ತೈರಪಿ ವಿಭಾಸಿ ಯತಸ್ತ್ವಮೇವ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥1॥**

ಭಾವಾರ್ಥ - ಕೆಲವರು ಧ್ಯಾನಿಸಲು ಯೋಗ್ಯನೂ ಗಮ್ಯನೆಂಬುದಾಗಿಯೂ ಶಿವನನ್ನೂ, ಕೆಲವರು ಶಕ್ತಿಯೆಂಬುದಾಗಿಯೂ, ಮತ್ತೆ ಕೆಲವರು ಗಣೇಶನೆಂಬುದಾಗಿಯೂ, ಕೆಲವರು ಸೂರ್ಯಭಗವಾನನೆಂದೂ ಹೇಳುವರು. ಆದರೆ ಇವೆಲ್ಲಾ ಸ್ವರೂಪಗಳಲ್ಲಿ ನೀನು

ನೆಲೆಯಾಗಿರುವೆ. ಆದ್ದರಿಂದ ಎಲ್ಲೈ ಬಡವರ ಆಪ್ತನೇ!ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ನೊ ಸೋದರೊ ನ ಜನಕೊ ಜನನೀ ನ ಜಾಯಾ । ನೈವಾತ್ಮಜೊ ನ ಚ ಕುಲಂ ವಿಪುಲಂ ಬಲಂ ವಾ ॥ ಸಂದೃಶ್ಯತೆ ನ ಕಿಲ ಕೋಽಪಿ ಸಹಾಯಕೊ ಮೇ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥2॥**

ಭಾವಾರ್ಥ - ನನಗೆ ಸಹೋದರರು, ಅಪ್ಪ, ಅಮ್ಮ, ಪತ್ನಿ, ಮಕ್ಕಳು, ಬಂಧುಗಳು, ಕುಲ ಹಾಗೆಯೇ ಅಪಾರ ಬಲ ಇವಾವುದೂ ಸಹಕಾರಿಯೆಂದು ಅನಿಸುವುದಿಲ್ಲ. ಆದ್ದರಿಂದ ಎಲ್ಲೈ ಬಡವರ ಆಪ್ತನೇ!ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ನೋಪಾಸಿತಾ ಮದಪಾಸ್ಯ ಮಯಾ ಮಹಾಂತ-। ಸ್ತೀರ್ಥಾನಿ ಚಾಸ್ತಿಕಧಿಯಾ ನ ಹಿ ಸೇವಿತಾನಿ ॥ ದೇವಾರ್ಚನಂ ಚ ವಿಧಿವನ್ನ ಕೃತಂ ಕದಾಪಿ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥3॥**

ಭಾವಾರ್ಥ - ನಾನಾದರೋ ನನ್ನ ದುರಭಿಮಾನದಿಂದ ಮಹಾತ್ಮರನ್ನು ಎಂದೂ ಆರಾಧಿಸಿಲ್ಲ. ದೇವರು ಧರ್ಮಗಳಲ್ಲಿ ನಂಬುಗೆಯುಳ್ಳವನಾಗಿ ನಾನೆಂದೂ ತೀರ್ಥಗಳನ್ನು ಸೇವಿಸಿದವನಲ್ಲ. ಮತ್ತು ಸಂಪ್ರದಾಯ ಪೂರ್ವಕವಾಗಿ ದೇವತಾರ್ಚನೆಯನ್ನಂತೂ ಮಾಡಿದವನೇ ಅಲ್ಲ. ಆದ್ದರಿಂದ ಎಲ್ಲೈ ಬಡವರ ಆಪ್ತನೇ!ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ದುರ್ವಾಸನಾ ಮಮ ಸದಾ ಪರಿಕರ್ಷಯಂತಿ । ಚಿತ್ತಂ ಶರೀರಮಪಿ ರೋಗಗಣಾ ದಹಂತಿ ॥ ಸಂಜೀವನಂ ಚ ಪರಹಸ್ತಗತಂ ಸದೈವ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥4॥**

ಭಾವಾರ್ಥ - ದುಷ್ಟ ಮನೋಕಾಮನೆಗಳು ನನ್ನ ಮನವನ್ನು ಯಾವಾಗಲೂ ಸೆಳೆಯುತ್ತಲಿವೆ. ರೋಗಗಳ ರಾಶಿಯೇ ನನ್ನ ದೇಹವನ್ನು ನಿರಂತರ ದಹಿಸುತ್ತಲಿವೆ.

ಜೀವನವಂತೂ ಸದಾಕಾಲ ಪರರ ವಶದಲ್ಲಿರುತ್ತಿದೆ. ಆದ್ದರಿಂದ ಎಲೈ ಬಡವರ ಆಪ್ತನೇ! ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ಪೂರ್ವಂ ಕೃತಾನಿ ದುರಿತಾನಿ ಮಯಾತುಯಾನಿ । ಸ್ಮೃತ್ವಾಖಿಲಾನಿ ಹೃದಯಂ ಪರಿಕಂಪತೆ ಮೇ ॥ ಖ್ಯಾತಾ ಚ ತೇ ಪತಿತ ಪಾವನತಾ ತು ಯಸ್ಮಾತ್ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥5॥**

ಭಾವಾರ್ಥ - ಈ ಹಿಂದೆ ನಾನು ಮಾಡಿದ ಹಾಗೂ ನನ್ನಿಂದಾಗಿರ ಬಹುದಾದ ಪಾಪಗಳನ್ನೆಲ್ಲಾ ನೆನೆನೆನೆದುಕೊಳ್ಳುತ್ತಾ ನನ್ನೀ ಹೃದಯವು ಭೀತಿಯಿಂದ ನಡುಗುತ್ತಿದೆ. ಆದರೆ ನೀನಾದರೋ ಪತಿತೋದ್ಧಾರಕನೆಂಬ ಪ್ರಖ್ಯಾತಿಯಿದೆ. ಆದ್ದರಿಂದ ಎಲೈ ಬಡವರ ಆಪ್ತನೇ!ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ದುಃಖಂ ಜರಾಜನನಜಂ ವಿವಿಧಾಶ್ಚ ರೋಗಾಃ । ಕಾಕಶ್ಚ ಸೂಕರಜನಿರ್ನಿರಯೇ ಚ ಪಾತಃ ॥ ತೇ ವಿಸ್ಮೃತೇಃ ಫಲಮಿದಂ ವಿತತಂ ಹಿ ಲೋಕೆ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥6॥**

ಭಾವಾರ್ಥ - ಹೇ! ದೊರೆಯೇ,ನಿನ್ನ ನೆನಪಿಲ್ಲದಿರುವಿಕೆಯಿಂದ ಹುಟ್ಟು-ಮುಪ್ಪುಗಳ ದ್ವಾರಾ ಉಂಟಾಗುವ ದುಃಖಗಳನ್ನು, ಹಾಗೆಯೇ ನಾನಾ ತರದ ವ್ಯಾಧಿಗಳ ಭವಣೆ, ಕಾಗೆ, ನಾಯಿ, ಹಂದಿಯೇ ಆದಿಯಾದ ನಾನಾ ಪ್ರಾಣಿಗಳ ಯೋನಿಯಲ್ಲಿ ಜನನ, ಅದರಂತೆ ನರಕಾದಿ ವಾಸಾನುಭವ ಇವೆಲ್ಲವುಗಳನ್ನು ಸಂಸಾರಾನುಭವದ ವಿಸ್ತರಿತ ಫಲವಾಗಿ ಅನುಭವಿಸಬೇಕಾಗಿದೆ. ಆದ್ದರಿಂದ ಎಲೈ ಬಡವರ ಆಪ್ತನೇ!ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ನೀಚೋಽಪಿ ಪಾಪವಲಿತೋಽಪಿ ವಿನಿಂದಿತೋಽಪಿ । ಬ್ರೂಯಾತ್ತವಾಹಮಿತಿಯಸ್ತು ಕಿಲೈಕವಾರಂ ॥ ತಂ ಯಚ್ಛಸೀಶ ನಿಜಲೋಕಮಿತಿವ್ರತಂ ತೇ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥7॥**

ಭಾವಾರ್ಥ - ನೀಚನು, ನಿಂದಿತನು, ಮಹಾಪಾಪಿಷ್ಟನು ಅವನು ಯಾವನೇ ಆಗಿರಲಿ ಅಂತಹವನು ನಿನ್ನನ್ನಲ್ಲಿ "ನಾನು ನಿನ್ನವನು" ಎಂದೊಂದು ಬಾರಿ ಅಂದರೂ ಸಾಕು ಅವನಿಗೆ ನಿನ್ನ ಶರೀರದಲ್ಲಿ ನೆಲೆಗೊಡುವೆ. ಹೇ! ಒಡೆಯನೇ,ಅದು ನಿನ್ನ ನಿಯಮವೂ ಆಗಿದೆ. ಆದ್ದರಿಂದ ಎಲೈ ಬಡವರ ಆಪ್ತನೇ!ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

**ವೇದೇಷು ಧರ್ಮವಚನೇಷು ತಥಾಗಮೇಷು । ರಾಮಾಯಣೇऽಪಿ ಚ ಪುರಾಣದಂಬಕೆ ವಾ ॥ ಸರ್ವತ ಸರ್ವ ವಿಧಿನಾ ಗದಿತಸ್ತ್ವಮೇವ । ತಸ್ಮಾತ್ತ್ವಮೇವ ಶರಣಂ ಮಮ ದೀನಬಂಧೋ ॥8॥**

ಭಾವಾರ್ಥ - ವೇದಗಳು ಧರ್ಮ ಶಾಸ್ತ್ರಗಳು, ಆಗಮ ಶಾಸ್ತ್ರಗಳು, ರಾಮಾಯಣಾದಿ ಪುರಾಣ ಸಮೂಹಗಳೆಲ್ಲವುಗಳೆಲ್ಲವುಗಳಲ್ಲಿ ನಿನ್ನ ಸ್ತುತಿಗಳೇ ಇವೆ. ಆದ್ದರಿಂದ ಎಲೈ ಬಡವರ ಆಪ್ತನೇ! ನೀನು ನನಗೆ ಏಕಮಾತ್ರಾ ಶರಣು ಹೊಗಲು ಯೋಗ್ಯನಾದವನು.

॥ ಇತಿ ಶ್ರೀ ಹರಿ ಶರಣಾಷ್ಟಕಂ ಸಂಪೂರ್ಣಂ ॥

## 7.16 ಶ್ರೀ ಕಮಲಾಪತ್ಯಷ್ಟಕಂ

**ಭುಜಗತಲ್ಪಗತಂ ಘನ ಸುಂದರಂ । ಗರುಡವಾಹನಮಂಬುಜಲೋಚನಂ ॥ ನಲಿನ ಚಕ್ರಗದಾಧರಮವ್ಯಯಂ । ಭಜತರೇ ಮನುಜಾಃ ಕಮಲಾಪತಿಂ ॥1॥**

ಭಾವಾರ್ಥ - ಹೇ! ಮನುಜರೇ, ಆದಿಶೇಷನನ್ನು ಹಾಸಿಗೆಯನ್ನಾಗಿಸಿಕೊಂಡು ಮಲಗಿದವನೂ, ನೀಲವರ್ಣವನ್ನು ಹೊಂದಿರುವ ಸುಂದರ ಸ್ವರೂಪನೂ, ಗರುಡನನ್ನು ವಾಹನವನ್ನಾಗಿ ಮಾಡಿಕೊಂಡವನೂ, ತಾವರೆಯನ್ನು ಹೋಲುವ ಕಣ್ಣುಗಳನ್ನು ಹೊಂದಿರುವವನೂ, ಶಂಖ, ಚಕ್ರ, ಗದೆಗಳೊಂದಿಗೆ ಕಮಲವನ್ನು ಧರಿಸಿರುವವನೂ, ಅವಿನಾಶಿಯೂ ಆಗಿರುವ ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ಅಲಿಕುಲಾಸಿತ ಕೋಮಲ ಕುಂತಲಂ । ವಿಮಲಪೀತದುಕೂಲ ಮನೋಹರಂ ॥**
**ಜಲಧಿಜಾಂಕಿತ ವಾಮಕಲೇವರಂ । ಭಜತರೇ ಮನುಜಾಃ ಕಮಲಾಪತಿಂ ॥2॥**

ಭಾವಾರ್ಥ - ಹೇ! ಮನುಜರೇ, ಕಳಿಂಗ ಪಕ್ಷಿಗಳಂತೆ ಕಪ್ಪು ಬಣ್ಣದ ಕೋಮಲ ಕೂದಲುಗಳನ್ನು ಹೊಂದಿದವನೂ, ಉತ್ತಮವಾಗಿರುವ ನಿರ್ಮಲ ಮನೋಹರ ಪೀತಾಂಬರವನ್ನು ಧರಿಸಿಕೊಂಡವನೂ, ಎಡಭಾಗದ ತೊಡೆಯ ಮೇಲೆ ಲಕ್ಷ್ಮೀಯನ್ನು ನೆಲೆಯಾಗಿಸಿಕೊಂಡಿರುವ ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ. ಕಿಮು ಜಪೈಶ್ಚ

**ತಪೋಭಿರುತಾಧ್ವರೈರಪಿ । ಕಿಮುತ್ತಮ ತೀರ್ಥನಿಷೇವಣೈಃ ॥ ಕಿಮುತ**
**ಶಾಸ್ತ್ರಕದಂಬವಿಲೋಕನೈರ್- । ಭಜತರೇ ಮನುಜಾಃ ಕಮಲಾಪತಿಂ ॥3॥**

ಭಾವಾರ್ಥ - ಎಲೈ! ಮನುಜರೇ,ತಪಜಪ, ಯಜ್ಞ, ಹಾಗೂ ಪವಿತ್ರ ತೀರ್ಥಗಳ ಸೇವನೆಯಿಂದೇನು ಪ್ರಯೋಜನ?ಅಥವಾ ಬಹಳವಾಗಿರುವ ಶಾಸ್ತ್ರಗಳ ಪರಿಶೀಲನೆಯ ಗಲಿಬಿಲಿಯಲ್ಲಿ ಮುಳುಗುವುದರಿಂದೇನು ಪ್ರಯೋಜನ?ಬದಲಾಗಿ ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ಮನುಜದೇಹಮಿದಂ ಭುವಿ ದುರ್ಲಭಂ । ಸಮಧಿಗಮ್ಯಸುರೈರಪಿ ವಾಂಛಿತಂ ॥**
**ವಿಷಯಲಂಪಟತಾಮಪಹಾಯ ವೈ । ಭಜತರೇ ಮನುಜಾಃ ಕಮಲಾಪತಿಂ ॥4॥**

ಭಾವಾರ್ಥ - ಭುವಿಯಲ್ಲಿ ಮನುಜರ ಶರೀರವವು ದುರ್ಲಭವಾಗಿದೆ. ಅದು ದೇವತಾಗಣಶಕ್ತಿಗಳಿಂದ ಜಯಿಸಲ್ಪಡುವಂತಹದ್ದಾಗಿದೆ. ಇದನ್ನು ಅರ್ಥವಿಸಿಕೊಂಡು ಎಲೈ ಮನುಜರೇ!ವಿಷಯಾಸಕ್ತಿಯನ್ನು ತ್ಯಜಿಸಿ ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ನ ವನಿತಾ ನ ಸುತೋ ನ ಸಹೋದರೋ । ನಹಿ-ಪಿತಾ ಜನನೀ ನ ಚ ಬಾಂಧವಃ ॥**
**ವ್ರಜತಿ ಸಾಕಮನೇನ ಜನೇನ ವೈ । ಭಜತರೇ ಮನುಜಾಃ ಕಮಲಾಪತಿಂ ॥5॥**

ಭಾವಾರ್ಥ - ಈ ಶರೀರದಿಂದ ಜೀವವು ತೆರಳುವಾಗ ಸ್ತ್ರೀ, ಪುತ್ರ, ಬಂಧು, ತಂದೆ, ತಾಯಿ, ಹಾಗೆಯೇ ಬಂಧುಬಳಗ ಇವರಾರೂ ಜೊತೆಯಲ್ಲಿ ಹೋಗುವುದಿಲ್ಲ. ಆದುದರಿಂದ ಹೇ!ಮಾನವರೇ, ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ಸಕಲಮೇವ ಚಲಂ ಸಚರಾಚರಂ । ಜಗದಿದಂ ಸುತರಾಂ ಧನ ಯೌವ್ವನಂ ॥**
**ಸಮವಲೋಕ್ಯ ವಿವೇಕದೃಶಾ ದ್ರುತಂ । ಭಜತರೇ ಮನುಜಾಃ ಕಮಲಾಪತಿಂ ॥6॥**

ಭಾವಾರ್ಥ - ಚರಾಚರದಿಂದ ಕೂಡಿರುವ ಈ ಜಗತ್ತೆಲ್ಲವೂ, ಮತ್ತು ಅದರಂತೆಯೇ ಯೌವನ, ಸಂಪದವೆಲ್ಲವೂ ತೀರಾ ಕ್ಷಣಿಕವಾಗಿರುವುದು. ಇದನ್ನು ವಿವೇಕಯುತ ದೃಷ್ಟಿಯಿಂದ ವಿವೇಚಿಸಿ ನೋಡಿ. ಅದ್ದರಿಂದ. ಹೇ!ಮಾನವರೇ, ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ವಿವಿಧರೋಗಯುತಂ ಕ್ಷಣಭಂಗುರಂ । ಪರವಶಂ ನವಮಾರ್ಗಮಲಾಕುಲಂ ॥**
**ಪರಿನಿರೀಕ್ಷ್ಯ ಶರೀರಮಿದಂ ಸ್ವಕಂ । ಭಜತರೇ ಮನುಜಾಃ ಕಮಲಾಪತಿಂ ॥7॥**

ಭಾವಾರ್ಥ - ಈ ದೇಹವು ನಾನಾವಿಧದ ರೋಗಗಳಿಗೆ ಆಶ್ರಯತಾಣವಾಗಿದೆ. ಹಾಗೆಯೇ ಕ್ಷಣಿಕವಾದುದು. ಮಾತ್ರವಲ್ಲದೆ ಪರವಶವರ್ತಿಯಾಗಿರುವುದಾಗಿದೆ. ಅದೂ ಅಲ್ಲದೆ ಮಲಾದಿ ಕಲ್ಮಷಗಳಿಂದ ತುಂಬಿ ಒಂಭತ್ತು ರಂಧ್ರಗಳಿಂದ ಕೂಡಿರುವಂತಹದೆಂಬುದನ್ನು ಅರಿತು ಎಲೈ ಮನುಜರೇ, ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ಮುನಿವರ್ಯೈರನಿಶಂ ಹೃದಿಭಾವಿತಂ । ಶಿವವಿರಿಂಚಿ ಮಹೇಂದ್ರನುತಂ ಸದಾ ॥**
**ಮರಣಜನ್ಮ ಜರಾಭಯ ಮೋಚನಂ । ಭಜತರೇ ಮನುಜಾಃ ಕಮಲಾಪತಿಂ ॥8॥**

ಭಾವಾರ್ಥ - ಶ್ರೇಷ್ಠಮುನಿಜನರು ನಿರಂತರ ತಮ್ಮ ಮನೋಮಂದಿರದಲ್ಲಿ ಯಾರನ್ನು ಧ್ಯಾನಿಸುವರೋ ಶಿವ ಬ್ರಹ್ಮ ಇಂದ್ರಾದಿ ದೇವಗಣ ಸಮೂಹವೆಲ್ಲವೂ ಅನುದಿನವೂ ಯಾರಿಗೆ ನಮಿಸುವರೋ ಮತ್ತು ಜನನ ಮರಣ ರೋಗ ಮುಪ್ಪುಗಳ ಭೀತಿಯನ್ನು ಯಾವಾತನು ದೂರೀಕರಿಸುವನೋ, ಎಲೈ ಮನುಜರೇ, ಅಂತಹಾ ಶ್ರೀ ಕಮಲಾಪತಿಯನ್ನು ಭಜಿಸುವವರಾಗಿ.

**ಹರಿಪದಾಷ್ಟಕ ಮೇತದನುತ್ತಮಂ । ಪರಮಹಂಸಜನೇನ ಸಮೀರಿತಂ ॥ ಪಠತಿಯಸ್ತು ಸಮಾಹಿತಚೇತಸಾ । ವ್ರಜತಿ ವಿಷ್ಣುಪದಂ ಸ ನರೋ ಧ್ರುವಂ ॥9॥**

ಭಾವಾರ್ಥ - ಶ್ರೇಷ್ಠ ಮಹರ್ಷಿಗಳಿಂದ ಸ್ತುತಿಸಲ್ಪಟ್ಟ ಅಧಿಕತಮವಾಗಿರುವ ಭಗವಾನ್ ಶ್ರೀಹರಿಯ ಈ ಅಷ್ಟಕಗಳನ್ನು ಸಮಾಧಾನ ಚಿತ್ತನಾಗಿ ಪಠಿಸುವಾತನು ಭಗವಾನ್ ಶ್ರೀ ಮಹಾವಿಷ್ಣುವಿನ ಶ್ರೇಷ್ಟಲೋಕವನ್ನು ಖಚಿತವಾಗಿ ಪಡೆಯುವನು.

॥ ಇತಿ ಶ್ರೀ ಕಮಲಾಪತ್ಯಷ್ಟಕಂ ಸಂಪೂರ್ಣಂ ॥

## 7.17 ಶ್ರೀ ನಾರಾಯಣ ಸ್ತೋತ್ರ

**ನಾರಾಯಣ ನಾರಾಯಣ ಜಯ ಗೋವಿಂದ ಹರೇ । ನಾರಾಯಣ ನಾರಾಯಣ ಜಯ ಗೋಪಾಲ ಹರೇ । ಕರುಣಾಪಾರಾವಾರ ವರುಣಾಲಯಗಂಭೀರ ನಾರಾಯಣ । ಘನನೀರದಸಂಕಾಶ ಕೃತಕಲಿಕಲ್ಮಷನಾಶನ ನಾರಾಯಣ ॥1॥**

ಭಾವಾರ್ಥ - ಹೇ ದಯಾಸಾಗರನೇ ಎಲ್ಲ ದೇವರುಗಳಲ್ಲಿ ಸಾಗರದಂತೆ ಭವ್ಯವಾದ ನಾರಾಯಣನೇ ! ದಟ್ಟವಾದ ಮೋಡಗಳಂತೆ ಕಂಗೊಳಿಸುವ ಹೇ ದೇವನೆ ! ಕಲಿಯುಗದ ಹಾನಿಕಾರಕ ಹಾಗೂ ನೀಚತನವನ್ನು ನಾಶಮಾಡುವ ಹೇ ದೇವನೆ !

**ಯಮುನಾತೀರವಿಹಾರ ಧೃತಕೌಸ್ತುಭಮಣಿಹಾರ ನಾರಾಯಣ ।**
**ಪೀತಾಂಬರಪರಿಧಾನ ಸುರಕಲ್ಯಾಣನಿಧಾನ ನಾರಾಯಣ ॥2॥**

ಭಾವಾರ್ಥ - ಯಮುನಾ ನದಿಯ ದಡದಲ್ಲಿ ಗೋಪಾಲಕರೊಂದಿಗೆ ಆಟ ಪಾಟಗಳೊಂದಿಗೆ ನಲಿದಾಡಿದ ಹಾಗೂ ಸಾಗರ ಮಥನದಲ್ಲಿ ಉದ್ಭವಿಸಿದ ಹದಿನಾಲ್ಕು ರತ್ನಗಳಲ್ಲಿ ನಾಲ್ಕನೇ ರತ್ನವಾದ ಕೌಸ್ತುಭಮಣಿಯಿಂದ ಕೂಡಿದ ಮಾಲೆಯನ್ನು ಧರಿಸಿರುವ ಓ ! ನಾರಾಯಣನೇ ! ದೈವತ್ವವನ್ನು ಪ್ರತಿನಿಧಿಸುವ ಹಳದಿ ಬಣ್ಣದ ರೇಷ್ಮೆ ವಸ್ತ್ರವನ್ನು ಧರಿಸಿ ಎಲ್ಲ ದೇವಾನು ದೇವತೆಗಳಿಗೆ ಸದಾಚಾರಗಳ ಭಂಡಾರನಾದ ಓ ! ನಾರಾಯಣನೇ !

**ಮಂಜುಲಗುಂಜಾಭೂಷ ಮಾಯಾಮಾನುಷವೇಷ ನಾರಾಯಣ ।**
**ರಾಧಾಧರಮಧುರಸಿಕ ರಜನೀಕರಕುಲತಿಲಕ ನಾರಾಯಣ ॥3॥**

ಭಾವಾರ್ಥ - ಮಹಾಲಕ್ಷ್ಮಿಯನ್ನು ಸಂಕೇತಿಸುವ ರಕ್ತವರ್ಣದ ಗುಂಜ ಮಣಿಗಳಿಂದ ಕೂಡಿದ ಮುದ್ದಾದ ಹಾರವನ್ನು ಧರಿಸಿರುವ ಹಾಗೂ ಬೇಕೆಂದಾಗ ಅದೃಷ್ಯ ಮಾನವನ ರೂಪವನ್ನು ಧರಿಸುವ ಹೇ ದೇವ ದೇವನೇ ! ಓ ! ನಾರಾಯಣ !

ಬೃಂದಾವನದಲ್ಲಿನ ರಾಧೆಯ ತುಟಿಗಳಿಂದ ಹೊರಸೂಸುವ ಜೇನನ್ನು ಸವಿದು ಆನಂದಿಸಿದ ಹಾಗೂ ಚಂದ್ರವಂಶದ ರಾಜಕುವರನೇ! ಓ ! ನಾರಾಯಣನೇ !

**ಮುರಲೀಗಾನವಿನೋದ ವೇದಸ್ತುತಭೂಪಾದ ನಾರಾಯಣ ।**
**ಬರ್ಹಿನಿಬರ್ಹಾಪೀಡ ನಟನಾಟಕಫಣಿಕ್ರೀಡ ನಾರಾಯಣ ॥4॥**

ಭಾವಾರ್ಥ - ಕೊಳಲಿನಿಂದ ಸುಶ್ರಾವ್ಯವಾದ ಗಾಯನವನ್ನು ಹೊರಡಿಸಿ ಅದರಿಂದ ಆನಂದತುಂದಿಲನಾದ ಹೇ ದೇವನೇ ! ನಿನ್ನ ಪವಿತ್ರ ಪಾದ ಪದ್ಮಗಳನ್ನು ವೇದಗಳೇ ವೈಭವಯುತವಾಗಿ ಹೊಗಳಿ ಸ್ತುತಿಸಿರುವುದು ಓ ನಾರಾಯಣನೇ ! ವರ್ಣ ವೈವಿಧ್ಯಮಯ ನೀಲಿ ಬಣ್ಣದ ಸುಂದರ ನವಿಲಿಗರಿಯನ್ನು ಧರಿಸಿರುವ ಹೇ ದೇವನೇ ! ವಿಷಪೂರಿತ ಕಾಳಿಂಗ ಸರ್ಪದ ಹೆಡೆಯ ಮೇಲೇರಿ ನರ್ತಿಸಿದ ಹೇ ದೇವನೇ! ನಾರಾಯಣನೇ !

**ವಾರಿಜಭೂಷಾಭರಣ ರಾಜೀವರುಕ್ಮಿಣೀರಮಣ ನಾರಾಯಣ ।**
**ಜಲರುಹದಲನಿಭನೇತ್ರ ಜಗದಾರಂಭಕಸೂತ್ರ ನಾರಾಯಣ ॥5॥**

ಭಾವಾರ್ಥ - ಕಮಲ ಪುಷ್ಪವನ್ನೆ ಆಭರಣವನ್ನಾಗಿ ಧರಿಸಿರುವ ಹಾಗೂ ಪದ್ಮ ಪುತ್ರಿ ರುಕ್ಮಿಣಿಯ ರಮಣನೇ ಓ, ದೇವ ! ನಾರಾಯಣನೇ ! ಪದ್ಮಪುಷ್ಪದಂಥಹ ನೇತ್ರವುಳ್ಳವನೇ ವಿಶ್ವ ಸೃಷ್ಟಿಗೇ ಕಾರಣನೇ ಓ ದೇವ ! ನಾರಾಯಣನೇ !

**ಪಾತಕರಜನೀಸಂಹರ ಕರುಣಾಲಯ ಮಾಮುದ್ಧರ ನಾರಾಯಣ ।**
**ಅಘ ಬಕಹಯಕಂಸಾರೇ ಕೇಶವ ಕೃಷ್ಣ ಮುರಾರೇ ನಾರಾಯಣ ॥6॥**

ಭಾವಾರ್ಥ - ದುಷ್ಕರ್ಮಗಳ ಕತ್ತಲಿನ ಕೂಪವನ್ನು ನಾಶಮಾಡುವ ಓ ದೇವನೇ ! ನಿನ್ನ ಕರುಣೆಯಿಂದ ನನ್ನನ್ನು ಉದ್ಧರಿಸುವ ನಾರಾಯಣನೇ ! ನಿನ್ನ ಸೋದರಮಾವನಾದ ಕಂಸನು ಕಳುಹಿಸಿದ ಅಘಾಸುರ ಹಾಗೂ ಭಗಾಸುರರನ್ನು ಸಂಹರಿಸಿದವನೇ ಹಾಗೂ ಕಂಸನ ಪರಮ ವೈರಿಯೇ ಮುರಾಸುರನ ವೈರಿಯೇ ಓ ಕೇಶವಾ ಕೃಷ್ಣಾ ನಾರಾಯಣನೇ !

**ಹಾಟಕನಿಭಪೀತಾಂಬರ ಅಭಯಂ ಕುರು ಮೇ ಮಾವರ ನಾರಾಯಣ ।**
**ದಶರಥರಾಜಕುಮಾರ ದಾನವಮದಸಂಹಾರ ನಾರಾಯಣ ॥7॥**

ಭಾವಾರ್ಥ - ಬಂಗಾರದಂತೆ ಝಗ ಝಗಿಸುವ ಹಳದಿ ಬಣ್ಣದ ಪೀತಾಂಬರವನ್ನು ಧರಿಸಿರುವ ಓ ದೇವನೇ ! ಲಕ್ಷ್ಮೀರಮಣ ನಾರಾಯಣನೇ ಕೃಪೆದೋರಿ ನನ್ನನ್ನು ರಕ್ಷಿಸು. ಓ ದೇವನೇ ದಶರಥ ರಾಜಕುಮಾರನೇ ಅಸುರರ ದರ್ಪವನ್ನು ನಾಶಮಾಡಿದವನೇ ಹೇ ನಾರಾಯಣನೇ !

**ಗೋವರ್ಧನಗಿರಿ ರಮಣ ಗೋಪೀಮಾನಸಹರಣ ನಾರಾಯಣ ।**
**ಸರಯೂತೀರವಿಹಾರ ಸಜ್ಜನ ಋಷಿಮಂದಾರ ನಾರಾಯಣ ॥8॥**

ಭಾವಾರ್ಥ - ಗೋವರ್ಧನ ಪರ್ವತವನ್ನು ಉದ್ಧರಿಸಿದ ಓ ದೇವನೇ ! ಗೋಪಿಕಾ ಸ್ತ್ರೀಯರ ಚಿತ್ತ ಚೋರನೇ ಹೇ ನಾರಾಯಣನೇ ! ಓ ದೇವನೇ! ಸರಯೂ ನದಿ ತೀರದಲ್ಲಿ ಆಡಿ ಬೆಳೆದವನೇ ಸಜ್ಜನರ ಆಸೆಗಳನ್ನು ಪೂರೈಸುವ ವೃಕ್ಷದಂತಿರುವ ಓ ದೇವನೇ ನಾರಾಯಣನೇ !

**ವಿಶ್ವಾಮಿತ್ರಮಖತ್ರ ವಿವಿಧಪರಾಸುಚರಿತ್ರ ನಾರಾಯಣ ।**
**ಧ್ವಜವಜ್ರಾಂಕುಶಪಾದ ಧರಣೀಸುತಸಹಮೋದ ನಾರಾಯಣ ॥9॥**

ಭಾವಾರ್ಥ - ವಿಶ್ವಾಮಿತ್ರರ ಯಾಗವನ್ನು ರಕ್ಷಿಸಿ ಪರಿಪೂರ್ಣಗೊಳಿಸಿದ ಅನೇಕ ಉತ್ತಮ ಚರಿತ್ರೆಯುಳ್ಳ ನಾರಾಯಣನೇ ! ಪಾದಗಳಲ್ಲಿ ಧ್ವಜ ಹಾಗೂ ಧ್ವಜ ಸ್ತಂಭದ ಚಿನ್ಹೆಯುಳ್ಳ ಹೇ ದೇವನೇ ! ಭೂದೇವಿಯ ಮಗಳಿಂದ ಆನಂದವನ್ನು ಪಡೆದ ಹೇ ದೇವನೇ ನಾರಾಯಣನೇ!

**ಜನಕಸುತಾಪ್ರತಿಪಾಲ ಜಯ ಜಯ ಸಂಸ್ಕೃತಿಲೀಲ ನಾರಾಯಣ ।**
**ದಶರಥವಾಗ್ಧೃತಿಭಾರ ದಂಡಕವನಸಂಚಾರ ನಾರಾಯಣ ॥10॥**

ಭಾವಾರ್ಥ - ಜನಕರಾಜನ ಪುತ್ರಿಗಾಗಿ ಕಾದುಕೊಂಡಿದ್ದ ಓ ದೇವನೇ ! ಜೀವನ ನಾಟಕದ ಆಟಗಳನ್ನು ನೋಡಿ ಆನಂದಿಸಿದ ದೇವನಿಗೆ ಜಯವಾಗಲಿ ಜಯವಾಗಲಿ ನಾರಾಯಣನೇ ! ದಶರಥ ರಾಜನ ಮಾತನ್ನು ಪಾಲಿಸಿದ ಓ ದೇವನೇ ! ದಟ್ಟವಾದ ದಂಡಕವನವನ್ನೆಲ್ಲ ಬರೀ ಕಾಲ್ನಡಿಗೆಯಲ್ಲಿ ಸಂಚರಿಸಿದ ಓ ದೇವನೇ ನಾರಾಯಣನೇ !

**ಮುಷ್ಟಿಕಚಾಣೂರಸಂಹಾರ ಮುನಿಮಾನಸವಿಹಾರ ನಾರಾಯಣ ।**
**ವಾಲಿವಿನಿಗ್ರಹಶೌರ್ಯ ವರಸುಗ್ರೀವಹಿತಾರ್ಯ ನಾರಾಯಣ ॥11॥**

ಭಾವಾರ್ಥ - ಕಂಸನ ಆಸ್ಥಾನದಲ್ಲಿ ಮುಷ್ಟಿಯುದ್ಧದಲ್ಲಿ ದುಷ್ಟ ಮುಷ್ಟಿಕ ಹಾಗೂ ಚಾಣೂರರನ್ನು ಸಂಹಾರ ಮಾಡಿದ ಓ ದೇವನೇ ! ಋಷಿ ಮುನಿಗಳ ಮನಸ್ಸಿನಲ್ಲಿ ನೆಲೆಸಿರುವ ಓ ದೇವನೇ ! ನಾರಾಯಣನೇ ! ಪರಾಕ್ರಮಿ ವಾಲಿಯನ್ನು ಸಂಹಾರ ಮಾಡಿ ಸುಗ್ರೀವನಿಗೆ ಸಹಾಯ ಮಾಡಿದ ಓ ದೇವನೇ ! ನಾರಾಯಣನೇ !

**ಮಾಂ ಮುರಲೀಕರ ಧೀವರಪಾಲಯ ಪಾಲಯ ಶ್ರೀಧರ ನಾರಾಯಣ ।**
**ಜಲನಿಧಿ ಬಂಧನ ಧೀರ ರಾವಣಕಂಠವಿದಾರ ನಾರಾಯಣ ॥12॥**

ಭಾವಾರ್ಥ - ಕೊಳಲನ್ನು ಕೈಯಲ್ಲಿ ಹಿಡಿದಿರುವ ಓ ಶೌರಿಯೇ ಲಕ್ಷ್ಮೀರಮಣನೇ ಸಹಾಯ ಮಾಡು ಸಹಾಯ ಮಾಡು ನಾರಾಯಣನೇ. ಸಾಗರದ ಮೇಲೆ ಸೇತುವೆ ನಿರ್ಮಿಸಿದ ಓ ದೇವನೇ ! ರಾವಣನ ದಶ ಶಿರಗಳನ್ನು ತರಿದ ನಾರಾಯಣನೇ !

**ತಾಟಕಮರ್ದನ ರಾಮ ನಟಗುಣವಿವಿಧ ಸುರಾಮ ನಾರಾಯಣ ।**
**ಗೌತಮಪತ್ನೀಪೂಜನ ಕರುಣಾಘನಾವಲೋಕನ ನಾರಾಯಣ ॥13॥**

ಭಾವಾರ್ಥ - ತಾಟಕಿಯ ಅಹಂಕಾರವನ್ನು ಸಂಹರಿಸಿದ ಓ ದೇವನೇ ! ದೇವಾನು ದೇವತೆಗಳು ಗಾನ ನಾಟ್ಯಗಳಿಂದ ವರ್ಣಿಸಲ್ಪಡುವ ಓ ದೇವನೇ ನಾರಾಯಣನೇ !

ಗೌತಮ ಪತ್ನಿ ಅಹಲ್ಯೆಯಿಂದ ಪೂಜಿಸಲ್ಪಟ್ಟ ಹೇ ದೇವನೇ ಕರುಣಾಪೂರಿತ ದೃಷ್ಟಿಯುಳ್ಳವನೇ ನಾರಾಯಣನೇ !

**ಸಂಭ್ರಮಸೀತಾಹಾರ ಸಾತಕೇತಪುರವಿಹಾರ ನಾರಾಯಣ ।**
**ಅಚಲೋಧೃತಚಂಚತ್ಕರ ಭಕ್ತಾನುಗ್ರಹತತ್ಪರ ನಾರಾಯಣ ॥14॥**

ಭಾವಾರ್ಥ - ಜನಕರಾಜನ ಪ್ರೀತಿಯ ಪುತ್ರಿಯ ಮನವನ್ನು ಕದ್ದ ಓ ದೇವನೇ ! ಅಯೋಧ್ಯಾ ನಿವಾಸಿಯೇ ನಾರಾಯಣನೇ, ಪರ್ವತವನ್ನೇ ಮೇಲೆತ್ತಲು ಶಕ್ಯನಾದ ಓ ದೇವನೇ ! ಸದಾ ಭಕ್ತರನ್ನು ಆಶೀರ್ವದಿಸಲು ಉತ್ಸುಕನಾಗಿರುವ ಓ ದೇವನೇ ! ನಾರಾಯಣನೇ !

**ನೈಗಮಗಾನವಿನೋದ ರಕ್ಷಿತ ಸುಪ್ರಹ್ಲಾದ ನಾರಾಯಣ ।**
**ಭಾರತ ಯತಿವರಶಂಕರ ನಾಮಾಮೃತಮಖಿಲಾಂತರ ನಾರಾಯಣ ॥15॥**

ಭಾವಾರ್ಥ - ಸಾಮಗಾನ ಪ್ರಿಯನಾದ ಓ ದೇವನೇ ! ಹಿರಣ್ಯ ಕಶಿಪುವಿನ ಪುತ್ರನಾದ ಪ್ರಹ್ಲಾದನನ್ನು ರಾಕ್ಷಸರಿಂದ ರಕ್ಷಿಸಿದವನೇ ಓ ನಾರಾಯಣನೇ ! ಆದಿ ಶಂಕರರು ರಚಿಸಿದ ಈ ಹರಿಯ ನಾಮದ ಅಮೃತ ಸಾರವು ಜಗತ್ತಿನ ಸಮಸ್ತರಿಗೂ ಶುಭವನ್ನುಂಟುಮಾಡಲಿ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ನಾರಾಯಣಸ್ತೋತ್ರಂ ಸಂಪೂರ್ಣಂ ॥

## 7.18 ಶ್ರೀ ಹರಿನಾಮ ಮಾಲಾಸ್ತೋತ್ರಂ

**ಗೋವಿಂದಂ ಗೋಕುಲಾನಂದಂ । ಗೋಪಾಲಂ ಗೋಪೀವಲ್ಲಭಂ ॥**
**ಗೋವರ್ಧನೋದ್ಧರಂ ಧೀರಂ । ತಂ ವಂದೇ ಗೋಮತಿ ಪ್ರಿಯಂ ॥1॥**

ಭಾವಾರ್ಥ - ಗೋವಿಂದನೂ, ಗೋಕುಲಕ್ಕೆ ಆನಂದದಾಯಕನೂ, ಗೋಪಾಲನೂ, ಗೋಪಿಕಾ ಸ್ತ್ರೀಯರ ಒಡೆಯನಾದವನೂ, ಗೋವರ್ಧನ ಗಿರಿಯನ್ನು

ಉದ್ಧರಿಸಿದವನೂ, ಬಲಶಾಲಿಯೂ, ಜ್ಞಾನಿಯೂ ಆಗಿದ್ದು ಗೋಮತೀ ನದಿಯ ತೀರವನ್ನು ಮೆಚ್ಚಿದವನೂ ಆಗಿರುವ ಶ್ರೀ ಹರಿಗೆ ನಾನು ನಮಿಸುವೆನು.

**ನಾರಾಯಣಂ ನಿರಾಕಾರಂ । ನರವೀರಂ ನರೋತ್ತಮಂ ॥ ನೃಸಿಂಹಂ ನಾಗನಾಥಂ ಚ । ತಂ ವಂದೇ ನರಕಾಂತಕಂ ॥2॥**

ಭಾವಾರ್ಥ - ಆಕಾರ ರಹಿತನೂ, ನಾರಾಯಣನೂ, ನರರಲ್ಲಿ ಶೂರನೂ, ನರರಲ್ಲಿ ಅಗ್ರಗಣ್ಯನೂ, ನೃಸಿಂಹ ರೂಪನೂ, ನಾಗಗಳಿಗೊಡೆಯನೂ ನರಕಕ್ಕೆ ಯಮಸ್ವರೂಪನೂ ಆಗಿರುವ ಶ್ರೀಹರಿಯನ್ನು ನಾನು ಭಜಿಸುವೆ.

**ಪೀತಾಂಬರಂ ಪದ್ಮನಾಭಂ । ಪದ್ಮಾಕ್ಷಂ ಪುರುಷೋತ್ತಮಂ ॥ ಪವಿತ್ರಂ ಪರಮಾನಂದಂ । ತಂ ವಂದೇ ಪರಮೇಶ್ವರಂ ॥3॥**

ಭಾವಾರ್ಥ - ಪೀತಾಂಬರಧಾರಿಯೂ, ಪದ್ಮನಾಭನೂ, ಕಮಲನಯನನೂ, ಪುರುಷೋತ್ತಮನೂ, ಪಾವನಮೂರ್ತಿಯೂ, ಪರಮಾನಂದದಾಯಕನೂ, ಆಗಿರುವಂತಹಾ ಪರಮೇಶ್ವರನನ್ನು ಸ್ತುತಿಸುವೆ.

**ರಾಘವಂ ರಾಮಚಂದ್ರಂ ಚ । ರಾವಣಾರಿಂ ರಮಾಪತಿಂ ॥ ರಾಜೀವಲೋಚನಂ ರಾಮಂ । ತಂ ವಂದೇ ರಘುನಂದನಂ ॥4॥**

ಭಾವಾರ್ಥ - ರಾಘವನೂ, ರಾಮಚಂದ್ರನೂ, ರಾವಣನ ವೈರಿಯೂ, ಲಕ್ಷ್ಮೀಪತಿಯೂ, ಕಮಲನೇತ್ರನೂ, ರಾಮನೂ ಆಗಿರುವ ರಘುಕುಲನಂದನನನ್ನು ನಾನು ಸ್ತುತಿಸುವೆನು.

**ವಾಮನಂ ವಿಶ್ವರೂಪಂ ಚ । ವಾಸುದೇವಂ ಚ ವಿಠ್ಠಲಂ ॥ ವಿಶ್ವೇಶ್ವರಂ ವಿಭುಂ ವ್ಯಾಸಂ । ತಂ ವಂದೇ ವೇದವಲ್ಲಭಂ ॥5॥**

ಭಾವಾರ್ಥ - ವಾಮನನೂ, ವಿಶ್ವ ಸ್ವರೂಪನೂ, ವಾಸುದೇವನೂ, ವಿಠ್ಠಲನೂ, ವಿಶ್ವೇಶ್ವರನೂ, ದೊರೆಯೂ, ವ್ಯಾಸನೂ ಆಗಿರುವ ವೇದಗಳ ಒಡೆಯನಿಗೆ ನಾನು ವಂದಿಸುವೆ.

**ದಾಮೋದರಂ ದಿವ್ಯಸಿಂಹಂ । ದಯಾಲುಂ ದೀನನಾಯಕಂ ॥ ದೈತ್ಯಾರಿಂ ದೇವದೇವೇಶಂ । ತಂ ವಂದೇ ದೇವಕೀಸುತಂ ॥6॥**

ದಾಮೋದರನೂ, ದಿವ್ಯಸಿಂಹನೂ, ದಯಾವಂತನೂ, ದೀನರ ರಕ್ಷಕನೂ, ದೈತ್ಯರ ಶತ್ರುವೂ, ದೇವರದೇವನೂ ಆಗಿರುವ ದೇವಕೀತನಯನಿಗೆ ನಾನು ನಮಿಸುವೆನು.

**ಮುರಾರಿಂ ಮಾಧವಂ ಮತ್ಸ್ಯಂ । ಮುಕುಂದಂ ಮುಷ್ಟಿಮರ್ದನಂ ॥ ಮಂಜಕೇಶಂ ಮಹಾಬಾಹುಂ । ತಂ ವಂದೇ ಮಧುಸೂದನಂ ॥7॥**

ಭಾವಾರ್ಥ - ಮುರನಶತ್ರುವೂ, ಲಕ್ಷ್ಮೀಕಾಂತನೂ, ಮತ್ಸ್ಯಾವತಾರಿಯೂ, ಮುಕುಂದನೂ, ಮುಷ್ಟಿಕಾಸುರನನ್ನು ಮರ್ದಿಸಿದವನೂ, ಚೆಲುವಾದ ತಲೆಗೂದಲುಗಳುಳ್ಳವನೂ, ವೀರನೂ, ಆಗಿರುವ ಮಧುವೆಂಬ ದೈತ್ಯಸಂಹಾರಿಗೆ ನಾನು ನಮಿಸುವೆನು.

**ಕೇಶವಂ ಕಮಲಾಕಾಂತಂ । ಕಾಮೇಶಂ ಕೌಸ್ತುಭಪ್ರಿಯಂ ॥ ಕೌಮೋದಿದಕೀಧರಂ ಕೃಷ್ಣಂ । ತಂ ವಂದೇ ಮಧುಸೂದನಂ ॥8।**

ಭಾವಾರ್ಥ - ಕೇಶವನೂ, ಕಮಲಾಪತಿಯೂ, ಮನ್ಮಥಪಿತನೂ, ಕೌಸ್ತುಭಹಾರವನ್ನು ಧರಿಸಿದವನೂ, ಗಧೆಯನ್ನು ಧರಿಸಿರುವವನೂ, ಕೃಷ್ಣನಾಗಿ ಕೌರವರಿಗೆ ಯಮ ಸ್ವರೂಪನು ಆದ ಆ ಶ್ರೀಹರಿಗೆ ನಾನು ನಮಿಸುವೆನು.

**ಭೂಧರಂ ಭುವನಾನಂದಂ । ಭೂತೇಶಂ ಭೂತನಾಯಕಂ ॥ ಭುವನೈಕಂ ಭುಜಂಗೇಶಂ । ತಂ ವಂದೇ ಭವನಾಶನಂ ॥9॥**

ಭಾವಾರ್ಥ - ಭುವಿಯನ್ನುಧರಿಸಿದವನೂ, ವಿಶ್ವಾನಂದದಾಯಕನೂ, ಭೂತಗಣಾಧಿಪತಿಯೂ, ಭೂತಾದಿಗಣಗಳ ನಾಯಕನೂ, ಭುವನಕ್ಕೆ ಏಕಮಾತ್ರನೂ, ಸರ್ಪಕುಲಾಧಿಪನೂ ಆಗಿರುವ ಸಾಂಸಾರಿಕ ತಾಪತ್ರಯ ನಿವಾರಕನಿಗೆ ನಾನು ವಂದಿಸುವೆ.

**ಜನಾರ್ದನಂ ಜಗನ್ನಾಥಂ । ಜಗಜ್ಜಾಡ್ಯ ವಿನಾಶಕಂ ॥ ಜಾಮದಗ್ನ್ಯಂ ಪರಂಜ್ಯೋತಿಃ । ತಂ ವಂದೇ ಜಲಶಾಯಿನಂ ॥10॥**

ಭಾವಾರ್ಥ - ಜನಾರ್ದನನೂ, ಜಗತ್ತಿನಒಡೆಯನೂ, ಜಗದ ಅಜ್ಞಾನನಾಶಕನೂ, ಜಮದಗ್ನಿಯ ತನಯನೂ, ಮಹತ್ತಾದಜ್ಯೋತಿಸ್ವರೂಪನೂ, ಜಲಧಿಶಯನನೂ ಆಗಿರುವ ಶ್ರೀಹರಿಗೆ ನಾನು ವಂದಿಸುವೆನು.

**ಚತುರ್ಭುಜಂ ಚಿದಾನಂದಂ । ಚಾಣೂರಮಲ್ಲ ಮರ್ದನಂ ॥ ಚರಾಚರಂ ಗತಂ ದೇವಂ । ತಂ ವಂದೇ ಚಕ್ರಪಾಣಿನಂ ॥11॥**

ಭಾವಾರ್ಥ - ಚತುರ್ಭುಜನೂ, ಪರಮಾನಂದನೂ, ಮಲ್ಲ ಚಾಣೂರರನ್ನು ಸಂಹರಿಸಿದವನೂ, ಚರಾಚರ ಜಗತ್ಸ್ವರೂಪನೂ, ಕೈಯಲ್ಲಿ ಚಕ್ರವನ್ನು ಹಿಡಿದಿರುವವನೂ ಆಗಿರುವ ಶ್ರೀಹರಿಗೆ ನಾನು ನಮಸ್ಕರಿಸುವೆನು.

**ಶ್ರೀಯಃಕರಂ ಶ್ರೀಯೋನಾಥಂ । ಶ್ರೀಧರಂ ಶ್ರೀವರಪ್ರದಂ ॥ ಶ್ರೀವತ್ಸಲಧರಂ ಸೌಮ್ಯಂ । ತಂ ವಂದೇ ಶ್ರೀಸುರೇಶ್ವರಂ ॥12॥**

ಭಾವಾರ್ಥ - ಸಂಪತ್ಪ್ರದಾಯಕನೂ, ಲಕ್ಷ್ಮೀಶನೂ, ಲಕ್ಷ್ಮಿಯನ್ನು ಧರಿಸಿಕೊಂಡಿರುವವನೂ, ಸಂಪದದ ವರವನ್ನು ಕರುಣಿಸುವವನೂ, ಶ್ರೀವತ್ಸವೆಂಬ ಲಾಂಛನವನ್ನು ಹೊಂದಿರುವವನೂ, ಸೌಮ್ಯ ಸ್ವರೂಪನೂ ಆಗಿರುವ ಸುರಾಧಿಪತಿಗೆ ನಾನು ನಮಸ್ಕರಿಸುವೆನು.

**ಯೋಗೀಶ್ವರಂ ಯಜ್ಞಪತಿಂ । ಯಶೋದಾನಂದದಾಯಕಂ ॥ ಯಮುನಾಜಲ ಕಲ್ಲೋಲಂ । ತಂ ವಂದೇ ಯದುನಾಯಕಂ ॥13॥**

ಭಾವಾರ್ಥ - ಯೋಗೀಶ್ವರನೂ, ಯಜ್ಞಾಧಿಪತಿಯೂ, ತಾಯಿಯಶೋದೆಗೆ ಮುದವನ್ನು ಕೊಡುವಾತನೂ, ಯಮುನಾನದೀ ನಿರಿನಲ್ಲಿ ನೀರಾಟವಾಡುವವನೂ, ಯದುಕುಲಶ್ರೇಷ್ಠನೂ ಆಗಿರುವಾತನಿಗೆ ನಾನು ವಂದಿಸುವೆ.

**ಶಾಲಗ್ರಾಮ ಶಿಲಾಶುದ್ಧಂ । ಶಂಖ ಚಕ್ರೋಪಶೋಭಿತಂ ॥ ಸುರಾಸುರ ಸದಾ ಸೇವ್ಯಂ । ತಂ ವಂದೇ ಸಾಧುವಲ್ಲಭಂ ॥14॥**

ಭಾವಾರ್ಥ - ಶಾಲಿಗ್ರಾಮಶಿಲೆಯನ್ನು ಪಾವನಗೊಳಿಸಿದವನೂ, ಶಂಖ ಚಕ್ರಗಳಿಂದ ಪ್ರಕಾಶಿಸುವವನೂ, ದೇವದಾನವಾದಿಗಳಿಂದ ನಿರಂತರ ಸೇವೆಯನ್ನು ಸ್ವೀಕರಿಸುತ್ತಿರುವಾತನೂ, ಸಂತಮಹಾಂತರ ಪಾಲಕನೂ ಆಗಿರುವ ಶ್ರೀಹರಿಗೆ ನಾನು ವಂದಿಸುವೆನು.

**ತ್ರಿವಿಕ್ರಮಂ ತಪೋಮೂರ್ತಿಂ । ತ್ರಿವಿಧಾಘೌಘ ನಾಶನಂ ॥ ತ್ರಿಸ್ಥಲಂ ತೀರ್ಥರಾಜೇಂದ್ರಂ । ತಂ ವಂದೇ ತುಲಸಿಪ್ರಿಯಂ ॥15॥**

ಭಾವಾರ್ಥ - ಮೂರು ಲೋಕಗಳನ್ನು ಜಯಿಸಿದಾತನೂ, ಯೋಗನಿರತನೂ, ಮೂರುಬಗೆಯ ಪಾಪಗಳ ನಾಶಕನೂ, ಮೂರು ಸ್ಥಾನಗಳಸ್ವರೂಪನೂ, ತೀರ್ಥರಾಜೇಂದ್ರನೂ ಆಗಿರುವ ತುಲಸೀಪ್ರಿಯನಿಗೆ ನಾನು ನಮಿಸುವೆನು.

**ಅನಂತಮಾದಿ ಪುರುಷಂ । ಅಚ್ಯುತಂ ಚ ವರ ಪ್ರದಂ ॥ ಆನಂದಂಚ ಸದಾನಂದಂ । ತಂ ವಂದೇ ಚಾಘನಾಶನಂ ॥16॥**

ಭಾವಾರ್ಥ - ಅನಂತನೂ, ಅನಾದಿ ಪುರುಷನೂಅಚ್ಯುತನೂ, ವರದಾಯಕನೂ, ಆನಂದ ಸ್ವರೂಪನೂ, ನಿರಂತರ ಆನಂದ ಪ್ರದಾಯಕನೂ ಅಗಿರುವ ಆ ಪಾಪ ನಿವಾರಕ ಶ್ರೀಹರಿಗೆ ನಾನು ವಂದಿಸುವೆನು.

**ಲೀಲಯಾಧೃತಭೂಭಾರಂ । ಲೋಕಸತ್ತ್ವೈಕ ವಂದಿತಂ ॥ ಲೋಕೇಶ್ವರಂ ಚ ಶ್ರೀಕಾಂತಂ । ತಂ ವಂದೇ ಲಕ್ಷ್ಮಣಪ್ರಿಯಂ ॥17॥**

ಭಾವಾರ್ಥ - ತನ್ನಚೇಷ್ಟೆಯಿಂದ ಭುವಿಯನ್ನು ಹೊತ್ತವನೂ, ಮೂರ್ಲೋಕಗಳ ಇರುವಿಕೆಯಲ್ಲಿನ ಏಕೈಕ ವಂದಿತಾರ್ಹನೂ, ಲೋಕಾಧಿಪತಿಯೂ, ಲಕ್ಷ್ಮೀಶನೂ, ಲಕ್ಷ್ಮಣನಿಗೆ ಪ್ರಿಯನಾದವನೂ ಆಗಿರುವ ಶ್ರೀಹರಿಗೆ ನಾನು ನಮಿಸುವೆ.

**ಹರಿಂಚ ಹರಿಣಾಕ್ಷಂ ಚ । ಹರಿನಾಥಂ ಹರಿ ಪ್ರಿಯಂ ॥ ಹಲಾಯುಧ ಸಹಾಯಂ ಚ । ತಂ ವಂದೇ ಹನುಮತ್ಪತಿಂ ॥18॥**

ಭಾವಾರ್ಥ - ಹರಿಯೂ, ಜಿಗರೆಗಣ್ಣಿನವನೂ, ಹರಿನಾಥನೂ, ಹರಿ ಪ್ರಿಯನೂ, ಬಲರಾಮನ ಸಹವರ್ತಿಯೂ, ಹನುಮನ ದೊರೆಯೂ ಆಗಿರುವ ಶ್ರೀಹರಿಗೆ ನಾನು ವಂದಿಸುವೆನು.

**ಹರಿನಾಮ ಕೃತಾಮಾಲಾ । ಪವಿತ್ರಾ ಪಾಪನಾಶಿನಿ ॥ ಬಲಿರಾಜೇಂದ್ರೇಣ ಚೋಕ್ತಾ । ಕಂಠೇ ಧಾರ್ಯಾಪ್ರಯತ್ನತಃ ॥19॥**

ಭಾವಾರ್ಥ - ಬಲಿರಾಜೇಂದ್ರನಿಂದ ಸ್ತುತಿಸಲ್ಪಟ್ಟ ಈ ಹರಿನಾಮಗಳಿಂದ ಕೂಡಿದ ಮಾಲೆಯು ಪವಿತ್ರವೂ, ಪಾವನವೂ, ಪಾಪನಾಶಕವೂ ಆಗಿದ್ದು ಇದನ್ನು ಪ್ರಯತ್ನ ಪೂರ್ವಕವಾಗಿ ಕಂಠದಲ್ಲಿ ಧರಿಸಲು ಯೋಗ್ಯವಾದುದಾಗಿದೆ.

॥ ಇತಿ ಶ್ರೀ ಬಲಿರಾಜೇಂದ್ರೇಣೋಕ್ತಂ ಶ್ರೀಹರಿಮಾಲಾ ಸ್ತೋತ್ರಂ ಸಂಪೂರ್ಣಂ ॥

## 7.19 ಶರಣಾಗತಿ ಗದ್ಯಂ

**ಪಿತರಂ ಮಾತರಂ ದಾರಾನ್ ಪುತ್ರಾನ್ ಬಂಧೂನ್ ಸಖೀನ್ ಗುರೂನ್ । ರತ್ನಾನಿ ಧನಧಾನ್ಯಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥ ಸರ್ವಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್ । ಲೋಕವಿಕ್ರಾಂತಚರಣೌ ಶರಣಂ ತೇಽವಜಂ ವಿಭೋ ॥1॥**

ಭಾವಾರ್ಥ - ಹೇ! ದೊರೆಯೇ, ಅಮ್ಮ, ಅಪ್ಪ, ಹೆಂಡತಿ, ಮಕ್ಕಳು, ಇಷ್ಟರು, ಮಿತ್ರರು, ಗುರುಗಳು, ರತ್ನಾದಿಗಳು, ಧನಧಾನ್ಯಾದಿಗಳು, ಸಮಸ್ತ ಧರ್ಮಗಳು, ಮೋಕ್ಷವನ್ನೊಳಗೊಂಡ ಸಮಸ್ತ ಬಯಕೆಗಳು, ಇವೆಲ್ಲವುಗಳೆಲ್ಲವನ್ನೂ ಬಿಟ್ಟು ಮೂರುಲೋಕಗಳನ್ನು ಆವರಿಸಿದ ನಿನ್ನ ಚರಣಗಳಿಗೆ ನಾನು ಶರಣಾಗುವೆನು.

**ತ್ವಮೇವ ಮಾತಾ ಚ ಪಿತಾ ತ್ವಮೇವ । ತ್ವಮೇವ ಬಂಧುಶ್ಚ ಗುರುಸ್ತ್ವಮೇವ ॥ ತ್ವಮೇವ ವಿದ್ಯಾ ದ್ರವಿಣಂ ತ್ವಮೇವ । ತ್ವಮೇವ ಸರ್ವಂ ಮಮ ದೇವದೇವ ॥2॥**

ಭಾವಾರ್ಥ - ನೀನೇ ತಾಯಿ, ತಂದೆಯೂ ನೀನೇ, ನೀನೆ ಬಂಧುವು, ಗುರುವೂ ನೀನೆ, ನೀನೆ ವಿದ್ಯೆಯು, ಧನವೂ ನೀನೆ, ಎಲೈ ದೇದೇವನೇ, ನನಗೆ ನೀನೆ ಸರ್ವಸ್ವವೂ ಆಗಿರುವೆ.

**ಅಪಾರಕರುಣಾಂಬುಧೇ, ಅನಾಲೋಚಿತ-ವಿಶೇಷಾಶೇಷ- ಲೋಕಶರಣ್ಯ-ಪ್ರಣತಾರ್ತಿಹರ, ಆಶ್ರಿತವಾತ್ಸಲ್ಯೈಕ- ಮಹೋದಧೇ, ಅನವರತ-ವಿದಿತ-ನಿಖಿಲ-ಭೂತಜಾತ- ಯಾಥಾತ್ಮ್ಯ, ಸತ್ಯಕಾಮ, ಸತ್ಯಸಂಕಲ್ಪ, ಆಪತ್ಸಖ, ಕಾಕುತ್ಸ್ಥ, ಶ್ರೀಮನ್ನಾರಾಯಣ, ಪುರುಷೋತ್ತಮ, ಶ್ರೀರಂಗನಾಥ, ಮಮನಾಥ, ನಮೋಽಸ್ತುತೇ ॥3॥**

ಭಾವಾರ್ಥ - ಅಪಾರವಾಗಿರುವ ಕರುಣಾಸಾಗರನೇ, ಶರಣು ಹೊಗಲು ಇಚ್ಛಿಸುವವರಲ್ಲಿ ಜಾತಿ, ಗುಣ, ವೃತ್ತಿ, ಇತ್ಯಾದಿಯಾಗಿ ಯಾವುದೇ ಹೆಚ್ಚಳಗಳ ಬಗ್ಗೆ ಯೋಚಿಸದೆಯೇ ವಿಶ್ವಕ್ಕೆಲ್ಲಾ ಶರಣು ಹೊಗಲು ಯೋಗ್ಯನಾಗಿರುವವನೇ, ನಮಿಸುವವರ ಸಂಕಷ್ಟಗಳನ್ನು ಪರಿಹರಿಸುವವನೇ, ಅವಲಂಬಿಸಿದವರಿಗೆ ಸಾಟಿಯಿಲ್ಲದ ವಾತ್ಸಲ್ಯಗುಣದ ಲಕ್ಷ್ಮಿಯ ಹಾಗಿರುವವನೂ, ಸಮಸ್ತ ಪ್ರಾಣಿ ಸಮೂಹದ ನೈಜ ಗುಣವನ್ನು ಸದಾ ಅರಿತಿರುವವನೂ, ಸತ್ಯಕಾಮನೂ, ಸತ್ಯಸಂಕಲ್ಪನೂ, ಆಪತ್ತಿಗೊಳಗಾದ ವರಿಗೆಆಪ್ತನೂ, ಕಾಕುತ್ಸ್ಥ ವಂಶದಶ್ರೀರಘುರಾಮನೂ, ಶ್ರೀಮನ್ನಾರಾಯಣನೂ, ಪುರುಷೋತ್ತಮನೂ, ಶ್ರೀರಂಗನಾಥನೂ, ನನ್ನೊಡೆಯನೂ ಆಗಿರುವ ನಿನಗೆ ಇದೋ ನಾನು ನಮಿಸುವೆನು.

**ಕದಾಽಹಂ ಭಗವಂತಂ, ನಾರಾಯಣಂ, ಮಮಕುಲ- ನಾಥಂ, ಮಮಕುಲದೈವತಂ, ಮಮಕುಲಧನಂ, ಮಮ ಭೋಗ್ಯಂ, ಮಮ ಮಾತರಂ, ಮಮ ಪಿತರಂ, ಮಮ ಸರ್ವಂ, ಸಾಕ್ಷಾತ್ಕರವಾಣಿ ಚಕ್ಷುಷಾ?**
**ಕದಾಽಹಂ ಭಗವತ್-ಪಾದಾಂಬುಜ-ದ್ವಯಂ ಸಂಗ್ರಹಿ- ಷ್ಯಾಮಿ?**
**ಕದಾಽಹಂ ಭಗವತ್-ಪದಾಂಬುಜ-ದ್ವಯ- ಪರಿಚರ್ಯಾಶಯಾ ನಿರಸ್ತ-ಸಮಸ್ತೇತರ-ಭೋಗಾಶಃ, ಅಪಗತ-ಸಮಸ್ತ-ಸಾಂಸರಿಕ-ಸ್ವಭಾವಃ ತತ್ಪದಾಂಬುಜ-ದ್ವಯಂ ಪ್ರವೇಕ್ಷ್ಯಾಮಿ?**

**ಕದಾಽಹಂ ಭಗವತ್ಪಾದಾಂಬುಜ-ದ್ವಯ-ಪರಿಚರ್ಯಾ- ಕರಣಯೋಗ್ಯಃ**
**ತದೇಕಭೋಗಃ, ತತ್ಪಾದೌ ಪರಿಚರಿಷ್ಯಾಮಿ?**
**ಕದಾ ಮಾಂ ಭಗವಾನ್ ಸ್ವಕೀಯಯಾ ಅತಿಶೀತಲಯಾ ದೃಷಾ ಅವಲೋಕ್ಯ, ಸಿಗ್ಧ-**
**ಗಂಭೀರ-ಮಧುರಯಾ ಗಿರಾ ಪರಿಚರ್ಯಾಯಾಂ ಆಜ್ಞಾಪಯಿಷ್ಯತಿ? ॥4॥**

ಭಾವಾರ್ಥ - ಭಗವದ್ಸ್ವರೂಪವನ್ನು, ನಾರಾಯಣನನ್ನು, ನನ್ನ ಕುಲದ ಡೆಯನನ್ನು, ನನ್ನ ಕುಲದೇವರನ್ನು, ನನ್ನ ಕುಲದ ಸಂಪದವನ್ನು, ಅನುಭವಿಸಲು ಯೋಗ್ಯವಾದ ನನ್ನ ವಸ್ತುವನ್ನು, ನನ್ನ ಮಾತೆಯನ್ನು, ನನ್ನ ಅಪ್ಪನನ್ನು, ನನ್ನ ಸರ್ವಸ್ವವನ್ನು ನನ್ನೀ ನಯನಗಳಿಂದ ನಾನೆಂದು ತಾನೇ ಸ್ಪಷ್ಟವಾಗಿ ಕಾಣಬಲ್ಲೆನು? ನಾನು ಆ ಭಗವಂತನ ಪಾದಾರವಿಂದಗಳನ್ನೆಂದು ತಾನೇ ಶಿರಸಾ ಧರಿಸಲು ಸಾಧ್ಯ?ಭಗವಂತನ ಚರಣಾರವಿಂದಗಳ ಆರಾಧನೆ ಮಾಡಬೇಕೆಂಬ ಅಭಿಲಾಶೆಯಿಂದ ಇತರ ಅನುಭವ ಯೋಗ್ಯ ವಸ್ತುಗಳ ಬಗೆಗಿನ ಅಭಿಲಾಶೆಗಳೆನ್ನೆಲ್ಲಾ ತ್ಯಜಿಸಿ, ಕಳೆದು ಹೋಗಿರುವ ಸಮಸ್ತ ಸಾಂಸಾರಿಕ ಗುಣಗಳನ್ನು ತ್ಯಜಿಸಿ ಆ ಭಗವಂತನ ಪಾದಾರವಿಂದ ದ್ವಯಗಳ ಒಳಗೆ ನಾನು ಎಂದು ತಾನೇ ಸೇರಲು ಸಾಧ್ಯವಿದೆ? ಆ ಭಗವಂತನ ಪಾದಾರವಿಂದಗಳ ಆರಾಧನೆ ಮಾಡಲು ಯೋಗ್ಯನಾಗುವುದರೊಂದಿಗೆ ಆ ಪೂಜಾ ಕಾರ್ಯ ಮಾತ್ರಾ ನಾನು ಅನುಭವಿಸಲು ಯೋಗ್ಯವಾದವುಗಳಾಗಿ ನಾನೆಂದು ತಾನೆ ಆರಾಧಿಸಬಲ್ಲೆನು? ಯಾವತ್ತು ಆ ಭಗವಂತನು ತನ್ನ ಮಂಜುಲವಾದ ದೃಷ್ಟಿಯಿಂದ ನನ್ನತ್ತ ನೋಡಿ ಸೌಮ್ಯವೂ, ಸ್ವಾರಸ್ಯವೂ, ಗಂಭೀರವೂ ಆಗಿರುವ ನುಡಿಗಳಿಂದತನ್ನ ಆರಾಧಿಸಲು ನನಗೆ ಆಜ್ಞಾಪಿಸಬಹುದು?

॥ ಇತಿ ಶರಣಾಗತಿ ಗದ್ಯಂ ಸಂಪೂರ್ಣಂ ॥

## 7.20 ದೇವಕೃತ ಗರ್ಭಸ್ತುತಿಃ

**ದೇವಾ ಊಚುಃ** ದೇವತೆಯರು ಹೇಳಿದರುಃ-

**ಜಗದ್ಯೋ ನಿರಯೋನಿಸ್ತ್ವಮನಂತೋಽವ್ಯಯ ಏವ ಚ ।**
**ಜ್ಯೋತಿಃ ಸ್ವರೂಪೋಹ್ಯನಿಶಃಸಗುಣೋನಿರ್ಗುಣೋ ಮಹಾನ್ ॥1॥**

ಭಾವಾರ್ಥ - ಎಲೈ ಭಗವಂತನೇ!ನೀನು ಸಮಸ್ತ ವಿಶ್ವದ ಹುಟ್ಟಿಗೆ ಕಾರಣೀಭೂತನಿರುವೆ. ಆದರೆ ನಿನ್ನದಾದ ಯಾವುದೇ ಹುಟ್ಟುವಿಕೆಯ ಜಾಗವಿಲ್ಲ. ನೀನು ಅಂತ್ಯವಿಲ್ಲದವನು. ವಿನಾಶರಹಿತನು. ಪಾಪರಹಿತನು. ಸಗುಣನೂ ಹೌದು. ನಿರ್ಗುಣನೂ ಹೌದು. ಅಂತೆಯೇ ಮಹಾಪರಂಜ್ಯೋತಿ ಸ್ವರೂಪನೂ ಆಗಿರುವೆ.

**ಭಕ್ತಾನುರೋಧಾತ್ ಸಾಕಾರೋ ನಿರಾಕಾರೋ ನಿರಂಕುಶಃ ।**
**ಸ್ವೇಚ್ಛಾಮಯಶ್ಚ ಸರ್ವೇಶಃ ಸರ್ವಃ ಸರ್ವಗುಣಾಶ್ರಯಃ ॥2॥**

ಭಾವಾರ್ಥ - ನೀನು ಆಕಾರರಹಿತನು. ಅದರೂ ಭಕ್ತರ ಆಗ್ರಹದಕ್ಕೊಳಗಾಗಿ ಸಾಕಾರನಾಗಿರುವೆ. ನಿನಗೆ ಯಾರ ನಿಯಂತ್ರಣವೂ ಫಲಿಸುವುದಿಲ್ಲ. ನೀನು ಎಂದೆಂದಿಗೂ ನಿನ್ನಿಚ್ಛೆಯಂತೆಯೇ ಇರುವವನೂ, ಸಮಸ್ತಕ್ಕೂ ಅಧಿಪತಿಯೂ, ಎಲ್ಲಾ ರೂಪಗಳನ್ನು ಹೊಂದಿರುವವನೂ, ಸರ್ವ ಗುಣಗಳಿಗಾಶ್ರಯದಾತನೂ ಆಗಿರುವೆ.

**ಸುಖದೋದುಃಖದೋ ದುರ್ಗೋ ದುರ್ಜನಾಂತಕ ಏವ ಚ ।**
**ಸುಭಗೋದುರ್ಭಗೊವಾಗ್ಮಿ ನಿರ್ವ್ಯೂಹೋನಿಖಿಲಾಧಾರೋನಿಃ ಶಂಕೋನಿರುಪದ್ರವಃ ॥3॥**

ಭಾವಾರ್ಥ - ಸಜ್ಜನರಿಗೆ ನೀನು ಹರ್ಷವನ್ನು ನೀಡುವಾತನೂ ದುರ್ಜನರಿಗೆ ನೀನು ಅಹಿತದಾಯಕನೂ, ಘನತೆಯುಳ್ಳವನಾಗಿ ದಾರಿದ್ರ್ಯ ಹಾಗೂ ದುರ್ಜನ ವಿನಾಶಕನೂ ಆಗಿರುವಿ. ವಾಗ್ಮಿಯಾಗಿದ್ದು ತರ್ಕಕ್ಕೆ ನಿಲುಕದವನೂ ಸರ್ವಾಧಾರನೂ ನೀನಾಗಿರುವೆ. ಭೀತಿ ಮತ್ತು ವಿಪತ್ತುಗಳಿಲ್ಲದವನು.

**ನಿರುಪಾದಿಶ್ಚ ನಿರ್ಲಿಪ್ತೋ ನಿರೀಹೋ ನಿಧನಾಂತಕಃ ।**
**ಆತ್ಮಾರಾಮಃ ಪೂರ್ಣಕಾಮೋ ನಿರ್ದೋಷೋ ನಿತ್ಯ ಏವ ಚ ॥4॥**

ಭಾವಾರ್ಥ - ನೀನು ಬಿರುದುಗಳಿಲ್ಲದವನು. ಯಾವುದೇ ಲೇಪ ರಹಿತನು. ಆಶಾ ವಿರಹಿತನು. ಕಾಲನಿಗೆ ಮಹಾಕಾಲನಾಗಿರುವವನು. ಆತ್ಮನಲ್ಲಿ ವಿಹರಿಸುವವನು. ಆಶೆಗಳನ್ನು ಈಡೇರಿಸಿಕೊಂಡವನು. ದೋಷವಿಲ್ಲದವನಾಗಿ ಶಾಶ್ವತಸ್ವರೂಪನಿರುವೆ.

**ಸುಭಗೋದುರ್ಭಗೋವಾಗ್ಮೀ ದುರಾರಾಧ್ಯೋ ದುರತ್ಯಯಃ ।**
**ವೇದಹೇತುಶ್ಚ ವೇದಾಂಗೋ ವೇದವಿದ್ ವಿಭುಃ ॥5॥**

ಭಾವಾರ್ಥ - ನೀನು ಸೌಭಾಗ್ಯಶಾಲಿಯಾಗಿರುವೆ. ದೌರ್ಭಾಗ್ಯ ರಹಿತನೂ ಕುಶಲವಾಗ್ಮಿಯೂ ಅಗಿರುವೆ. ನಿನ್ನ ಆರಾಧನೆ ಅಥವಾ ನಿನ್ನನ್ನು ಅತಿಕ್ರಮಿಸುವುದು ಕಠಿಣವಾಗಿದೆ. ಅಸಾಧ್ಯವೂ ಆಗಿದೆ. ನಿನ್ನ ಉಸಿರಿನಿಂದ ವೇದಗಳು ಉತ್ಪನ್ನವಾದವು. ಆದುದರಿಂದ ಅವುಗಳ ಪ್ರಕಾಶಿಸುವಿಕೆಗೆ ನೀನು ಕಾರಣನಿರುವೆ. ಸಮಗ್ರ ವೇದಗಳು ನಿನ್ನ ಸ್ವರೂಪವೇ ಆಗಿವೆ. ಛಂದಸ್ಸು ಮತ್ತು ವೇದಗಳು ನಿನ್ನಿಂದ ಹೊರತಾಗಿಲ್ಲ. ನೀನು ವೇದಜ್ಞಾನಿಯಾಗಿ ಸರ್ವ ವ್ಯಾಪಿಯಾಗಿರುವೆ.

**ಇತ್ಯೇಮುಕ್ತ್ವಾ ವತೇವಾಶ್ಚ ಪ್ರಣೇಮುಶ್ಚ ಮುಹುರ್ಮುಹು ।**
**ಹರ್ಷಾಶ್ರುಲೋಚನಾಃ ಸರ್ವೇ ವವೃಷುಃ ಕುಸುಮಾನಿ ಚ ॥6॥**

ಭಾವಾರ್ಥ - ಈ ರೀತಿಯಾಗಿ ಹೇಳಿದ ದೇವತೆಗಳು ಪುನಃಪುನಃ ಆ ಕೃಷ್ಣ ಸ್ವರೂಪಿಗೆ ನಮಸ್ಕರಿಸಿದರು. ಅವರೆಲ್ಲರ ನಯನಗಳಲ್ಲಿ ಹರ್ಷದಿಂದ ನೀರು ತುಂಬಿಕೊಂಡವು. ಅವರೆಲ್ಲರೂ ಪುಷ್ಪ ವೃಷ್ಟಿಗೈದರು.

**ದ್ವಿ ಚತ್ವಾರಿಂಶನ್ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।**
**ದೃಢಾಂ ಭಕ್ತಿಂ ಹರೇರ್ದಾಸ್ಯಂ ಲಭತೇ ವಾಂಛಿತಂ ಚ ಯತ್ ॥7॥**

ಭಾವಾರ್ಥ - ಯಾವಾತನು ಉಷಃಕಾಲದಲೆದ್ದು ಈ ಶ್ಲೋಕಗಳಲ್ಲಿ ಹೇಳಿದ ಇಪ್ಪತ್ತನಾಲ್ಕು ನಾಮಗಳನ್ನು ಪಠಿಸುತ್ತಾನೋ ಅವನು ಶ್ರೀಹರಿಯಲ್ಲಿ ಧೃಢವಾದ ಭಕ್ತಿಯುಳ್ಳವನಾಗಿ ದಾಸನ ಭಾವವನ್ನು ಹೊಂದಿ ಸಮಸ್ತ ಮನೋಕಾಮನೆಗಳ ಫಲವನ್ನು ಅನುಭವಿಸುವನು.

**ಇತ್ಯೇವಂ ಸ್ತವನಂ ಕೃತ್ವಾ ದೇವಾಸ್ತೇಶ್ವಾಲಯಂ ಯಯುಃ ।**
**ಬಭೂವ ಜಲವೃಷ್ಟಿಶ್ಚ ನಿಶ್ಚೇಷ್ಟಾ ಮಧುರಾಪುರೀ ॥8॥**

ಭಾವಾರ್ಥ - ಈ ರೀತಿಯಾಗಿ ಸ್ತುತಿಸಿ ದೇವತೆಗಳು ತಮ್ಮ ತಮ್ಮ ನೆಲೆಗಳಿಗೆ ತೆರಳಲಾಗಿ ಉತ್ತಮ ಮಳೆ ಸುರಿದು ಆ ಮಧುರಾಪಟ್ಟಣವು ಪ್ರಶಾಂತವಾಯಿತು.

॥ಇತಿ ದೇವಕೃತ ಗರ್ಭಸ್ತುತಿಃ ಸಂಪೂರ್ಣಂ ॥

## 7.21 ಶ್ರೀ ಗೋವಿಂದಾಷ್ಟಕಂ

**ಸತ್ಯಂ ಜ್ಞಾನಮನಂತಂ ನಿತ್ಯಮನಾಕಾಶಂ ಪರಮಾಕಾಶಂ ।**
**ಗೋಷ್ಠ ಪ್ರಾಂಗಣರಿಂಗಣಲೋಲಮನಾಯಾಸಂ ಪರಮಾಯಾಸಂ ॥**
**ಮಾಯಾಕಲ್ಪಿತನಾನಾಕಾರಮನಾಕಾರಂ ಭುವನಾಕಾರಂ ।**
**ಕ್ಷ್ಮಾಯಾನಾಥಮನಾಥಂ ಪ್ರಣಮತ ಗೋವಿಂದಂ ಪರಮಾನಂದಂ ॥1॥**

ಭಾವಾರ್ಥ - ಸತ್ಯರೂಪನೂ, ಜ್ಞಾನಸ್ವರೂಪಿಯೂ, ಅನಂತರೂಪಿಯೂ, ಶಾಶ್ವತನೂ, ಆಕಾಶದಿಂದ ಬೇರೆಯವನಾದಾಗ್ಯೂ ಪರಮಾಕಾಶ ಸ್ವರೂಪಿಯೂ, ಗೋಶಾಲಾ ಅಂಕನದಲ್ಲಿ ದಣಿವಿರದೆ ಅಂಬೆಗಾಲಿಕ್ಕಿ ಪರಿಶ್ರಮ ಹೊಂದಿರದಿದ್ದರೂ ಬಹಳ ದಣಿವಾದಂತಿರುವವನೂ, ಆಕಾರರಹಿತನಾದಾಗ್ಯೂ ಭ್ರಾಂತಿಯಿಂದ ಕಲ್ಪಿಸಲ್ಪಟ್ಟ ನಾನಾ ರೂಪಗಳನ್ನು ಧರಿಸಿದ ಭಗವದ್ರೂಪನೂ, ವಿಶ್ವರೂಪದಿಂದ ವ್ಯಕ್ತನಾದವನೂ ಹಾಗೂ ಪೃಥ್ವಿಗೊಡೆಯನಾದಾಗ್ಯೂ ತನಗೆ ಮತ್ತೊಬ್ಬ ಪ್ರಭುವಿಲ್ಲದೆ ಅನಾಥನೆನಿಸಿದವನೂ ಆಗಿರುವ ಪರಮಾನಂದ ಸ್ವರೂಪೀ ಗೋವಿಂದನಿಗೆ ನಮಸ್ಕರಿಸಿರಿ.

**ಮೃತ್ಸ್ನಾಮತ್ಸೀಹೇತಿ ಯಷೋದಾತಾಡನಶೈಶವ ಸಂತ್ರಾಸಂ ।**
**ವ್ಯಾಧಿತವಕ್ತ್ರಾಽಽಲೋಕಿತಲೋಕಾಲೋಕಚತುರ್ದಶ ಲೋಕಾಲಿಂ ॥**
**ಲೋಕೇತ್ರಯಪುರಮೂಲಸ್ತಂಭಂ ಲೋಕಾಲೋಕಮನಾಲೋಕಂ ।**
**ಲೋಕೇಶಂ ಪರಮೇಶಂ ಪ್ರಣಮತ ಗೋವಿಂದಂ ಪರಮಾನಂದಂ ॥2॥**

ಭಾವಾರ್ಥ - ಮಕ್ಕಳಾಟಿಕೆಯ ದಿನಗಳಲ್ಲಿ ಮಣ್ಣು ತಿನ್ನುವೆಯೆಂಬ ಕಾರಣಕ್ಕಾಗಿ ತಾಯಿ ಯಶೋದೆಯು ಬಡಿವಳೆಂದು ಹೆದರಿಕೆಗೊಳಗಾದವನೂ ಮತ್ತು ತಾನು ಮಣ್ಣು ತಿಂದಿಲ್ಲವೆಂಬುದನ್ನು ಪ್ರಮಾಣೀಕರಿಸಲು ಬಾಯ್ದೆರೆದು ಹದಿನಾಲ್ಕು

ಲೋಕಂಗಳನ್ನು ತೋರಿದವನೂ, ತ್ರಿಲೋಕಗಳಿಗೆ ಮೂಲಾಧಾರನಾದವನೂ, ಲೋಕಾಲೋಕಗಳಿಗೆ ದರ್ಶನಾತೀತನಾದಾಗ್ಯೂ ಲೋಕೇಶನಾದವನೂ, ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ತ್ರೈವಿಷ್ಟಪ ರಿಪುವೀರಘ್ನಂ ಕ್ಷಿತಿಭಾರಘ್ನಂ ಭವರೋಗಘ್ನಂ ।**
**ಕೈವಲ್ಯಂ ನವನೀತಾ ಹಾರಮನಾಹಾರಂ ಭುವನಾಹಾರಂ ॥**
**ವೈಮಲ್ಯ ಸ್ಫುಟ ಚೇತೋವೃತ್ತಿ ವಿಶೇಷಾಭಾಸಮನಾಭಾಸಂ ।**
**ಶೈವಂ ಕೇವಲಶಾಂತಂ ಪ್ರಣಮತ ಗೋವಿಂದಂ ಪರಮಾನಂದಂ ॥3॥**

ಭಾವಾರ್ಥ - ಅಸುರವೀರರನ್ನು ಸಂಹರಿಸಿದಾತನೂ, ಭೂಭಾರವನ್ನು ಹರಣಗೈದವನೂ, ಭವರೋಗ ನಾಶಕನೂ, ಮೋಕ್ಷಪ್ರದಾಯಕನೂ, ವಿಶ್ವವೇ ಆಹಾರವಾಗಿರುವವನೂ, ಆಹಾರರಹಿತನಾದಾಗ್ಯೂ ಬೆಣ್ಣೆಯನ್ನು ಮೆದ್ದವನೂ, ಆಭಾಸ ವಿರಹಿತನಾದರೂ ಶುದ್ಧಮನದಿಂದ ವಿಶೇಷಾಭಾಸದಿಂದ ದೃಷ್ಟಿಗೆ ಗೋಚರಿಸುವವನೂ, ಸರಿಸಾಟಿಯಿಲ್ಲದವನೂ ಆಗಿರುವ ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ಗೋಪಾಲಂ ಭೂಲೀಲಾ ವಿಗ್ರಹ ಗೋಪಾಲಂ ಕುಲಗೋಪಾಲಂ ।**
**ಗೋಪೀಖೇಲನಗೋವರ್ಧನ ಧೃತಿಲೀಲಾಲಾಲಿತ ಗೋಪಾಲಂ ॥**
**ಗೋಭಿರ್ನಿಗದಿತಗೋವಿಂದ ಸ್ಫುಟನಾಮಾನಂ ಬಹುನಾಮಾನಂ ।**
**ಗೋಪೀಗೋಚರದೂರಂ ಪ್ರಣಮತ ಗೋವಿಂದಂ ಪರಮಾನಂದಂ ॥4॥**

ಭಾವಾರ್ಥ - ಗೋವುಗಳನ್ನು ಪರಿಪಾಲಿಸುವಾತನೂ, ಭುವಿಯಲ್ಲಿ ಲೀಲೆಗಳನ್ನು ಪ್ರಕಟಿಸಲೋಸುಗ ಗೋಪಾಲಕನಾಗಿ ಪ್ರಕಟವಾದವನೂ, ಗೋಪಿಯರೊಡನೆ ಆಟವಾಡುತ್ತಾ ತನ್ನ ಲೀಲಾ ವಿಶೇಷದಿಂದ ಗೋವರ್ಧನಗಿರಿಯನ್ನೆತ್ತಿ ಗೋಪಾಲಕರನ್ನು ಸಂರಕ್ಷಿಸಿದವನೂ, ಗೋವುಗಳ ಸಂರಕ್ಷಕನಾಗಿ ಗೋವಿಂದನೆಂದು ಪ್ರಸಿದ್ಧಿ ಹೊಂದಿದವನೂ, ಅನೇಕ ಅಂಕಿತ ನಾಮಗಳುಳ್ಳವನೂ, ಗೋಪನೂ,

ಗೋಚರವಾಗುವ ಇಂದ್ರಿಯಸುಖಗಳ ವಿಚಾರದಲ್ಲಿ ಬಾಲಕನೂ, ಆಗಿರುವ ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ಗೋಪೀಮಂಡಲಗೋಷ್ಟೀಭೇದಂ ಭೇಧಾವಸ್ಥಮಭೇದಾಭಂ ।**
**ಶಶ್ವದ್ಗೋಖುರನಿರ್ಧೂತೋತ್ಕೃತಧೂಲೀಧೂಸರ ಸೌಭಾಗ್ಯಂ ॥**
**ಶ್ರೃದ್ಧಾಭಕ್ತಿಗೃಹೀತಾನಂದ ಮಚಿಂತ್ಯಂ ಚಿಂತಿತ ಸದ್ಭಾವಂ ।**
**ಚಿಂತಾಮಣಿಮಹಿಮಾನಂ ಪ್ರಣಮತ ಗೋವಿಂದಂ ಪರಮಾನಂದಂ ॥5॥**

ಭಾವಾರ್ಥ - ಗೋಪಿಯರ ಗುಂಪಿನಲ್ಲಿ ಅನೇಕ ವಿಷಯಗಳ ಬಗ್ಗೆ ಮಾತನಾಡುವಾತನೂ, ಭಿನ್ನಾವಸ್ತೆಯಲ್ಲಿರುವವನಾಗಿದ್ದರೂ ಅಭಿನ್ನನಾಗಿ ವ್ಯಕ್ತವಾಗುವವನೂ, ಆಕಳುಗಳ ಗೊರಸಿನಿಂದೆದ್ದ ಧೂಳಿನಿಂದ ಅವುಗಳ ವರ್ಣವನ್ನೇ ಶಾಶ್ವತವಾಗಿ ಪಡೆಯುವ ಸೌಭಾಗ್ಯವಂತನೂ, ನಿಶ್ಚಿಂತನೂ, ಭಕ್ತರ ಶ್ರದ್ಧಾ ಭಕ್ತಿಗಳನ್ನು ಸ್ವೀಕರಿಸುವ ಆನಂದ ರೂಪನೂ, ಸದ್ಭಾವನೆಗಳಿಂದ ಚಿಂತಿತನಾಗಿ ಚಿಂತಾಮಣಿಯೆನಿಸಿರುವ ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ಸ್ನಾನವ್ಯಾಕುಲಯೋಷಿದ್ವಸ್ತ್ರಮುಪಾದಾ ಯಾಗಮುಪಾರೂಢಂ ।**
**ವ್ಯಾದಿತ್ಸಂತೀರಥ ದಿಗ್ವಸ್ತ್ರಾ ಆದಾತು ಮುಪಾಕರ್ಷಂತಂ ॥**
**ನಿರ್ಧೂತದ್ವಯ ಶೋಕವಿಮೋಹಂ ಬುದ್ಧಂ ಬದ್ಧೇರಂತಸ್ಥಂ ।**
**ಸತ್ತಾಮಾತ್ರ ಶರೀರಂ ಪ್ರಣಮತ ಗೋವಿಂದಂ ಪರಮಾನಂದಂ ॥6॥**

ಭಾವಾರ್ಥ - ಜಳಕವಾಡುತ್ತಲಿರುವ ಗೋಪಿಕಾಂಗನೆಯರ ವಸನಗಳನ್ನಪಹರಿಸಿ ಗೋಳಾಟವಾಡಿಸಿದವನೂ, ಬೆತ್ತಲೆಯಾಗಿರುವ ಅವರು ಬಟ್ಟೆಗಳನ್ನು ಬೇಡಲು ಅವುಗಳನ್ನು ಕೊಡಲೋಸುಗ ತನ್ನೆಡೆಗೆ ಕರೆದು ಅವರು ಆಕರ್ಷಿಸುವಂತೆ ಮಾಡಿದರೂ ತಾನು ಶೋಕ ಮೋಹಗಳನ್ನು ತ್ಯಜಿಸಿದ ಜ್ಞಾನನಿಧಿಯಾಗಿರುವವನೂ, ಮನಸ್ಸು ಮತ್ತು ಬುದ್ಧಿಗಳಿಗೆ ಹೊರಗಿರುವಾತನೂ, ತೋರುವಿಕೆಗೆ ಶರೀರಮಾತ್ರನೂ

ಆಗಿರುವ ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ಕಾಂತಂ ಕಾರಣಕಾರಣಮಾದಿಮನಾದಿಂ ಕಾಲ ಘನಾಭಾಸಂ ।**
**ಕಾಲಿಂದೀಗತಕಾಲಿಯಶಿರಸಿ ನೃತ್ಯಂತಂ ಸುವಿನೃತ್ಯಂತಂ ॥**
**ಕಾಲಂಕಾಲ ಕಾಲಾತೀತಂ ಕಲಿತಾಶೇಷಂ ಕಲಿದೋಷಘ್ನಂ ।**
**ಕಾಲತ್ರಯಗತಿ ಹೇತುಂ ಪ್ರಣಮತ ಗೋವಿಂದಂ ಪರಮಾನಂದಂ ॥7॥**

ಭಾವಾರ್ಥ - ಸುಂದರಾಂಗನೂ, ಉದ್ದೇಶಗಳಿಗೆ ಆದಿಮೂಲನಾದವನೂ, ಅನಾದಿ ಪುರುಷನೂ, ಛಾಯಾಸ್ವರೂಪಿಯಾದ ಕಾಲರೂಪನೂ, ಯಮುನಾನದಿಯ ನೀರಿನೊಳಗಿದ್ದ ಕಾಲಿಯನೆಂಬ ನಾಗನ ಹೆಡೆಗಳ ಮೇಲೆ ಮನಮೋಹಕ ನೃತ್ಯವನ್ನು ಗೈದವನೂ, ಕಾಲರೂಪನಾದಾಗ್ಯೂ ಕಾಲನ ಅಂಶಗಳಿಗೆ ಹೊರತಾದವನೂ, ಎಲ್ಲವನ್ನು ಬಲ್ಲವನೂ, ಕಲಿದೋಷಹರನೂ, ಭೂತಕಾಲ, ವರ್ತಮಾನಕಾಲ, ಭವಿಷ್ಯತ್ಕಾಲಗಳೆಂಬ ತ್ರಿಕಾಲಗಳ ಆಗುಹೋಗುಗಳಿಗೆ ನಿಮಿತ್ತನೂ ಆಗಿರುವ ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ವೃಂದಾವನ ಭುವಿ ವೃಂದಾರಕಗಣ ವೃಂದಾರಾಧಿತ ವಂದೇಽಹಂ ।**
**ಕುಂದಾಭಾಮಲಮಂದಸ್ಮೇರಸುದಾನಂದಂ ಸುಹೃದಾನಂದಂ ॥**
**ವಂದಾಶೇಷ ಮಹಾಮುನಿಮಾನಸವಂದ್ಯಾನಂದ ಪದದ್ವಂದ್ವಂ ।**
**ವಂದ್ಯಾಶೇಷಗುಣಾಬ್ಧಿಂ ಪ್ರಣಮತ ಗೋವಿಂದಂ ಪರಮಾನಂದಂ ॥8॥**

ಭಾವಾರ್ಥ - ವೃಂದಾವನದ ನೆಲದ ಮೇಲೆ ದೇವತಾ ಸಮೂಹಗಳಿಂದಲೂ ವೃಂದಾ ನಾಮಾಂಕಿತೆ ತುಳಸಿಯಿಂದ ಆರಾಧಿಸಲ್ಪಡುವಾತನೂ, ಆಗಿರುವ ಗೋವಿಂದನನ್ನು ಚಿಂತಿಸಿರಿ. ಮೊಲ್ಲೆಮಲ್ಲಿಗೆಯಂತೆ ನಿರ್ಮಲವಾದ ಮುಗುಳ್ನಗೆಯ ಮೂಲಕ ಅಮೃತಾನಂದವನ್ನುಅನುಭವಿಸುತ್ತಿರುವಾತನೂ,
ಒಡನಾಡಿಗಳಿಗಾನಂದವನ್ನೀಯುವಾತನೂ, ಮಹಾಯೋಗಿವರ್ಯರಿಂದ ಹೃದಯಪೂರ್ವಕವಾಗಿ ವಂದಿಸಲ್ಪಡುವಾತನೂ, ನಮಸ್ಕರಿಸಲು ಯೋಗ್ಯವಾಗಿರುವ

ಚರಣಕಮಲಗಳನ್ನು ಹೊಂದಿರುವಾತನೂ, ಸಮಸ್ತ ಶುಭಗುಣಸಾಗರನೂ ಆಗಿರುವ ಪರಮಾನಂದ ರೂಪೀ ಪರಮೇಶ್ವರನಾಗಿರುವ ಗೋವಿಂದನಿಗೆ ನಮಸ್ಕರಿಸಿರಿ.

**ಗೋವಿಂದಾಷ್ಟಕಮೇತದಧೀತೇ ಗೋವಿಂದಾರ್ಪಿತಚೇತಾಯೋ ।**
**ಗೋವಿಂದಾಚ್ಯುತ ಮಾಧವ ವಿಷ್ಣೋ ಗೋಕುಲನಾಯಕ ಕೃಷ್ಣೇತಿ ॥**
**ಗೋವಿಂದಾಂಘ್ರಿ ಸರೋಜಧ್ಯಾನಸುಧಾಜಲಧೌತ ಸಮಸ್ತಾ ಘೋ ।**
**ಗೋವಿಂದಂ ಪರಮಾನಂದಾಮೃತ ಮಂತಸ್ಥಂಸ ಸಮಭ್ಯೇತಿ ॥9॥**

ಭಾವಾರ್ಥ - ಯಾವಾತನು ಭಗವಂತನಾದ ಗೋವಿಂದನಲ್ಲಿ ಮನವನ್ನಿರಿಸಿ ಗೋವಿಂದಾ, ಅಚ್ಯುತಾ, ಮಾಧವಾ, ವಿಷ್ಣುವೇ, ಗೋಕುಲನಾಯಕಾ, ಶ್ರೀಕೃಷ್ಣಾ ಎನ್ನುತ್ತಾ ಆತನ ಚರಣಾರವಿಂದಗಳ ಧ್ಯಾನ ರೂಪಿಯಾಗಿರುವ ಅಮೃತಜಲದಿಂದ ತನ್ನ ಪಾಪಕೂಪಗಳನ್ನೆಲ್ಲಾ ತೊಳೆದುಕೊಂಡು ಈ ಗೋವಿಂದಾಷ್ಟಕಗಳನ್ನು ಅಧ್ಯಯನ ಮಾಡುವನೋ ಅವನು ತನ್ನ ಅಂತಃಕರಣದಲ್ಲಿ ನೆಲೆಯಾಗಿರುವ ಪರಮಾನಂದಾಮೃತ ಸ್ವರೂಪೀ ಗೋವಿಂದನ್ನು ಪಡೆಯುತ್ತಾನೆ.

॥ ಇತಿ ಶ್ರೀ ಗೋವಿಂದಾಷ್ಟಕಂ ಸಂಪೂರ್ಣಂ ॥

## 7.22 ಶ್ರೀಮತ್ಸ್ಯಾವತಾರ ಸ್ತೋತ್ರಂ

**ನೂನಂ ತ್ವಂ ಭಗವಾನ್ಸಾಕ್ಷಾದ್ಧರಿರ್ನಾರಾಯಣೋಽವ್ಯಯಃ ।**
**ಅನುಗ್ರಹಾಯ ಭೂತಾನಾಂ ಧತ್ಸೇ ರೂಪಂ ಜಲೌಕಸಾಂ ॥1॥**

ಭಾವಾರ್ಥ - ಸ್ವಾಮಿಯೇ ನೀನು ಖಚಿತವಾಗಿಯೂ ಸಾಕ್ಷಾತ್ ಭಗವಂತನಾಗಿರುವ ಹರಿಯೇ ಆಗಿರುವೆ. ಜೀವಜಗತ್ತನ್ನು ಉದ್ಧರಿಸುವ ನಿಮಿತ್ತವಾಗಿ ನೀನು ಜಲಚರ ರೂಪವನ್ನು ಧರಿಸಿದವನಿರುವೆ.

**ನಮಸ್ತೇ ಪುರುಷ ಶ್ರೇಷ್ಠ ಸ್ಥಿತ್ಯುತ್ಪತ್ತ್ಯಪ್ಯಯೇಶ್ವರ ।**
**ಭಕ್ತಾನಾಂ ನಃ ಪ್ರಪನ್ನಾನಾಂ ಮುಖ್ಯೋಹ್ಯಾತ್ಮ ಗತಿರ್ವಿಭೋ ॥2॥**

ಭಾವಾರ್ಥ - ಹೇ ಪುರುಷೋತ್ತಮನೇ, ನಿನಗಿದೋ ನನ್ನ ಪ್ರಣಾಮಗಳು. ಎಲೈ ದೊರೆಯೇ,ನೀನು ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳ ಕರ್ತನಾಗಿರುವೆ. ಹಾಗೂ ನಮ್ಮಂತೆ ಆಪತ್ತಿನಲ್ಲಿ ಸಿಲುಕಿದ ಭಕ್ತರಿಗೆ ಮುಖ್ಯ ಜೀವಾಶ್ರಯವಾಗಿರುವೆ.

**ಸರ್ವೇಲೀಲಾವತಾರಾಂಸ್ತೇ ಭೂತಾನಾಂ ಭೂತಿಹೇತವಃ ।**
**ಜ್ಞಾತುಮಿಚ್ಛಾಮ್ಯದೋ ರೂಪಂ ಯದರ್ಥಂ ಭವತಾ ಧೃತಂ ॥3॥**

ಭಾವಾರ್ಥ - ಸ್ವಾಮಿಯೇ,ನೀನು ಯಾವ ಯಾವ ಲೀಲಾವತಾರಗಳನ್ನು ತಾಳಿರುವಿಯೋ ಅವೆಲ್ಲವೂ ಜೀವಜಗತ್ತಿಗೆ ಶುಭವನ್ನುಂಟುಮಾಡಿವೆ. ಅದೇ ರೀತಿಯಾಗಿ ನೀನು ಯಾವ ನಿಮಿತ್ತವಾಗಿ ಈ ಮತ್ಸ್ಯಾವತಾರದಿಂದ ಅವತರಿಸಿರುವಿಯೋ ಅದರ ಬಗ್ಗೆ ಅರಿತುಕೊಳ್ಳಲು ನನಗೆ ಕುತೂಹಲವಿದೆ.

**ನ ತೇಽರವಿಂದಾಕ್ಷ ಪದೋಪಸರ್ಪಣಂ ಮೃಷಾ ಭವೇತ್ಸರ್ವಸುಹೃತ್ಪ್ರಿಯಾತ್ಮನಃ ।**
**ಯಥೇತರೇಷಾಂ ಪೃಥಗಾತ್ಮನಾಂ ಸತಾಮದೀದೃಶೋಯದ್ವ ಪುರುದ್ಭುತಂ ಹಿ ನಃ ॥ 4॥**

ಭಾವಾರ್ಥ - ಎಲೈ ಕಮಲನಯನನೇ, ನೀನು ಎಲ್ಲರ ಬಂಧುವಾಗಿರುವೆ. ಅಂತೆಯೇ ಪ್ರಿಯತಮನೂ ಆಗಿರುವೆ. ಅಹಂಕಾರಭರಿತರಾಗಿರುವವರ ಚರಣಸೇವೆಯು ಅಪ್ರಯೋಜಕನಿಸುವುದಾದರೂ ಅತ್ಯಂತ ಪ್ರೀತಿಪಾತ್ರನಾದ ನಿನ್ನ ಚರಣ ಸೇವೆಯು ಎಂದೂ ನಿಷ್ಫಲವಾಗಲಾರದು. ನಿನ್ನ ಈ ಅದ್ಭುತ ಶರೀರವನ್ನು ನೋಡಿ ನಾನು ವಿಸ್ಮಯನಾಗಿರುವೆ.

॥ ಇತಿ ಶ್ರೀಮದ್ಭಾಗವತಾಂತರ್ಗತ ಮತ್ಸ್ಯಾವತಾರ ಸ್ತೋತ್ರಂ ಸಂಪೂರ್ಣಂ ॥

## 7.23 ಶ್ರೀ ವಾಮನಾವತಾರ ಸ್ತೋತ್ರಂ

ಅದಿತಿರುವಾಚಃ- ಅದಿತಿಯು ಹೇಳುವಳು -

**ಯಜ್ಞೇಶ ಯಜ್ಞಪುರುಷಾಚ್ಯುತ ತೀರ್ಥಪಾದ । ತೀರ್ಥಶ್ರವಃ ಶ್ರವಣ ಮಂಗಲ ನಾಮಧೇಯ ॥ ಆಪನ್ನಲೋಕ ವೃಜಿನೋಪಶಮೋದಯಾಽಽದ್ಯ । ಶಂ ನಃ ಕೃಧೀಶ ಭಗವನ್ನಸಿ ದೀನನಾಥ ॥1॥**

ಭಾವಾರ್ಥ - ಹೇ, ಯಜ್ಞಾಧಿಪತಿಯೇ, ಯಜ್ಞಪುರುಷನೇ, ಅಚ್ಯುತನೇ, ಸದ್ವಂಶ ಸಂಭೂತ ಮೂಲನೇ, ಪವಿತ್ರಶಾಸ್ತ್ರಗಳನ್ನು ಆಲಿಸುವಾತನೇ, ಮಂಗಲಕರವಾಗಿರುವ ನಿನ್ನ ನಾಮಗಳನ್ನು ಕೇಳುವುದರಿಂದ ಶುಭವಾಗುವುದು. ಎಲೈ ಭಗವಂತನೇ,ನೀನು ದುಃಖಿತರ ಆಪ್ತನು. ಹಾಗೂ ಶರಣುಹೊಕ್ಕವರ ಅನೀತಿಗಳನ್ನು ನಾಶಗೊಳಿಸುವಾತನು.

**ವಿಶ್ವಾಯ ವಿಶ್ವಭವನಸ್ಥಿತಿ ಸಂಯಮಾಯ ಸ್ವೈರಂ ಗೃಹೀತಪುರುಷಶಕ್ತಿ ಗುಣಾಯ ಭೂಮ್ನೇ ॥ ಸ್ವಸ್ಥಾಯ ಶಶ್ವದುಪಬೃಂಹಿತಪೂರ್ಣಬೋಧ । ವ್ಯಾಪಾದಿತಾತ್ಮ ತಮಸೇ ಹರಮೇ ನಮಸ್ತೇ ॥2॥**

ಭಾವಾರ್ಥ - ಹೇ!ಸ್ವಾಮಿಯೇ, ನೀನು ಶ್ರೇಷ್ಠಪುರುಷನು. ಈ ಬ್ರಹ್ಮಾಂಡವು ನಿನ್ನದೇ ರೂಪವು. ಬ್ರಹ್ಮಾಂಡದ ಉತ್ಪತ್ತಿ-ಸ್ಥಿತಿ-ಸಂಹಾರ ಕಾರ್ಯಗಳು ನಿನ್ನವೇ ಆಗಿವೆ. ನಿನ್ನ ಅಭೀಷ್ಟದಂತೆ ತನ್ನಿಚ್ಛೆಗನುಗುಣವಾಗಿ ಆತ್ಮಶಕ್ತಿ ಗುಣಗಳನ್ನು ಗ್ರಹಣ ಮಾಡುವನು ನೀನು. ಆದರೂ ನೀನು ನಿನ್ನ ಸ್ವರೂಪವನ್ನು ತ್ಯಜಿಸುವುದಿಲ್ಲ. ಪೂರ್ಣ ಜ್ಞಾನವು ಅನುದಿನವೂ ಬೆಳೆಯಲು ನೀನು ಕಾರಣನಾಗಿರುವೆ. ತನ್ಮೂಲಕ ಮಾಯಾರೂಪದ ಅಂಧಕಾರವನ್ನು ದೂರೀಕರಿಸುವಿ. ನಿನಗಿದೋ ಪ್ರಣಾಮಗಳು.

**ಆಯುಃ ಪರಂ ವಪುರಭೀಷ್ಟಮತುಲ್ಯ ಲಕ್ಷ್ಮೀ- ।**
**ದ್ಯೌರ್ಭೂಃ ರಸಾಃ ಸಕಲಯೋಗಗುಣಾಸ್ತ್ರಿವರ್ಗಃ ॥**

**ಜ್ಞಾನಂ ಚ ಕೇವಲಮನಂತ ಭವಂತಿ ತುಷ್ಟಾತ್ ।**
**ತ್ವತ್ತೋ ನೃಣಾಂ ಕಿಮು ಸಪತ್ನ ಜಯಾದಿ ರಾಶೀಃ ॥3॥**

ಭಾವಾರ್ಥ - ಹೇ ಅನಂತನೇ. ನೀನು ಸಂತುಷ್ಟನಾದರೆ ಬ್ರಹ್ಮನಿಗೆ ಸರಿಸಾಟಿಯಾದ ಧೀರ್ಘಾಯುಷ್ಯ, ಸುಂದರ ಶರೀರ, ಸಾಟಿಯಿಲ್ಲದ ಸಂಪತ್ತು, ಸ್ವರ್ಗ ಮರ್ತ್ಯ,

ಪಾತಾಳ ಹಾಗೂ ಅಣಿಮಾದಿ ಸಮಸ್ತ ಯೋಗ ಸಿದ್ಧಿಗಳು ಲಭಿಸಬಲ್ಲವು. ಹೀಗಿರುವಾಗ ವೈರಿಗಳನ್ನು ಗೆಲ್ಲುವುದು ಕಠಿಣವೇನಲ್ಲ. ಆ ಕಾರ್ಯವು ಸಿದ್ಧಿಸಲಸಾಧ್ಯವೇ ಸ್ವಾಮೀ?

॥ ಇತಿ ಶ್ರೀಮದ್ಭಾಗವತಾಂತರ್ಗತ ಶ್ರೀವಾಮನಾವತಾರ ಸ್ತೋತ್ರಂ ಸಂಪೂರ್ಣಂ ॥

## 7.24 ಶ್ರೀ ಲಕ್ಷ್ಮೀನೃಸಿಂಹ ಪಂಚರತ್ನ ಸ್ತೋತ್ರಂ

**ತ್ವತ್ಪ್ರಭುಜೀವ-ಪ್ರಿಯಮಿಚ್ಛಸಿಚೇನ್ನರಹರಿ-ಪೂಜಾಂಕುರು ಸತತಂ ।**
**ಪ್ರತಿಬಿಂಬಾಲಂಕೃತಿ-ಧೃತಿ-ಕುಶಲೋ ಬಿಂಬಾಲಂಕೃತಿ ಮಾತನುತೇ ॥**
**ಚೇತೋಭೃಂಗ ಭ್ರಮಸಿ ವೃಥಾ ಭವಮರುಭೂಮೌ ವಿರಸಾಯಾಂ ।**
**ಭಜಭಜ ಲಕ್ಷ್ಮೀನರಸಿಂಹಾನಘ-ಪದ-ಸರಸಿಜ ಮಕರಂದಂ ॥1॥**

ಭಾವಾರ್ಥ - ಮನಸ್ಸಿನ ಭಾವನೆಯಂತಿರುವ ದುಂಬಿಯೇ, ಪ್ರತಿಬಿಂಬವು ಅಲಂಕರಿಸಿರುವಂತೆ ಕಾಣಬೇಕಾದರೆ ಮೂಲಬಿಂಬವು ಅಲಂಕೃತವಾಗಿರಬೇಕಾಗುತ್ತದೆ. ನೀನು ಈ ಸಂಸಾರವೆಂಬ ನೀರಸ ಮರುಭೂಮಿಯಲ್ಲಿ ನಿಷ್ಫಲವಾಗಿ ಸುತ್ತಾಡುತ್ತಿರುವೆ. ಓ,ಜೀವವೇ,ನಿನ್ನ ಒಳಿತನ್ನು ಬಯಸುವಿಯಾದರೆ ನೀನು ನಿರಂತರ ಒಡೆಯ ನರಹರಿಯನ್ನು ಆರಾಧಿಸು. ಆ ಲಕ್ಷ್ಮೀನೃಸಿಂಹನ ಚರಣಾರವಿಂದಗಳನ್ನು ಸ್ತುತಿಸು. ತನ್ಮೂಲಕ ಅವುಗಳಲ್ಲಿನ ಕೇಸರವನ್ನು ಭೋಗಿಸು.

**ಶುಕ್ತೌ ರಜತ-ಪ್ರತಿಭಾ ಜಾತಾ ಕಟಕಾದ್ಯರ್ಥ ಸಮರ್ಥಾ ಚೇದ್ ।**
**ದುಃಖಮಯೀ ತೇ ಸಂಸೃತಿರೇಷಾ ನಿರ್ವೃತಿದಾನೇ ನಿಪುಣಾಸ್ಯಾತ್ ॥**
**ಚೇತೋಭೃಂಗ ಭ್ರಮಸಿ ವೃಥಾ ಭವಮರುಭೂಮೌ ವಿರಸಾಯಾಂ ।**
**ಭಜಭಜ ಲಕ್ಷ್ಮೀನರಸಿಂಹಾನಘ-ಪದ-ಸರಸಿಜ ಮಕರಂದಂ ॥2॥**

ಭಾವಾರ್ಥ - ಮನಸ್ಸಿನ ಭಾವನೆಯಂತಿರುವ ದುಂಬಿಯೇ, ಸಂಪದವು ಚಿಪ್ಪಿನಲ್ಲಿ ಬಿದ್ದಿರುವ ಬೆಳ್ಳಿಯ ಮೆರುಗಿನಂತಿದೆ. ನೀನಾದರೂ ದುಃಖ ಭರಿತ ಮರುಭೂಮಿಯ ಸಂಸಾರದಲ್ಲಿ ಸುತ್ತಾಡುತ್ತಿರುವೆ. ಯೋಗ್ಯವಾದ ಗುರಿಯನ್ನು ಹೊಂದಲು ನೀನು ಬಯಸುವಿಯಾದರೆ ಶಾಂತಿಯನ್ನು ದಯಪಾಲಿಸುವ ನಿರಂತರ ಒಡೆಯ ನರಹರಿಯನ್ನು

ಆರಾಧಿಸು. ಆ ಲಕ್ಷ್ಮೀನೃಸಿಂಹನ ಚರಣಾರವಿಂದಗಳನ್ನು ಸ್ತುತಿಸು. ತನ್ಮೂಲಕ ಅವುಗಳಲ್ಲಿನ ಕೇಸರವನ್ನು ಭೋಗಿಸು.

**ಆಕೃತಿ-ಸಾಮ್ಯಾಚ್ಛಾಲ್ಮಲಿ-ಕುಸುಮೇ ಸ್ಥಲ-ನಲಿತತ್ವ-ಭ್ರಮ್ಸ್ ಮಕರೋಃ ।**
**ಗಂಧಸಾವಿಹ ಕಿಮುವಿದ್ಯೇತೇ ವಿಫಲಂಭ್ರಾಮಸಿ ಭೃತವಿರಸೇಸ್ಮಿನ್ ॥**
**ಚೇತೋಭೃಂಗ ಭ್ರಮಸಿ ವೃಥಾ ಭವಮರುಭೂಮೌ ವಿರಸಾಯಾಂ ।**
**ಭಜಭಜ ಲಕ್ಷ್ಮೀನರಸಿಂಹಾನಘ-ಪದ-ಸರಸಿಜ ಮಕರಂದಂ ॥3॥**

ಭಾವಾರ್ಥ - ಮನೋರೂಪೀ ದುಂಬಿಯೇ,ಆಕೃತಿಯಲ್ಲಿನ ಹೋಲಿಕೆಯ ಕಾರಣದಿಂದ ಬೂರುಗದ ಪುಷ್ಪವು ತಾವರೆ ಪುಷ್ಪವೋ ಎಂಬ ಭ್ರಾಂತಿಯನ್ನು ಹುಟ್ಟಿಸಿ ಯೋಚಿಸುವಂತೆ ಮಾಡುತ್ತದೆ. ಆದರೆ ಅದರಲ್ಲಿ ಗಂಧಪರಿಮಳಗಳಿರುವುದಿಲ್ಲ. ಅಂತೆಯೇ ನೀನು ಈ ಸಂಸಾರವೆಂಬ ನೀರಸ ಮರುಭೂಮಿಯಲ್ಲಿ ನಿಷ್ಫಲವಾಗಿ ಸುತ್ತಾಡುತ್ತಿರುವೆ. ಓ,ಜೀವವೇ,ನಿನ್ನ ಒಳಿತನ್ನು ಬಯಸುವಿಯಾದರೆ ನೀನು ನಿರಂತರ ಒಡೆಯ ನರಹರಿಯನ್ನು ಆರಾಧಿಸು. ಆ ಲಕ್ಷ್ಮೀನೃಸಿಂಹನ ಚರಣಾರವಿಂದಗಳನ್ನು ಸ್ತುತಿಸು. ತನ್ಮೂಲಕ ಅವುಗಳಲ್ಲಿನ ಕೇಸರವನ್ನು ಭೋಗಿಸು.

**ಸಕ್ರಂದನ ವನಿತಾದೀನ್ವಿಷಯಾನ್ಸುಖದಾನ್ಮತ್ವಾ ತತ್ರ ವಿಹರಸೇ ।**
**ಗಂಧಫಲೀ-ಸದೃಶಾನನುತೇಽಮೀ ಭೋಗಾನಂತರ ದುಃಖ ಕೃತಃ ಸ್ಯುಃ ॥**
**ಚೇತೋಭೃಂಗ ಭ್ರಮಸಿ ವೃಥಾ ಭವಮರುಭೂಮೌ ವಿರಸಾಯಾಂ ।**
**ಭಜಭಜ ಲಕ್ಷ್ಮೀನರಸಿಂಹಾನಘ-ಪದ-ಸರಸಿಜ ಮಕರಂದಂ ॥4॥**

ಭಾವಾರ್ಥ - ಭ್ರಮರ ರೂಪೀ ಮನವೇ! ಪುಷ್ಪ, ಪರಿಮಳ, ಸ್ತ್ರೀ ಇತ್ಯಾದಿ ವಿಷಯ ವಸ್ತುಗಳನ್ನು ಸುಖದಾಯಕವೆಂದು ತಿಳಿದು ಅವುಗಳಲ್ಲಿ ವಿಹರಿಸುತ್ತಿರುವೆ. ಪ್ರಿಯಂಗು ವೃಕ್ಷದಂತೆ ಅವು ಅಪಾಯಕಾರಿಯಾದವುಗಳಾಗಿವೆ. ಭೋಗಾನುಭವಾನಂತರ ವ್ಯಥೆಯುತ್ಪನ್ನವಾಗುವುದು. ನೀನು ಈ ಸಂಸಾರವೆಂಬ ನೀರಸ ಮರುಭೂಮಿಯಲ್ಲಿ ನಿಷ್ಫಲವಾಗಿ ಸುತ್ತಾಡುತ್ತಿರುವೆ. ಓ, ಜೀವವೇ, ನಿನ್ನ ಒಳಿತನ್ನು ಬಯಸುವಿಯಾದರೆ ನೀನು ನಿರಂತರ ಒಡೆಯ ನರಹರಿಯನ್ನು ಆರಾಧಿಸು.

ಆ ಲಕ್ಷ್ಮೀನೃಸಿಂಹನ ಚರಣಾರವಿಂದಗಳನ್ನು ಸ್ತುತಿಸು. ತನ್ಮೂಲಕ ಅವುಗಳಲ್ಲಿನ ಕೇಸರವನ್ನು ಭೋಗಿಸು.

**ತವ ಹಿತಮೇಕಂ ವಚನಂ ವಕ್ಷ್ಯೇ ಶೃಣು ಸುಖಕಾಮೋತದಿ ಸತತಂ ।**
**ಸ್ವಪ್ನೇ ದೃಷ್ಟಂ ಸಕಲಂ ಹಿ ಮೃಷಾ ಜಾಗ್ರತಿ ಚ ಸ್ಮರ ತದ್ವದತಿ ॥**
**ಚೇತೋಭೃಂಗ ಭ್ರಮಸಿ ವೃಥಾ ಭವಮರುಭೂಮೌ ವಿರಸಾಯಾಂ ।**
**ಭಜಭಜ ಲಕ್ಷ್ಮೀನರಸಿಂಹಾನಘ-ಪದ-ಸರಸಿಜ ಮಕರಂದಂ ॥5॥**

ಭಾವಾರ್ಥ - ದುಂಬಿಯಂತೆ ಚಲಿಸುತ್ತಲಿರುವ ಮನಸ್ಸೇ!ನಿನಗೆ ಮಂಗಲದಾಯಕವಾಗಿರುವ ಮಾತೊಂದನ್ನು ಅರುಹುವೆ. ಕೇಳು. ಕನಸ್ಸಿನಲ್ಲಿ ವ್ಯಕ್ತವಾಗುವುದೆಲ್ಲವೂ ಎಚ್ಚರಸ್ಥಿತಿಯಲ್ಲಿ ಸಟೆಯಾಗಿರುವಂತೆ ಜಾಗ್ರತ ಕಾಲದ ಸುಖವೂ ಸಟೆಯಾಗುವುದು. ನೀನು ಈ ಸಂಸಾರವೆಂಬ ನೀರಸ ಮರುಭೂಮಿಯಲ್ಲಿ ನಿಷ್ಫಲವಾಗಿ ಸುತ್ತಾಡುತ್ತಿರುವೆ. ಓ,ಜೀವವೇ,ನಿನ್ನ ಒಳಿತನ್ನು ಬಯಸುವಿಯಾದರೆ ನೀನು ನಿರಂತರ ಒಡೆಯ ನರಹರಿಯನ್ನು ಆರಾಧಿಸು. ಆ ಲಕ್ಷ್ಮೀನೃಸಿಂಹನ ಚರಣಾರವಿಂದಗಳನ್ನು ಸ್ತುತಿಸು. ತನ್ಮೂಲಕ ಅವುಗಳಲ್ಲಿನ ಕೇಸರವನ್ನು ಭೋಗಿಸು.

॥ ಇತಿ ಶ್ರೀ ಲಕ್ಷ್ಮೀನೃಸಿಂಹ ಪಂಚರತ್ನ ಸ್ತೋತ್ರಂ ಸಂಪೂರ್ಣಂ ॥

## 7.25 ಶ್ರೀ ಧನ್ವಂತರಿ ಸ್ತೋತ್ರಂ

**ನಮಾಮಿ ಧನ್ವಂತರಿಮಾದಿದೇವಂ ಸುರಾಸುರೈರ್ವಂದಿತ ಪಾದಪದ್ಮಂ ।**
**ಲೋಕೇ ಜರಾರುಗ್ಭಯಮೃತ್ಯು ನಾಶಂ ದಾತಾರಮೀಶಂ ವಿವಿಧೌಷಧೀನಾಂ ॥1॥**

ಭಾವಾರ್ಥ - ಯಾವಾತನ ಪಾದಾರವಿಂದಗಳಿಗೆ ದೇವಾದಿದೇವತೆಗಳೂ, ಅಸುರರೂ ನಮಸ್ಕರಿಸುವರೋ ಅಂತಹಾ ಆದಿದೇವನಾಗಿರುವ ಹಾಗೂ ಜಗತ್ತಿನಲ್ಲಿ ರೋಗ, ಮುಪ್ಪುಗಳ ಭಯವನ್ನು ಮತ್ತು ಮರಣ ಭೀತಿಯನ್ನು ದೂರೀಕರಿಸುವ ಅಂತೆಯೇ ವಿವಿಧ ತೆರನಾದ ಔಷಧಿಗಳನ್ನು ಕರುಣಿಸುವ ಸ್ವಾಮಿಯಾಗಿರುವ ಧನ್ವಂತರಿಗೆ ನನ್ನ ಪ್ರಣಾಮಗಳು.

**ಅರಿ ಜಲಜ ಜಲೂಕಾ ರತ್ನ ಪೀಯೂಷ ಕುಂಭ- ಪ್ರಕಟಿತ ಕರಕಾಂತಃ ಕಾಂತ ಪೀತಾಂಬರಾಢ್ಯಃ । ಸಿತವಸನ ವಿರಾಜನ್ಮೌಲಿರಾರೋಗ್ಯದಾಯೀ ಶತಮುಖ ಮಣಿವರ್ಣಃ ಪಾತು ಧನ್ವಂತರಿರ್ನಃ ॥2॥**

ಭಾವಾರ್ಥ - ಹಸ್ತಗಳಲ್ಲಿ ಅಮೃತಕಲಶದೊಡನೆ ಜಿಗಣೆ, ಚಕ್ರ, ಶಂಖಗಳನ್ನು ಧರಿಸಿ ಕಾಂತಿಯುತ ಪೀತಾಂಬರವನ್ನುಟ್ಟು, ಶ್ವೇತವಸನದ ರುಮಾಲಿನಿಂದ ಶೋಭಿಸುವ ಶಿರಸ್ಸು ಉಳ್ಳವನಾದ ಶರೀರವು ಇಂದ್ರನೀಲಮಣಿಯ ಬಣ್ಣ ಹೊಂದಿರುವ ಆರೋಗ್ಯದಾಯಿಯಾಗಿರುವ ಧನ್ವಂತರಿ ಸ್ವಾಮಿಯು ನಮ್ಮನ್ನು ರಕ್ಷಿಸಲಿ.

**ಚಂದ್ರೌಘಕಾಂತಿಂ ಅಮೃತೋರು ಕರೈರ್ಜಗಂತಿ ಸಂಜೀವಯಂತಂ ಅಮಿತಾತ್ಮ ಸುಖಂ ಪರೇಶಂ । ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ ಶೀತಾಂಶು ಮಂಡಲಗತಂ ಸ್ಮರತಾತ್ಮ ಸಂಸ್ಥಂ ॥3॥**

ಭಾವಾರ್ಥ - ಬಹು ಚಂದ್ರರ ಸೌಂದರ್ಯವುಳ್ಳ, ತನ್ನ ಮೋಕ್ಷದಾಯಕವಾಗಿರುವ ಕಿರಣಗಳಿಂದ ಜಗತ್ತನ್ನು ಪುನರ್ಜೀವನಗೊಳಿಸುತ್ತಲಿರುವ, ವಿಶಾಲವಾದ ಆತ್ಮಾನುಭೂತಿಯುಳ್ಳ, ಉನ್ನತ ಸ್ವಾಮಿಯಾಗಿರುವ, ಜ್ಞಾನಮುದ್ರೆಯನ್ನು ಮತ್ತು ಮೋಕ್ಷಕುಂಭವನ್ನು ಧರಿಸಿ, ಚಂದ್ರಮಂಡಲದೊಳಗಿರುವ ದೇವನಾದ ಧನ್ವಂತರಿಯು ನಮ್ಮ ಶರೀರದಲ್ಲಿ ನೆಲೆಯಾಗಿರುವನೆಂದು ಸ್ಮರಿಸೋಣ.

**ಶಂಖಂ ಚಕ್ರಂ ಜಲೂಕಾಂ ದಧದಮೃತಘಟಂ ಚಾಪಿ ದೋರ್ಭಿಶ್ಚತುರ್ಭಿಃ ಸೂಕ್ಷ್ಮಸ್ವಚ್ಛಂ ಚ ಹೃದ್ಯಾಂಶುಕಪರಿವಿಲಸನ್ಮೌಲಿಂ ಅಂಭೋಜ ನೇತ್ರಂ । ಕಾಲಾಂಭೋದೋಜ್ವಲಾಂಗಂ ಕಟಿತಟಿ ವಿಲಸಚ್ಚಾರು ಪೀತಾಂಬರಾಢ್ಯಂ ವಂದೇ ಧನ್ವಂತರೀಂ ತಂ ನಿಖಿಲ ಗದವನ ಪ್ರೌಢದಾವಾಗ್ನಿ ಲೀಲಂ ॥4॥**

ಭಾವಾರ್ಥ - ಅಮೃತಕಲಶದೊಡನೆ ಶಂಕ, ಚಕ್ರ, ಜಿಗಣೆಗಳನ್ನು ತನ್ನ ನಾಲ್ಕುಕೈಗಳಲ್ಲಿ ಹಿಡಿದು ಸಾಮಾನ್ಯರಿಗೆ ಅಗೋಚರನಾಗಿ, ತಾನು ಇಚ್ಛಿಸಿದ ಭಕ್ತರಿಗೆ ಪ್ರತ್ಯಕ್ಷನಾಗುವ ಮನಮೋಹಕವಾಗಿರುವ ಬಟ್ಟೆಯ ರುಮಾಲನ್ನು ಶಿರದಲ್ಲಿ ಧರಿಸಿ, ವಿಸ್ತಾರವಾದ ನೇತ್ರಗಳನ್ನು ಹೊಂದಿದ ಮಳೆಗಾಲದ ಕಾರ್ಮುಗಿಲ ಬಣ್ಣದ

ದೇಹವುಳ್ಳವನಾದ ಮೋಹಕವಾದ ಪೀತಾಂಬರವನ್ನು ಸೊಂಟಕ್ಕೆ ಸುತ್ತಿಕೊಂಡು, ಸಮಸ್ತ ರೋಗಗಳೆಂಬ ಕಾಡ್ಗಿಚ್ಚನ್ನು ಅಳಿಸಿಹಾಕುವ ದೇವನಾದ ಧನ್ವಂತರಿಗೆ ನನ್ನ ಪ್ರಣಾಮಗಳು.

**ಶಂಖಂ ಚಕ್ರಮುಪರ್ಯಧಶ್ಚಕರಯೋರ್ದಿವ್ಯೌಷಧಂ ದಕ್ಷಿಣೇ ವಾಮೇನಾನ್ಯ ಕರೇಣ ನಿರ್ಮಲ ಸುಧಾಕುಂಭಂ ಜಲೂಕಾವಲಿಂ ।**
**ಬಿಭ್ರಾಣಃ ಕರುಣಾಕರಃ ಶುಭಕರಃ ಸರ್ವಾಮಯ ಧ್ವಂಸಕಃ ಸರ್ವಂ ಮೇ ದುರಿತಂ ಛಿನತ್ತು ಭಗವಾನ್ ಧನ್ವಂತರಿಃ ಸಂತತಂ ॥5॥**

ಭಾವಾರ್ಥ - ತನ್ನ ದೇಹದ ಮೇಲ್ಭಾಗದ ಎರಡು ಹಸ್ತಗಳಲ್ಲಿ ಶಂಖ ಚಕ್ರಗಳನ್ನು ಧರಿಸಿ, ಕೆಳಬದಿಯ ಬಲಗೈಯಲ್ಲಿ ದಿವ್ಯೌಷಧವಾಗಿರುವ ಅಮೃತಕುಂಭವನ್ನು ಧರಿಸಿ, ಎಡಗೈಯಲ್ಲಿ ಜಿಗಣೆಗಳ ಗುಂಪನ್ನು ಹಿಡಿದಿರುವ, ಕರುಣಾಸಾಗರನಾಗಿರುವ, ಸರ್ವ ರೋಗ ನಿವಾರಕನಾಗಿರುವ, ಪ್ರಪಂಚಕ್ಕೆ ಒಳಿತನ್ನು ದಯಪಾಲಿಸುವ ಸಾಕ್ಷಾತ್ ಭಗವದ್ಸ್ವರೂಪಿ ಧನ್ವಂತರಿ ಸ್ವಾಮಿಯು ಸಮಸ್ತಕ್ಕೆ ರೋಗಗಳಿಗೆ ಮೂಲವಾಗಿರುವ ನನ್ನ ಸರ್ವ ಪಾಪಗಳನ್ನು ಅನುದಿನವೂ ನಿವಾರಿಸಲಿ. ಆತನಿಗೆ ಪ್ರಣಾಮಗಳು.

॥ ಇತಿ ಶ್ರೀ ಧನ್ವಂತರಿ ಸ್ತೋತ್ರಂ ಸಂಪೂರ್ಣಂ ॥

----- ****** -----

# 8 ಶ್ರೀ ರಾಮ ಸ್ತೋತ್ರಗಳು

## 8.1 ಶ್ರೀ ರಾಮ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃಸ್ಮರಾಮಿ ರಘುನಾಥ ಮುಖಾರವಿಂದಂ । ಮಂದಸ್ಮಿತಂ ಮಧುರಭಾಷಿ ವಿಶಾಲಭಾಲಂ ॥ ಕರ್ಣಾವಲಂಬಿ ಚಲಕುಂಡಲ ಶೋಭಿಗಂಡಂ । ಕರ್ಣಾಂತ ಧೀರ್ಘ ನಯನಂ ನಯಾಭಿರಾಮಂ ॥1॥**

ಭಾವಾರ್ಥ - ಮಂದಹಾಸಭರಿತ ಸುಮಧುರವಾಗಿರುವ ನುಡಿ, ಅಗಲವಾಗಿರುವ ಹಣೆ, ಕಿವಿಗಳಲ್ಲಿ ತೂಗಾಡುತ್ತಿರುವ ಅಸ್ಥಿರವಾದ ಕುಂಡಲಗಳು, ಆ ಕುಂಡಲಗಳಿಂದ ಪ್ರಕಾಶಭರಿತವಾಗಿರುವ ಕಿವಿ ಹಾಗೆಯೇ ಮತ್ತು ಕೆನ್ನೆಗಳತ್ತ ಚಾಚಿದ ವಿಶಾಲವಾದ ಕಣ್ಣುಗಳು, ಆ ಕಣ್ಣುಗಳಿಂದ ಮನೋಹರವಾಗಿ ಕಂಗೊಳಿಸುತ್ತಿರುವ ಶ್ರೀರಾಮನ ಮುಖಕಮಲವನ್ನು ನಾನು ಉಷಃಕಾಲದಲ್ಲಿ ಸ್ಮರಿಸುವೆ.

**ಪ್ರಾತರ್ಭಜಾಮಿ ರಘುನಾಥ ಕರಾರವಿಂದಂ । ರಕ್ಷೋಗಣಾಯ ಭಯದಂ ವರದಂ ನಿಜೇಭ್ಯಃ ॥ ಯದ್ ರಾಜಸಂಸದಿ ವಿಭಜ್ಯ ಮಹೇಷ ಚಾಪಂ । ಸೀತಾಕರಗ್ರಹಣ ಮಂಗಲಮಾಪ ಸದ್ಯಃ ॥2॥**

ಭಾವಾರ್ಥ - ದಾನವರ ಸಮೂಹಕ್ಕೆ ಭೀತಿಯನ್ನು ಹುಟ್ಟಿಸಿದ, ತನ್ನ ಭಕ್ತರಿಗೆ ವರದಾಯಕನಾದ, ಜನಕರಾಜನ ಅರಮನೆಯ ಸಭೆಯಲ್ಲಿ ಶಿವ ಧನುಸ್ಸನ್ನು ಮುರಿದು ಸೀತಾದೇವಿಯ ಪಾಣಿಗ್ರಹಣದ ಶುಭ ಕಾರ್ಯವನ್ನು ಗೈದ ಆ ರಘುನಾಥನ ಕರಕಮಲವನ್ನು ನಾನು ಉಷಃಕಾಲದಲ್ಲಿ ಭಜಿಸುವೆ.

**ಪ್ರಾತರ್ಭಜಾಮಿ ರಘುನಾಥ ಪದಾರವಿಂದಂ । ಪದ್ಮಾಂಕುಶಾದಿ ಶುಭರೇಖ ಸುಖಾವಹಂ ಮೇ ॥ ಯೋಗೀಂದ್ರ ಮಾನಸ ಮಧುವ್ರತ ಸೇವ್ಯಮಾನಂ । ಶಾಪಾಪಹಂ ಸಪದಿ ಗೌತಮಧರ್ಮಪತ್ನ್ಯಾಃ ॥3॥**

ಭಾವಾರ್ಥ - ಕಮಲ, ಅಂಕುಶ ಇತ್ಯಾದಿ ಶುಭರೇಖೆಯುಳ್ಳವನಾದ, ನನ್ನ ಆನಂದಕ್ಕೆ ಕಾರಣನಾಗುವ, ಶ್ರೇಷ್ಠರುಗಳಾದ ಮಹರ್ಷಿಗಳ ಮನಸ್ಸೆಂಬ ಭ್ರಮರಗಳಿಂದ ಸೇವಿಸಲ್ಪಡುವ, ಗೌತಮ ಮಹರ್ಷಿಯ ಧರ್ಮಪತ್ನಿ ಅಹಲ್ಯೆಯ ಶಾಪವನ್ನು ಪರಿಹರಿಸಿ ಉದ್ಧರಿಸಿದ ಆ ಶ್ರೀರಾಮನ ಚರಣಾರವಿಂದಗಳನ್ನು ನಾನು ಉಷಃಕಾಲದಲ್ಲಿ ಭಜಿಸುವೆ.

**ಪ್ರಾತರ್ವದಾಮಿ ವಚಸಾ ರಘುನಾಥ ನಾಮಂ । ವಾಗ್ದೋಷಹಾರಿ ಸಕಲಂ ಶಮಲಂ ನಿಹಂತಿ ॥ ಯತ್ ಪಾರ್ವತೀ ಸ್ವ ಪತಿನಾ ಸಹ ಭೋಕ್ತು ಕಾಮಾ । ಪ್ರೀತ್ಯಾ ಸಹಸ್ರ ಹರಿನಾಮ ಸಮಂ ಜಜಾಪ ॥4॥**

ಭಾವಾರ್ಥ - ಸಮಸ್ತ ವಾಗ್ದೋಷಗಳನ್ನು ಪರಿಹರಿಸುವ, ಸರ್ವ ಪಾಪಗಳನ್ನು ಹೋಗಲಾಡಿಸುವ, " ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ।ಸಹಸ್ರ ನಾಮ ತತ್ತುಲ್ಯಂ ರಾಮ ನಾಮ ವರಾನನೇ " ಎಂಬ ವಿಷ್ಣು ಸಹಸ್ರ ನಾಮಕ್ಕೆ ಸರಿ ಸಮವಾದ ಯಾವ ಸ್ತುತಿಯ ರಸಾಸ್ವಾದನೆಯನ್ನು ಮಾಡಬಯಸುತ್ತಾ ತನ್ನ ಪತಿಯೊಡನೆ ಪಾರ್ವತೀ ದೇವಿಯು ಪ್ರೀತಿಯಿಂದ ಜಪಿಸುವಳೋ ಅಂತಹಾ ಪಾವನನಾಮ ಶ್ರೀರಾಮನಾಮವನ್ನು ಅನುದಿನವೂ ಉಷಃಕಾಲದಲ್ಲಿ ನಾನು ಜಪಿಸುವೆ.

**ಪ್ರಾತಃಶ್ರಯೇ ಶ್ರುತಿನುತಾಂ ರಘುನಾಥ ಮೂರ್ತಿಂ । ನೀಲಾಂಬುದೋತ್ಫಲ ಸಿತೇತರ ರತ್ನ ನೀಲಾಂ ॥ ಆಮುಕ್ತ ಮೌಕ್ತಿಕ ವಿಶೇಷ ವಿಭೂಷಣಾಢ್ಯಾಂ । ಧ್ಯೇಯಾಂ ಸಮಸ್ತ ಮುನಿಭಿರ್ಜನ ಮುಕ್ತಿ ಹೇತುಂ ॥5॥**

ಭಾವಾರ್ಥ - ನೀಲಮುಗಿಲನಂತೆ, ನೀಲಕಮಲದಂತೆ, ಹಾಗೂ ಇಂದ್ರನೀಲಮಣಿಯಂತೆ ನೀಲವರ್ಣದ ಶರೀರವನ್ನು ಹೊಂದಿದ, ವಿಶೇಷವಾಗಿರುವ ಮುತ್ತಿನಹಾರಗಳನ್ನು ಧರಿಸಿ ಶೋಭಿಸುತ್ತಿರುವ, ಸಮಸ್ತ ಋಷಿ ಸಮೂಹದಿಂದ ಧ್ಯಾನಿಸಲ್ಪಡುವ, ಭಕ್ತಜನರಿಗೆ ಮೋಕ್ಷದೊರಕಲು ಕಾರಣೀಭೂತನಾದ, ವೇದಗಳಲ್ಲಿ ಸ್ತುತಿಸಲ್ಪಡುತ್ತಿರುವ ಆ ಶ್ರೀರಾಮನ ದಿವ್ಯಮೂರ್ತಿಗೆ ಉಷಃಕಾಲದಲ್ಲಿ ನಾನು ಶರಣಾಗುವೆ.

**ಯಃ ಶ್ಲೋಕ ಪಂಚಕಮಿದಂ ಪ್ರಯತಃ ಅಠೇದ್ಧಿ । ನಿತ್ಯಂ ಪ್ರಭಾತ ಸಮಯೇ ಪುರುಷಃ ಪ್ರಬುದ್ಧಃ ॥ ಶ್ರೀರಾಮಕಿಂಕರ ಜನೇಷು ಸ ಏವ ಮುಖ್ಯೋ । ಭೂತ್ವಾ ಪ್ರಯಾತಿ ಹರಿಲೋಕಮನನ್ಯ ಲಭ್ಯಂ ॥6॥**

ಭಾವಾರ್ಥ - ಯಾವಾತನು ಪ್ರಯತ್ನ ಪೂರ್ವಕವಾಗಿ ಈ ಐದು ಶ್ಲೋಕಗಳನ್ನು ಅನುದಿನವೂ ನಿಯಮಿತವಾಗಿ ಶ್ರದ್ಧೆಯಿಂದ ಪಠಿಸುವನೋ ಅಂತಹವನು ಶ್ರೀರಾಮನ ಊಳಿಗದವರಲ್ಲಿ ಪ್ರಾಮುಖ್ಯನಾಗಿ ಅನ್ಯರಿಗೆ ಲಭಿಸಲಸಾಧ್ಯವಿರುವ ವಿಷ್ಣು ಲೋಕವನ್ನು ಹೊಂದುವನು.

॥ ಇತಿ ಶ್ರೀ ರಾಮ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 8.2 ಏಕ ಶ್ಲೋಕೀ ರಾಮಾಯಣ

**ಪೂರ್ವಂ ರಾಮ ತಪೋವನಾಭಿಗಮನಂ ಹತ್ವಾ ಮೃಗ ಕಾಂಚನಂ ।**
**ವೈದೇಹೀ ಹರಣಂ ಜಟಾಯು ಮರಣಂ ಸುಗ್ರೀವ ಸಂಭಾಷಣಂ ।**
**ವಾಲೀ ನಿಗ್ರಹಣಂ ಸಮುದ್ರ ತರಣಂ ಲಂಕಾಪುರೀದಾಹನಂ ।**
**ಪಶ್ಚಾದ್ರಾವಣ ಕುಂಭಕರ್ಣ ಮಥನಂ ಏತದ್ಧಿ ರಾಮಾಯಣಂ ॥**

॥ ಇತಿ ಏಕ ಶ್ಲೋಕೀ ರಾಮಾಯಣ ಸಂಪೂರ್ಣಂ ॥

ಭಾವಾರ್ಥ - ಪೂರ್ವಕಾಲದಲ್ಲಿ ಅಂದರೆ ತ್ರೇತಾಯುಗದಲ್ಲಿ ರಾಮನು ತಪಸಿಗಾಗಿ ವನದಲ್ಲಿ ಸಂಚರಿಸಿದನು. ಆಗ ಪತ್ನಿ ಸೀತೆಯ ಹಂಬಲವನ್ನು ಈಡೇರಿಸಲು ಕಾಂಚನ ವರ್ಣದ ಮೃಗವನ್ನು ಹತ್ಯೆಗೈದನು. ಅದೇ ಸಮಯದಲ್ಲಿ ಜಾನಕಿಯ ಅಪಹರಣವಾಯಿತು. ಜಟಾಯುವಿನ ಮರಣವಾಯಿತು. ರಾಮ ಸುಗ್ರೀವರೊಳಗೆ ಸಂಭಾಷಣೆ ನಡೆಯಿತು. ನಂತರ ವಾಲಿಯನ್ನು ವಧಿಸಲಾಯಿತು. ಮುಂದೆ ಸಮುದ್ರೋಲ್ಲಂಘನವಾಯಿತು. ಲಂಕೆಯನ್ನು ಸುಡಲಾಯಿತು. ನಂತರ ರಾವಣ ಕುಂಭಕರ್ಣಾದಿಗಳನ್ನು ವಧಿಸಲಾಯಿತು. ಈ ರೀತಿಯಾಗಿ ಸಂಕ್ಷಿಪ್ತ ರಾಮಾಯಣದ ಭಾವಾರ್ಥವಾಗಿದೆ.

## 8.3 ಶ್ರೀರಾಮ ಭುಜಂಗಪ್ರಯಾತ ಸ್ತೋತ್ರಂ

**ವಿಶುದ್ಧಂ ಪರಂ ಸಚ್ಚಿದಾನಂದರೂಪಂ ಗುಣಾಧಾರಮಾಧಾರಹೀನಂ ವರೇಣ್ಯಂ ।**
**ಮಹಾಂತಂ ವಿಭಾಂತಂ ಗುಹಾಂತಂ ಗುಣಾಂತಂ ಸುಖಾಂತಂ ಸ್ವಯಂ ಧಾಮ ರಾಮಂ ಪ್ರಪದ್ಯೇ ॥1॥**

ಭಾವಾರ್ಥ - ಪರಿಶುದ್ಧನೂ ಉತ್ತಮನೂ ಸಚ್ಚಿದಾನಂದ ಸ್ವರೂಪನೂ ಸೃಷ್ಟಿ ಸ್ಥಿತಿ ಲಯಾದಿ ಮೂರು ಗುಣಗಳಿಗೆ ಆಧಾರನೂ, ಸ್ವಂತ ಆಧಾರ ಇಲ್ಲದವನೂ, ಶ್ರೇಷ್ಠನೂ ಮಹಾಪುರುಷನೂ ಜ್ಯೋತಿಸ್ವರೂಪನೂ ಆಗಿ, ನಂಬಿದವರ ಹೃದಯಗುಹೆಯಲ್ಲಿ ಇರುವವನೂ ಸದ್ಗುಣ ಸಂಪನ್ನನೂ ಹಾಗೆಯೇ

ಸುಖಾನುಭವಂಗಳಿಗೆ ಮೇರೆಯಾಗಿರುವವನೂ, ಆಗಿದ್ದು ಸ್ವತ, ಪರಂಧಾಮನೂ ಆಗಿರುವಂತಹಾ ಶ್ರೀರಾಮನಿಗೆ ನಾನು ಶರಣು ಹೊಗುತ್ತೇನೆ.

**ಯದಾವರ್ಣಯತ್ಕರ್ಣಮೂಲೇಂತಕಾಲೇ ಶಿವೋ ರಾಮ ರಾಮೇತಿ ರಾಮೇತಿ ಕಾಶ್ಯಾಂ । ತದೇಕಂ ಪರಂ ತಾರಕಬ್ರಹ್ಮರೂಪಂ ಭಜೇಶಂ ಭಜೇಶಂ ಭಜೇಶಂ ಭಜೇಶಂ ॥2॥**

ಭಾವಾರ್ಥ - ಕಾಶಿಯಲ್ಲಿ, ಜೀವಾಂತ್ಯದ ಹೊತ್ತಿನಲ್ಲಿ ಜೀವ ಹೋಗುವಂತಹಾ ಆ ಶರೀರದ ಕಿವಿಯಲ್ಲಿ ಆ ಶಿವನು ರಾಮ ರಾಮ ಅನ್ನುವ ಯಾವ ತಾರಕನಾಮವನ್ನು ಉಪದೇಶ ಮಾಡುವನೋ ಆ ಅದ್ವಿತೀಯ,ಪರಮಶ್ರೇಷ್ಠ ತಾರಕಬ್ರಹ್ಮ ಸ್ವರೂಪನೇ ಆಗಿರುವ ಶ್ರೀರಾಮನನ್ನು ನಾನು ಸದಾ ಭಜಿಸುತ್ತೇನೆ.

**ಪುರಃ ಪ್ರಾಂಜಲೀನಾಂಜನೇಯಾದಿ ಭಕ್ತಾನ್ ಸ್ವಚಿನ್ಮುದ್ರಯಾ ಭದ್ರಾಯ ಬೋಧಯಂತಂ । ಭಜೇಸ್ಹಂ ಭಜೇಶಂ ಸದಾ ರಾಮಚಂದ್ರಂ ತ್ವದನ್ಯಂ ನ ಮನ್ಯೇ ನ ಮನ್ಯೇ ನ ಮನ್ಯೇ ॥3॥**

ಭಾವಾರ್ಥ - ತನ್ನೆದುರಿಗೆಯೇ ಕುಳಿತುಗೊಂಡಿರುವ ಆಂಜನೇಯನೇ ಅದಿಯಾದ ಭಕ್ತರಿಗೆ ಮಂಗಲಮಯವಾದ ಚಿನ್ಮುದ್ರೆಯಲ್ಲಿ ಉಪದೇಶ ಮಾಡುತ್ತಾ ಇರುವ ಶ್ರೀರಾಮಚಂದ್ರನನ್ನು ನಾನು ಸದಾ ಭಜಿಸುವೆನು. ರಾಮಾ, ನಿನ್ನನ್ನು ಹೊರತಾಗಿ ಇನ್ನೊಂದು ವಿಷಯವನ್ನು ನನ್ನಿಂದ ಮನಸ್ಸಿನಲ್ಲಿ ಕೂಡಾ ಸ್ಮರಣೆ ಮಾಡಲು ಸಾಧ್ಯವಿಲ್ಲ.

**ಯದಾ ಮತ್ಸಮೀಪಂ ಕೃತಾಂತಸ್ಸಮೇತ್ಯ ಪ್ರಚಂಡೈಶ್ಚ ಕೋಪೈರ್ಭಟೈರ್ಭೀಷಯೇನ್ಮಾಂ । ತದಾವಿಷ್ಕರೋಷಿ ತ್ವಿದೀಯಂ ಸ್ವರೂಪಂ ಸದಾಪತ್ಪ್ರಣಾಶಂ ಸ ಕೋದಂಡ ಬಾಣಂ ॥4॥**

ಭಾವಾರ್ಥ - ಆ ಯಮನು ತನ್ನ ಸೇವಕರ ಜತೆಯಲ್ಲಿ ನನ್ನ ಹತ್ತಿರಕ್ಕೆ ಬಂದು ಭಾರೀ ಕೋಪದಿಂದ ನನ್ನನ್ನು ಹೆದರಿಸುವಾಗ ಯಾವಾಗಲೂ ಆಪತ್ತು ವಿಪತ್ತುಗಳನ್ನು ಪರಿಹರಿಸುವ ನೀನು ಕೋದಂಡ ಬಾಣ ಸಹಿತನಾಗಿ ನಿನ್ನ ನಿಜ ಸ್ವರೂಪವನ್ನು ಬಹಿರಂಗಗೊಳಿಸುವಿ.

**ನಿಜೇ ಮಾನಸೇ ಮಂದಿರೇ ಸನ್ನಿದೇಹಿ ಪ್ರಸೀದ ಪ್ರಸೀದ ಪ್ರಭೋ ರಾಮಚಂದ್ರ ।**
**ಸ ಸೌಮಿತ್ರಿಣಾ ಕೈಕಯೀನಂದನೇನ ಸ್ವಶಕ್ತ್ಯಾನುಭಕ್ತ್ಯಾ ಚ ಸಂಸೇವ್ಯಮಾನ ॥5॥**

ಭಾವಾರ್ಥ - ಸೀತೆ -ಭರತ- ಲಕ್ಷ್ಮಣರಿಂದಲೂ ಭಕ್ತಸಮೂಹದಿಂದಲೂ ಪೂಜಿಸಿಗೊಂಬ ದೊರೆಯೇ, ರಾಮಚಂದ್ರಾ! ನನ್ನನ್ನು ಪಾಲಿಸುವವನಾಗು. ನನ್ನ ಮನೋ ಮಂದಿರಲ್ಲಿ ಸದಾ ನೆಲೆಗೊಳ್ಳು.

**ಸ್ವಭಕ್ತಾಗ್ರಗಣ್ಯೈಃ ಕಪೀಶೈರ್ಮಹೀಶೈ- ರನೀಕೈರನೇಕೈಶ್ಚ ರಾಮ ಪ್ರಸೀದ ।**
**ನಮಸ್ತೇ ನಮೋಸ್ತ್ವೀಶ ರಾಮ ಪ್ರಸೀದ ಪ್ರಶಾದಿ ಪ್ರಶಾದಿ ಪ್ರಕಾಶಂ ಪ್ರಭೋ ಮಾಂ ॥6॥**

ಭಾವಾರ್ಥ - ಹೇ ರಾಮಚಂದ್ರಾ! ನಿನ್ನ ಭಕ್ತ ಶ್ರೇಷ್ಠರುಗಳಿಂದಲೂ, ಕಪಿ ಶ್ರೇಷ್ಠರುಗಳಿಂದಲೂ, ರಾಜರುಗಳಿಂದಲೂ ಮಿತಿಯಿಲ್ಲದಿರುವ ಸೈನ್ಯದಿಂದಲೂ ಕೂಡಿ ನನ್ನನ್ನು ಪಾಲನೆ ಮಾಡು. ಹೇ! ಪರಮೇಶ್ವರಾ! ನಿನಗೆ ನನ್ನ ಪ್ರಣಾಮಂಗಳು. ರಾಮಾ ನನ್ನನ್ನು ಪಾಲಿಸು. ದೊರೆಯೇ! ನನಗೆ ಸರಿಯಾದ ಮಾರ್ಗದರ್ಶನ ಮಾಡು

**ನಮಸ್ಸಚ್ಚಿದಾನಂದರೂಪಾಯ ತಸ್ಮೈ ನಮೋ ದೇವ ದೇವಾಯ ರಾಮಾಯ ತುಭ್ಯಂ । ನಮೋ ಜಾನಕೀಜೀವಿತೇಶಾಯ ತುಭ್ಯಂ ನಮಃ ಪುಂಡರೀಕಾಯತಾಕ್ಷಾಯ ತುಭ್ಯಂ ॥7॥**

ಭಾವಾರ್ಥ - ಸಚ್ಚಿದಾನಂದ ಸ್ವರೂಪನೂ ಆಗಿರುವ ನಿನಗೆ ನನ್ನ ನಮಸ್ಕಾರಗಳು. ದೇವದೇವನೂ ಶ್ರೀರಾಮಚಂದ್ರನೂ ಆಗಿರುವ ನಿನಗೆ ಇದೋ ನನ್ನ ನಮಸ್ಕಾರಂಗಳು. ಸೀತಾದೇವಿಯ ಜೀವಕ್ಕೆ ಒಡೆಯನಾಗಿರುವ ನಿನಗೆ ನನ್ನ ನಮಸ್ಕಾರಂಗಳು. ಕಮಲನಯನದ ಪುಂಡರೀಕನಾಗಿರುವ ಶ್ರೀರಾಮಾ ನಿನಗೆ ಇದೋ ನನ್ನ ನಮಸ್ಕಾರಂಗಳು.

**ನಮೋ ಭಕ್ತಿಯುಕ್ತಾನುರಕ್ತಾಯಾ ತುಭ್ಯಂ ನಮಃ ಪುಣ್ಯಪುಂಜೈಕಲಭ್ಯಾಯ ತುಭ್ಯಂ । ನಮೋ ವೇದ ವೇದ್ಯಾಯ ಚಾದ್ಯಾಯ ಪುಂಸೇ ನಮಃ ಸುಂದರಾಯೇಂದಿರಾ ವಲ್ಲಭಾಯ ॥8॥**

ಭಾವಾರ್ಥ - ಭಕ್ತಾದಿಗಳಲ್ಲಿ ಪ್ರೀತಿ ಹೊಂದಿರುವ ನಿನಗೆ ಎನ್ನ ಪ್ರಣಾಮಂಗಳು. ಪೂರ್ವಜನ್ಮ ಪುಣ್ಯ ಬಲದಿಂದ ದೊರಕುವ ನಿನಗೆ ನನ್ನ ಪ್ರಣಾಮಂಗಳು. ವೇದಂಗಳಿಂದ ತಿಳಿದುಬರುವ ಹಾಗೆ ಜಗತ್ತಿನ ಆದಿ ಪುರುಷನಾದ ನಿನಗೆ ನನ್ನ ಪ್ರಣಾಮಂಗಳು. ಚೆಲುವನೂ ಇಂದಿರಾವಲ್ಲಭನೂ ಆಗಿರುವ ನಿನಗಿದೋ ನನ್ನ ಪ್ರಣಾಮಂಗಳು.

**ಶಿಲಾಪ್ಿ ತ್ವದಂಘ್ರಿ ಕ್ಷಮಾಸಂಗಿರೇಣು- ಪ್ರಸಾದಾದ್ಧಿ ಚೈತನ್ಯಮಾಧತ್ತ ರಾಮ ।**
**ನರಸ್ತ್ವತ್ಪದದ್ವಂದ್ವಸೇವಾ ವಿಧಾನಾತ್ ಸುಚೈತನ್ಯಮೇತೀತಿ ಕಿಂ ಚಿತ್ರಮತ್ರ ॥9॥**

ಭಾವಾರ್ಥ - ಹೇ ರಾಮಾ! ನಿನ್ನ ಪಾದಧೂಳಿಯ ಪ್ರಸಾದಿಂದ ಕಲ್ಲು ಕೂಡಾ ಜೀವ ಚೈತನ್ಯವನ್ನು ಪಡೆಯುತ್ತದೆ. ಹೀಗಿರುವಾಗ ನಿನ್ನ ದಿವ್ಯ ಚರಣಯುಗಳಂಗಳ ಸೇವೆಯಿಂದ ಮನುಷ್ಯ ಒಳ್ಳೆಯ ರೀತಿಯ ಚೈತನ್ಯ ಪಡೆತ್ತಾನೆ ಅನ್ನೋರಲ್ಲಿ ಆಶ್ಚರ್ಯವೇನು?

**ಪವಿತ್ರಂ ಚರಿತ್ರಂ ವಿಚಿತ್ರಂ ತ್ವದೀಯಂ ನರಾ ಯೇ ಸ್ಮರಂತ್ಯನ್ವಹಂ ರಾಮಚಂದ್ರ ।**
**ಭವಂತಂ ಭವಾಂತಂ ಭರಂತಂ ಭಜಂತೋ ಲಭಂತೇ ಕೃತಾಂತಂ ನ ಪಶ್ಯಂತ್ಯತೋಽನ್ತ್ಯೇ ॥10॥**

ಭಾವಾರ್ಥ - ರಾಮಚಂದ್ರಾ! ಆಶ್ಚರ್ಯಕರವೂ ಪವಿತ್ರವೂ ಆಗಿರುವ ನಿನ್ನ ಚರಿತ್ರೆಯನ್ನು ಯಾವ ಮನುಷ್ಯರು ಹಗಲಿರುಳೂ ಸ್ಮರಣೆ ಮಾಡುವರೋ, ಅದೇರೀತಿ ಸಂಸಾರ ನಾಶಕನೂ ಸಂಸಾರ ಪೋಷಕನೂ ಆಗಿರುವ ನಿನ್ನನ್ನು ಭಜಿಸುವರೋ, ಅವರು ಸಾಯುವ ಸಮಯದಲ್ಲಿ ಯಮನಲ್ಲಿ ಲೀನ ಆಗದೆ ನಿನ್ನಲ್ಲೇ ಲೀನರಾಗ್ತಾರೆ.

**ದಶಗ್ರೀವಮುಗ್ರಂ ಸಪುತ್ರಂ ಸಮಿತ್ರಂ ಸರಿದ್ದುರ್ಗಮಧ್ಯಸ್ಥ ರಕ್ಷೋಗಣೇಶಂ ।**
**ಭವಂತಂ ವಿನಾ ರಾಮ ವೀರೋ ನರೋ ವಾ- ಸ್ಸುರೋ ವಾಸ್ಮರೋ ವಾ ಜಯೇತ್ಯಸ್ತ್ರಿಲೋಕ್ಯಾಂ ॥11॥**

ಭಾವಾರ್ಥ - ಒಡನಾಡಿಗಳು ಹಾಗೂ ಮಕ್ಕಳ ಸಹಿತ ಸಮುದ್ರದ ನಡುವೆ ಕೋಟೆಲಿಯಲ್ಲಿದ್ದವನೂ ಉಗ್ರನೂ ರಾಕ್ಷಸರುಗಳಿಗೆ ಒಡೆಯನೂ ಆಗಿರುವ

ರಾವಣನನ್ನು ಗೆಲ್ಲಲು ನಿನ್ನನ್ನು ಬಿಟ್ಟರೆ ಮೂರು ಲೋಕಂಗಳಲ್ಲೂ ವೀರರಾಗಿದ್ದ ಮನುಷ್ಯರಿಗಾಗಲೀ ರಾಕ್ಷಸರುಗಳಿಗಾಗಲೀ ಬೇರೆ ಯಾವಾತಾನಿಗೂ ಸಾಧ್ಯವಾಗುತ್ತಿರಲಿಲ್ಲ.

**ಸದಾ ರಾಮ ರಾಮೇತಿ ರಾಮಾಮೃತಂ ತೇ ಸದಾ ರಾಮಮಾನಂದನಿಷ್ಯಂದಕಂದಂ**
**ಪಿಬಂತಂ ನಮಂತಂ ಸುದಂತಂ ಹಸಂತಂ ಹನೂಮಂತಮಂತರ್ಭಜೇ ತಂ ನಿತಾಂತಂ ॥12॥**

ಭಾವಾರ್ಥ - ಯಾವಾಗಲೂ ಸಂತೋಷವನ್ನೂ, ಆನಂದವನ್ನೂ ಸುರಿವ ನಿನ್ನ ಅಮೃತ ಸದೃಶವಾಗಿರುವ ರಾಮ ನಾಮವನ್ನು ಸದಾ ರಾಮ ರಾಮಾ ಎಂದು ಜಪಿಸುತ್ತಾ ಕುಣಿಯುತ್ತಲೂ ನಮಸ್ಕಾರ ಮಾಡುತ್ತಲೂ ಇರುವ, ಭಾರೀ ಚೆಲುವಿನ ದಂತಗಳಿರುವ, ಯಾವಾಗಲೂ ಸಂತೋಷದಿಂದ ಕೂಡಿರುವ ಮೊಗದ ಹನುಮಂತನನ್ನು ನಾನು ಹೃದಯಾಂತರಾಳದಿಂದ ತುಂಬಾ ಭಜಿಸುತ್ತೇನೆ.

**ನಮಸ್ತೇ ಸುಮಿತ್ರಾ ಸುಪುತ್ರಾಭಿವಂದ್ಯ ನಮಸ್ತೇ ಸದಾ ಕೈಕಯೀನಂದನೇಡ್ಯ ।**
**ನಮಸ್ತೇ ಸದಾ ವಾನರಾಧೀಶ ವಂದ್ಯ ನಮಸ್ತೇ ನಮಸ್ತೇ ಸದಾ ರಾಮಚಂದ್ರ ॥13॥**

ಭಾವಾರ್ಥ - ಸುಮಿತ್ರೆಯ ಸುಪುತ್ರನಾಗಿರುವಂತಹಾ ಲಕ್ಷ್ಮಣನಿಂದ ನಮಸ್ಕಾರಂಗಳನ್ನು ಸ್ವೀಕಾರ ಮಾಡುತ್ತಾ ಇರುವ ನಿನಗೆ ಸದಾ ನನ್ನ ನಮಸ್ಕಾರಂಗಳು. ಕೈಕಯೀತನಯ ಭರತನಿಂದ ಸ್ತುತಿಗಳನ್ನು ಸ್ವೀಕಾರ ಮಾಡ್ತಾ ಇರುವ ನಿನಗೆ ಸದಾ ನನ್ನ ನಮಸ್ಕಾರಂಗಳು. ಯಾವತ್ತೂ ವಾನರಾಧೀಶ ಹನುಮಂತನಿಂದ ನಮಸ್ಕಾರಂಗಳನ್ನು ಸ್ವೀಕಾರ ಮಾಡ್ತಾ ಇರುವ ನಿನಗೆ ಸದಾ ನನ್ನ ನಮಸ್ಕಾರಂಗಳು. ಹೇ ರಾಮಚಂದ್ರಾ! ನಿನಗೆ ಇದೋ ಯಾವತ್ತೂ ನನ್ನ ನಮಸ್ಕಾರಂಗಳು ಸಲ್ಲುತ್ತಿವೆ.

**ಪ್ರಸೀದ ಪ್ರಸೀದ ಪ್ರಚಂಡ ಪ್ರತಾಪ ಪ್ರಸೀದ ಪ್ರಸೀದ ಪ್ರಚಂಡಾರಿಕಾಲನ್ ।**
**ಪ್ರಸೀದ ಪ್ರಸೀದ ಪ್ರಪನ್ನಾನುಕಂಪಿನ್ ಪ್ರಸೀದ ಪ್ರಸೀದ ಪ್ರಭೋ ರಾಮಚಂದ್ರ ॥14॥**

ಭಾವಾರ್ಥ - ಹೇ ಪ್ರಚಂಡ ಪರಾಕ್ರಮಿಯೇ! ಪ್ರಸನ್ನನಾಗು. ಪ್ರಚಂಡ ಶತ್ರುಗಳಿಗೂ ಕಾಲರೂಪನಾದವನೇ ಪ್ರಸನ್ನನಾಗು. ಶರಣು ಹೊಕ್ಕವರ ಬಗ್ಗೆ ಕರುಣೆ ತೋರಿಸುವವನೇ ಪ್ರಸನ್ನನಾಗು. ಪ್ರಭೋ! ರಾಮಚಂದ್ರಾ! ಪ್ರಸನ್ನನಾಗು.

**ಭುಜಂಗಪ್ರಯಾತಂ ಪರವೇದಸಾರಂ ಮುದಾ ರಾಮಚಂದ್ರಸ್ಯ ಭಕ್ತ್ಯಾ ಚ ನಿತ್ಯಂ ।**
**ಪಠನ್ ಸಂತತಂ ಚಿಂತಯನ್ ಸ್ವಾಂತರಂಗೇ ಸ ಏವ ರಾಮಚಂದ್ರಃ ಸ ಧನ್ಯಃ ॥15॥**

ಭಾವಾರ್ಥ - ಶ್ರೇಷ್ಠವಾಗಿರುವ ವೇದಂಗಳ ಸಾರ ರೂಪವೇ ಆಗಿರುವ ಈ ಶ್ರೀರಾಮ ಭುಜಂಗ ಪ್ರಯಾತ ಸ್ತೋತ್ರಂಗಳನ್ನು ಯಾರು ನಿತ್ಯವೂ ಭಕ್ತಿಯಿಂದಲೂ ಸಂತೋಷದಿಂದಲೂ ಯಾವಾಗಲೂ ಪಾರಾಯಣ ಮಾಡುವನೋ, ಅಂತರಂಗಲ್ಲಿಯೇ ಯಾರು ಸದಾ ಯೋಚಿಸುತ್ತಾನೋ ಅಂತಹಾ ಧನಯ್ಉ ಸ್ವತ, ರಾಮಚಂದ್ರ ಸ್ವರೂಪನೇ ಆಗುವನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀರಾಮ ಭುಜಂಗಪ್ರಯಾತಸ್ತೋತ್ರಂ ಸಂಪೂರ್ಣಂ ॥

## 8.4 ಶ್ರೀರಾಮಸ್ತುತಿ

**ಯತಸರ್ವಾಣಿ ಭೂತಾನಿ ಪ್ರತಿಭಾಂತಿ ಸ್ಥಿತಾನಿ ಚ ।**
**ಯತ್ರೈವೋಪಶಮಂ ಯಾಂತಿ ತಸ್ಮೈ ಭೂತಾತ್ಮನೇ ನಮಃ ॥1॥**

ಭಾವಾರ್ಥ - ಯಾರಿಂದ ಜೀವರಾಶಿಗಳೆಲ್ಲವೂ ಸೃಷ್ಟಿಯಾಯಿತೋ, ಯಾರಲ್ಲಿ ಎಲ್ಲವೂ ಇದೆಯೋ, ಕೊನೆಗೆ [ಅಂತ್ಯದಲ್ಲಿ] ಎಲ್ಲವೂ ಯಾರಲ್ಲಿ ಲೀನ ಆಗುತ್ತೋ ಹಾಗಿರುವ ಸತ್ಯಾತ್ಮಂಗೆ ನನ್ನ ನಮಸ್ಕಾರಂಗಳು.

**ಜ್ಞಾತಾ ಜ್ಞಾನಂ ತಥಾ ಜ್ಞೇಯಂ ದ್ರಷ್ಟಾ ದರ್ಶನ ದೃಶ್ಯಭೂಃ ।**
**ಕರ್ತಾಹೇತುಃ ಕ್ರಿಯಾ ಯಸ್ಮಾತ್ ತಸ್ಮೈ ಜ್ಞಪ್ತ್ಯಾತ್ಮನೇ ನಮಃ ॥2॥**

ಭಾವಾರ್ಥ - ಯಾರು ತಿಳುವಳಿಕೆಯ ಮೂಲವಾಗಿರುವನೋ, ಯಾರು ತಿಳುವಳಿಕೆಯನ್ನು ಹೊಂದಿರುವವನೋ, ಯಾರು ಸಾಕ್ಷಿಯೋ, ಯಾರು ದರ್ಶನ

ಕೊಡುವವನೋ,ಯಾರು ಮನೋಹರರೂಪನೋ,ಯಾರು ಕರ್ತೃ -ಕರ್ಮಂಗಳಿಗೆ ಕಾರಣ ಆಗಿರುವನೋ ಅಂತಹಾ ಜ್ಞಾನ ನಿಧಿಗೆ ನನ್ನ ನಮಸ್ಕಾರಂಗಳು ॥

**ಸ್ಫುರಂತಿ ಸೀಕರಾ ಯಸ್ಮಾದಾನಂದಸ್ಯಾಂಬರೇಸ್ವನೌ ।**
**ಸರ್ವೇಷಾಂ ಜೀವನಂ ತಸ್ಮೈ ಬ್ರಹ್ಮಾನಂದಾತ್ಮನೇ ನಮಃ ॥3॥**

ಭಾವಾರ್ಥ - ಯಾರಿಂದಾಗಿ ಆಕಾಶ ಮತ್ತು ಭೂಮಿಯಲ್ಲಿ ಬೀಳುವ ಸಂತೋಷದ ಹನಿಗಳೇ ಎಲ್ಲರ ಜೀವನವಾಗಿದೆಯೋ, ಅಂತಹಾ ಬ್ರಹ್ಮಾನಂದಾತ್ಮಂಗೆ ನನ್ನ ನಮಸ್ಕಾರಂಗಳು ॥

**ದಿವಿ ಭೂಮೌ ತಥಾಸ್ಕಾಶೇ ಬಹಿರಂತಶ್ಚ ಮೇ ವಿಭುಃ ।**
**ಯೋ ವಿಭಾತ್ಯವಭಾಸಾತ್ಮಾ ತಸ್ಮೈ ಸರ್ವಾತ್ಮನೇ ನಮಃ ॥4॥**

ಭಾವಾರ್ಥ - ಯಾರು ಸ್ವರ್ಗಲ್ಲಿದಲ್ಲಿಯೂ ಭೂಮಿಯಲ್ಲಿಯೂ ಆಕಾಶಲ್ಲಿದಲ್ಲಿಯೂ ನನ್ನ ಒಳಗೂ ಹೊರಗೂ ಕಾಣಿಸಿಕೊಳ್ಳುವನೋ, ಯಾರು ತ್ರಿಮೂರ್ತಿ ಸ್ವರೂಪನೋ ಅದೇ ತೆರನಾಗಿ ಜ್ಞಾನ ಸಂಪನ್ನನೋ ಅಂತಹಾ ಸರ್ವಾತ್ಮಂಗೆ ನನ್ನ ನಮಸ್ಕಾರಂಗಳು.

**ಯಸ್ಮಿನ್ ಸರ್ವಂ ಯಸ್ಯ ಸರ್ವಂ ಯತಸರ್ವಂ ಯಸ್ಮಾ ಇದಂ ।**
**ಯೇನ ಸರ್ವಂ ಯದ್ಧಿ ಸರ್ವಂ ತತ್ಸತ್ಯಂ ಸಮುಪಾಸ್ಮಹೇ ॥5॥**

ಯಾವುದರಲ್ಲಿ ಎಲ್ಲವೂ ಇರುವುದೋ, ಯಾವುದಕ್ಕೆ ಎಲ್ಲವೂ ಸೇರಿರಿರುವುದೋ, ಯಾವುದರಿಂದ ಎಲ್ಲವೂ ಬಂದಿದೆಯೋ, ಯಾವುದಕ್ಕಾಗಿ ಎಲ್ಲವೂ ಇರುವುದೋ, ಯಾವುದು ಎಲ್ಲವೂ ಅದುವೇ ಆಗಿದೆಯೋ ಆ ಸತ್ಯವನ್ನು ನಾನು ಉಪಾಸನೆ ಮಾಡುತ್ತೇನೆ.

॥ ಇತಿ ಯೋಗವಾಸಿಷ್ಠಾಂತರ್ಗತ ಶ್ರೀರಾಮಸ್ತುತಿಃ ಸಂಪೂರ್ಣಂ ॥

## 8.5 ಶ್ರೀರಾಮ ಸ್ತೋತ್ರಂ

**ಯಃ ಪೃಥ್ವೀಭರವಾರಣಾಯ ದಿವಿಜೈಃ ಸಂಪ್ರಾರ್ಥಿತಶ್ಚಿನ್ಮಯಃ ಸಂಜಾತಃ ಪೃಥಿವೀತಲೇ ರವಿಕುಲೇ ಮಾಯಾಮನುಷ್ಯೋಽವ್ಯಯಃ । ನಿಶ್ಚಕ್ರಂ ಹತರಾಕ್ಷಸಃಪುನರಗಾದ್ ಬ್ರಹ್ಮತ್ವಮಾದ್ಯಂ ಸ್ಥಿರಾಂ ಕೀರ್ತಿಂ ಪಾಪಹರಾಂ ವಿಧಾಯ ಜಗತಾಂ ತಂ ಜಾನಕೀಶಂ ಭಜೇ ॥1॥**

ಭಾವಾರ್ಥ - ಭೂಮಿಭಾರವನ್ನು ನಾಶಮಾಡುವುದಕ್ಕಾಗಿ ದೇವತೆಗಳು ಮಾಡಿದ ಪ್ರಾರ್ಥನೆಯನ್ನು ಮನ್ನಿಸಿ ರವಿ ಕುಲದಲ್ಲಿ ಮಾಯಾರೂಪದ ಮಾನುಷವೇಷದಲ್ಲಿ ಯಾರು ಹುಟ್ಟಿದನೋ, ರಾಕ್ಷಸರನ್ನು ಶಕ್ತಿಹೀನರನ್ನಾಗಿಸಿ ನಾಶಮಾಡಿ ಮತ್ತೆ ಶಾಶ್ವತವಾದಂತಹಾ ಪಾಪನಾಶಕವಾಗಿರುವಂತಹಾ ಕೀರ್ತಿಯನ್ನು ಈ ಪ್ರಪಂಚದಲ್ಲಿ ಸ್ಥಾಪಿಸಿ, ಪುನಃ ಯಾವಾತನು ತನ್ನ ಮೊದಲಿನ ಬ್ರಹ್ಮತ್ವವನು ಹೊಂದಿದನೋ ಅಂತಹಾ ಚಿನ್ಮಯ ಸ್ವರೂಪೀ ಆಗಿರುವ ಜಾನಕೀಶನನ್ನು ನಾನು ಭಜಿಸುವೆ.

**ವಿಶ್ವೋದ್ಭವಸ್ಥಿತಿಲಯಾದಿಷು ಹೇತುಮೇಕಂ ಮಾತಾಶ್ರಯಂ ವಿಗತಮಾಯಚಿಂತ್ಯ ಮೂರ್ತಿಂ । ಆನಂದಸಾಂದ್ರಮಮಲಂ ನಿಜಭೋಧರೂಪಂ ಸೀತಾಪತಿಂ ವಿದಿತತತ್ವಮಹಂ ನಮಾಮಿ ॥2॥**

ಭಾವಾರ್ಥ - ಬ್ರಹ್ಮಾಂಡದ ಉತ್ಪತ್ತಿ-ಸ್ಥಿತಿ-ನಾಶಂಗಳಿಗೆ ಆದ್ಯ ಕಾರಣನಾಗಿ ಮಾಯಾಶಕ್ತಿಗೆ ಆಶ್ರಯದಾತನೂ ಆಗಿ, ಮಾಯಾರಹಿತನಾಗಿ, ಅಚಿಂತ್ಯ ಮೂರ್ತಿಯಾಗಿ, ಆನಂದ ಸ್ವರೂಪವಾಗಿ, ವಿಮಲಸ್ವರೂಪವನ್ನು ಹೊಂದಿದ್ದು, ಸತ್ಯವನ್ನು ಭೋಧಿಸುವ ರೂಪನೂ ಆಗಿದ್ದು, ತತ್ವಂಗಳಲ್ಲಿ ಪರಿಣಿತನಾಗಿರುವ ಸೀತಾಪತಿಗೆ ನಾನು ನಮಸ್ಕರಿಸುವೆ.

**ಪರಧನ-ಪರಧಾರ-ವರ್ಜಿತಾನಾಂ ಪರಗುಣಭೂತಿಸುತುಷ್ಟಮಾನಸಾನಾಂ । ಪರಹಿತನಿರತಾತ್ಮನಾಂ ಸುಸೇವ್ಯಂ ರಘುವರಮಂಭುಜಲೋಚನಂ ಪ್ರಪದ್ಯೇ ॥3॥**

ಭಾವಾರ್ಥ - ಪರರ ಸಂಪತ್ತು ಹಾಗೂ ಪರಸ್ತ್ರೀಯರನ್ನು ತ್ಯಜಿಸಿದವರಿಗೆ, ಅನ್ಯರ ಸಂಪತ್ತು ಮತ್ತು ಸದ್ಗುಣಂಗಳನ್ನು ನೋಡಿ ಸಂತೋಷ ಪಡುವವರಿಗೆ, ಅಲ್ಲದೆ

ಪರಹಿತದಲ್ಲಿ ನಿರತರಾಗಿರುವವರಿಗೆ ಸುಲಭವಾಗಿ ಸೇವೆಗೆ ಲಭ್ಯವಾಗುವವನೂ, ಅಂಬುಜಾಕ್ಷನೂ ಆಗಿರುವ ರಘುವರನಿಗೆ ನಾನು ಶರಣಾಗುವುವೆ.

**ಅಹಂ ಪ್ರಪನ್ನೋಸ್ಮಿ ಪದಾಂಬುಜಂ ಪ್ರಭೋ ಭವಾಪವರ್ಗಂ ತವ ಯೋಗಿಭಾವಿತಂ ।**
**ಯಥಾಂಜಸಾಜ್ಞಾನಮಪಾರವಾರಿಧಿಂ ಸುಖಂ ತರಿಷ್ಯಾಮಿ ತಥಾನುಶಾಧಿ ಮಾಂ ॥4॥**

ಭಾವಾರ್ಥ - ಹೇ ! ಪ್ರಭೋ! ಯೋಗಿಗಳು ಧ್ಯಾನ ಮಾಡುವ, ಸಂಸಾರಸಾಗರದಿಂದ ಪಾರು ಮಾಡುವ, ನಿನ್ನ ಆ ಚರಣಾರವಿಂದಂಗಳಿಗೆ ನಾನು ಮೊರೆಹೊಗುತ್ತಿದ್ದೇನೆ. ಮಿತಿಯಿಲ್ಲದ ಅಜ್ಞಾನವೆನ್ನುವ ಸುಮುದ್ರದಿಂದ ನಾನು ಅತಿ ಶೀಘ್ರವಾಗಿ ಹಾಗೂ ಸುಖವಾಗಿ ದಾಟುವ ಹಾಗೆ ನನಗೆ ಹಾದಿ ತೋರಿಸಿಕೊಡು.

॥ ಇತಿ ಅಧ್ಯಾತ್ಮ ರಾಮಾಯಣಾಂತರ್ಗತ ಶ್ರೀರಾಮ ಸ್ತೋತ್ರಂ ಸಂಪೂರ್ಣಂ ॥

## 8.6 ಬ್ರಹ್ಮ ಕೃತ ರಾಮ ಸ್ತವ

**ಭವನ್ನಾರಾಯಣೋ ದೇವಃ ಶ್ರೀಮಾಂಶ್ಚಕ್ರಾಯುಧೋ ವಿಭುಃ ।**
**ಏಕ ಶೃಂಗೋ ವರಾಹಸ್ತ್ವಂ ಭೂತಭವ್ಯಸಪತ್ನಜಿತ್ ॥1॥**

ಭಾವಾರ್ಥ - ಚಕ್ರವನ್ನು ಆಯುಧವನ್ನಾಗಿ ಧರಿಸಿಕೊಂಡಿರುವವನೂ, ಸರ್ವ ಜಗತ್ವ್ಯಾಪಕನೂ, ದೇವಾದಿ ದೇವನೂ ಆಗಿರುವ ಶ್ರೀಮನ್ನಾರಾಯಣನು ನೀನೇ . ಒಂಟಿ ದಾಡೆಯ ಆದಿ ವರಾಹನೂ ನೀನೇ, ಹಿಂದೆ ಹುಟ್ಟಿದ್ದ ಮತ್ತು ಮುಂದೆ ಹುಟ್ಟುವ ವೈರಿಗಳನ್ನು ಗೆಲ್ಲುವವನೂ ನೀನೇ .

**ಅಕ್ಷರಂ ಬ್ರಹ್ಮ ಸತ್ಯಂ ಚ ಮಧ್ಯೇ ಚಾಂತೇ ಚ ರಾಘವ ।**
**ಲೋಕಾನಾಂ ತ್ವಂ ಪರೋ ಧರ್ಮೋ ವಿಷ್ವಕ್ಸೇನಶ್ಚತುರ್ಭುಜಃ ॥2॥**

ಭಾವಾರ್ಥ - ಹೇ! ರಾಘವಾ, ನೀನೇ ಅಕ್ಷರ, ನೀನೇ ಬ್ರಹ್ಮ, ಮತ್ತು ಸತ್ಯ, ಆದಿಯಲ್ಲಿಯೂ ಮಧ್ಯದಲ್ಲಿಯೂ ಅಂತ್ಯದಲ್ಲಿಯೂ ಇರುವವನೂ ನೀನೇ. ಸರ್ವಲೋಕಂಗಳಲ್ಲಿಯೂ ಶ್ರೇಷ್ಟವಾಗಿರುವ ಧರ್ಮವೆಂದರೂ ನೀನೇ, ಸರ್ವ ವ್ಯಾಪೀಯಾಗಿರುವ ಸೇನೆ ಇರುವವನೂ ನೀನೇ, ಚತುರ್ಭುಜನೂ ನೀನೇ.

**ಶಾಂಙ್ರ್ಗಧನ್ವಾ ಹೃಷೀಕೇಶಃ ಪುರುಷಃ ಪುರುಷೋತ್ತಮಃ ।**
**ಅಜಿತಃ ಖಡ್ಗಧೃಗ್ವಿಷ್ಣುಃ ಕೃಷ್ಣಶ್ಚೈವ ಬೃಹದ್ಬಲಿಃ ॥3॥**

ಭಾವಾರ್ಥ - ಶಾಂಙ್ರ್ಗ ಅನ್ನುವ ಬಿಲ್ಲನ್ನು ಆಯುಧವಾಗಿ ನೀನೇ ಧರಿಸಿರುವವ. ಇಂದ್ರಿಯಗಳ ನಿಯಾಮಕನೂ ನೀನೇ, ಭಕ್ತರ ಹೃದಯ ಕಮಲದಲ್ಲಿ ವಾಸ ಮಾಡಿಗೊಂಡಿರುವವನೂ ನೀನೇ, ನೀನು ಪುರುಷರಲ್ಲಿ ಉತ್ತಮ ಆಗಿರುವ ಪುರುಷೋತ್ತಮ, ಹಾಗೆಯೇ ಯಾರಿಂದಲೂ ಸೋಲಿಸಲು ಅಸಾಧ್ಯನು, ಖಡ್ಗವನ್ನು ಆಯುಧವಾಗಿ ಹಿಡಿದಿಕೊಂಡಿರುವವನೂ ನೀನೇ. ನೀನು ಸರ್ವ ವ್ಯಾಪೀ. ಕೃಷ್ಣ ವರ್ಣದವನೂ ನೀನು, ಅಲ್ಲದೆ ಮಹತ್ತರವಾದ ಧಾರಣಾ ಶಕ್ತಿಯೋನೂ ನೀನೇ.

**ಸೇನಾನೀರ್ಗ್ರಾಮಣೀಶ್ಚ ತ್ವಂ ಬುದ್ಧಿಃ ಸತ್ವಂ ಕ್ಷಮಾ ದಮಃ ।**
**ಪ್ರಭವಶ್ಚಾಪ್ಯಯಶ್ಚ ತ್ವಮುಪೇಂದ್ರೋ ಮಧುಸೂದನಃ ॥4॥**

ಭಾವಾರ್ಥ - ನೀನು ದೇವತಾಸೇನೆಯ ನಿರ್ವಹಣೆ ಮಾಡುವವನು. ಅದಲ್ಲದ್ದೆ ದಿವ್ಯ ಜನಪದಾದಿಗಳನ್ನು ಪಾಲಿಸುವವನು. ನೀನೇ ಬುದ್ಧಿ ಶಕ್ತಿ, ಸತ್ವ, ಕ್ಷಮೆ ಮತ್ತು ಇಂದ್ರಾದಿ ಸರ್ವ ಗ್ರಹಗಳ ಪ್ರವರ್ತಕ, ಬ್ರಹ್ಮಾಂಡದ ಉತ್ಪತ್ತಿ, ನಾಶಕರ್ತ ನೀನು. ಇಂದ್ರನ ತಮ್ಮ ಆಗಿ ಹುಟ್ಟಿದೆ. ಮಧು ಅನ್ನುವ ರಕ್ಕಸನನ್ನುಸಂಹಾರ ಮಾಡಿದೆ.

**ಇಂದ್ರಕರ್ಮಾ ಮಹೇಂದ್ರಸ್ತ್ವಂ ಪದ್ಮನಾಭೋ ರಣಾಂತಕೃತ್ ।**
**ಶರಣ್ಯಂ ಶರಣ್ಯಂ ಚ ತ್ವಾಮಾಪುರ್ದಿವ್ಯಾ ಮಹರ್ಷಯ ।**
**ಸಹಸ್ರಶೃಂಗೋ ವೇದಾತ್ಮಾ ಶತಜಿಹ್ವೋ ಮಹರ್ಷಭಃ ॥5॥**

ಭಾವಾರ್ಥ - ಇಂದ್ರನ ಕರ್ತವ್ಯದ ಹಾಗೆ ಮಹೇಂದ್ರನಾದ ನೀನು ಕೂಡಾ ಪರಿಪಾಲನೆಯ ಕರ್ತವ್ಯ ಇರುವವನು. ಶ್ರೇಷ್ಟವಾಗಿರುವ ಐಶ್ವರ್ಯ ಸಂಪನ್ನನೂ ನೀನೇ, ನೀನು ಪದ್ಮನಾಭ . ರಣರಂಗದಲ್ಲಿ ಶತ್ರುಗಳನ್ನು ನಾಶ ಮಾಡುವ ಶಕ್ತ ನೀನು. ಶರಣಾಗತಿ ಹೊಂದಲು ಅರ್ಹ ವ್ಯಕ್ತಿ ನೀನು ಅನ್ನೋ ಕಾರಣಕ್ಕೆ ನಿನ್ನನ್ನೇ ರಕ್ಷಕ ಎಂದು ದಿವ್ಯ ಶಕ್ತಿ ಇರುವ ಮಹರ್ಷಿಗಳು ಹೇಳಿದ್ದರು. ಸಾವಿರಾರು

ಶಾಖೆಗಳಿರುವ ಬೇರೆ ಬೇರೆ ರೀತಿಗಳಲ್ಲಿ ಪ್ರೇರಣಾ ಶಕ್ತಿಯನ್ನು ಹೊಂದಿರುವ ವೇದಗಳಿಗೆ ನೀನು ಆತ್ಮ ಶಕ್ತಿ. ಶ್ರೇಷ್ಠರಲ್ಲಿ ಶ್ರೇಷ್ಠ.

**ತ್ವಂ ತ್ರಯಾಣಾಂ ಹಿ ಲೋಕಾನಾಮಾದಿಕರ್ತಾ ಸ್ವಯಂಪ್ರಭು ।**
**ಸಿದ್ಧಾನಾಮಪಿ ಸಾಧ್ಯಾಮಾಶ್ರಯಶ್ಚಾಸಿ ಪೂರ್ವಜಃ ॥6॥**

ಭಾವಾರ್ಥ - ಮೂರು ಲೋಕಗಳಿಗೂ ನೀನು ಆದಿ ಕರ್ತ. ಹಾಗೆಯೇ ಸ್ವತಃ ಅರಸ. ನೀನು ಸಿದ್ಧ ಸಾಧ್ಯರಿಗೆ ಆಶ್ರಯ ಕೊಡುವವನು.

**ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಃ ಪರಂತಪಃ ।**
**ಪ್ರಭವಂ ನಿಧನಂ ವಾ ತೇ ನ ವಿದುಃ ಕೋ ಭವಾನಿತಿ ॥7॥**

ಭಾವಾರ್ಥ - ನೀನೇ ಯಜ್ಞ ಸ್ವರೂಪಿ, ನೀನೇ ವಷಟ್ಕಾರ ಮತ್ತು ಓಂ ಕಾರ ಶಕ್ತಿ. ಉನ್ನತ ಆಗಿರುವ ತಪಶ್ಶಕ್ತಿಯೂ ನೀನೇ, ನಿನ್ನ ಹುಟ್ಟಿನ ಬಗ್ಗೆ ಆಗಲೀ ಅಂತ್ಯದ ಬಗ್ಗೆ ಆಗಲೀ ಅಥವಾ ನೀನು ಯಾರು ಅನ್ನುವ ವಿಷಯ ಆಗಲೀ ಯಾರಿಗೂ ಗೊತ್ತಿಲ್ಲ.

**ದೃಶ್ಯಸೇ ಸರ್ವ ಭೂತೇಷು ಬ್ರಾಹ್ಮಣೇಷು ಚ ಗೋಷು ಚ ।**
**ದಿಕ್ಷು ಸರ್ವಾಸು ಗಗನೇ ಪರ್ವತೇಷು ವನೇಷು ಚ ॥8॥**

ಭಾವಾರ್ಥ - ಸಮಸ್ತ ಜೀವಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ, ಗೋಮಾತಾ ಸಮೂಹದಲ್ಲಿಯೂ, ಸಮಸ್ತ ದಿಕ್ಕುಗಳಲ್ಲಿಯೂ, ಆಕಾಶದಲ್ಲಿಯೂ, ಬೆಟ್ಟಗುಡ್ಡೆಗಳಲ್ಲಿಯೂ ನಿನ್ನನ್ನೇ ಕಾಣ್ತಾ ಇದೆ.

**ಸಹಸ್ರಚರಣಃ ಶ್ರೀಮಾನ್ ಶತಶೀರ್ಷಃ ಸಹಸ್ರ ದೃಕ್ ।**
**ತ್ವಂ ಧಾರಯಸಿ ಭೂತಾನಿ ವಸುಧಾಂ ಚ ಸ ಪರ್ವತಾಂ ॥9॥**

ಭಾವಾರ್ಥ - ನೀನು ಶ್ರೀದೇವಿ ಸಹಿತವಾಗಿರುವೆ. ನಿನಗೆ ಸಹಸ್ರ ಚರಣಗಳೂ, ನೂರು ತಲೆಗಳೂ, ಸಾವಿರ ಕಣ್ಣುಗಳೂ ಇರುವವನು. ನೀನು ಮಹಾಜೀವಗಳನ್ನೂ ಪರ್ವತಾದಿಗಳಿಂದ ಕೂಡಿರುವ ಈ ಭೂಮಿಯನ್ನೂ ಹೊತ್ತುಕೊಂಡಿರುವೆ.

**ಅಂತೇ ಪೃಥಿವ್ಯಾಃ ಸಲಿಲೇ ದೃಶ್ಯಸೇ ತ್ವಂ ಮಹೋರಗಃ ।**
**ತ್ರೀನ್ ಲೋಕಾನ್ ಧಾರಯನ್ ರಾಮ ದೇವ ಗಂಧರ್ವ ದಾನವಾನ್ ॥10॥**

ಭಾವಾರ್ಥ - ಹೇ! ರಾಮ, ಭೂಮಿ ನಾಶ ಆದ ಆ ಸಮಯದಲ್ಲಿ ನೀನು ನಾಗಶಯನ ಆಗಿ ಸಮುದ್ರದ ನೀರಿನ ನಡುವೆ ಮೂರು ಲೋಕಗಳನ್ನೂ, ದೇವ ದಾನವ ಗಂಧರ್ವಾದಿಗಳನ್ನೂ ರಕ್ಷಿಸಿರುವೆ.

**ನೀಮೇಷಸ್ತೇ ಭವೇದ್ರಾತ್ರಿಃ ಉನ್ಮೇಷಸ್ತೇ ಭವೇದ್ದಿವಾ ।**
**ಸಂಸ್ಕಾರಾಸ್ತೇಽಭವನ್ವೇದಾಃ ನ ತದಸ್ತಿ ತ್ವಯಾ ವಿನಾ ॥11॥**

ಭಾವಾರ್ಥ - ನೀನು ಕಣ್ಣು ಮುಚ್ಚಿದರೆ ರಾತ್ರೆ, ಕಣ್ಣು ಬಿಚ್ಚಿದರೆ ಹಗಲು, ನಿನ್ನ ಶ್ವಾಸೋಚ್ಛ್ವಾಸವಾಗಿರುವ ವೇದಗಳು ಐಹಿಕ ಜೀವನದ ಆಸಕ್ತಿ-ಅನಾಸಕ್ತಿ-ಧರ್ಮ ಸೂಕ್ಷ್ಮಗಳನ್ನು ಭೋಧಿಸುತ್ತವೆ. ನಿನ್ನನ್ನು ಬಿಟ್ಟರೆ ಬೇರೆ ಯಾವುದೂ ಇಲ್ಲ.

**ಜಗತ್ಸರ್ವಂ ಶರೀರಂ ತೇ ಸ್ಥೈರ್ಯಂ ತೇ ವಸುಧಾತಲಂ ।**
**ಅಗ್ನಿಃ ಕೋಪಃ ಪ್ರಸಾದಸ್ತೇ ಸೋಮಃ ಶ್ರೀವತ್ಸಲಕ್ಷಣಃ ॥12॥**

ಈ ಸಮಸ್ತಭೂಮಂಡಲವೇ ನಿನ್ನ ಶರೀರ, ಈ ಭೂಮಿಯೇ ನಿನ್ನ ಸ್ಥೈರ್ಯ, ಅಗ್ನಿಯೇ ನಿನ್ನ ಕೋಪ, ಚಂದ್ರನೇ ನಿನ್ನ ಮಂದಹಾಸ, ಶ್ರೀವತ್ಸ ಅನ್ನೋ ಗುರುತನ್ನು ನೀನು ಧರಿಸಿರುವೆ.

**ತ್ವಯಾ ಲೋಕಾಸ್ತ್ರಯಃಕ್ರಾಂತಾಃ ಪುರಾಣೇ ವಿಕ್ರಮೈಸ್ತ್ರಿಭಿಃ ।**
**ಮಹೇಂದ್ರಶ್ಚ ಕೃತೋ ರಾಜ ಬಲಿಂ ಬದ್ಧ್ವಾ ಮಹಾಸುರಂ ॥13॥**

ಭಾವಾರ್ಥ - ಹಿಂದೆ ನೀನು ನಿನ್ನ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಆವರಿಸಿ ಮಹಾಅಸುರ ಆಗಿದ್ದ ಬಲಿಚಕ್ರವರ್ತಿಯನ್ನು ಬಂಧಿಸಿ, ಇಂದ್ರನಿಗೆ ಸ್ವರ್ಗದ ಪಟ್ಟವನ್ನು ಕೊಟ್ಟೆ.

**ಸೀತಾ ಲಕ್ಷ್ಮೀರ್ಭವಾನ್ ವಿಷ್ಣುಃ ದೇವಃ ಕೃಷ್ಣಃ ಪ್ರಜಾಪತಿಃ । ವಧಾರ್ಥಂ**
**ರಾವಣಸ್ಯೇಹ ಪ್ರವಿಷ್ಟೋ ಮಾನುಷೀಂ ತನುಂ ॥14॥**

ಭಾವಾರ್ಥ - ಸೀತೆಯೇ ಲಕ್ಷ್ಮೀ ದೇವಿ, ನೀನೇ ವಿಷ್ಣು, ನೀನೇ ಸ್ವಯಂಪ್ರಕಾಶ ಸ್ವರೂಪ. ಕೃಷ್ಣ ವರ್ಣದವ. ಮತ್ತು ಪ್ರಜೆಗಳ ಅಧಿದೇವತೆ. ರಾವಣನ ವಧೆಗಾಗಿ ನೀನು ಮನುಷ್ಯ ರೂಪದಿಂದ ಬಂದಿರುವೆ.

॥ಇತಿ ಆಧ್ಯಾತ್ಮ ರಾಮಾಯಣೇ ಬ್ರಹ್ಮ ಕೃತ ರಾಮಸ್ತವ ಸಂಪೂರ್ಣಂ ॥

## 8.7 ಶ್ರೀರಾಮಸ್ತವ

**ಶ್ರೀರಾಘವಂ ದಶರಥಾತ್ಮಜಮಪ್ರಮೇಯಂ ಸೀತಾಪತಿಂ ರಘುಕುಲಾನ್ವಯರತ್ನದೀಪಂ । ಆಜಾನುಭಾಹುಮರವಿಂದದಲಾಯತಾಕ್ಷಂ ರಾಮಂ ನಿಶಾಚರವಿನಾಶಕರಂ ನಮಾಮಿ ॥1॥**

ಭಾವಾರ್ಥ - ಶ್ರೀರಾಘವನೂ, ದಶರಥನ ಆತ್ಮವೇ ಅಗಿರುವ ಮಗನೂ, ಸರಿಸಾಟಿಯಿಲ್ಲದವನೂ, ಸೀತೆಯ ಪತಿಯೂ, ಇಡೀ ರಘುವಂಶಕ್ಕೆ ರತ್ನಮಯದೀಪವೇ ಆಗಿರುವವನೂ, ವಿಶಾಲಶರೀರ ಹೊಂದಿರುವವನೂ, ತಾವರೆಯದಳದ ಹಾಗಿರುವ ಕಣ್ಣುಗಳನ್ನು ಹೊಂದಿರುವವನೂ, ರಾಕ್ಷಸರಿಗೆ ವಿನಾಶಕಾರಿಯೂ ಆಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುವೆ.

**ವೈದೇಹೀ ಸಹಿತಂ ಸುರದ್ರುಮತಲೇ ಹೈಮೇ ಮಹಾ ಮಂಟಪೇ ಮಧ್ಯೇ ಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಂ । ಅಗ್ರೇ ವಾಚಯತಿ ಪ್ರಭಂಜನಸುತೇ ತತ್ವಂ ಮುನಿಭ್ಯಃ ಪರಂ ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಂ ॥2॥**

ಕಲ್ಪವೃಕ್ಷದ ಅಡಿಯಲ್ಲಿ ಚಿನ್ನದ ದೊಡ್ಡಮಂಟಪದಲ್ಲಿ ಪುಷ್ಪಕ ವಿಮಾನ, ಅದರ ನಡುವೆ ರತ್ನಮಯ ಸಿಂಹಾಸನದಲ್ಲಿ ಸೀತೆಯ ಜೊತೆಗೂಡಿ ವೀರಾಸನದಲ್ಲಿ ಕುಳಿತುಕೊಂಡಿರುವ, ಹಾಗೂ ಮುಂದೆ ಆಂಜನೇಯನು ಸ್ತುತಿಸುತ್ತಿರುವಾಗ, ಋಷಿಸಮೂಹಕ್ಕೆ ಪರತತ್ವದ ವ್ಯಾಖ್ಯಾನ ಮಾಡುತ್ತಾ ಭರತಾದಿಗಳಿಂದ ಆವರಿಸಿಗೊಂಡಿರುವ ಶ್ಯಾಮಲಬಣ್ಣದ ಶ್ರೀರಾಮನನ್ನು ನಾನು ಭಜಿಸುವೆ.

**ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।**

**ರಘುನಾಥಾಯ ನಾಥಾಯ ಸೀತಾಯಾಃಪತಯೇ ನಮಃ ॥3॥**

ಶ್ರೀರಾಮನೂ, ರಾಮಭದ್ರನೂ, ರಾಮಚಂದ್ರನೂ, ಸೃಷ್ಟಿ ಮಾಡುವವನೂ, ರಘುನಾಥನೂ ಎಲ್ಲರ ದೊರೆಯೂ ಆಗಿರುವ ಸೀತಾಪತಿಗೆ ನನ್ನ ನಮಸ್ಕಾರಂಗಳು.

**ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಂ । ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಂ ॥4॥**

ಆಪತ್ತುಗಳನ್ನು ನಿವಾರಿಸುವ ಶಕ್ತಿ ಇರುವವನೂ, ಸರ್ವ ಸಂಪತ್ತುಗಳನ್ನು ಅನುಗ್ರಹಿಸುವವನೂ, ಲೋಕಾಭಿರಾಮನೂ ಆಗಿರುವ ಶ್ರೀರಾಮನಿಗೆಗೆ ಪುನಃ ಪುನಃ ನಮಸ್ಕಾರಂಗಳು.

## 8.8 ಶ್ರೀ ತುಲಸೀದಾಸ ವಿರಚಿತ ಶ್ರೀರಾಮಸ್ತವ

**ಯನ್ಮಾಯಾವಶವರ್ತಿ ವಿಶ್ವಮಖಿಲಂ ಬ್ರಹ್ಮಾದಿದೇವಾಸುರಃ**

**ಯತ್ಸತ್ತ್ವಾದಮೃಷೈವಭಾತಿ ಸಕಲಂ ರಜ್ಜೌ ಯಥಾऽಹೇರ್ಭ್ರಮಃ ।**

**ತತ್ಪಾದಪ್ಲವಮೇಕಮೇವ ಹಿ ಭವಾಂಭೋಧೇಸ್ತಿತೀರ್ಷಾವತಾಂ ವಂದೇಶಂ**

**ತಮಶೇಷಕಾರಣಪರಂ ರಾಮಾಖ್ಯಮೀಶಂ ಹರಿಂ ॥1॥**

ಭಾವಾರ್ಥ - ಯಾರ ಮಾಯೆಯ ವಶದಲ್ಲಿ ಇಡೀ ಭೂಮಂಡಲ, ಬ್ರಹ್ಮಾದಿ ದೇವತೆಗಳು, ಅಂತೆಯೇ ರಾಕ್ಷಸರರು ಇರುವರೋ, ಯಾರ ಅಸ್ತಿತ್ವದಿಂದ ಬಳ್ಳಿಯಲ್ಲಿ ಹಾವನ್ನು ಕಾಣುವ ರೀತಿಯಲ್ಲಿ ಎಲ್ಲವೂ ಸತ್ಯದ ಹಾಗೆ ಕಾಣುತ್ತಾ ಇದೆಯೋ, ಯಾರ ಪಾದಗಳು ಸಂಸಾರ ಸಾಗರವನ್ನು ದಾಟಬೇಕು ಎಂಬ ಬಯಕೆಯುಳ್ಳವರಿಗೆ ಸಾಟಿಯಿಲ್ಲದ ಹಡಗಾಗುವುದೋ ಅಂತಹಾ ಶೇಷ ಇಲ್ಲದ ಕಾರಣಗಳಿಗೆ ಹೊರತಾಗಿರುವ ರಾಮಾ ಅನ್ನುವ ಹೆಸರು ಇರುವ, ಈಶ್ವರನೇ ತಾನಾಗಿರುವ ಹರಿಗೆ ನಾನು ನಮಸ್ಕರಿಸುವೆ.

**ಪ್ರಸನ್ನತಾಂ ಯಾ ನ ಗತಾಭಿಷೇಕತ- ಸ್ತಥಾ ನ ಮಮ್ಲೌ ವನವಾಸದುಃಖತಃ ।**

**ಮುಖಾಂಬುಜಶ್ರೀ ರಘುನಂದನಸ್ಯ ಮೇ ಸದಾಸ್ತು ಸಾ ಮಂಜುಲಮಂಗಲಪ್ರದಾ ॥2॥**

ಭಾವಾರ್ಥ - ಪಟ್ಟಾಭಿಷೇಕದ ಕಾಲದಲ್ಲಿ ಯಾರ ಮೊಗದಲ್ಲಿ ಸಂತೋಷದ ಕಾಂತಿ ಹೆಚ್ಚಾಗಿರುವುದಿಲ್ಲವೋ, ಯಾರ ಮೊಗ ವನವಾಸದ ದುಃಖದಿಂದ ಬಾಡಿರುವುದಿಲ್ಲವೋ, ಅಂತಹಾ ರಘುರಾಮನ ಶ್ರೀಮುಖ ನನಗೆ ಯಾವಾಗಲೂ ಮಧುರಮಯ ಸುಖವನ್ನು ಒದಗಿಸಲಿ.

**ನೀಲಾಂಬುಜಶ್ಯಾಮಲಕೋಮಲಾಂಗಂ ಸೀತಾಸಮಾರೋಪಿತವಾಮಭಾಗಂ । ಪಾಣೌ ಮಹಾಸಾಯಕಚಾರುಚಾಪಂ ನಮಾಮಿ ರಾಮಂ ರಘುವಂಶ ನಾಥಂ ॥3॥**

ಭಾವಾರ್ಥ - ನೀಲ ಕಮಲದ ಹಾಗಿರುವ, ಶ್ಯಾಮಲವರ್ಣದ ಕೋಮಲಾಂಗನಾಗಿರುವ, ಎಡ ಬದಿಯಲ್ಲಿ ಸೀತಾದೇವಿಯನ್ನು ಕುಳ್ಳಿರಿಸಿಕೊಂಡು, ಕೈಯಲ್ಲಿ ಸುಂದರ ಬಿಲ್ಲನ್ನೂ ಮತ್ತು ಮಹಾಬಾಣಗಳನ್ನೂ ಹಿಡಿದುಕೊಂಡಿರುವ ರಘುವಂಶದ ದೊರೆಯಾದ ಶ್ರೀರಾಮನಿಗೆ ನಾನು ನಮಸ್ಕರಿಸುವೆ.

**ಸಾಂದ್ರಾಂನಂದಪಯೋದಸೌಭಗತನುಂ ಪೀತಾಂಬರಂ ಸುಂದರಂ ಪಾಣೌ ಬಾಣಶರಾಸನಂ ಕಟಿಲಸತ್-ತೂಣೀರಭಾರಂ ವರಂ । ರಾಜೀವಾಯತಲೋಚನಂ ಧೃತಜಟಾಜೂಟೇನ ಸಂಶೋಭಿತಂ ಸೀತಾಲಕ್ಷ್ಮಣ ಸಂಯುತಂ ಪಥಿಗತಂ ರಾಮಾಭಿರಾಮಂ ಭಜೇ ॥4॥**

ಭಾವಾರ್ಥ - ಯಾರ ಚೆಲುವಿನ ಶರೀರ ಭಾರೀ ಸಂತೋಷವನ್ನು ತರುವ ಮುಗಿಲಿನ ಹಾಗೆ ಶ್ಯಾಮಲವರ್ಣದಿಂದ ಕೂಡಿದೆಯೋ, ಯಾರು ಪೀತಾಂಬರಧಾರಿಯಾಗಿ ಚೆಲುವಿನಾಗರನೇ ಆಗಿ ಕೈಗಳಲ್ಲಿ ಬಿಲ್ಲುಬಾಣಂಗಳನ್ನು ಹಿಡಿದಿಕೊಂಡಿರುವವನೋ, ಯಾರ ಸೊಂಟಕ್ಕೆ ಸುಂದರ ಬತ್ತಳಿಕೆ ಕಟ್ಟಿಕೊಂಡಿರುವುದೋ, ಯಾರು ರಾಜೀವಲೋಚನರೋ, ಯಾರು ಗಂಟು ಹಾಕಿರುವ ಜಟೆಯಿಂದ ಶೋಭಾಯಮಾನವಾಗಿ ಇರುವನೋ, ಯಾರು ಸೀತಾಲಕ್ಷ್ಮಣರ ಜೊತೆಗೆ ಸಂಚಾರ ಮಾಡುತ್ತಾ ಇದ್ದನೋ ಅಂತಹಾ ಚೆಲುವಿನ ಮೂರ್ತಿ ಶ್ರೀರಾಮಚಂದ್ರನನ್ನು ನಾನು ಭಜಿಸುವೆ.

**ಕುಂದೇಂದೀವರಸುಂದರಾವತಿಬಲೌ ವಿಜ್ಞಾನಧಾಮಾವುಭೌ ಶೋಭಾಢ್ಯೌ ವರಧನ್ವಿನೌ ಶ್ರುತಿನುತೌ ಗೋ ವಿಪ್ರ ವೃಂದ ಪ್ರಿಯೌ । ಮಾಯಾಮಾನುಷರೂಪಿಣೌ ರಘುವರೌ ಸದ್ಧರ್ಮವರ್ಮೌ ಹಿತೌ ಸೀತಾನ್ವೇಷಣತತ್ಪರೌ ಪಥಿಗತೌ ಭಕ್ತಿಪ್ರದೌ ತೌ ಹಿ ನಃ ॥5॥**

ಭಾವಾರ್ಥ - ನೀಲಕಮಲದ ಮತ್ತು ಮಲ್ಲಿಗೆಯಂತೆ ಚೆಲುವರಾಗಿರುವವರೂ, ಅತಿ ಬಲಶಾಲಿಗಳೂ, ಜ್ಞಾನನಿಧಿಗಳೂ, ಭಾರೀ ಚೆಲುವರೂ, ಸರಿಸಾಟಿಯಿಲ್ಲದ ಮಹಾ ಬಿಲ್ಲುಗಾರರೂ, ವೇದಗಳಿಂದ ಹೊಗಳಿಸಿಕೊಳ್ಳುವವರೂ, ಗೋ ಸಂಕುಲಕ್ಕೂ ಬ್ರಾಹ್ಮಣಕುಲಕ್ಕೂ ಅತಿ ಪ್ರಿಯವಾದವರೂ, ಮಾಯಾರೂಪದ ಮಾನವಶರೀರವ ಹೊಂದಿರುವವರೂ, ಸದ್ಧರ್ಮಕ್ಕೆ ಕವಚ ಸ್ವರೂಪರೂ, ಹಿತಕಾಯುವವವರೂ, ಸೀತಾನ್ವೇಷಣೆಯಲ್ಲಿ ನಿರತರಾಗಿರುವವರೂ ಆಗಿರುವ ರಾಮಲಕ್ಷ್ಮಣರು ನಮಗೆ ಭಕ್ತಿಯನ್ನು ದಯಪಾಲಿಸಲಿ.

**ಬ್ರಹ್ಮಾಂಭೋಧಿಸಮುದ್ಭವಂ ಕಲಿಮಲಪ್ರಧ್ವಂಸನಂ ಚಾವ್ಯಯಂ ಶ್ರೀಮಚ್ಛಂಭುಮುಖೇಂದುಸುಂದರವರೇ ಸಂಶೋಭಿತಂ ಸರ್ವದಾ । ಸಂಸಾರಾಮಯಭೇಷಜಂ ಸುಖಕರಂ ಶ್ರೀಜಾನಕೀಜೀವನಂ ಧನ್ಯಾಸ್ತೇ ಕೃತಿನಃ ಪಿಬಂತಿ ಸತತಂ ಶ್ರೀ ರಾಮಾಮೃತಂ ॥6॥**

ಭಾವಾರ್ಥ - ವೇದಗಳಲ್ಲಿ ಹೇಳುವ ಮಹಾಸಮುದ್ರವನ್ನು ಮಥಿಸುವಾಗ ಹುಟ್ಟಿದ, ಕಲ್ಮಷವನ್ನು ನಾಶ ಮಾಡುವ, ಮೋಕ್ಷಕಾರಕನಾಗಿರುವ ಪರಮಶಿವನ, ತಾವರೆಯ ಹೋಲುವ ಹಾಗಿರುವ ಮೊಗದಲ್ಲಿ ಸದಾ ಸಂತಸವನ್ನು ಸೂಸುತ್ತಿರುವ, ಈ ಸಂಸಾರಕ್ಕೆ ಸುಖವನ್ನು ಅನುಗ್ರಹಿಸುವ ಔಷಧಿಯ ಸ್ವರೂಪವೇ ಆಗಿರುವ, ಜಾನಕಿಯ ಜೀವವೇ ಆಗಿರುವ ಅಮೃತಮಯ ರಾಮನಾಮಾಮೃತವ ಕುಡಿವವರೇ ಧನ್ಯಾತ್ಮರು.

**ಶಾಂತಂ ಶಾಶ್ವತಮಪ್ರಮೇಯಮನಘಂ ನಿರ್ವಾಣಶಾಂತಿಪ್ರದಂ ಬ್ರಹ್ಮಾ ಶಂಭುಫಣೀಂದ್ರ ಸೇವ್ಯಮನಿಶಂ ವೇದಾಂತವೇದ್ಯಂ ವಿಭುಂ । ರಾಮಾಖ್ಯಂ**

**ಜಗದೀಶ್ವರಂ ಸುರಗುರುಂ ಮಾಯಾಮನುಷ್ಯಂ ಹರಿಂ ವಂದೇಸ್ಹಂ ಕರುಣಾಕರಂ ರಘುವರಂ ಭೂಪಾಲಚೂಡಾಮಣಿಂ ॥7॥**

ಭಾವಾರ್ಥ - ಶಾಂತಸ್ವರೂಪನೂ, ಶಾಶ್ವತನೂ, ಅಳತೆಗೆ ಸಿಲುಕದವನೂ, ಪಾಪಗಳಿಂದ ವಿರಹಿತ ಆದವನೂ, ಮೋಕ್ಷಕ್ಕೆ ಸಮನಾದ ಶಾಂತಿಯನ್ನು ಅನುಗ್ರಹಿಸುವವನೂ, ಬ್ರಹ್ಮ, ಶಂಭು, ಶೇಷ ಇವರಿಂದ ಯಾವಾಗಲೂ ಸೇವೆ ಮಾಡಿಸಿಕೊಳ್ಳುವವನೂ, ವೇದಾಂತದಿಂದ ತಿಳಿಯಲ್ಪಡುವವನೂ, ಸರ್ವ ವ್ಯಾಪಿಯಾಗಿ, ದೇವತೆಗಳಿಗೆ ಗುರುವಾಗಿ, ಮಾಯೆಯಿಂದ ಮಾನುಷ ಶರೀರವನ್ನು ಹೊಂದಿರುವ, ಪಾಪಹರನೂ, ಕರುಣಾಕರನೂ, ಆಳರಸರಿಗೆ ಶ್ರೇಷ್ಠನಾಗಿರುವವನೂ ರಘುವರ ಎಂದು ಕರೆಯಿಸಿಕೊಳ್ಳುವವನೂ, ರಾಮಾ ಅನ್ನುವ ಹೆಸರಿರುವವನೂ ಆಗಿರುವ ಜಗದೀಶ್ವರನಿಗೆ ನಾನು ನಮಸ್ಕರಿಸುವೆ.

**ಕೇಕೀ ಕಂಠಾಭನೀಲಂ ಸುರವರವಿಲಸದ್- ವಿಪ್ರಪಾದಬ್ಜಚಿಹ್ನಂ ಶೋಭಾಢ್ಯಂ ಪೀತವಸ್ತ್ರಂ ಸರಸಿಜನಯನಂ ಸರ್ವದಾ ಸುಪ್ರಸನ್ನಂ । ಪಾಣೌ ನಾರಾಚಚಾಪಂ ಕಪಿನಿಕರಯುತಂ ಬಂಧುನಾ ಸೇವ್ಯಮಾನಂ ನೌಮೀಡ್ಯಂ ಜಾನಕೀಶಂ ರಘುವರಮನಿಶಂ ಪುಷ್ಪಕಾರೂಢಾ ರಾಮಂ ॥8॥**

ಭಾವಾರ್ಥ - ನವಿಲಿನ ಕಂಠದ ಹಾಗೆ ನೀಲಶರೀರನೂ, ದೇವತೆಗಳಲ್ಲಿ ಪ್ರಧಾನ ಸ್ಥಾನ ಹೊಂದಿರುವವನೂ, ಭೃಗು ಮುನಿಯ ಪಾದದ ಗುರುತನ್ನು ಹೃದಯದ ಮೇಲೆ ಧರಿಸಿಗೊಡಿಕೊಂಡಿರುವವನೂ, ಶೋಭಾಯಮಾನವಾಗಿರುವವನೂ, ಅರಶಿನ ವಸ್ತ್ರವನ್ನು ಧರಿಸಿರುವವನೂ, ತಾವರೆಯ ಹಾಗೆ ಕಾಣುವ ಕಣ್ಣುಗಳಿರುವವನೂ, ಯಾವತ್ತೂ ಸಂತೋಷವನ್ನು ವ್ಯಕ್ತ ಪಡುಸುವವನೂ, ಬಿಲ್ಲುಬಾಣಂಗಳನ್ನು ಎರಡು ಕೈಗಳಲ್ಲಿ ಹಿಡಿದುಕೊಂಡಿರುವವನೂ, ವಾನರ ಸಮೂಹದಿಂದ ಆವರಿಸಲ್ಪಟ್ಟವನೂ, ಲಕ್ಷ್ಮಣನಿಂದ ಸೇವೆಯನ್ನು ಸ್ವೀಕರಿಸುವವನೂ, ಸ್ತುತಿಗೆ ಅರ್ಹವಾದವನೂ, ಪುಷ್ಪಕ ವಿಮಾನದಲ್ಲಿ ಆರೂಢನಾಗಿರುವವನೂ, ರಘುರಾಮನೂ, ಜಾನಕೀಶನೂ ಆಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುವೆ.

**ಆರ್ತಾನಾಮಾರ್ತಿಹಂತಾರಂ ಭೀತಾನಾಂ ಭಯನಾಶನಂ ।**

**ದ್ವಿಷತಾಂ ಕಾಲದಂಡಂ ತಂ ರಾಮಚಂದ್ರಂ ನಮಾಮ್ಯಹಂ ॥9॥**

ಭಾವಾರ್ಥ - ದುಃಖಪೀಡಿತರ ವ್ಯಾಕುಲಂಗಳನ್ನು ನಾಶ ಮಾಡುವುವನೂ, ಭೀತಿಗೆ ಸಿಲುಕಿದವನ ಭೀತಿಯನ್ನು ನಿವಾರಿಸುವವನೂ, ವೈರಿಗಳಿಗೆ ಯಮಸ್ವರೂಪನೂ ಆಗಿರುವ ಶ್ರೀರಾಮಚಂದ್ರನಿಗೆ ನಾನು ನಮಸ್ಕರಿಸುವೆ.

**ನಾನ್ಯಾ ಸ್ಪೃಹಾ ರಘುಪತೇ ಹೃದಯೇಸ್ಮದೀಯೇ ಸತ್ಯಂ ವದಾಮಿ ಚ**

**ಭವಾನಖಿಲಾಂತರಾತ್ಮಾ । ಭಕ್ತಿಂ ಪ್ರಯಚ್ಛ ರಘುಪುಂಗವ ನಿರ್ಭರಾಂ ಮೇ**

**ಕಾಮಾದಿದೋಷರಹಿತಂ ಕುರು ಮಾನಸಂ ಚ ॥10॥**

ಭಾವಾರ್ಥ - ಹೇ! ರಾಮಚಂದ್ರಾ, ನನ್ನ ಹೃದಯದಲ್ಲಿ ಬೇರೆ ಯಾವ ಆಶೆಯೂ ಇಲ್ಲ. ನಾನು ಸತ್ಯವಾಗಿ ಹೇಳುವೆ, ನೀನು ಸಮಸ್ತ ಜೀವಿಗಳ ಹೃದಯದಲ್ಲಿ ಇರುವ ಅಂತರಾತ್ಮ. ನನಗೆ ಪರಿಪೂರ್ಣವಾದ ಭಕ್ತಿಯನ್ನು ಕರುಣಿಸಿ ನನ್ನ ಮನಸ್ಸಿನಿಂದ ಆಶೆಗಳೆಲ್ಲವನ್ನು ನಾಶ ಆಗುವ ಹಾಗೆ ಅನುಗ್ರಹಿಸು.

॥ ಇತಿ ಶ್ರೀ ತುಲಸೀದಾಸ ವಿರಚಿತ ಶ್ರೀರಾಮಸ್ತವ ಸಂಪೂರ್ಣಂ ॥

## 8.9 ಶ್ರೀ ರಾಮ ರಕ್ಷಾ ಸ್ತೋತ್ರಂ

**ಅಸ್ಯ ಶ್ರೀರಾಮರಕ್ಷಾಸ್ತೋತ್ರಮಂತ್ರಸ್ಯ । ಬುಧ ಕೌಶಿಕ ಋಷಿಃ । ಅನುಷ್ಟುಪ್ ಛಂಧಃ । ಶ್ರೀ ಸೀತಾರಾಮಚಂದ್ರೋ ದೇವತಾ । ಸೀತಾ ಶಕ್ತಿಃ । ಶ್ರೀಮದ್ಹನುಮಾನ್ ಕೀಲಕಂ । ಶ್ರೀರಾಮಚಂದ್ರ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥1॥**

ಭಾವಾರ್ಥ - ಪ್ರತಿಯೊಂದು ಮಂತ್ರಕ್ಕೂ ಋಷಿ, ದೇವತೆ, ಛಂದಸ್ಸು, ಶಕ್ತಿ, ಕೀಲಕ ಹಾಗೂ ವಿನಿಯೋಗಗಳಿವೆ. ಅದೇ ರೀತಿ ಬುಧ ಕೌಶಿಕ ಋಷಿ ಈ ಮಂತ್ರದ ಋಷಿ. ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಶ್ರೀ ಸೀತಾರಾಮಚಂದ್ರ ಇದರ ಅನುಷ್ಠಾನ ದೇವತೆ. ಸೀತೆ ಮಂತ್ರ ಶಕ್ತಿ. ಹನುಮಂತ ಇದರ ಕೀಲಕ. ಶ್ರೀರಾಮಚಂದ್ರನ ವಿಶೇಷ ಕೃಪಾಪಾತ್ರರಾಗಲು ಹಾದಿಯಾಗಿರುವ ಈ ರಾಮರಕ್ಷಾ ಸ್ತೋತ್ರ ಪಾರಾಯಣಕ್ಕಾಗಿ ಬಳಸಿ ಕೊಳ್ಳುತ್ತಿದ್ದೇನೆ.

॥ ಅಥ ಧ್ಯಾನಂ ॥

**ಧ್ಯಾಯೇಜ್ಜಾನುಬಾಹುಂ ಧೃತಶರ ಧನುಷಂ ಬದ್ಧ ಪದ್ಮಾಸನಸ್ಥಂ । ಪೀತಂ ವಾಸೋ ವಸಾನಂ ನವಕಮಲದಲಸ್ಪರ್ಧಿನೇತ್ರಂ ಪ್ರಸನ್ನಂ । ವಾಮಾಂಕಾರೂಢಸೀತಾ ಮುಖಕಮಲಮಿಲಲ್ಲೋಚನಂ ನೀರದಾಭಂ । ನಾನಾಲಂಕಾರದೀಪ್ತಂ ದಧತಮುರುಜಟಾಮಂಡಲಂ ರಾಮಚಂದ್ರಂ ॥2॥**

ಭಾವಾರ್ಥ - ಜಟಾಧಾರಿಯೂ ಕೈಗಳಲ್ಲಿ ಧನುರ್ಬಾಣಗಳನ್ನು ಹಿಡಿದವನಾಗಿ, ಪೀತವಸನವನ್ನು ಧರಿಸಿದವನಾಗಿ, ಬದ್ಧಪದ್ಮಾಸನದಲ್ಲಿ ವಿರಾಜಸುತ್ತಾ ಕುಳಿತುಕೊಂಡಿರುವ, ತೇಜೋಭರಿತ ಕಣ್ಣುಗಳನ್ನು ಹೊಂದಿರುವ, ಪ್ರಸನ್ನ ಮುಖಮುದ್ರೆಯವನಾಗಿ, ತನ್ನ ಎಡತೊಡೆಯಮೇಲೆ ಮನದನ್ನೆ ಸೀತಾದೇವಿಯನ್ನು ಕುಳ್ಳಿರಿಸಿಕೊಂಡು ಆಕೆಯ ಮುಖಕಮಲದತ್ತ ಒಲವಿನ ದೃಷ್ಟಿಯನ್ನು ಹರಿಸುತ್ತಿರುವ, ಮುಗಿಲಿನಂತೆ ಕಾಂತಿಯುಕ್ತನೂ, ವಿಶಾಲವಾದ ಜಡೆಗಟ್ಟಿದ ಜುಟ್ಟನ್ನೂ ಹೊಂದಿರುವ, ನಾನಾಲಂಕಾರಗಳಿಂದ ಭೂಷಿತನಾಗಿರುವವನೂ, ಮೊಣಕಾಲುಗಳನ್ನು ಸ್ಪರ್ಷಿಸುವ ಭುಜಗಳನ್ನು ಹೊಂದಿರುವಂತಹವನೂ ಆಗಿರುವ ಶ್ರೀರಾಮಚಂದ್ರನನ್ನು ನಾನು ಧ್ಯಾನಿಸುತ್ತೇನೆ.

**ಚರಿತಂ ರಘುನಾಥಸ್ಯಶತಕೋಟಿ ಪ್ರವಿಸ್ತರಂ ।**
**ಏಕೈಕಮಕ್ಷರಂ ಪುಂಸಾಂ ಮಹಾಪಾತಕ ನಾಶನಂ ॥3॥**

ಭಾವಾರ್ಥ - ಶ್ರೀರಾಮಚರಿತೆಯು ಬಹಳ ವಿಸ್ತಾರವಾಗಿದ್ದು ನೂರು ಕೋಟಿ ಶ್ಲೋಕಗಳಿಂದಲೂ ವಿವರಿಸಲು ಅಸಾಧ್ಯವಾಗಿರುವಷ್ಟು ಮಹಾಮಹಿಮ ಶ್ರೀರಾಮನ ಚರಿತೆಯು ಹರಡಿಕೊಂಡಿದೆ. ಆ ಮಹಾಚರಿತ್ರೆಯು ಒಂದೊಂದೂ ಅಕ್ಷರವನ್ನು ಓದುವುದರಿಂದ ಮಾನವನ ಮಹಾಪಾತಕಗಳೆಲ್ಲವೂ ನಾಶವಾಗುತ್ತವೆ. ರಾಮಚರಿತ್ರೆಯ ಪ್ರತೀ ಅಕ್ಷರವು ಮಂತ್ರಮಯವಾಗಿದ್ದು ಪುಣ್ಯಪ್ರದಾಯಕವಾಗಿದೆ.

**ಧ್ಯಾತ್ವಾ ನೀಲೋತ್ಪಲ ಶ್ಯಾಮಂ ರಾಮಂ ರಾಜೀವಲೋಚನಂ ।**
**ಜಾನಕೀಲಕ್ಷ್ಮಣೋಪೇತಂ ಜಟಾಮುಕುಟ ಮಂಡಿತಂ ॥4॥**

ಭಾವಾರ್ಥ - ಶ್ರೀರಾಮಚಂದ್ರನ ಶರೀರವು ನೀಲಿಕಮಲದಂತಿದೆ. ಆತನು ತಾವರೆಯ ದಳಗಳನ್ನು ಹೋಲುವ ಕಣ್ಣುಗಳನ್ನು ಹೊಂದಿದ್ದಾನೆ. ಸೀತಾ ಲಕ್ಷ್ಮಣರು ಆತನ ಸಹಚರರು. ಕಿರೀಟದಂತೆ ಆತನ ಜಡೆಯು ಶೋಭಿಸುತ್ತಿದೆ.

**ಸಾಸಿತೂಣಧನುರ್ಬಾಣಪಾಣಿಂನಕ್ತಂ ಚರಾಂತಕಂ ।**
**ಸ್ವಲೀಲಯಾ ಜಗತ್ರಾತುಮಾವಿರ್ಭೂತಮಜಂ ವಿಭುಂ ॥5॥**

ಭಾವಾರ್ಥ - ರಾಕ್ಷಸರ ವಿನಾಶಕ್ಕಾಗಿ ಆತನು ಕೈಗಳಲ್ಲಿ ಖಡ್ಗ, ಬಿಲ್ಲು, ಬಾಣಗಳಿದ ತುಂಬಿರುವ ಬತ್ತಳಿಕೆಯನ್ನು ಹಿಡಿದಿರುವನು. ದುಷ್ಟ ಸಂಹಾರ, ಶಿಷ್ಟಪರಿಪಾಲನೆಗಾಗಿ ತನ್ನ ಲೀಲೆಯಿಂದ ಜನ್ಮವೆತ್ತಿ ಸೀತಾಲಕ್ಷ್ಮಣರೊಡಗೂಡಿದವನು. ಅಂತಹಾ ಪ್ರಭುರಾಮಚಂದ್ರನ ಧ್ಯಾನದಲ್ಲಿ ಮಗ್ನನಾಗುವ ಸಲುವಾಗಿ ಶ್ರೀರಾಮರಕ್ಷಾಸ್ತೋತ್ರ ಪಾರಾಯಣದಿಂದ ಮಾನವ ಮಾತ್ರನ ಪಾಪರಾಶಿಗಳೆಲ್ಲವೂ ನಾಶವಾಗಿ ಆತನ ಸಕಲಾಭಿಷ್ಟಗಳು ಈಡೇರುವುದು ಶತಸಿದ್ಧ.

**ರಾಮರಕ್ಷಾಂ ಪಠೇತ್ಪ್ರಾಜ್ಞಃ ಪಾಪಘ್ನೀಂ ಸರ್ವಕಾಮದಾಂ । ಶಿರೋಮೇ ರಾಘವಃ ಪಾತು ಭಾಲಂ ದಶರಥಾತ್ಮಜಃ ॥6॥**

ಭಾವಾರ್ಥ - ರಘುಕುಲೋತ್ತಮನಾದ ಆ ಶ್ರೀರಾಮನು ತಲೆಯನ್ನು ರಕ್ಷಿಸಿ ನನ್ನ ಚಿತ್ತವನ್ನು ಸದಾ ಎಚ್ಚರಿಸಲಿ. ದಶರಥತನಯನು ಹಣೆಯನ್ನು ರಕ್ಷಿಸಿ ಬುದ್ಧಿಯನ್ನು ಪ್ರಚೋಧಿಸಲಿ.

**ಕೌಸಲ್ಯೇಯೋ ದೃಶೌ ಪಾತು ವಿಶ್ವಾಮಿತ್ರ ಪ್ರಿಯಃ ಶ್ರುತೀ ।**
**ಘ್ರಾಣಂ ಪಾತು ಮಖತ್ರಾತಾ ಮುಖಂ ಸೌಮಿತ್ರಿ ವತ್ಸಲಃ ॥7॥**

ಭಾವಾರ್ಥ - ಕೌಸಲ್ಯಾಸುತನಾದ ಶ್ರೀರಾಮನು ನನ್ನ ಕಣ್ಣುಗಳನ್ನೂ, ವಿಶ್ವಾಮಿತ್ರಪ್ರೀತಿಪಾತ್ರನಾದ ರಾಮನು ನನ್ನ ಕಿವಿಗಳನ್ನೂ, ಯಜ್ಞರಕ್ಷಕನಾದ

ರಾಘವನು ನನ್ನ ಮೂಗನ್ನೂ, ಲಕ್ಷ್ಮಣನಿಗೆ ಸಖನಾದ ರಘುವರನು ನನ್ನ ಮುಖವನ್ನೂ ರಕ್ಷಿಸಲಿ.

**ಜಿಹ್ವಾಂ ವಿದ್ಯಾನಿಧಿಃ ಪಾತು ಕಂಠಂ ಭರತವಂದಿತಃ ।**
**ಸ್ಕಂಧೌ ದಿವ್ಯಾಯುಧಃ ಪಾತು ಭುಜೌ ಭಗ್ನೇಶ ಕಾರ್ಮುಕಃ ॥8॥**

ಭಾವಾರ್ಥ - ವಿದ್ಯಾನಿಧಿಯಾಗಿರುವ ರಾಮನು ನನ್ನ ನಾಲಿಗೆಯನ್ನೂ, ಭರತನಿಂದ ನಮಸ್ಕರಿಸಲ್ಪಡುತ್ತಿರುವ ರಾಮನು ನನ್ನ ಕಂಠವನ್ನೂ, ದಿವ್ಯಾಯುಧಪಾಣಿಯಾದ ರಾಮನು ನನ್ನ ಹೆಗಲನ್ನೂ, ಶಿವಧನುಸ್ಸನ್ನು ತುಂಡರಿಸಿದ ಪರಾಕ್ರಮಶಾಲಿ ರಾಮನು ನನ್ನ ಭುಜಗಳನ್ನೂ ರಕ್ಷಿಸಲಿ.

**ಕರೌಸೀತಾಪತಿಃ ಪಾತು ಹೃದಯಂ ಜಾಮದಗ್ನ್ಯ ಜಿತ್ ।**
**ಮಧ್ಯಂ ಪಾತು ಖರ ಧ್ವಂಸೀ ನಾಭಿಂ ಜಾಂಬವದಾಶ್ರಯಃ ॥9॥**

ಭಾವಾರ್ಥ - ಸೀತಾಕಾಂತನು ನನ್ನ ಕೈಗಳನ್ನೂ, ಪರಶುರಾಮನನ್ನು ಗೆದ್ದ ರಾಮನು ನನ್ನ ಹೃದಯವನ್ನೂ, ಖರನೆಂಬ ಅಸುರನನ್ನು ಸಂಹರಿಸಿದ ಶ್ರೀರಾಮನು ನನ್ನ ಶರೀರದ ಮೇಲ್ಭಾಗವನ್ನೂ, ಜಾಂಬವಂತನಿಗೆ ಆಶ್ರಯದಾತನಾದ ರಾಮನು ನನ್ನ ನಾಭಿಯನ್ನೂ ರಕ್ಷಿಸಲಿ.

**ಸುಗ್ರೀವೇಶಃ ಕಟೀ ಪಾತು ಸಕ್ಥಿನೀ ಹನುಮತ್ಪ್ರಭುಃ ।**
**ಊರೂ ರಘೂತ್ತಮಃ ಪಾತು ರಕ್ಷಃ ಕುಲವಿನಾಶ ಕೃತ್ ॥10॥**

ಭಾವಾರ್ಥ - ಸುಗ್ರೀವನ ಒಡೆಯನಾದ ರಾಮನು ನನ್ನ ಸೊಂಟವನ್ನೂ, ಆಂಜನೇಯನ ಪ್ರಭುವಾಗಿರುವ ರಾಮನು ನನ್ನ ತೊಡೆಯ ಮೇಲ್ಭಾಗವನ್ನೂ, ರಾಕ್ಷಸಾಂತಕ ರಘುಕುಲ ಶ್ರೇಷ್ಠ ಶ್ರೀರಾಮನು ನನ್ನ ತೊಡೆಗಳನ್ನೂ ರಕ್ಷಿಸಲಿ.

**ಜಾನುನೀ ಸೇತುಕೃತ್ ಪಾತು ಜಂಘೇ ದಶ ಮುಖಾಂತಕಃ ।**
**ಪಾದೌ ವಿಭೀಷಣಶ್ರೀದಃ ಪಾತು ರಾಮೋಽಖಿಲಂ ವಪುಃ ॥11॥**

ಭಾವಾರ್ಥ - ಸಾಗರಕ್ಕೆ ಸೇತುವೆಯನ್ನು ಕಟ್ಟಿಸಿದ ರಾಮನು ನನ್ನ ಮೊಣಕಾಲು ಗಂಟುಗಳನ್ನೂ, ರಾವಣನನ್ನು ಸಂಹಾರಗೈದ ರಾಮನು ನನ್ನ ಮೊಣಕಾಲುಗಳನ್ನೂ, ವಿಭೀಷಣನಿಗೆ ಅನುಗ್ರಹಿಸಿದ ಶ್ರೀರಾಮನು ನನ್ನ ಪಾದಗಳನ್ನೂ, ಸರ್ವ ಶಕ್ತನಾದ ರಾಘವನು ನನ್ನ ಅಡಿಯಿಂದ ಮುಡಿಯ ತನಕದ ಸರ್ವಾಂಗಗಳನ್ನೂ ರಕ್ಷಿಸಲಿ.

**ಏತಾಂ ರಾಮಬಲೋಪೇತಾಂ ರಕ್ಷಾಂ ಯಃ ಸುಕೃತೀ ಪಠೇತ್ ।**
**ಸ ಚಿರಾಯುಃ ಸುಖೀ ಪುತ್ರೀ ವಿಜಯೀ ವಿನಯೀ ಭವೇತ್ ॥12॥**

ಭಾವಾರ್ಥ - ಶ್ರೀರಾಮನಮಹಿಮೆಯನ್ನು ನೆನೆಯುತ್ತಾ ಶರೀರದ ಅಂಗಾಂಗಗಳಲ್ಲಿ ರಾಮನ ಕೃಪೆಯೇ ಮೈದಳೆಯುವಂತೆ ಈ ರಾಮರಕ್ಷಾ ಸ್ತೋತ್ರವನ್ನು ಪಾರಾಯಣ ಗೈವಾತಂಗೆ ಧೀರ್ಘಾಯುಸ್ಸು, ಸುಖ, ಆರೋಗ್ಯಾದಿ ಭಾಗ್ಯಗಳು ಪ್ರಾಪ್ತವಾಗಿ ಆತನು ಪುಣ್ಯಶಾಲಿಯಾಗಿ ಜಯ ಶಾಲಿಯಾಗಿ, ವಿನಯವಂತನಾಗಿ ಸರ್ವ ಸಮರ್ಥನಾಗಿ ಪತ್ನೀ ಪುತ್ರಾದಿಗಳೊಂದಿಗೆ ಬಹುಕಾಲ ಬಾಳುವನು.

**ಪಾತಾಲ ಭೂತಲ ವ್ಯೋಮ ಚಾರಿಣಶ್ಛದ್ಮ ಚಾರಿಣಃ ।**
**ನ ದೃಷ್ಟುಮಪಿ ಶಕ್ತಾಸ್ತೇ ರಕ್ಷಿತಂ ರಾಮ ನಾಮಭಿಃ ॥13॥**

ಭಾವಾರ್ಥ - ಭೂಮ್ಯಾಕಾಶ ಪಾತಾಲಗಳಲ್ಲಿ ಸಂಚರಿಸುವ ಸಕಲ ಚರಾಚರಗಳನ್ನು ಶ್ರೀರಾಮನ ಕೃಪಾಜಾಲವು ರಕ್ಷಿಸುತ್ತದೆ. ಭೂಮಿಯ ಮೇಲಿನ ಜೀವಿಗಳಿಗಾಗಲೀ ಆಕಾಶದಲ್ಲಿರುವ ಸೂಕ್ಷ್ಮ ಚೇತನಗಳಿಗಾಗಲೀ ನಿಲುಕದಷ್ಟು ಶ್ರೀರಾಮ ಕೃಪಾ ಜಾಲವು ನಿಗೂಢವಾದದ್ದಾಗಿದೆ.

**ರಾಮೇತಿ ರಾಮಭದ್ರೇತಿ ರಾಮಚಂದ್ರೇತಿ ವಾ ಸ್ಮರನ್ ।**
**ನರೋ ನ ಲಿಪ್ಯತೇ ಪಾಪೈರ್ ಭುಕ್ತಿಂ ಮುಕ್ತಿಂ ಚ ವಿಂದತಿ ॥14॥**

ಭಾವಾರ್ಥ - ರಾಮ, ರಾಮಭದ್ರ, ರಾಮಚಂದ್ರ ಎಂದೆಲ್ಲಾ ಯಾವುದೇ ನಾಮದಿಂದ ಶ್ರೀರಾಮನನ್ನು ಅನವರತವೂ ಸ್ಮರಿಸುವಾತನಿಗೆ ಎಂದೂ ಪಾಪಗಳ ಭೀತಿಯಿರಲಾರದು. ಮಾತ್ರವಲ್ಲ ಆತನು ಸರ್ವ ಭೋಗಭಾಗ್ಯಗಳನ್ನು ಅನುಭವಿಸುತ್ತಾ ಜೀವನ್ಮುಕ್ತಿಯ ಮಹಾಭಾಗ್ಯವಂತನೂ ಆಗುವನು.

**ಜಗಜ್ಜೈತ್ರೈಕಮಂತ್ರೇಣ ರಾಮನಾಮ್ನಾಸ್ರಕ್ಷಿತಂ ।**
**ಯಃ ಕಂಠೇ ಧಾರಯೇತ್ತಸ್ಯ ಕರಸ್ಥಾಃ ಸರ್ವ ಸಿದ್ಧಯಃ ॥15॥**

ಭಾವಾರ್ಥ - ಜಗತ್ತಿನಲ್ಲಿ ಸರ್ವಕಾರ್ಯಗಳಿಗೂ ಜಯಪ್ರದವಾದ ಏಕಮೇವ ಮಂತ್ರವೇ ರಾಮನಾಮವು. ಅಂತಹಾ ರಾಮ ನಾಮ ಸ್ಮರಣೆಯಲ್ಲಿ ಯಾರ ಮನಸ್ಸು ನೆಲೆಯಾಗಿ ರಾಮನಾಮವೇ ಸರ್ವಸ್ವವಾಗುವುದೋ ಅಂತಹವರು ಶ್ರೀರಾಮನ ಕರುಣಾಂಬುಧಿಯಲ್ಲಿ ಸರ್ವ ಸಮರ್ಥ ವಿಶ್ವವಿಜೇಜರಾಗಿ ರಾರಾಜಿಸುತ್ತಿದ್ದಾರೆ.

**ವಜ್ರ ಪಂಜರನಾಮೇದಂ ಯೋ ರಾಮಕವಚಂ ಸ್ಮರೇತ್ ।**
**ಅವ್ಯಾಹತಾಜ್ಞಃ ಸರ್ವತ್ರ ಲಭತೇ ಜಯ ಮಂಗಲಂ ॥16॥**

ಭಾವಾರ್ಥ - ಯಾರು ಈ ರಾಮರಕ್ಷಾಸ್ತೋತ್ರವನ್ನು ಶ್ರದ್ಧಾ ಭಕ್ತಿ ಪುರಸ್ಸರವಾಗಿ ಪಠಣ ಮೂಲಕ ಸ್ಮರಿಸುತ್ತಾರೋ ಅವರನ್ನು ಶ್ರೀರಾಮನ ದಿವ್ಯಶಕ್ತಿಯು ವಜ್ರಪಂಜರ ರೂಪವಾಗಿ ಅವರನ್ನು ಆವರಿಸಿ ಎಲ್ಲಾ ರೀತಿಯ ಆಪತ್ತು ವಿಪತ್ತುಗಳಿಂದ ರಕ್ಷಿಸುವುದಲ್ಲದೆ ಅವರ ಇಚ್ಛಾಶಕ್ತಿಯನ್ನು, ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆನ್ನೆಲ್ಲಾ ವೃದ್ಧಿಸಿ ಸರ್ವತ್ರ ಸರ್ವಕಾಲದಲ್ಲಿಯೂ ಗೆಲವು ನಲಿವುಗಳನ್ನು ದೊರಕಿಸಿಕೊಡುತ್ತದೆ.

**ಆದಿಷ್ಟವಾನ್ ಯಥಾ ಸ್ವಪ್ನೇ ರಾಮರಕ್ಷಾಮಿಮಾಂ ಹರಃ ।**
**ತಥಾ ಲಿಖಿತವಾನ್ ಪ್ರಾತಃ ಪ್ರಬುದ್ಧೋ ಬುಧ ಕೌಶಿಕಃ ॥17॥**

ಭಾವಾರ್ಥ - ಈ ರಾಮರಕ್ಷಾಸ್ತೋತ್ರವನ್ನು ಸಾಕ್ಷಾತ್ ಪರಮಶಿವನು ರಾತ್ರಿಕಾಲದಲ್ಲಿ ಸ್ವಪ್ನ ಮುಖೇನ ದರ್ಶನವಿತ್ತು ಬುಧಕೌಶಿಕ ಋಷಿಗೆ ತಿಳಿಸಿದ್ದಾಗಿದ್ದು ಬೆಳಗ್ಗೆ ಎದ್ದ ಋಷಿಯು ಬರೆದಿರಿಸಿದ್ದಾಗಿರುತ್ತದೆ. ಆದ್ದರಿಂದ ಇದು ದಿವ್ಯವಾದ ವೇದ ಸಮಾನವಾಗಿದೆ.

**ಆರಾಮ, ಕಲ್ಪವೃಕ್ಷಾಣಾಂ ವಿರಾಮಃ ಸಕಲಾಪದಾಂ ।**
**ಅಭಿರಾಮಸ್ತ್ರಿಲೋಕಾನಾಂ ರಾಮಃ ಶ್ರೀಮಾನ್ ಸ ನಃ ಪ್ರಭುಃ ॥18॥**

ಭಾವಾರ್ಥ - ಕಲ್ಪವೃಕ್ಷದ ಉಪವನದಂತಿರುವ ಶ್ರೀರಾಮನು ಎಲ್ಲಾ ಆಪತ್ತುಗಳ ನಿವಾರಕನಾಗಿ ಇಷ್ಟಾರ್ಥದಾಯಕನಾಗಿ ಮೂರುಲೋಕಗಳಲ್ಲೂ ಆನಂದದಾಯಕನಾಗಿ ನಮ್ಮೆಲ್ಲರಿಗೂ ದೊರೆಯಾಗಿ ಮುನ್ನಡೆಯಿಸುವನು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

**ತರುಣೌ ರೂಪ ಸಂಪನ್ನೌ ಸುಕುಮಾರೌ ಮಹಾಬಲೌ ।**
**ಪುಂಡರೀಕ ವಿಶಾಲಾಕ್ಷೌ ಚೀರಕೃಷ್ಣಾ ಜಿನಾಂಬರೌ ॥19॥**

ಭಾವಾರ್ಥ - ರೂಪ-ಲಾವಣ್ಯವನ್ನು ಹೊಂದಿರುವ ತರುಣರೂ ಸೌಜನ್ಯವಂತರೂ, ಅಪ್ರತಿಮ ಮಹಾಬಲಾಢ್ಯರೂ, ಬಿಳಿಯ ತಾವರೆಯಂತೆ ಕಂಗೊಳಿಸುವವರೂ, ನಾರು ಮಡಿ ಕೃಷ್ಣಾಜಿನಧಾರಿಗಳೂ. . .

**ಫಲ ಮೂಲಾಶಿನೌ ದಾಂತೌ ತಾಪಸೌ ಬ್ರಹ್ಮಚಾರಿಣೌ ।**
**ಪುತ್ರೌ ದಶರಥಸ್ಯೇತೌ ಭ್ರಾತರೌ ರಾಮಲಕ್ಷ್ಮಣೌ ॥20॥**

ಭಾವಾರ್ಥ - ಕಾಡಿನಲ್ಲಿ ಕಂದಮೂಲಾದಿಗಳನ್ನು ತಿನ್ನುವವರೂ, ಜಿತೇಂದ್ರಿಯರೂ, ತಪಸನ್ನಾಚರಿಸುವವರೂ, ದಶರಥ ಪುತ್ರರೂ ಹಾಗೆಯೇ ರಾಮಲಕ್ಷ್ಮಣ ಸೋದರರೂ . . .

**ಶರಣ್ಯೌ ಸರ್ವಸಂತ್ವಾನಾಂ ಶ್ರೇಷ್ಠೌ ಸರ್ವ ಧನುಷ್ಮತಾಂ ।**
**ರಕ್ಷಃಕುಲನಿಹಂತಾರೌ ತ್ರಾಯೇತಾಂ ನೋ ರಘೂತ್ತಮೌ ॥21॥**

ಭಾವಾರ್ಥ - ಸಾಧುಸಂತರಿಗೆ ಆಶ್ರಯದಾತರೂ, ಶರಣಾಗತರನ್ನು ಕಾಪಾಡುವವರೂ, ಬಿಲ್ಲು ವಿದ್ಯಾ ಪ್ರವೀಣರೂ, ರಾಕ್ಷಸ ಕುಲಧ್ವಂಸಕರೂ, ಆಗಿರುವ ರಘುಕುಲೋತ್ತಮರು ನಮ್ಮನ್ನು ರಕ್ಷಿಸಲಿ.

**ಆತ್ತ ಸಜ್ಜ ಧನುಷಾ ವಿಷುಸ್ಪೃಶಾವಕ್ಷ್ಯ ಯಾಶು ಗನಿಷಂಗಸಂಗಿನೌ ।**
**ರಕ್ಷಣಾಯ ಮಮ ರಾಮ ಲಕ್ಷ್ಮಣಾವಗ್ರತಃ ಪಥಿ ಸದೈವ ಗಚ್ಛತಾಂ ॥22॥**

ಭಾವಾರ್ಥ - ಅಕ್ಷಯವಾಗಿರುವ ಬತ್ತಳಿಕೆಯೊಡನೆ ಸದಾ ಬಾಣ ಹೂಡಲು ಸಜ್ಜಾಗಿರುವ ರೀತಿಯಲ್ಲಿ ಧನುಸ್ಸಿಗೆ ಬಾಣವನ್ನು ಹೂಡಿಕೊಂಡು ರಾಮಲಕ್ಷ್ಮಣರು ಹಾದಿಯಲ್ಲಿ ಯಾವಾಗಲೂ ನನ್ನ ಮುಂದಿರಲಿ.

**ಸನ್ನದ್ಧಃ ಕವಚೀ ಖಡ್ಗೀ ಚಾಪಬಾಣಧರೋ ಯುವಾ ।**
**ಗಚ್ಛನ್ ಮನೋರಥೋಸ್ಮಾಕಂ ರಾಮಃ ಪಾತು ಸ ಲಕ್ಷ್ಮಣಃ ॥23॥**

ಭಾವಾರ್ಥ - ಕವಚ, ಖಡ್ಗ, ಧನುರ್ಬಾಣಗಳನ್ನು ಧರಿಸಿ ಯಾವಾಗಲೂ ಸನ್ನದ್ಧ ಸ್ಥಿತಿಯಲ್ಲಿರುವ ಯುವಕನಾಗಿರುವ ಲಕ್ಷ್ಮಣನೊಡನೆ ಸಂಚರಿಸುತ್ತಿರುವ ಶ್ರೀರಾಮನು ನಮ್ಮ ಮನೋಭಿಲಾಷೆಗಳನ್ನು ಸದಾ ಈಡೇರಿಸಲಿ.

**ರಾಮೋ ದಾಶರಥಿಃ ಶೂರೋ ಲಕ್ಷ್ಮಣಾನುಚರೋ ಬಲೀ ।**
**ಕಾಕುತ್ಸ್ಥಃ ಪುರುಷಃ ಪೂರ್ಣಃ ಕೌಸಲ್ಯೇಯೋ ರಘೂತ್ತಮಃ ॥24॥**

ಭಾವಾರ್ಥ - ಭಗವಾನ್ ಶ್ರೀರಾಮನು ಹೇಳುತ್ತಾನೆ "ರಾಮ, ದಾಶರಥಿ, ಶೂರ, ಲಕ್ಷ್ಮಣಾನುಚರ, ಬಲೀ, ಕಾಕುತ್ಸ್ಥ, ಪುರುಷ, ಪೂರ್ಣ, ಕೌಸಲ್ಯೇಯ, ರಘೂತ್ತಮ, . . . .

**ವೇದಾಂತವೇದ್ಯೋ ಯಜ್ಞೇಶಃ ಪುರಾಣ ಪುರುಷೋತ್ತಮಃ ।**
**ಜಾನಕೀ ವಲ್ಲಭಃಶ್ರೀಮಾನಪ್ರಮೇಯ ಪರಾಕ್ರಮಃ ॥25॥**

ಭಾವಾರ್ಥ - ವೇದಾಂತವೇದ್ಯ, ಯಜ್ಞೇಶ, ಪುರಾಣ ಪುರುಷೋತ್ತಮ, ಜಾನಕೀವಲ್ಲಭ, ಶ್ರೀಮಾನ್, ಅಪ್ರಮೇಯ, ಪರಾಕ್ರಮ, . . . .

**ಇತ್ಯೇತಾನಿ ಜಪನ್ನಿತ್ಯಂ ಮದ್ಭಕ್ತಃ ಶ್ರದ್ಧಯಾನ್ವಿತಃ ।**
**ಅಶ್ವಮೇಧಾಧಿಕಂ ಪುಣ್ಯಂ ಸಂಪ್ರಾಪ್ನೋತಿ ನ ಸಂಶಯಃ ॥26॥**

ಭಾವಾರ್ಥ - ಈ ರೀತಿಯಾಗಿ ಯಾವ ಭಕ್ತರು ನನ್ನ ವಿವಿಧ ನಾಮಾವಲಿಗಳನ್ನು ನಿತ್ಯವೂ ಜಪಿಸುತ್ತಾರೋ ಅವರಿಗೆ ಅಶ್ವಮೇಧಯಾಗ ಮಾಡಿದರೆ ದೊರಕುವ ಫಲಗಳಿಂದ ಅಧಿಕ ಫಲವು ದೊರಕುವುದರಲ್ಲಿ ಯಾವ ಸಂಶಯವೂ ಇಲ್ಲ. "

**ರಾಮಂ ದೂರ್ವಾದಲಶ್ಯಾಮಂ ಪದ್ಮಾಕ್ಷಂ ಪೀತವಾಸಸಂ ।**
**ಸ್ತುವಂತಿ ನಾಮಭಿರ್ದಿವ್ಯೈರ್ ನ ತೇ ಸಂಸಾರಿಣೋ ನರಃ ॥27॥**

ಭಾವಾರ್ಥ - ಗರಿಕೆಯ ದಳಗಳನ್ನು ಹೋಲುವ ವರ್ಣವನ್ನು ಹೊಂದಿರುವವನೂ, ತಾವರೆಯನ್ನು ಹೋಲುವ ಕಣ್ಣುಗಳುಳ್ಳವನೂ, ಪೀತಾಂಬರದಾರಿಯೂ, ಆಗಿರುವ ಶ್ರೀರಾಮನ ದಿವ್ಯ ನಾಮಾವಲಿಗಳಿಂದ ಆ ಸ್ವಾಮಿಯನ್ನು ಸ್ತುತಿಸುವ ಭಕ್ತರು ಸಂಸಾರವೆಂಬ ನರಕ ಕೂಪದಲ್ಲಿ ಎಂದೂ ಸಿಲುಕರು. ಅಂತಹವರು ಸಂಸಾರಿಗಳಾದರೂ ಸಂನ್ಯಾಸಿಯಂತೆ ಸಾರ್ಥಕ ಜೀವನವನ್ನು ಮಾಡುವರು.

**ರಾಮಂ ಲಕ್ಷ್ಮಣ ಪೂರ್ವಜಂ ರಘುವರಂ ಸೀತಾಪತಿಂ ಸುಂದರಂ ।**
**ಕಾಕುತ್ಸ್ಥಂ ಕರುಣಾರ್ಣವಂ ಗುಣನಿಧಿಂ ವಿಪ್ರಪ್ರಿಯಂ ಧಾರ್ಮಿಕಂ ।**
**ರಾಜೇಂದ್ರಂ ಸತ್ಯಸಂಧಂ ದಶರಥತನಯಂ ಶ್ಯಾಮಲಂ ಶಾಂತಮೂರ್ತಿಂ ।**
**ವಂದೇಲೋಕಾಭಿರಾಮಂ ರಘುಕುಲತಿಲಕಂ ರಾಘವಂ ರಾವಣಾರಿಂ ॥28॥**

ಭಾವಾರ್ಥ - ಇಕ್ಷ್ವಾಕು ವಂಶಶ್ರೇಷ್ಠನೂ, ಲಕ್ಷ್ಮಣಾಗ್ರಜನೂ, ರಘುಕುಲೋತ್ತಮನೂ, ದಶರಥತನಯನೂ, ಸೀತಾಕಾಂತನೂ, ಸುಂದರನೂ, ಕರುಣಾಸಾಗರನೂ, ಗುಣನಿಧಿಯೂ, ಬ್ರಾಹ್ಮಣಪ್ರಿಯನೂ, ಧಾರ್ಮಿಕನೂ, ರಾಜಶ್ರೇಷ್ಠನೂ, ಸತ್ಯನಿಷ್ಟನೂ, ಶ್ಯಾಮಲವರ್ಣದವನೂ, ಶಾಂತಮೂರ್ತಿಯೂ, ಭಕ್ತಜನಬಂಧುವೂ, ದಯಾನಿಧಿಯೂ, ರಾವಣಾಂತಕನೂ, ಲೋಕಾನಂದದಾಯಕನೂ ಆಗಿರುವ ಶ್ರೀರಾಮಚಂದ್ರನ ಪಾದಾರವಿಂದಗಳಿಗೆ ಭಕ್ತಿಪುರಸ್ಸರವಾಗಿ ನಾನು ನಮಸ್ಕರಿಸುತ್ತೇನೆ.

**ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।**
**ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥29॥**

ಭಾವಾರ್ಥ - ರಾಮ, ರಾಮಭದ್ರ, ರಾಮಚಂದ್ರ, ಸೃಷ್ಟಿಕರ್ತ, ರಘುನಾಥ, ಸೀತಾಪತಿ, ಮೊದಲಾದ ವಿವಿಧ ನಾಮಗಳಿಂದ ಕರೆಯಲ್ಪಡುವ ಸೀತಾಪತಿಗೆ ನನ್ನ ನಮಸ್ಕಾರಗಳು.

**ಶ್ರೀರಾಮ ರಾಮ ರಘುನಂದನ ರಾಮ ರಾಮ ಶ್ರೀರಾಮ ರಾಮ ಭರತಾಗ್ರಜ ರಾಮ ರಾಮ । ಶ್ರೀರಾಮ ರಾಮ ರಣಕರ್ಕಶ ರಾಮ ರಾಮ ಶ್ರೀರಾಮ ರಾಮ ಶರಣಂ ಭವ ರಾಮ ರಾಮ ॥30॥**

ಭಾವಾರ್ಥ - ಹೇ! ರಘುನಂದನ ಶ್ರೀರಾಮನೇ, ಭರತಾಗ್ರಜ ಶ್ರೀರಾಮನೇ, ರಣಧೀರ ಶ್ರೀರಾಮನೇ, ಶ್ರೀರಾಮನೇ, ಪರಂಧಾಮನೇ, ಮಮ ಸ್ವಾಮಿಯೇ ನಿನ್ನಡಿಗಳಿಗಿದೋ ಶರಣು ಶರಣು.

**ಶ್ರೀರಾಮಚಂದ್ರ ಚರಣೌ ಮನಸಾ ಸ್ಮರಾಮಿ ಶ್ರೀರಾಮಚಂದ್ರ ಚರಣೌ ವಚಸಾಗೃಣಾಮಿ । ಶ್ರೀರಾಮಚಂದ್ರ ಚರಣೌ ಶಿರಸಾ ನಮಾಮಿ ಶ್ರೀರಾಮಚಂದ್ರ ಚರಣೌ ಶರಣಂ ಪ್ರಪದ್ಯೇ ॥31॥**

ಭಾವಾರ್ಥ - ಶ್ರೀರಾಮಚಂದ್ರನೇ ನಿನ್ನಚರಣಗಳನ್ನು ಮನಸಾ ಸ್ಮರಿಸುವೆನು. ಶ್ರೀರಾಮಚಂದ್ರನೇ ನಿನ್ನ ಚರಣಗಳನ್ನು ಬಾಯಿಯಿಂದ ಉಚ್ಚರಿಸುವೆನು. ಶ್ರೀರಾಮಚಂದ್ರನೇ ನಿನ್ನ ಚರಣಗಳನ್ನು ಶಿರಸಾ ಧರಿಸುವೆನು. ಶ್ರೀರಾಮಚಂದ್ರನೇ ನಿನ್ನ ಚರಣಗಳಿಗೆ ನಮಸ್ಕರಿಸುವ ಮೂಲಕ ಸಾಷ್ಟಾಂಗ ನಮಸ್ಕರಿಸುತ್ತಾ ಶರಣಾಗುವೆ.

**ಮಾತಾರಾಮೋ ಮತ್ಪಿತಾ ರಾಮಚಂದ್ರಃ ಸ್ವಾಮೀ ರಾಮೋ ಮತ್ಸಖಾ ರಾಮಚಂದ್ರಃ । ಸರ್ವಸ್ವಂ ಮೇ ರಾಮಚಂದ್ರೋ ದಯಾಲುರ್ ನಾನ್ಯಂ ಜಾನೇ ನೈವ ಜಾನೇ ನ ಜಾನೇ ॥32॥**

ಭಾವಾರ್ಥ - ನನ್ನ ತಾಯಿ, ತಂದೆ, ಸ್ನೇಹಿತ, ಸರ್ವಸ್ವವೂ ರಾಮಚಂದ್ರನೇ ಆಗಿದ್ದಾನೆ. ಈ ಭೂಮಿಯಲ್ಲಿ ಅವನ ಹೊರತಾಗಿ ಬೇರೊಬ್ಬ ಕರುಣಾಳುವನ್ನು ನಾನು ಅರಿಯೆ.

**ದಕ್ಷಿಣೇ ಲಕ್ಷ್ಮಣೋ ಯಸ್ಯ ವಾಮೇತು ಜನಕಾತ್ಮಜಾ । ಪುರತೋ ಮಾರುತೀ ಯಸ್ಯ ತಂ ವಂದೇ ರಘುನಂದನಂ ॥33॥**

ಭಾವಾರ್ಥ - ಯಾವಾತನ ಎಡ ಭಾಗದಲ್ಲಿ ಲಕ್ಷ್ಮಣನೂ, ಬಲ ಬದಿಯಲ್ಲಿ ಸೀತೆಯೂ, ಎದುರು ಭಾಗದಲ್ಲಿ ಆಂಜನೇಯನೂ ಇರುವರೋ ಅಂತಹಾ ಶ್ರೀರಾಮಚಂದ್ರನಿಗೆ ನಾನು ನಮಸ್ಕರಿಸುವೆ.

**ಲೋಕಾಭಿರಾಮಂ ರಣರಂಗಧೀರಂ ರಾಜೀವನೇತ್ರಂ ರಘುವಂಶ ನಾಥಂ । ಕಾರುಣ್ಯ ರೂಪಂ ಕರುಣಾಕರಂ ತಂ ಶ್ರೀರಾಮ ಚಂದ್ರಂ ಶರಣಂ ಪ್ರಪದ್ಯೇ ॥34॥**

ಭಾವಾರ್ಥ - ಲೋಕಕ್ಕೆ ಆನಂದವನ್ನು ಕರುಣಿಸುವವನೂ, ಯುದ್ಧಭೂಮಿಯಲ್ಲಿ ಅಜೇಯನೂ, ಕಮಲದಳಗಳನ್ನು ಹೋಲುವ ಕಣ್ಣುಗಳುಳ್ಳವನೂ, ರಘುವಂಶ ಕುಲದೀಪಕನೂ, ದಯಾಮೂರ್ತಿಯೂ, ಕರುಣಾಸಾಗರನೂ, ಆಗಿರುವ ಶ್ರೀರಾಮಚಂದ್ರನಿಗೆ ನಾನು ಶರಣು ಹೋಗುತ್ತೇನೆ.

**ಮನೋಜವಂ ಮಾರುತ ತುಲ್ಯ ವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ । ವಾತಾತ್ಮಜಂ ವಾನರಯೂಥ ಮುಖ್ಯಂ ಶ್ರೀ ರಾಮದೂತಂ ಶರಣಂ ಪ್ರಪದ್ಯೇ ॥35॥**

ಭಾವಾರ್ಥ - ವಾಯುವಿನ ವೇಗಕ್ಕೆ ಸಮಾನವಾದ ವೇಗವುಳ್ಳವನೂ, ಚುರುಕು ಬುದ್ಧಿಯವನೂ, ಇಂದ್ರಿಯನಿಗ್ರಹಿಯೂ, ಅಪ್ರತಿಮ ಧೀಮಂತನೂ, ಬುದ್ಧಿವಂತರಲ್ಲಿ ಶ್ರೇಷ್ಠನೂ, ವಾಯು ನಂದನನೂ, ವಾನರಾಗ್ರೇಸರನೂ ಆಗಿರುವ ಶ್ರೀರಾಮದಾಸ ಹನುಮನಿಗೆ ನಾನು ಶರಣಾಗುವೆ.

**ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿ ಕೋಕಿಲಂ ॥36॥**

ಭಾವಾರ್ಥ - ಮರದ ಕೊಂಬೆಯ ಮೇಲೆ ಕುಳಿತು ಕೋಗಿಲೆಯು ಕುಹೂ ಕುಹೂ ಎಂದು ಸುಮಧುರವಾಗಿ ಕೂಗುವ ರೀತಿಯಲ್ಲಿ ವಾಲ್ಮೀಕಿ ಎಂಬ ಕವಿಕೋಗಿಲೆಯು ಕವಿತೆಯೆಂಬ ಮರದ ಮೇಲೆ ಕುಳಿತು "ರಾಮ ರಾಮಾ" ಎಂದು ಸುಮಧುರವಾಗಿ ಹಾಡುತ್ತಾ ಕಾವ್ಯ ರೂಪದಲ್ಲಿ ಶ್ರೀರಾಮನ ಗುಣಗಾನ ಮಾಡಿದ್ದು ಅಂತಹಾ ಆದಿಕವಿಶ್ರೇಷ್ಠ ವಾಲ್ಮೀಕಿ ಮಹರ್ಷಿಗೆ ನಾನು ನಮಸ್ಕರಿಸುವೆನು.

**ಆಪದಾಮಪ ಹರ್ತಾರಂ ದಾತಾರಂ ಸರ್ವ ಸಂಪದಾಂ । ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಂ ॥37॥**

ಸಕಲ ಸಂಕಷ್ಟಗಳನ್ನು ದೂರೀಕರಿಸುವವ, ಸರ್ವ ಸಂಪದವನ್ನು ಅನುಗ್ರಹಿಸುವವ, ಸರ್ವಾನಂದದಾಯಕನಾಗಿರುವ ಶ್ರೀರಾಮಚಂದ್ರನ ಪದತಲಗಳಿಗೆ ಪುನಃಪುನಃ ನಾನು ಎರಗುವೆನು.

**ಭರ್ಜನಂ ಭವ ಬೀಜಾನಾಂ ಆರ್ಜನಂ ಸುಖಸಂಪದಾಂ । ತರ್ಜನಂ ಯಮದೂತಾನಾಂ ರಾಮ ರಾಮೇತಿ ಗರ್ಜನಂ ॥38॥**

ಭಾವಾರ್ಥ - ಪುನರ್ಜನ್ಮಕ್ಕೆ ಕಾರಣವಾಗುವ ಪಾಪ ಸಮೂಹವನ್ನು ಸುಡುವ, ಸುಖ ಸಂಪತ್ತನ್ನು ಒದಗಿಸುವ, ಯಮದೂತರಿಗೆ ಭೀತಿಯನ್ನುಂಟು ಮಾಡುವ ರಾಮ ರಾಮಾ ಎಂಬ ಪುಣ್ಯ ನಾಮದ ಮಹಿಮೆ ವರ್ಣಿಸಲಸದಳ.

**ರಾಮೋ ರಾಜಮಣಿಃ ಸದಾ ವಿಜಯತೇರಾಮಂ ರಮೇಶಂ ಭಜೇ ರಾಮೇಣಾಭಿಹತಾ ನಿಶಾಚರಚಮೂ ರಾಮಾಯ ತಸ್ಮೈ ನಮಃ । ರಾಮಾನ್ನಾಸ್ತಿ ಪರಾಯಣಂ ಪರತರಂ ರಾಮಸ್ಯ ದಾಸೋಽಸ್ಮ್ಯಹಂ ರಾಮೇ ಚಿತ್ತಲಯಃ ಸದಾ ಭವತು ಮೇ ಭೋ ರಾಮ ಮಾಮುದ್ಧರ ॥39॥**

ಭಾವಾರ್ಥ - ಯಾವಾತನಿಂದ ರಾಕ್ಷಸ ವೃಂದವು ನಾಶಮಾಡಲ್ಪಟ್ಟಿತೋ ಅಂತಹಾ ರಾಜಮಣಿಯೆನಿಸಿರುವ ರಾಮನನ್ನು ನಾನು ಸದಾ ಸ್ಮರಿಸುವೆ. ಶ್ರೀರಾಮನಿಗೆ ಸದಾ ಜಯವಾಗಲಿ. ರಾಮಕಿಂಕರನಾದ ನನಗೆ ರಾಮನಲ್ಲದೆ ಅನ್ಯತ್ರ ಆಶ್ರಯವಿಲ್ಲ. ಆದ್ದರಿಂದ ನನ್ನ ಸರ್ವಸ್ವವಾಗಿರುವ ಆ ಶ್ರೀರಾಮನ ಸ್ಮರಣೆಯಲ್ಲಿ ನನ್ನ ಮನಸ್ಸು ಲೀನವಾಗಿರಲಿ. ಆ ಕರುಣಾಮಯಿ ರಾಮನು ನನ್ನನ್ನು ಸದಾ ಉದ್ಧರಿಸಲಿ.

**ಶ್ರೀರಾಮ ರಾಮೇತಿ ರಾಮೇತಿ ರಮೇ ರಾಮೇ ಮನೋರಮೇ । ಸಹಸ್ರ ನಾಮ ತತ್ತುಲ್ಯಂ ಶ್ರೀ ರಾಮ ನಾಮ ವರಾನನೇ ॥40॥**

ಈ ಒಂದು ರಾಮನಾಮವು ವಿಷ್ಣು ಸಹಸ್ರನಾಮಗಳಿಗೆ ಸಮಾನವಾದುದಾಗಿದೆ. ಅಂದರೆ ವಿಷ್ಣು ಸಹಸ್ರನಾಮದಿಂದ ದೊರಕುವ ಫಲವು "ರಾಮ" ಎಂಬ ಇದೊಂದೇ ನಾಮದಿಂದ ದೊರಕುವುದು. ಅಂತಹಾ ಪರಮ ಪಾವನಮಯ ಸತ್ವಶಾಲೀ ರಾಮನಾಮ ಸ್ಮರಣೆಯಲ್ಲಿ ನನ್ನ ಮನಸ್ಸು ಸದಾ ಇರುವಂತಾಗಲಿ.

॥ ಇತಿ ಶ್ರೀ ಬುಧಕೌಶಿಕ ವಿರಚಿತ ಶ್ರೀರಾಮರಕ್ಷಾ ಸ್ತೋತ್ರಂ ಸಂಪೂರ್ಣಂ ॥

## 8.10 ಶ್ರೀ ರಾಮ ಮಾನಸ ಸ್ತೋತ್ರಂ

**ಶ್ರೀಮನ್ನುಜ್ಜ್ವಲ-ಕೋಟಿಭಾನು-ಸದೃಶಂ ಮಂದಸ್ಮಿತಂ ಶಾಮಲಂ ।**
**ಶ್ರೀ ಸೀತಾಸಹಿತಂ ವರಾ ಭಯಕರಂ ವಾಮೇ ಸುಮಿತ್ರಾಸುತಂ ॥**

**ಶ್ರೀ ವತ್ಸಾಂಕ-ಧನುಃಶರಾದಿ-ಲಸಿತಂ ವಾತಾತ್ಮಜಾಭಿಷ್ಟುತಂ ।**
**ಶ್ರೀರಾಮೇತಿ-ಪದದ್ವಯಾನ್ವಿತ ಮಹಂ ಧ್ಯಾಯೇ ಮನೋಮಂದಿರೇ ॥1॥**

ಭಾವಾರ್ಥ - ಕೋಟಿಸೂರ್ಯರ ಸಮಾನವಾದ ಪ್ರಕಾಶಮಯ ತೇಜಸ್ಸನ್ನು ಹೊಂದಿ, ಮನೋಹರನೂ, ಮುಗುಳ್ನಗೆಯಿಂದ ಕೂಡಿದವನೂ, ಶ್ಯಾಮಲ ವರ್ಣದವನೂ, ಸೀತಾದೇವಿಯೊಡಗೂಡಿದವನೂ, ಅಗ್ರಗಣ್ಯನೂ, ಅಭಯಹಸ್ತವುಳ್ಳವನೂ, ಸುಮಿತ್ರಾತನಯ ಲಕ್ಷ್ಮಣನ ಒಡನಿರುವವನೂ, ಎದೆಯ ಮೇಲೆ ಮಚ್ಚೆಯುಳ್ಳವನೂ, ಬಿಲ್ಲು ಬಾಣಗಳಿಂದ ಅಲಂಕೃತಗೊಂಡವನೂ, ಮಾರುತಿಯಿಂದ ಸ್ತುತಿಸಲ್ಪಡುವವನೂ, "ಶ್ರೀ" ಮತ್ತು ""ರಾಮ" ಎಂಬೀ ಎರಡು ಪದಗಳಿಂದ ಕೂಡಿರುವವನೂ ಆಗಿರುವ ಶ್ರೀ ರಾಮಚಂದ್ರನನ್ನು ನನ್ನ ಹೃದಯ ಮಂದಿರದಲ್ಲಿ ನೆಲೆಗೊಳಿಸಿ ಆರಾಧಿಸುತ್ತಿದ್ದೇನೆ.

**ರಾಮೇತ್ಯೇಕರಸ-ಸ್ವರೂಪಮಮಲಂ ಲೀಲಾವತಾರಾವ್ಯಯಂ ।**
**ರಾಜೇಂದ್ರಂ ರಘುನಂದನಂ, ರವಿಕುಲೋದ್ಭೂತಂ ಸಮಾವಾಹಯೇ ॥**

**ರಾಜೇಷ್ಟಂ ರಮಣೀಯಮರ್ಚಿತಮಿದಂ ಮಾಣಿಕ್ಯ ಸಿಂಹಾಸನಂ ।**
**ಪಾದ್ಯಂಸಾಚಮನೀಯಮರ್ಘ್ಯಮಮೃತಂ ರಾಮ ಸ್ವಯಂ ಸ್ವೀಕುರು ॥2॥**

ಭಾವಾರ್ಥ_ರಾಮನೆನ್ನುವ ಸ್ವಚ್ಛವಾದ, ವಿನಾಶರಹಿತನಾದ, ಪರಬ್ರಹ್ಮನ ಏಕೈಕ ಸ್ವರೂಪಿಯಾದ, ಲೀಲಾವತಾರಿಯೂ, ರಾಜೇಂದ್ರನೂ, ರಘುನಂದನನೂ, ರವಿವಂಶದಲ್ಲಿ ಜನನವೆತ್ತವನೂ, ಆದ ಶ್ರೀರಾಮಚಂದ್ರನೇ!ನಿನ್ನನ್ನು ಗೌರವಪೂರ್ವಕವಾಗಿ ಬರಮಾಡಿಕೊಳ್ಳುತ್ತಿರುವೆ. ಸ್ವಾಮಿಯೇ ಅರಸುಕುಲಪ್ರಿಯನಾದ ನಿನಗೆ ಆಹ್ಲಾದಕರವಾಗಿರುವ ಮಾಣಿಕ್ಯ ಸಿಂಹಾಸನಕ್ಕೆ ಸಮವಾದ ನನ್ನ ಹೃದಯವನ್ನು ಸುಖಾಸನವಾಗಿ ಅರ್ಪಿಸುತ್ತಲ್ಲಿರುವೆ. ಶ್ರೀರಾಮಚಂದ್ರನೇ, ಪಾದಗಳನ್ನು ಶುಚಿಯಾಗಿಸಿಕೊಳ್ಳಲು ಮತ್ತು ಆಚಮನಾರ್ಥವಾಗಿ ಅರ್ಪಿಸುತ್ತಿರುವ ಈ ಶುದ್ಧೋದಕವನ್ನು ಸ್ವೀಕರಿಸು.

**ಮಧ್ವಕ್ತಂ ಮಧುಪರ್ಕಮಂತ್ರಪಠಿತಂ ಪಂಚಾಮೃತಂ ಕಲ್ಪಿತಂ ।**
**ಮಂದಾಕಿನ್ಯಾಮಿದಂ ಸುರತ್ನಕಲಶೈಃ ಸ್ನಾನಾರ್ಥಮಪ್ಯಾಹೃತಂ ।**
**ಮಂದಾರಾಮರ-ಪಾರಿಜಾತ-ತಲಗೇ ಸೌವರ್ಣ ಪೀಠೇ ಸ್ಥಿತಂ ।**
**ಮಂತ್ರೈಸ್ತ್ವಾಮಿಷೇಚಯಾಮಿ ವಿವಿಧೈಃ ಸೂಕ್ತೈಃ ಸು ತೀರ್ಥೋದಕೈಃ ॥3॥**

ಭಾವಾರ್ಥ - ಸ್ವಾಮಿ ಶ್ರೀರಾಮಚಂದ್ರನೇ! ನಿನ್ನ ಪ್ರೀತ್ಯರ್ಥವಾಗಿ ಮಧುಪರ್ಕ ಮಂತ್ರ ಪಠಿಸುತ್ತಾ ಜೇನು ಮಿಶ್ರಿತ ಪಂಚಾಮೃತವನ್ನು ವ್ಯವಸ್ಥೆಗೊಳಿಸಿರುವೆನು. ನಿನ್ನ ಸ್ನಾನಾರ್ಥವಾಗಿ ಪವಿತ್ರವಾದ ಗಂಗಾಜಲವನ್ನು ಶ್ರೇಷ್ಠವಾಗಿರುವ ರತ್ನಗಳಿಂದ ಅಲಂಕರಿಸಲ್ಪಟ್ಟ ಕಲಶಗಳಲ್ಲಿ ತಂದಿರಿಸಿರುವೆನು. ಮಂದಾರ ಪಾರಿಜಾತ, ಕಲ್ಪತರು ಮೊದಲಾದ ದೇವ ವೃಕ್ಷಗಳ ಅಡಿಯಲ್ಲಿ ಇರಿಸಿರುವ ಬಂಗಾರದ ಪೀಠದಲ್ಲಿ ನಿನ್ನನ್ನು ಕುಳ್ಳಿರಿಸಿ ನಾನಾ ವಿಧದ ಸೂಕ್ತ ಮಂತ್ರಾದಿಗಳಿಂದ, ಶ್ರೇಷ್ಠವಾಗಿರುವ ತೀರ್ಥಗಳಿಂದ ನಿನ್ನ ಅಭಿಷೇಕವನ್ನು ಮಾಡುವೆನು ಸ್ವಾಮಿಯೇ. ಕೃಪೆಯುಳ್ಳವನಾಗಿ ಸ್ವೀಕರಿಸು.

**ಜಲಧರ-ನಿಭಗಾತ್ರೇ ಸ್ವರ್ಣಯಜ್ಞೋಪವೀತಂ । ನವಗುಣ-ಗಣಿತಂ ತತ್ ಪಾವನಂ ಪಾವನಾನಾಂ ॥ ತಡಿದಿವ ಖಲುಪೀತಂ ವಸ್ತ್ರಮಚ್ಚೋತ್ತರೀಯಂ । ಜಯ ರಘುವರ ದಾಸ್ಯೇ ತ್ವಂ ಗೃಹಾಣ ಸ್ವಮೇವ ॥4॥**

ಭಾವಾರ್ಥ - ಬಂಗಾರದ ಮೂರೆಳೆಗಳುಳ್ಳ ಯಜ್ಞೋಪವೀತವನ್ನು ಜಲಾವೃತವಾಗಿರುವ ಮುಗಿಲನ್ನು ಹೋಲುವ ಶ್ಯಾಮಲ ವರ್ಣದವನಾದ ನಿನ್ನ ಕೊರಳಿಗೆ ಅರ್ಪಿಸುತ್ತಿರುವೆನು. ಮಿಂಚಿನಂತೆ ಪ್ರಕಾಶಮಯವಾದ ಹಳದಿಯ ವಸ್ತ್ರವನ್ನು ನಿನ್ನ ಉತ್ತರೀಯಕ್ಕಾಗಿ ಸಮರ್ಪಿಸುತ್ತಿರುವೆನು. ಇವೆಲ್ಲವುಗಳನ್ನು ಸ್ವೀಕರಿಸು ಸ್ವಾಮಿಯೇ! ಅಗ್ರಗಣ್ಯ ಶ್ರೀ ರಾಮಚಂದ್ರನೇ ನಿನಗೆ ಜಯವಾಗಲಿ.

**ಕಿರೀಟ-ಹಾರಾಂಗದ-ಚಾರು-ಮೇಖಲಾ ।**
**ಮುದ್ರಾದ್ಯನೇಕಾಕೃತಿ-ಭೂಷಣಾನಿ ॥**

**ಮಹೀ-ಸುಗಂಧಂ ಪ್ರಗೃಹಾಣ ಚಾಕ್ಷತಾನ್ ।**
**ಪುಷ್ಪೇಷು ಖಂ ರಾಮ ಮಯಾ ಸಮರ್ಪಿತಂ ॥5॥**

ಭಾವಾರ್ಥ - ಕಿರೀಟ. ಮಾಲೆ, ಭುಜದ ಆಭರಣ, ಸುಂದರವಾಗಿರುವ ಸೊಂಟದ ಪಟ್ಟಿ, ಮನೋಹರವಾಗಿರುವ ಉಂಗುರಗಳು, ಸುಗಂಧಾಕ್ಷತೆ, ಮತ್ತು ಆಗಸ ವರ್ಣದ ಪುಷ್ಪಗಳನ್ನು ಅರ್ಪಿಸುತ್ತಿರುವೆನು. ಸ್ವೀಕರಿಸು ಸ್ವಾಮಿಯೇ!

**ರಾಷ್ಟ್ರೋಪಪ್ಲವನಾಶಕಂ ಸುಲಲಿತಂ ವಾಯುಂ ಸುಧೂಪಂ ತಥಾ ।**
**ರಾಮೇಮಂ ಪರಮಂ ದಿವಾಕರ ಮಹೋತೇಜೋಮಯಿ ದೀಪಿಕಾಂ ॥**

**ರಾಜೀವಾರುಣಲೋಚನಾಮೃತಮಯಂ ಷಟ್ ಸ್ವಾದುಲೋಲ್ಯೈರಸ್ಯೈಃ ।**
**ಸಂಪನ್ನಂ ವಿನಿವೇದಿತಂ ಸುಮನಸಾ ನೈವೇದ್ಯಮಂಗೀಕುರು ॥6॥**

ಭಾವಾಥಃ- ನಾಡಿಗೆ ಬೇಗೆಯನ್ನು ಕೊಡುವ ಕೆಟ್ಟ ವಾತಾವರಣವನ್ನು ಹೋಗಲಾಡಿಸಬಲ್ಲ ಉತ್ತಮ ಧೂಪವನ್ನೂ ಮನಮೋಹಕವಾದಂತಹಾ, ಸೂರ್ಯನಂತೆ ಪರಮ ತೇಜೋಮಯವಾಗಿರುವ ದೀಪವನ್ನೂ ಶ್ರೀರಾಮಚಂದ್ರನೇ ನಿನಗರ್ಪಿಸುತ್ತಿರುವೆನು. ಕಮಲವನ್ನು ಹೋಲುವ ನಯನಗಳುಳ್ಳ ರಾಜೀವ ಲೋಚನನೇ, ಶ್ರದ್ಧಾಭಕ್ತಿಗಳಿಂದ ಷಡ್ರಸಭರಿತ ಪಕ್ವಾನ್ನಗಳನ್ನು ನೈವೇದ್ಯರೂಪದಲ್ಲಿ ಅರ್ಪಿಸುತ್ತಿರುವೆನು ಸ್ವಾಮಿಯೇ, ಸ್ವೀಕರಿಸಿ ತೃಪ್ತನಾಗು.

**ಮಧ್ಯೇ ಪಾನಮಿದಂ ಸುಶೀತಲ ಜಲಂ ವಾನೀರಗಂಧಾಭೃತಂ ।**
**ರಾಮ ಸ್ವೀಕುರು ಮತ್ಸಮರ್ಪಿತಮಿದಂ ಹಸ್ತೋದಕಂ ನಿರ್ಮಲಂ ॥**

**ತಾಂಬೂಲಂ ಸಫಲಂ ತ್ರಯೋದಶಗುಣಂ ಸ್ವಾತ್ಮೈಕರಾಗಾನ್ವಿತಂ ।**
**ಶ್ರದ್ಧಾಢ್ಯರತ್ನ-ಸುವರ್ಣಪುಷ್ಪಸಹಿತಾಂ ಗೃಹಾಣತು ತಾಂ ದಕ್ಷಿಣಾಂ ॥7॥**

ಭಾವಾರ್ಥ - ಸ್ವಾಮಿ ಶ್ರೀರಾಮಚಂದ್ರನೇ!ಉತ್ತಮ ಪರಿಮಳ ಭರಿತ ಬೇರಿನ ಚೆನ್ನಾಗಿ ತಂಪಾದ ಜಲವನ್ನು ಭೋಜನ ಸ್ವೀಕಾರದ ಮಧ್ಯದಲ್ಲಿ ಸ್ವೀಕರಿಸುವವನಾಗು. ಹಸ್ತವನ್ನು ತೊಳೆಯುವುದರ ಮೂಲಕವಾಗಿ ಶುದ್ಧೀಕರಿಸಲು ಸ್ವಚ್ಛವಾಗಿರುವ ನೀರಿಲ್ಲಿದೆ. ಆತ್ಮ ಸ್ವರೂಪದ, ಹದಿಮೂರು ಗುಣಗಳುಳ್ಳ ತಾಂಬೂಲವಿದೋ ಇಲ್ಲಿರಿಸಿರುವೆ. ದಕ್ಷಿಣಾರ್ಥವಾಗಿ ಇದೋ ಸುವರ್ಣ ಪುಷ್ಪಗಳನ್ನು ಸಮರ್ಪಿಸುತ್ತಲಿರುವೆನು. ಇವೆಲವುಗಳನ್ನು ಮಂಗಲದಾಯಕನೇ, ಸ್ವೀಕರಿಸು.

**ಜಯಜಯತಿ ವಿಷ್ಣೂ ರಾಮನಾಮಾಭಿಧೇಯೋ ।**
**ಜಯತಿ ಜಯತಿ ಪೂರ್ಣಃ ಕೋಟಿಕಂದರ್ಪಭಾಸಃ॥**

**ಜಯತಿ ಜಯತಿ ವಾದ್ಯೈರ್ನಾಟಕೈರ್ಗೀತ ನೃತ್ಯೈ- ।**
**ರ್ಜಯ ಜಯ ತಿಮಿರಾರೇ ಗೃಹಣ ನೀರಾಜನಂ ತ್ವಂ ॥8॥**

ಭಾವಾರ್ಥ - ಶ್ರೀರಾಮನೆಂಬ ಹೆಸರಿನ ಶ್ರೀ ಮಹಾವಿಷ್ಣುವಿಗೆ ಜಯವಾಗಲಿ. ಕೋಟಿ ಮನ್ಮಥರ ತೇಜಸ್ಸನ್ನು ಹೊಂದಿರುವನೇ, ಪರಿಪೂರ್ಣನೇ,ನಿನಗೆ ಜಯವಾಗಲಿ. ನಾನಾ ವಿಧದ ಸಂಗೀತ-ವಾದ್ಯ-ನಾಟಕ-ನೃತ್ಯಗಳ ಮೂಲಕವಾಗಿ ನಿನ್ನ ಸೇವೆ ಗೈಯುತ್ತಿರುವೆ ಸ್ವಾಮಿಯೇ! ನಿನಗೆ ಜಯವಾಗಲಿ. ನನ್ನ ಅಜ್ಞಾನವೆಂಬ ಅಂಧಕಾರವನ್ನು ಕಳೆಯುವವನೇ, ಮಂಗಲಮಯವಾಗಿರುವ ನೀರಾಜನವನ್ನಿದೋ ಸ್ವೀಕರಿಸು. ನಿನಗಿದೋ ಜಯ ಜಯವೆನ್ನುವೆ.

**ಸಾಮ್ರಾಜ್ಯ ಭೋಜ್ಯಾದಿ-ಸುಪಾರಮೇಷ್ಠ್ಯಂ । ತಮತ್ರ ಯಜ್ಞಾಖಿಲ ವಸ್ತು ಜಾತಂ ॥**
**ಏಕಾಕ್ಷರಂ ಬ್ರಹ್ಮಮಯಂ ಪ್ರಸಿದ್ಧ । ಮೇವಾರ್ಪಯಾಮೀತಿ ಸುಮಂತ್ರ ಪುಷ್ಪಂ ॥9॥**

ಭಾವಾರ್ಥ - ಅಖಂಡ ಸಾಮ್ರಾಜ್ಯ-ಭೋಗಭಾಗ್ಯಾದಿಗಳಿಂದ ಪರಮೇಷ್ಠಿಯವರೆಗೆ ನಿರ್ಮಿತವಾಗಿರುವ ವಸ್ತುಗಳೆಲ್ಲವೂ ಓಂಕಾರವೆಂಬ ಪದವಾಚ್ಯ ಸ್ವರೂಪವಾಗಿರುವ ಪರಬ್ರಹ್ಮನ ರೂಪಗಳೇ ಆಗಿದ್ದು ಅವೆಲ್ಲವುಗಳನ್ನು ಪರಮೋತ್ಕೃಷ್ಟವಾಗಿರುವ ಮಂತ್ರಗಳ ಮುಖೇನ ಪುಷ್ಪಾಂಜಲಿ ಎಂಬುದಾಗಿ ನಿನಗರ್ಪಿಸುತ್ತಿರುವೆನು ಪ್ರಭುವೇ! ಕರುಣಾಸಾಗರ ಶ್ರೀರಾಮಚಂದ್ರನೇ ಸ್ವೀಕರಿಸುವವನಾಗು ಪ್ರಭುವೇ!

**ಜಯ ಜಯ ಕರುಣಾಬ್ಧೇಽನಂತ ಭಾನುಪ್ರಕಾಶ ।**
**ಜಯ ಜಯ ಜಗದೀಶಾವ್ಯಕ್ತ ಮಾಯಾಧಿದೇವ ॥**

**ಜಯ ಜಯ ಧರಣೀಜಾವಲ್ಲಭಾನಂತವೀರ್ಯ ।**
**ಜಯ ಜಯ ರಘುನಾಥಾಽನಾಥನಾಥ ಪ್ರಸೀದ ॥10॥**

ಭಾವಾರ್ಥ - ಕರುಣಾಸಾಗರನೇ, ಅನಂತಾನಂತ ಸೂರ್ಯಪ್ರಕಾಶನೇ, ನಿನಗೆ ಜಯವಾಗಲಿ. ಹೇ!ಜಗದೊಡೆಯನೇ, ಅಸ್ಪಷ್ಟವಾಗಿರುವ ವಿಶಿಷ್ಟ ಶಕ್ತಿಗಳ ಅಧಿಪತಿಯೇ, ನಿನಗೆ ಜಯವಾಗಲಿ. ಭೂಮಾತೆಯ ತನಯೆ ಜಾನಕೀದೇವಿಯ ಪತಿಯೇ, ಅಪರಿಮಿತ ಪರಾಕ್ರಮಿಯೇ, ನಿನಗೆ ಜಯವಾಗಲಿ. ಅನಾಥರೊಡೆಯಾ, ರಘುನಾಥನೇ ಪ್ರಸನ್ನನಾಗು ಪ್ರಭುವೇ. ನಿನಗೆ ಜಯವಾಗಲಿ.

**ಯಜ್ಞೇಶ ಯಜ್ಞಾಧಿಪ ಯಜ್ಞಪಾಲ । ಯಶಃ ಪ್ರಥಾಧೋಕ್ಷಜ ರಾಮಚಂದ್ರ ॥**
**ಪ್ರದಕ್ಷಿಣಾಂ ತೇ ಪ್ರಕರೋಮಿ ನಿತ್ಯಂ । ಪದೇ ಪದೇನಂತ ಮುಖಾದಿ ದಾತ್ರಿಂ ॥11॥**

ಭಾವಾರ್ಥ - ಯಜ್ಞೇಶನೇ, ಯಜ್ಞರಕ್ಷಕನೇ, ಯಜ್ಞಗಳೊಡೆಯನೇ, ಅತೀಂದ್ರಿಯ ಜ್ಞಾನಿಯೇ, ಶ್ರೀರಾಮಚಂದ್ರನೇ, ಯಶಃಕರನೇ, ಅನುದಿನವೂ ನಿನಗೆ ಪ್ರದಕ್ಷಿಣೆ ಬರುತ್ತಿರುವೆನು. ಆ ರೀತಿ ಬರುವ ಪ್ರದಕ್ಷಿಣೆಗಳು ಪ್ರತಿ ಹೆಜ್ಜೆಹೆಜ್ಜೆಗೂ ಅನಂತ ಯಜ್ಞಾದಿಗಳ ಫಲವನ್ನು ಒದಗಿಸಿಕೊಡುತ್ತವೆ.

**ರಾಜಾಧಿರಾಜಾಯ ರಮಾವರಾಯ । ರಾತ್ರಿಂಚರಾಣಾಮಭಿ ಸಂಹರಾಯ ॥**

**ರಾಜ್ಯಾಭಿಷಿಕ್ತಾಯ ರಘೂತ್ತಮಾಯ । ಶ್ಯಾಮಾಯ ರಾಮಾಯ ನಮೋ ನಮಸ್ತೇ ॥12॥**

ಭಾವಾರ್ಥ - ರಾಜಾಧಿರಾಜನಿಗೆ, ರಮಾಕಾಂತನಿಗೆ, ದಾನವ ಸಂಹಾರಕಗೆ, ರಾಜ್ಯಾಭಿಷಿಕ್ತಗೆ, ರಘುಕುಲಾಗ್ರಗಣ್ಯಗೆ, ಶ್ಯಾಮಲವರ್ಣಗೆ, ಸ್ವಾಮಿ ಶ್ರೀರಾಮಚಂದ್ರನಿಗೆ ಪುನಃಪುನಃನಮಸ್ಕರಿಸುವೆನು.

**ಪ್ರಭೋ ಚಾಮರಾದರ್ಶ ಛತ್ರಾದಿಕಾನ್ವೈ । ಮಹಾರಾಜ ರಾಜೋಪಚಾರಾನ್ ಗೃಹಾಣ ॥ ಸುಹೃತ್ವದ್ಮಪೀಠಂ ಮುರಾರೇ ಪ್ರವಿಶ್ಯ । ಮಮೇಶಾಪರಾಧಾನ್ ಹಿ ಸರ್ವಾನ್ ಕ್ಷಮಸ್ವ ॥13॥**

ಭಾವಾರ್ಥ - ದೊರೆಯೇ!ಮಹಾರಾಜನೇ, ಚಾಮರ, ಛತ್ರ, ಕನ್ನಡಿ ಇತ್ಯಾದಿಯಾದ ರಾಜೋಪಚಾರಗಳನ್ನು ಸ್ವೀಕರಿಸುವವನಾಗು. ಮುರಾರಿಯೇ!ಸ್ವಾಮೀ,ನನ್ನ ಹೃತ್ಕಮಲ ಪೀಠದ ಮೇಲೆ ಆಶ್ರಯವನ್ನು ಹೊಂದುವವನಾಗು . ತನ್ಮೂಲಕ ನನ್ನ ಸರ್ವಾಪರಾಧಗಳನ್ನು ಕ್ಷಮಿಸಿ ಉದ್ಧರಿಸು.

**ಇತ್ಯೇವ ಸಾಂಗಮುಪಚಾರ ಯುಕ್ತಾಂ ।**
**ಶ್ರೀ ರಾಮಪೂಜಾಂ ಹೃದಯೇ ಬಹಿರ್ವಾ ॥**

**ಕುರ್ವಂತಿ ಯೇ ಧರ್ಮಮಥಾರ್ಥಕಾಮಾನ್ ।**
**ಮೋಕ್ಷಾದಿಕಾಂ ಸಂಪದ ಮಾಪ್ನುವಂತಿ ॥14॥**

ಭಾವಾರ್ಥ - ಯಾರು ಈ ರೀತಿಯಾಗಿ ಶ್ರೀರಾಮಚಂದ್ರ ಪ್ರಭುವಿನ ಆರಾಧನೆಯನ್ನು ಮಾನಸೋಪಚಾರಗಳಿಂದಾಗಲೀ ಬಾಹ್ಯೋಪಚಾರಗಳಿಂದಾಗಲೀ ಸಂಪೂರ್ಣವಾಗಿ ಮಾಡುವರೋ ಅಂತಹವರಿಗೆ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಸಂಪದಗಳು ಲಭಿಸುವವು.

**ಶ್ರೀ ವರ್ಣಪೂರ್ವಂ ಸಕಲಾರ್ಥದಂ ವೈ । ರಾಮೇತಿವರ್ಣದ್ವಯಮೇವ ಪೂರ್ವಂ ॥**

**ಜಯೇತಿ ರಾಮೇತಿ ಜಯದ್ವಯೇತಿ । ರಾಮೇತಿ ಜಪ್ತ್ವಾತು ಪುನರ್ನಜನ್ಮ ॥15॥**

ಭಾವಾರ್ಥ - "ರಾಮ" ಎಂಬ ದ್ವಯಾಕ್ಷರಕ್ಕೆ ಮೊದಲು "ಶ್ರೀ" ಎಂಬ ಸಕಲ ಇಷ್ಟಾರ್ಥಗಳನ್ನು ಕರುಣಿಸುವ ಅಕ್ಷರವನ್ನು ಜೋಡಿಸಬೇಕು. ಆ ಮೇಲೆ "ಜಯ" ಎಂಬ ಪದವನ್ನು ಕೂಡಿಸಿ ನಂತರ "ರಾಮ"ಎಂಬ ಶಬ್ದವನ್ನು ಯೋಜಿಸಿ ಮತ್ತೆ ಅವುಗಳ ಮುಂದೆ "ಜಯ ಜಯ ರಾಮ"ಎನ್ನುವ ಶಬ್ದಗಳನ್ನು ಹೊಂದಿಸಬೇಕು. ಆಗ "ಶ್ರೀರಾಮ ಜಯರಾಮ ಜಯ ಜಯ ರಾಮ" ಎಂಬ ತ್ರಯೋದಶಾಕ್ಷರೀ ಶ್ರೀರಾಮ ಮಹಾ ಮಂತ್ರವು ಲಭಿಸುತ್ತದೆ. ಈ ಮಹಾ ಮಂತ್ರಾನುಷ್ಠಾನ ಮಾಡುವವರಿಗೆ ಪುನರ್ಜನ್ಮವಿಲ್ಲದೆ ಶಾಶ್ವತವಾದ ಮುಕ್ತಿಯು ದೊರಕುವುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ರಾಮಮಾನಸ ಪೂಜಾ ಸ್ತೋತ್ರಂ ॥

## 8.11 ಶ್ರೀರಾಮಾಷ್ಟಕಂ

**ಕೃತಾರ್ತದೇವವಂದನಂ । ದಿನೇಶವಂಶನಂದನಂ ॥ ಸುಶೋಭಿಭಾಲಚಂದನಂ ।**
**ನಮಾಮಿ ರಾಮಮೀಶ್ವರಂ ॥1॥**

ಭಾವಾರ್ಥ - ಸಂಕಟಕ್ಕೀಡಾದ ದುರ್ದೈವೀ ದೇವತೆಗಳು ಯಾರಿಗೆ ಶಿರಬಾಗಿ ವಂದಿಸುವರೋ, ಯಾರಿಂದ ರವಿವಂಶಕ್ಕೆ ಸಂತಸವುಂಟಾಗುವುದೋ, ಯಾರ ನೊಸಲು ಚಂದನದಿಂದ ಬೆಳಗುವುದೋ ಅಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಮುನೀಂದ್ರಯಜ್ಞಕಾರಕಂ । ಶಿಲಾವಿಪತ್ತಿಹಾರಕಂ ॥ ಮಹಾಧನುರ್ವಿದಾರಕಂ ।**
**ನಮಾಮಿ ರಾಮಮೀಶ್ವರಂ ॥2॥**

ಭಾವಾರ್ಥ - ಮುನಿಗಳಯಜ್ಞರಕ್ಷಕನಾಗಿ, ಯಜ್ಞವನ್ನು ಪೂರ್ಣಗೊಳಿಸಿದವನೂ, ಶಿಲೆಯಾಗಿದ್ದ ಅಹಲ್ಯೆಯ ಶಾಪವನು ಪರಿಹರಿಸಿದವನೂ, ಶಿವ ಧನುಸ್ಸನ್ನು ಮುರಿದವನೂ ಆದಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಸ್ವತಾತವಾಕ್ಯಕಾರಿಣಂ । ತಪೋವನೇ ವಿಹಾರಿಣಂ ॥ ಕರೇಸುಚಾಪ ಧಾರಿಣಂ ನಮಾಮಿ ರಾಮಮೀಶ್ವರಂ ॥3॥**

ಭಾವಾರ್ಥ - ತನ್ನ ಪಿತೃ ವಾಕ್ಯವನ್ನು ಪರಿಪಾಲಿಸಿದವನೂ, ತಪೋಭೂಮಿಯಲ್ಲಿ ವಿಹರಿಸಿದವನೂ, ಅಲ್ಲದೆ ಹಸ್ತದಲ್ಲಿ ಉತ್ತಮವಾದ ಬಿಲ್ಲನ್ನು ಹಿಡಿದುಕೊಂಡಿರುವವನೂ, ಆಗಿರುವಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಕುರಂಗಮುಕ್ತಸಾಯಕಂ । ಜಟಾಯು ಮೋಕ್ಷದಾಯಕಂ ॥ ಪ್ರವಿದ್ಧಕೀಶ ನಾಯಕಂ । ನಮಾಮಿ ರಾಮಮೀಶ್ವರಂ ॥4॥**

ಭಾವಾರ್ಥ - ಮಾಯಾಮೃಗವನ್ನು ಬೆನ್ನಟ್ಟಿ ಬಾಣವನ್ನು ಪ್ರಯೋಗಿಸಿದನೂ, ಜಟಾಯುವಿಗೆ ಮೋಕ್ಷವನ್ನು ದಯಪಾಲಿಸಿದವನೂ, ವಾನರಾಧೀಶ ವಾಲಿಯನ್ನು ನಿಗ್ರಹಿಸಿದವನೂ ಆದಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಪ್ಲವಂಗ ಸಂಗ ಸಮ್ಮತಿಂ । ನಿಬದ್ಧನಿಮ್ನಗಾಪತಿಂ ॥ ದಶಾಸ್ಯವಂಶಸಂಗತಿಂ । ನಮಾಮಿ ರಾಮಮೀಶ್ವರಂ ॥5॥**

ಭಾವಾರ್ಥ - ಕಪಿಕುಲದೊಡನೆ ಸ್ನೇಹವನ್ನು ಬೆಳೆಸಿದವನೂ, ಸಾಗರಕ್ಕೆ ಸೇತುವೆಯನ್ನು ರಚಿಸಿದವನೂ, ರಾವಣನ ವಂಶವನ್ನು ನಿರ್ನಾಮಗೊಳಿಸಿದವನೂ ಆದಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ವಿದೀನದೇವಹರ್ಷಣಂ । ಕಪೀಪ್ಸಿತಾರ್ಥವರ್ಷಣಂ ॥ ಸ್ವಬಂಧು ಶೋಕಕರ್ಷಣಂ । ನಮಾಮಿ ರಾಮಮೀಶ್ವರಂ ॥6॥**

ಭಾವಾರ್ಥ - ದೀನರಾದಂತಹಾ ದೇವತೆಗಳನ್ನು ಸಂತಸಗೊಳಿಸಿದವನೂ, ಕಪಿಗಳ ಅಭೀಷ್ಟಗಳನ್ನು ನೆರವೇರಿಸಿದಾತನೂ, ತನ್ನ ಬಂಧುವರ್ಗದವರ ದುಃಖವನ್ನು ಶಾಂತ

ಮಾಡಿದವನೂ ಆದಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಗತಾರಿರಾಜ್ಯರಕ್ಷಣಂ । ಪ್ರಜಾಜನಾರ್ತಿಭಕ್ಷಣಂ ॥ ಕೃತಾಸ್ತಮೋಹ ಲಕ್ಷಣಂ । ನಮಾಮಿ ರಾಮಮೀಶ್ವರಂ ॥7॥**

ಭಾವಾರ್ಥ - ಅಜಾತಶತ್ರುವೂ, ನಿಷ್ಕಂಟಕನೂಆಗಿರುವ ರಾಜ್ಯಪರಿಪಾಲಕನೂ, ಪ್ರಜಾವರ್ಗಕ್ಕೆ ಅಭಯಪ್ರದಾಯಕನೂ, ಮೋಹವನ್ನು ವಿನಾಶಗೊಳಿಸುವವನೂ ಆದಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಹೃತಾಖಿಲಾಚಲಾಭರಂ । ಸ್ವಧಾಮನೀತ ನಾಗರಂ ॥ ಜಗತ್ತಮೋ ದಿವಾಕರಂ । ನಮಾಮಿ ರಾಮಮೀಶ್ವರಂ ॥8॥**

ಭಾವಾರ್ಥ - ಭೂಮಿಯ ಸಮಗ್ರ ಭಾರವನ್ನು ಹರಣಗೈದವನೂ, ತನ್ನರಮನೆಯ ನಿವಾಸಿಗಳಿಗೆಲ್ಲ ಆಶ್ರಯಧಾಮನಾದವನೂ, ಬ್ರಹ್ಮಾಂಡದ ಅಂಧಕಾರಕ್ಕೆ ರವಿಸ್ವರೂಪನಾಗಿ ಜ್ಯೋತಿರ್ಮಯಿಯಾದವನೂ ಆದಂತಹಾ ಪರಮೇಶ್ವರನಾಗಿರುವ ಶ್ರೀರಾಮನಿಗೆ ನಾನು ನಮಸ್ಕರಿಸುತ್ತೇನೆ.

**ಇದಂ ಸಮಾಹಿತಾತ್ಮ ನಾ । ನರೋ ರಘೂತ್ತಮಾಷ್ಟಕಂ ॥ ಪಠನ್ನಿರಂತರಂ ಭಯಂ । ಭಯೋದ್ಭವಂ ನ ವಿಂದತೇ ॥9॥**

ಭಾವಾರ್ಥ - ಈರಾಮಾಷ್ಟಕವನ್ನು ಏಕಾಗ್ರಚಿತ್ತನಾಗಿ ಯಾವಾತನು ಸದಾ ಪಠಿಸುವನೋ ಅಂತಹವನಿಗೆ ಸಾಂಸಾರಿಕವಾಗಿ ಉದ್ಭವಿಸುವ ಯಾವುದೇ ಭೀತಿಯು ಉಂಟಾಗಲಾರದು.

॥ ಇತಿ ಶ್ರೀರಾಮಾಷ್ಟಕಂ ಸಂಪೂರ್ಣಂ ॥

## 8.12 ಶ್ರೀ ಸೀತಾರಾಮಾಷ್ಟಕಂ

**ಬ್ರಹ್ಮ ಮಹೇಂದ್ರ ಸುರೇಂದ್ರ ಮರುದ್ಗಣ ರುದ್ರ ಮುನೀಂದ್ರ ಗಣೈರತಿ ರಮ್ಯಂ । ಕ್ಷೀರಸರಿಸ್ಪತಿ ತೀರಮುಪೇತ್ಯ ನುತಂ ಹಿ ಸತಾಮ ವಿತಾರ ಮುದಾರಂ ॥**

**ಭೂಮಿಭರಪ್ರಶಮಾರ್ಥಮಥ ಪ್ರಥಿತ ಪ್ರಕಟೀಕೃತ ಚಿದ್ಘನಮೂರ್ತಿಂ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥1॥**

ಭಾವಾರ್ಥ - ಬ್ರಹ್ಮ, ಶಿವ, ದೇವೇಂದ್ರ, ಮರುದ್ಗಣಾದಿಗಳು, ರುದ್ರರು, ಮತ್ತುಮುನಿವರ್ಯರು ಅತಿರಮಣೀಯವಾಗಿರುವ ಪಾಲ್ಗಡಲ ಸಮೀಪಕ್ಕೆ ಹೋಗಿ, ಸಾಧು ಪರಿಪಾಲಕನೂ, ಅತಿ ಧಾರಾಳಿಯೂ ಆಗಿರುವ ರಘುಕುಲ ಶ್ರೇಷ್ಠನಾಗಿರುವ ನಿನ್ನನ್ನು ಸ್ತುತಿಸಿದರು. ಆಗ ಭೂಭಾರವನ್ನು ಇಳಿಸಲೋಸುಗ ನೀನು ನಿನ್ನ ಪರಮಾತ್ಮಸ್ವರೂಪವನ್ನು ಪ್ರಕಟಗೊಳಿಸಿದೆ. ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ಪದ್ಮದಲಾಯತ ಲೋಚನ ಹೇ ರಘುವಂಶ ವಿಭೂಷಣ ದೇವದಯಾಲೋ ।**
**ನಿರ್ಮಲ ನೀರದ ನೀಲ ತತೋಽಖಿಲ ಲೋಕ ಹೃದಂಬುಜ ಭಾಸಕಭಾನೋ ॥**

**ಕೋಮಲಗಾತ್ರ ಪವಿತ್ರ ಪದಾಬ್ಜ ರಜಃಕಣಪಾವಿತ ಗೌತಮ ಕಾಂತಾ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥2॥**

ಭಾವಾರ್ಥ - ಹೇ!ತಾವರೆಯಂತೆ ಕಣ್ಣುಗಳನ್ನು ಹೊಂದಿರುವವನೇ, ರಘುಕುಲ ವಿಭೂಷಣನೇ, ದೇವನೇ, ಕರುಣಾಳುವೇ, ಸ್ವಚ್ಛವಾಗಿರುವ ಕಾರ್ಮುಗಿಲನ್ನು ಹೋಲುವ ಸುಂದರ ಶರೀರವುಳ್ಳವನೇ, ಸದಾ ಭಕ್ತಜನರ ಹೃತ್ಕಮಲಗಳನ್ನರಳಿಸುವ ರವಿ ಸ್ವರೂಪನೇ, ಅತೀ ಮನಮೋಹಕ ದೇಹವುಳ್ಳಾತನೇ, ಅತ್ಯಂತ ಪಾವನಮಯವಾಗಿರುವ ನಿನ್ನ ಪಾದಕಮಲಗಳ ಧೂಲಿಯಿಂದ ಗೌತಮಮುನಿಯ ಪತ್ನಿ ಅಹಲ್ಯೆಯನ್ನು ಪಾವನಗೊಳಿಸಿದವನೇ, ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ಪೂರ್ಣ ಪರಾತ್ಪರ ಪಾಲಯ ಮಾಮತಿ ದೀನಮನಾಥಮನಂತ ಸುಖಾಬ್ಧೇ ।**
**ಪ್ರಾವೃಡದಭ್ರತಡಿತ್ಸು ಮನೋಹರ ಪೀತವರಾಂಬರ ರಾಮ ನಮಸ್ತೇ ॥**

**ಕಾಮ ವಿಭಂಜನ ಕಾಂತತರಾನನ ಕಾಂಚನ ಭೂಷಣ ರತ್ನ ಕಿರೀಟಂ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥3॥**

ಭಾವಾರ್ಥ - ಎಲೈ ಪೂರ್ಣ ಸ್ವರೂಪನೇ, ಪರಾತ್ಪರರೂಪಿಯೇ, ಅನಂತಸುಖಸಾಗರನೇ, ಅತಿ ದರಿದ್ರನೂ, ದಿಕ್ಕಿಲ್ಲದನೂ ಆಗಿರುವ ನನ್ನನ್ನು ಪರಿಪಾಲಿಸು ಸ್ವಾಮೀ. ಮಳೆಗಾಲದಲ್ಲಿ ಕಾಣುವ ಚಂಚಲ ಮಿಂಚಿನಂತೆ ಮನೋಹರವಾಗಿರುವ ಪೀತವಸನಧಾರಿಯೇ, ಶ್ರೀರಾಮಚಂದ್ರನೇ, ನಿನಗಿದೋ ನಮನಗಳು. ಹೇ!ಮನ್ಮಥನ ಗರ್ವವನ್ನು ನಾಶಮಾಡಿದವನೇ, ಸುಂದರಮೊಗದವನೇ, ಸ್ವರ್ಣಭೂಷಿತನೇ, ರತ್ನಕೀರೀಟಧಾರಿಯೇ, ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ದಿವ್ಯಶರಚ್ಛಶಿಕಾಂತಿಹರೋಜ್ವಲ ಮೌಕ್ತಿಕಮಾಲವಿಶಾಲಮೌಲೇ ।**
**ಕೋಟಿರವಿಪ್ರಭ ಚಾರುಚರಿತ್ರ ಪವಿತ್ರ ವಿಚಿತ್ರಧನುಃಶರಪಾಣೇ ॥**

**ಚಂಡಮಹಾಭುಜದಂಡವಿಖಂಡಿತರಾಕ್ಷಸರಾಜಮಹಾಗಜದಂಡಂ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥4॥**

ಭಾವಾರ್ಥ - ಶರದೃತುವಿನ ಚಂದ್ರನ ಸುಂದರ ಕಾಂತಿಯನ್ನು ದೂಷಿತಗೊಳಿಸುವಂತಹಾ ಉಜ್ವಲವಾಗಿರುವ ಮುತ್ತಿನಮಾಲೆಯನ್ನು ವಿಶಾಲವಾಗಿರುವ ಕುತ್ತಿಗೆಯಲ್ಲಿ ಧರಿಸಿದ, ಕೋಟಿಸೂರ್ಯರ ಪ್ರಕಾಶವುಳ್ಳ ಸದಾಚಾರದಿಂದ ಪಾವನನಾಗಿರುವ, ಕರಕಮಲಗಳಲ್ಲಿ ವಿಶಿಷ್ಟವಾದ ಬಿಲ್ಲು ಬಾಣಗಳನ್ನು ಹಿಡಿದಿರುವ ಹಾಗೂಭಯಂಕರವಾದ ಭುಜದಂಡಗಳಿಂದ ಮದದಾನೆಯಂತಹಾ ರಾವಣನೆಂಬಾತನನ್ನು ವಧಿಸಿದ ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ದೋಷವಿಹಿಂಸ್ರಭುಜಂಗಸಹಸ್ರಸುರೋಪಮಹಾನಲಕೀಲಕಲಾಪೇ ।**
**ಜನ್ಮಜರಾಮರಣೋರ್ಮಿಮಯೇ ಮದಮನ್ಮಥನಕ್ರವಿಚಕ್ರ ಭವಾಬ್ಧೌ ॥**

**ದುಃಖನಿಧೌ ಚ ಚಿರಂ ಪತಿತಂ ಕೃಪಯಾದ್ಯಸಮುದ್ಧರ ರಾಮ ತತೋ ಮಾಂ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥5॥**

ಭಾವಾರ್ಥ - ಅವಗುಣಗಳ ಸಾಕಾರವಾಗಿರುವ ಹಿಂಸಾಭರಿತ ಸಾವಿರಾರು ಸರ್ಪಗಳೂ, ಕೋಪದ ಸಾಕಾರವಾಗಿರುವ ಕಡಲ್ಗಿಚ್ಚಿನ ಜ್ವಾಲೆಗಳೂ, ಹುಟ್ಟು, ವಾರ್ಧಕ್ಯ, ಮರಣ ರೂಪಿನ ತೆರೆಗಳೂ, ಅಂತೆಯೇ ಮದ, ಮೋಹ ರೂಪಿನ ಮತ್ಸ್ಯ-ಮಕರಗಳೂ, ನೀರಿನ ಸುಳಿಯಂತಿರುವ ಸಂಸಾರ ಸಾಗರದಲ್ಲಿ ಸಿಲುಕಿಕೊಂಡಿರುವ ನನ್ನನ್ನು, ಎಲೈ ಶ್ರೀರಾಮನೇ ದಯಾಭರಿತನಾಗಿ ರಕ್ಷಿಸುವವನಾಗು. ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ಸಂಸ್ಕೃತಿಘೋರ ಮದೋತ್ಕಟಕುಂಜರ ತೃಟ್ ಕ್ಷುದನೀರದಪಿಂಡಿತತುಂಡಂ ।**
**ದಂಡಕರೋನ್ಮಥಿತಂ ಚ ರಜಸ್ತಮ ಉನ್ಮದಮೋಹ ಪದೋಜ್ಝಿತಮಾರ್ತಂ ॥**
**ದೀನಮನನ್ಯಗತಿಂ ಕೃಪಣಂ ಶರಣಾಗತ ಮಾತು ವಿಮೋಚಯ ಮೂಢಂ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥6॥**

ಭಾವಾರ್ಥ - ಸಂಸಾರವೆಂಬುದು ಹಸಿವು ಬಾಯಾರಿಕೆಗಳೆಂಬ ಹರಿತವಾದ ಹಲ್ಲುಗಳುಳ್ಳ ಮದವೇರಿರುವ ಒಂದು ಆನೆಯಂತಿದೆ. ಆ ಆನೆಯ ಯಮಸ್ವರೂಪೀ ಸೊಂಡಿಲಿನಲ್ಲಿ ಸಿಕ್ಕಿದ ರಜ-ತಮ-ಉನ್ಮಾದ ಹಾಗೂ ಮೋಹಗಳೆಂಬ ನಾಲ್ಕು ಪಾದಗಳ ತುಳಿತಕ್ಕೆ ಈಡಾಗಿರುವ ತೀರಾದೀನನೂ, ದುಃಖಕ್ಕೆ ಸಿಲುಕಿದವನೂ, ಅನನ್ಯ ಶರಣಾಗತನೂ, ಮೂಢನೂ, ಆಗಿರುವ ನನ್ನನ್ನು ಬೇಗನೆ ಬಿಡಿಸುವವನಾಗು. ಮತ್ತು ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ಜನ್ಮಶತಾರ್ಜಿತಪಾಪಸಮನ್ವಿತಹೃತ್ಕಮಲೇ ಪತಿತೇ ಪಶುಕಲ್ಪೇ ।**
**ಹೇ ರಘುವೀರ ಮಹಾರಣಧೀರ ದಯಾಂಕುರು ಮಯ್ಯತಿಮಂದಮನೀಷೇ ॥**

**ತ್ವಂ ಜನನೀ ಭಗಿನೀ ಚ ಪಿತಾ ಮಮತಾವದಸಿ ತ್ವವಿತಾಽಪಿ ಕೃಪಾಲೊ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥7॥**

ಭಾವಾರ್ಥ - ಹಿಂದಿನ ನೂರಾರು ಜನ್ಮಗಳಿಂದ ಶೇಖರವಾದ ಪಾಪಲೇಪಗಳಿಂದ ಕೂಡಿದಹೃತ್ಕಮಲದವನೂ, ಪಶುವಿನೋಪಾದಿಯಲ್ಲಿ ಪಾವನವಾದವನೂ, ಅತ್ಯಂತ ಮಂದಮತಿಯೂ ಆಗಿರುವ ನನ್ನ ಬಗೆಗೆ ಹೇ!ರಣಧೀರ ರಘುವರನೇ, ಕರುಣೆದೋರು. ನೀನೇ ನನ್ನ ತಾಯಿ, ತಂದೆ, ಸೋದರಿಯಾಗಿರುವೆ. ಹೇ!ದಯಾಪೂರ್ಣನೇ,ನೀನೇ ನನ್ನ ಪರಿಪಾಲಕನು. ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ತ್ವಾಂ ತು ದಯಾಲುಮ ಕಿಂಚನವತ್ಸಲಮುತ್ಪಲಹಾರಮಪಾರಮುದಾರಂ ।**
**ರಾಮವಿಹಾಯ ಕಮನ್ಯಮನಾಯಮಮೀಶ ಜನಂ ಶರಣಂ ನನು ಯಾಯಂ ॥**

**ತ್ವತ್ಪದಪದ್ಮ ಮತಃಶ್ರೀತಮೇವ ಮುದಾಖಲು ದೇವ ಸದಾವ ಸಸೀತಂ ।**
**ತ್ವಾಂಭಜತೋ ರಘುನಂದನ ದೇಹಿ ದಯಾಘನ ಸ್ವಪದಾಂಬುಜ ದಾಸ್ಯಂ ॥8॥**

ಭಾವಾರ್ಥ - ನನ್ನೊಡೆಯನಾಗಿರುವ ಹೇ ಶ್ರೀರಾಮಚಂದಿರನೇ, ಕಂಠದೊಳು ಕಮಲಪುಷ್ಪಮಾಲಿಕೆಯನ್ನು ಧರಿಸಿದ ನಿನ್ನಂತಹಾ ಅತ್ಯಂತ ಉದಾರಚರಿತನೂ, ಬಡವರಬಂಧುವೂ, ಕರುಣಾಮಯಿಯೂ, ಆಗಿರುವ ಒಡೆಯನನ್ನು ತ್ಯಜಿಸಿ ನಾನಿನ್ನ್ಯಾವ ಪರಿಶುದ್ಧ ಪುರುಷನಿಗೆ ಶರಣು ಹೊಗಲಿ? ಆದುದರಿಂದ ನಾನು ನಿನ್ನ ಚರಣಾರವಿಂದಗಳನ್ನು ಆಶ್ರಯಿಸಿರುವೆ. ಹೇ ಸೀತಾಸಮೇತ ಶ್ರೀರಾಮಚಂದ್ರನೇ!ನೀನು ಸಂತೋಷಚಿತ್ತನಾಗಿ ನಿರಂತರವೂ ನನ್ನನು ಪರಿಪಾಲಿಸು. ಹೇ!ಕರುಣಾಮಯಿಯಾಗಿರುವ ರಘುನಂದನನೇ,ನೀನು ಭಕ್ತನಾಗಿರುವ ನನಗೆ ನಿನ್ನ ಚರಣಾರವಿಂದಗಳ ಸೇವೆ ಮಾಡುವ ಕಾರ್ಯವನ್ನು ದಯಪಾಲಿಸು ಸ್ವಾಮೀ.

**ಯಃ ಕರುಣಾಮೃತಸಿಂಧುರನಾಥಜನೋತ್ತಮಬಂಧುರ ಜೋತ್ತಮಕಾರೀ ।**
**ಭಕ್ತಭಯೋರ್ವೀರ್ಭವಾಬ್ಧಿತರಿಃ ಸರಯೂತಟನೀತಟಚಾರು ವಿಹಾರೀ ॥**

**ತಸ್ಯ ರಘುಪ್ರವರಸ್ಯ ನಿರಂತರಮಷ್ಟಕಮೇತದನಿಷ್ಟ ಹರಂ ವೈ ।**
**ಯಸ್ತು ಪಠೇದಮರಃ ಸ ನರೋಲಭತೇಽಚ್ಯುತರಾಮ ಪದಾಂಬುಜದಾಸ್ಯಂ ॥9॥**

ಭಾವಾರ್ಥ - ದಯೆಯೆನ್ನುವ ಅಮೃತಮಯ ಸಾಗರನೂ, ಅನಾಥರಿಗೆ ಅಧಿಕತಮ ಬಂಧುವೂ, ಮತ್ತು ಶ್ರೇಷ್ಠ ಕರ್ಮಗಳಿಗೆ ನಿಮಿತ್ತನೂ, ಭೀಕರವಾಗಿರುವ ಸಂಸಾರಸಾಗರದ ತೆರೆಗಳಿಂದ ಭಕ್ತರನ್ನು ರಕ್ಷಿಸುವ ಅಂಬಿಗಸ್ವರೂಪನೂ, ಹಾಗೆಯೇ ಸರಯೂ ನದಿಯ ತಟಾಕದಲ್ಲಿ ಮನಮೋಹಕವಾಗಿರುವ ವಿನೋದಗಳನ್ನು ರೂಢಿಸಿಕೊಂಡವನೂ, ಆಗಿರುವ ಆ ಶ್ರೀರಘುವರಶೆರ್ೀಷ್ಠನ ಈ ಅಷ್ಟಕಗಳು ನಿರಂತರವಾಗಿ ಭಕ್ತರ ಸರ್ವಾನಿಷ್ಟಗಳನ್ನು ದೂರೀಕರಿಸಿ ಅವರನ್ನು ಅಮರತ್ವಕ್ಕೆ ಕೊಂಡೊಯ್ಯುವುದಲ್ಲದೆ ಅವರಿಗೆ ಭಗವಾನ್ ಶ್ರೀರಾಮಚಂದ್ರನ ಚರಣಾರವಿಂದಗಳಲ್ಲಿ ಸೇವಾವೃತ್ತಿಯನ್ನು ಒದಗಿಸಿಕೊಡುವುದು.

॥ ಇತಿ ಶ್ರೀ ಸೀತಾರಾಮಾಷ್ಟಕಂ ॥ ಈ ರೀತಿಯಾಗಿ ಶ್ರೀ ಸೀತಾರಾಮಾಷ್ಟಕಗಳ ಭಾವಾರ್ಥವಾಗಿದೆ ॥

## 8.13 ಇಂದ್ರಕೃತ ಶ್ರೀ ರಾಮ ಸ್ತೋತ್ರಂ

**ಭಜೇಽಹಂ ಸದಾ ರಾಮಮಿಂದೀವರಾಭಂ । ಭವಾರಣ್ಯ ದಾವಾನಲಾಭಿದಾನಂ ॥**
**ಭವಾನೀ ಹೃದಾಭಾವಿತಾನಂದ ರೂಪಂ । ಭವಾಭಾವಹೇತುಂ ಭವಾದಿಪ್ರಪನ್ನಂ ॥1॥**

ಭಾವಾರ್ಥ - ನೀಲಿತಾವರೆಯ ಕಾಂತಿಯ ರಾಶಿಯಂತಿರುವ ದೇಹವುಳ್ಳವನೂ, ಸಂಸಾರವೆಂಬ ಕಾನನಕ್ಕೆ ದಾವಾನಿಲದಂತಿರುವವನೂ, ಚೆಲುವಿಗೆ ಹೆಸರಾದವನೂ, ಪಾರ್ವತೀ ದೇವಿಯ ಹೃದಯದಲ್ಲಿ ಆನಂದ ಸ್ವರೂಪನಾಗಿ ತಿಳಿಯಲ್ಪಡುವವನೂ, ಸಂಸಾರದ ಕಷ್ಟಕಾರ್ಪಣ್ಯಗಳನ್ನು ನಾಶ ಮಾಡುವಾತನೂ, ಹರನೇ ಆದಿಯಾಗಿ ಸಮಸ್ತ ದೇವರ್ಕಳಿಂದ ಆರಾಧಿಸಲ್ಪಡುವಾತನೂ ಆಗಿರುವ ಶ್ರೀರಾಮನನ್ನು ನಾನು ಸದಾ ಸ್ತುತಿಸುವೆನು.

**ಸುರಾನೀಕ ದುಃಖೌಘನಾಶೈಕ ಹೇತುಂ ನರಾಕಾರದೇಹಂ ನಿರಾಕಾರಮೀಡ್ಯಂ ॥**
**ಪರೇಶಂ ಪರಾನಂದರೂಪಂ ವರೇಣ್ಯಂ । ಹರಿಂ ರಾಮಮೀಶಂ ಭಜೇ ಭಾರನಾಶಂ ॥2॥**

ಭಾವಾರ್ಥ - ದೇವತಾಸಮೂಹದ ದುಃಖಸಾಗರವನ್ನು ನಾಶಮಾಡಲು ನಿಮಿತ್ತನಾದವನೂ, ಮಾನವ ಶರೀರವನ್ನು ಹೊಂದಿರುವವನೂ, ಆಕಾರ ರಹಿತನೂ, ಸ್ತುತಿಸಲು ಯೋಗ್ಯನಾದವನೂ, ಅತಿ ಬಲಶಾಲಿಯೂ, ಪರಮಾನಂದ ಸ್ವರೂಪನೂ, ದುರ್ಜನರಿಂದಾದ ಭೂಭಾರವನ್ನು ಅಳಿಸಿದವನೂ ದೊರೆಯೂ ಮಹಾವಿಷ್ಣು ಸ್ವರೂಪನೂ ಆಗಿರುವ ಶ್ರೀರಾಮನನ್ನು ನಾನು ಸ್ತುತಿಸುವೆನು.

**ಪ್ರಪನ್ನಾಖಿಲಾನಂದದೋಹಂ ಪ್ರಪನ್ನಂ । ಪ್ರಪನ್ನಾರ್ತಿನಿಃ ಶೇಷನಾಶಾಭಿಧಾನಂ ॥**
**ತಪೋ ಯೋಗ ಯೋಗೀಶ ಭಾವಾಭಿ ಭಾವ್ಯಂ । ಕಪೀಶಾದಿಮಿತ್ರಂ ಭಜೇ ರಾಮಮಿತ್ರಂ ॥3॥**

ಭಾವಾರ್ಥ - ಹಲವಾರು ಭಕ್ತರು ಆಶ್ರಯವನ್ನು ಹೊಂದಿರುವ ಶರಣ್ಯನೂ, ಆಶ್ರಯ ಹೊಂದಿದವರಿಗೆ ಸರ್ವ ತರದ ಆನಂದವನ್ನು ದಯಪಾಲಿಸುವಾತನೂ, ಶರಣಾಗತರ ಸಂಕಷ್ಟಗಳನ್ನು ಸಂಪೂರ್ಣವಾಗಿ ವಿನಾಶಗೊಳಿಸುವಾತನೆಂಬ ಕೀರ್ತಿಯುಳ್ಳವನೂ, ಇಂದ್ರಿಯನಿಗ್ರಹ-ಆತ್ಮಸಂಯಮಾದಿಗಳಿಂದ ತಪೋಯೋಗನಿರತರಾಗಿರುವ ಪರಮಯೋಗಿಗಳಿಂದ ಪ್ರಭುತ್ವದ ರೂಪದಲ್ಲಿ ಸ್ಮರಿಸಲ್ಪಡುವಾತನೂ, ವಿಭೀಷಣ, ಸುಗ್ರೀವಾದಿಗಳಿಗೆ ಸ್ನೇಹಿತನೂ ಆಗಿರುವ ಶ್ರೀರಾಮ ಸ್ವರೂಪನಾದ ಸೂರ್ಯಭಗವಾನನನ್ನು ನಾನು ಸ್ತುತಿಸುವೆನು.

**ಸದಾ ಭೋಗಭಾಜಾಂ ಸುದೂರೇ ವಿಭಾತಂ । ಸದಾ ಯೋಗ ಭಾಜಾಮದೂರೇ ವಿಭಾತಂ ॥ ಚಿದಾನಂದಕಂದಂ ಸದಾ ರಾಘವೇಶಂ । ವಿದೇಹಾತ್ಮಜಾನಂದರೂಪಂ ಪ್ರಪದ್ಯೇ ॥4॥**

ಭಾವಾರ್ಥ - ಅನುದಿನವೂ ಸುಖಾನುಭವಗಳನ್ನು ಅನುಭವಿಸುವುದರಲ್ಲಿ ನಿರತರಾದವರಿಗೆ ಸಂಬಂಧವನ್ನು ಕಡಿದುಕೊಂಡಂತೆ ಭಾಸವಾಗುವವನೂ, ಅನವರತವೂ ಯೋಗನಿರತರಾಗಿರುವವರಿಗೆ ಸಮೀಪಸ್ಥನಾಗಿ ಅವರ

ಹೃದಯದಲ್ಲಿಯೇ ನೆಲೆಯಾಗಿರುವಾತನೂ, ಜೀವಿಗಳ ಸಂತಸಕ್ಕೆ ನಿಮಿತ್ತನಾಗಿರುವವನೂ, ಜನಕರಾಜನಸುತೆಗೆ ಆನಂದ ಸ್ವರೂಪನಾಗಿರುವಾತನೂ ಆಗಿರುವ ಆ ರಘುವೀರನಲ್ಲಿ ನಾನು ಸದಾ ಶರಣು ಹೊಂದಿರುವವನಾಗುವೆ.

**ಮಹಾಯೋಗಮಾಯಾವಿಶೇಷಾನುಯುಕ್ತೋ । ವಿಭಾಸೀಶ ಲೀಲಾನರಾಕಾರ ವೃತ್ತಿಃ ॥**
**ತ್ವದಾನಂದಲೀಲಾಕಥಾಪೂರ್ಣಕರ್ಣಾಃ । ಸದಾನಂದರೂಪಾ ಭವಂತೀಹ ಲೋಕೇ ॥5॥**

ಭಾವಾರ್ಥ - ಹೇ!ದೊರೆಯೇ,ಸತ್ವ, ರಜ, ತಮಸ್ಸುಗಳೆಂಬ ಮಹಾಶಕ್ತಿಯುತ ಯೋಗಮಾಯಾ ವಿಶೇಷ ಗುಣಗಳುಳ್ಳವನಾಗಿ, ಲೀಲಾಮಾನುಷ ದೇಹ ಧಾರಿಯಾಗಿ, ವಸ್ತುಷಃ ನಿರ್ಗುಣನೂ ನಿರಾಕಾರಿಯೂ ಆಗಿರುವೆ. ಈ ಭುವಿಯಲ್ಲಿ ನೀನು ನಿನ್ನ ಆನಂದ ಭರಿತವಾದ ಲೀಲಾ ಶಕ್ತಿಗಳಿಂದ ಕೂಡಿರುವ ಸ್ತುತಿಯನ್ನು ತಮ್ಮ ಕಿವಿಗಳಲ್ಲಿ ತುಂಬಿಕೊಂಡವರು ನಿರಂತರ ಆನಂದ ಭರಿತ ಜೀವನವನ್ನು ಅನುಭವಿಸುವರು.

**ಅಹಂ ಮಾನಪಾನಾಭಿಮತ್ತ ಪ್ರಮತ್ತೋ । ನ ವೇದಾಖಿಲೇಶಾಭಿಮಾನಾಭಿಮಾನಃ ॥**
**ಇದಾನೀಂ ಭವತ್ಪಾದಪದ್ಮ ಪ್ರಸಾದಾತ್ । ತ್ರಿಲೋಕಾಧಿಪತ್ಯಾಭಿಮಾನೋ ವಿನಷ್ಟಃ ॥6॥**

ಭಾವಾರ್ಥ - "ನಾನು ಸ್ವರ್ಗದ ದೊರೆ"ಎಂಬ ಅಭಿಮಾನ ರೂಪೀ ಮದ್ಯವನ್ನು ಸೇವಿಸಿದವನಾಗಿ ನಾನು ತೀರಾ ಉನ್ಮತ್ತನಾಗಿದ್ದೆ. ಭುವಿಯ ಸಾಮಾನ್ಯ ಅರಸರಿಗೆ "ನಾನು ರಾಜ" ಎಂಬ ಅಭಿಮಾನವಿರುತ್ತದೆ. ಅದರಂತೆ ನನಗೂ ದರ್ಪವು ಆವರಿಸಿತ್ತು. ಅದರ ಪರಿಣಾಮವಾಗಿ ನನಗೆ ನಿನ್ನ ನೈಜ ಸ್ವರೂಪದ ಯಥಾರ್ಥ ಜ್ಞಾನವಿರಲಿಲ್ಲ. ಈಗ ನಿನ್ನ ಚರಣಾರವಿಂದಗಳ ಅನುಗ್ರಹದಿಂದ "ನಾನು ಮೂರ್ಲೋಕದ ಅಧಿಪತಿಯು" ಎನ್ನುವ ದರ್ಪವು ಕಳೆದುಹೋಯಿತು.

**ಸ್ಫುರದ್ರತ್ನಕೇಯೂರಹಾರಾಭಿರಾಮಂ । ಧರಾಭಾರಭೂತಾ ಸುರಾನೀಕ ದಾವಂ ॥**
**ಶರಶ್ಚಂದ್ರವಕ್ತ್ರಂ ಲಸದ್ಪದ್ಮನೇತ್ರಂ । ದುರಾವಾರಪಾರಂ ಭಜೇ ರಾಘವೇಶಂ ॥7॥**

ಭಾವಾರ್ಥ - ಹೊಳೆಯುವ ರತ್ನಗಳನ್ನು ಕಟ್ಟಿ ಅಲಂಕರಿಸಿದ ತೋಳುಗಳನ್ನು ಹೊಂದಿರುವವನೂ, ಕಂಠಾಹಾರಗಳನ್ನು ಧರಿಸಿದ ಸುರಸುಂದರಾಂಗ ಮನಮೋಹಕ ರೂಪಿಯೂ, ಅಸುರಸೇನೆಗಳೆನ್ನುವ ಕಾನನಕ್ಕೆ ಕಾಡ್ಗಿಚ್ಚಿನಂತಾಗಿ ಭೂಭಾರವನ್ನು ನೀಗಿಸಿದವನೂ, ಶರತ್ಕಾಲದ ಚಂದ್ರನ ಹಾಗೆ ಪ್ರಶಾಂತವೂ ನಿರ್ಮಲವೂ ಆಗಿರುವ ಮುಖವನ್ನು ಹೊಂದಿರುವವನೂ, ತಾವರೆಯಂತೆ ಹೋಲುವ ನಯನಗಳುಳ್ಳವನೂ ಅರಿಯಲಸಾಧ್ಯವಾದ ಮಹಿಮಾಮಯಿಯೂ, ಆದಿ ಅಂತ್ಯಗಳಿದವನೂ ಆಗಿರುವ ರಘುವೀರನನ್ನು ನಾನು ಸ್ತುತಿಸುವೆನು.

**ಸುರಾಧೀಶ ನೀಲಾಭ್ರ ನೀಲಾಂಗ ಕಾಂತಿಂ । ವಿರಾಧಾದಿರಕ್ಷೋ ವಧಾಲ್ಲೋಕ ಶಾಂತಿಂ ॥**
**ಕಿರೀಟಾದಿ ಶೋಭಂ ಪುರಾರಾತಿಲಾಭಂ । ಭಜೇ ರಾಮಚಂದ್ರಂ ರಘೂಣಾಮಧೀಶಂ ॥8॥**

ಭಾವಾರ್ಥ - ಇಂದ್ರಮಣಿ ವಿಭೂಷಿತನಾಗಿ ನೀಲಮೇಘ ಶ್ಯಾಮಲ ದೇಹಕಾಂತಿಯುಳ್ಳವನೂ, ವಿರಾಧರೇ ಆದಿಯಾದ ಅಸುರಸಮೂಹವನ್ನು ವಧೆ ಮಾಡಿ ಪ್ರಪಂಚದಲ್ಲಿ ಶಾಂತಿಯನ್ನು ನೆಲೆಗೊಳಿಸಿದಾತನೂ, ಕಿರೀಟಾದಿಗಳಿಂದ ಅಲಂಕೃತನಾಗಿ ಪ್ರಕಾಶಿಸುವಾತನೂ, ಹರಾದಿ ದೇವರ್ಕಳಿಗೆ ಲಾಭವನ್ನುಂಟುಮಾಡಿದಾತನೂ ಆಗಿರುವ ರಘುಕುಲಾಧೀಶ ಶ್ರೀರಾಮಚಂದ್ರನನ್ನು ನಾನು ಸ್ತುತಿಸುವೆನು.

**ಲಸಶ್ಚಂದ್ರ ಕೋಟಿ ಪ್ರಕಾಶಾದಿ ಪೀಠೇ । ಸಮಾಸೀನಮೇಕಂ ಸಮಾಧಾಯ ಸೀತಾಂ ॥**
**ಸ್ಫುರದ್ಧೇಮವರ್ಣಾಂ ತಡಿತ್ಪುಂಜಭಾಸಾಂ । ಭಜೇ ರಾಮಚಂದ್ರಂ ನಿವೃತ್ತಾರ್ತಿತಂದ್ರಂ ॥9॥**

ಭಾವಾರ್ಥ - ಬಂಗಾರದ ಬಣ್ಣದಿಂದ ದೈದೀಪ್ಯಮಾನಳಾಗಿ ವಿದ್ಯುಲ್ಲತಾ ಮಿಂಚಿನ ಸಮೂಹದಂತೆ ಬೆಳಗುವವಳೂ ಆಗಿರುವ ಸೀತಾದೇವಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಕೋಟಿ ಚಂದ್ರ ಸದೃಶ ಪ್ರಕಾಶ ತೇಜೋರಾಶಿಯನ್ನು ಹೊಂದಿರುವ ಮಹಾ ಸಿಂಹಾಸನದ ಮೇಲೆ ಆರೂಢನಾಗಿ ದುಃಖದುಮ್ಮಾನಗಳಿಂದ ಮುಕ್ತಿ ಹೊಂದಿರುವಾತನೂ ಆಗಿರುವ ಪ್ರಭು ಶ್ರೀರಾಮಚಂದ್ರನನ್ನು ನಾನು ಸ್ತುತಿಸುವೆನು.

॥ ಇತಿ ಇಂದ್ರಕೃತ ಶ್ರೀರಾಮಸ್ತೋತ್ರಂ ಸಂಪೂರ್ಣಂ ॥

## 8.14 ಬ್ರಹ್ಮ ದೇವ ಕೃತ ಶ್ರೀರಾಮ ಸ್ತುತಿಃ

**ವಂದೇದೇವಂ ವಿಷ್ಣುಮಶೇಷಸ್ಥಿತಿಹೇತುಂ । ತ್ವಾಮಧ್ಯಾತ್ಮ ಜ್ಞಾನಿಭಿರಂತಹೃದಿ ಭಾವ್ಯಂ ॥ ಹೇಯಾ ಹೇಯ ದ್ವಂದ್ವ ವಿಹೀನಂ ಪರಮೇಕಂ । ಸತ್ತಾಮಾತ್ರಂ ಸರ್ವಹೃದಿಸ್ಥಂ ದೃಶಿರೂಪಂ ॥1॥**

ಭಾವಾರ್ಥ - ಸಮಸ್ತ ಚರಾಚರಗಳ ಇರುವಿಕೆಗೆ ನಿಮಿತ್ತನಾದವನೂ ಜೀವಾತ್ಮ-ಪರಮಾತ್ಮ ಕುರಿತಾದ ಜ್ಞಾನ ಸಂಪನ್ನರ ಹೃದಯಾಂತರಾಳದಲ್ಲಿ ನೆಲೆಯಾಗಿರುವವನೂ, ತಿರಸ್ಕರಣೀಯ ಹಾಗೂ ಸ್ವೀಕಾರಯೋಗ್ಯವೆಂಬ ಭೇದಗಳಿಲ್ಲದಾತನೂ, ಉತ್ತಮನೂ, ಏಕಮಾತ್ರನೂ, ಕೇವಲನೂ, ಸರ್ವರ ಅಂತರಂಗದಲ್ಲಿ ನೆಲೆಯಾಗಿರುವವನೂ, ಬುದ್ಧಿಸ್ವರೂಪನೂ, ಸಾಕ್ಷಾತ್ ಭಗವಾನ್ ಮಹಾವಿಷ್ಣುವೂ ಆಗಿರುವ ನಿನಗಾನು ನಮಿಸುವೆನು.

**ಪ್ರಾಣಾಪಾನೌ ನಿಶ್ಚಯಬುದ್ಧ್ಯಾ ಹೃದಿರುಧ್ವಾ ।**
**ಛಿತ್ವಾ ಸರ್ವಂ ಸಂಶಯಬಂಧಂ ವಿಷಯೌಧಾನ್ ॥**

**ಪಶ್ಯಂತೀ ಶಂ ಯಂ ಗತಮೋಹಾ ಯತಯಸ್ತಂ ।**
**ವಂದೇ ರಾಮಂ ರತ್ನಕಿರೀಟಂ ರವಿಭಾಸಂ ॥2॥**

ಭಾವಾರ್ಥ - ಆಶಾಪಾಶ ವಿರಹಿತರಾದ ಮಹಾಯೋಗಿವರೇಣ್ಯರು ಖಚಿತವಾಗಿರಿವ ಜ್ಞಾನದಿಂದ ಪ್ರಾಣ, ಅಪಾನಗಳೆನ್ನುವ ಎರಡು ವಾಯುಗಳನ್ನು ಹೃದಯಲ್ಲಿಯೇ ಬಂಧಿಯಾಗಿರಿಸಿ ಕಲ್ಪನೆಗಳ ಬಂಧವನ್ನೂ ಕಾಮನೆಗಳ ಹರಿಯುವಿಕೆಯನ್ನೂ ತುಂಡರಿಸಿ ಯಾವ ಭಗವಂತನನ್ನು ಕಾಣುವರೋ, ಅಂತಹಾ ರತ್ನಖಚಿತ ಕಿರೀಟಧಾರಿಯೂ, ಮಹಾರವಿತೇಜನೂ ಆಗಿರುವ ಸಾಕ್ಷಾತ್ ಶ್ರೀರಾಮ ಭಗವಾನನಿಗಾನು ನಮಿಸುವೆನು.

**ಮಾಯಾತೀತಂ ಮಾಧವಮಾದ್ಯಂ ಜಗದಾದಿಂ ।**
**ಮಾನಾತೀತಂ ಮೋಹವಿನಾಶಂ ಮುನಿವಂದ್ಯಂ ॥**

**ಯೋಗಿಧ್ಯೇಯಂ ಯೋಗವಿಧಾನಂ ಪರಿಪೂರ್ಣಂ ।**
**ವಂದೇರಾಮಂ ರಂಜಿತಲೋಕಂ ರಮಣೀಯಂ ॥3॥**

ಭಾವಾರ್ಥ - ಮಾಯಾನಿರ್ಮಾತೃವಾದರೂ ಮಾಯೆಯನ್ನು ದಾಟಿದವನೂ, ಜಗತ್ತಿನ ಕಾರಣಸ್ವರೂಪಿಯೂ, ದೇಶ-ಕಾಲಗಳ ಪರಿಮಿತಿಯಿಲ್ಲದಾತನೂ, ಭ್ರಾಂತಿ ನಾಶಕನೂ, ಮುನಿಗಳಿಂದ ನಮಸ್ಕರಿಸಲ್ಪಡುವಾತನೂ, ಯೋಗಿವರ್ಯರುಗಳ ಧ್ಯಾನಕ್ಕೆ ವಸ್ತುವಾದವನೂ, ಯೋಗಮಾರ್ಗ ಪ್ರೇರಕನೂ, ಸಂಪೂರ್ಣನೂ, ಲೋಕವನ್ನು ರಂಜಿಸುವಾತನೂ, ಮನೋಹರನೂ, ಪ್ರಥಮನೂ, ಲಕ್ಷ್ಮೀಕಾಂತನೂ ಆಗಿರುವ ಶ್ರೀ ರಾಮ ಭಗವಾನನಿಗಾನು ನಮಿಸುವೆನು.

**ಭಾವಾಭಾವಪ್ರತ್ಯಯಹೀನಂ ಭವ ಮುಕ್ತೈ- ।**
**ರ್ಭೋಗಾಸಕ್ತೈರರ್ಚಿತ ಪಾದಾಂಬುಜಯುಗ್ಮಂ ॥**

**ನಿತ್ಯಂ ಶುದ್ಧಂ ಬುದ್ಧಮನಂತಂ ಪ್ರಣವಾಖ್ಯಂ ।**
**ವಂದೇರಾಮಂ ವೀರಮಶೇಷಾಸುರದಾವಂ ॥4॥**

ಭಾವಾರ್ಥ - ದೃಶ್ಯಾದೃಶ್ಯ ಪ್ರಭೇದಗಳಿಂದ ಅರಿಯಲಸಾಧ್ಯನೂ, ಇಂದ್ರಿಯಸುಖಗಳಲ್ಲಿ ಅನಾಸಕ್ತರಾಗಿರುವ ಮಹಾದೇವನೇ ಮೊದಲಾದ ದೇವರ್ಕಳಿಂದ ಆರಾಧಿಸಿಕೊಂಬ ಚರಣಾರವಿಂದಗಳನ್ನು ಹೊಂದಿದಾತನೂ, ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಅವಿನಾಶಿಯಾಗಿರುವವನೂ, ಶಾಶ್ವತನೂ, ಶುದ್ಧನೂ, ಜ್ಞಾನಸ್ವರೂಪನೂ, ಆದಿ-ಅಂತ್ಯಗಳಿಲ್ಲದ ಅನಂತನೂ, ಪ್ರಣವ ಸ್ವರೂಪಿಯೂ, ಸಮಸ್ತ ಅಸುರಕುಲವೆಂಬ ಕಾನನಕ್ಕೆ ಕಾಡಿಗಿಚ್ಚಾದವನೂ ಆಗಿರುವ ಭಗವಾನ್ ಶ್ರೀರಾಮನಿಗಾನು ನಮಿಸುವೆನು.

**ತ್ವಂ ಮೇ ನಾಥೋ ನಾಥಿತಕಾರ್ಯಾಖಿಲಕಾರೀ ।**
**ಮಾನಾತೀತೋ ಮಾಧವರೂಪೋऽಖಿಲಧಾರೀ ॥**

**ಭಕ್ತ್ಯಾಗಮ್ಯೋ ಭಾವಿತ ರೂಪೋ ಭವಹಾರೀ ।**
**ಯೋಗಾಭ್ಯಾಸೈರ್ಭಾವಿತಚೇತಃ ಸಹಚಾರೀ ॥5॥**

ಭಾವಾರ್ಥ - ಖಚಿತವಾದ ರೂಪವಿಲ್ಲದೆ ಭಾವಕ್ಕನುಗುಣವಾದ ರೂಪಹೊಂದುವವನೂ, ಪ್ರಮಾಣ ರಹಿತನೂ [ಅಳತೆಗೆ ನಿಲುಕದವನೂ], ಸಂಸಾರದ ಸಂಕಷ್ಟಗಳನ್ನು ದೂರೀಕರಿಸುವವನೂ, ಯೋಗಾಭ್ಯಾಸದಿಂದ ಪವಿತ್ರಾಂತಃಕರಣವುಳ್ಳವರ ಒಡನಾಡಿಯೂ, ಶ್ರೇಷ್ಠ ಭಕ್ತಿಗೆ ವಶವಾಗುವವನೂ, ಸಮಸ್ತ ಬ್ರಹ್ಮಾಂಡವನ್ನು ಧರಿಸಿರುವಾತನೂ, ಬಿನ್ನಹವನ್ನು ಮನ್ನಿಸಿ ಸಮಸ್ತ ಕೋರಿಕೆಗಳನ್ನು ದಯಪಾಲಿಸುವವನೂ, ಲಕ್ಷ್ಮೀಕಾಂತನೂ, ಮಹಾವಿಷ್ಣುಸ್ವರೂಪನೂ ಆಗಿರುವ ಭಗವಾನ್ ಶ್ರೀರಾಮನೇ ನಿನಗಾನು ನಮಿಸುವೆನು.

**ತ್ವಾಮಾದ್ಯಂತಂ ಲೋಕಗತೀನಾಂ ಪರಮೇಶಂ ।**
**ಲೋಕನಾಥಂ ಲೌಕಿಕಮಾನ್ಯೈರಧಿಗಮ್ಯಂ ॥**

**ಭಕ್ತಿಶ್ರದ್ಧಾಭಾವ ಸಮೇತೈರ್ಭಜನೀಯಂ ।**
**ವಂದೇರಾಮಂ ಸುಂದರಮಿಂದೀವರನೀಲಂ ॥6॥**

ಭಾವಾರ್ಥ - ಹೇ ರಾಮಚಂದ್ರಾ!ನೀನು ಆದಿಅಂತ್ಯಗಳಿಲ್ಲದವನಾಗಿ ಲೋಕಗಳ ಉತ್ಪತ್ತಿ-ನಾಶಗಳಿಗೆ ಕಾರಣನೂ, ಲೋಕಾಧಿಪತಿಯಾಗಿ ಲೌಕಿಕವಾಗಿರುವ ಅಳತೆಯ ಪ್ರಮಾಣಕ್ಕೆ ತಿಳಿಯಲಸಾಧ್ಯನೂ, ಭಕ್ತಿಶ್ರದ್ಧಾಭಾವಗಳಿಗೆ ವಶವಾಗುವವನೂ, ಸೇವಿಸಲ್ಪಡುವಾತನೂ, ನೀಲತಾವರೆಯಂತೆ ಶ್ಯಾಮಲವರ್ಣನೂ, ಕೋಮಲನೂ, ಮನೋಹರನೂ ಆಗಿರುವ ಭಗವಾನ್ ಶ್ರೀರಾಮನಾದ ನಿನಗಾನು ನಮಿಸುವೆನು.

**ಕೋವಾಜ್ಞಾತುಂ ತ್ವಾಮತಿಮಾನಂ ಗತಮಾನಂ ।**
**ಮಾನಾಸಕ್ತೋ ಮಾಧವಶಕ್ತೋ ಮುನಿಮಾನ್ಯಂ ॥**

**ವೃಂದಾರಣ್ಯೇ ವಂದಿತ ವೃಂದಾರಕವೃಂದಂ ।**
**ವಂದೇರಾಮಂ ಭವಮುಖವಂದ್ಯಂ ಸುಖಕಂದಂ ॥7॥**

ಭಾವಾರ್ಥ - ಹೇ ಲಕ್ಷ್ಮೀಕಾಂತನೇ! ಇಂದ್ರಿಯಾದಿ ಎಣಿಕೆಗಳಲ್ಲಿ ಆಸಕ್ತನಾಗಿ ಅವುಗಳಲ್ಲಿ ಅವಲಂಬಿತನಾದ ಯಾವಾತನೂ ತೂಕಗಳಿಗೆ ಹೊರತಾದವನಾದ ನಿನ್ನ ನೈಜ ರೂಪವನ್ನಳೆಯಲು ಶಕ್ತನಾಗುವನೇ? ಮಹರ್ಷಿಗಳಿಗೆ ಗೌರವಾರ್ಹನೂ,

ವೃಂದಾವನದಲ್ಲಿ ದೇವತಾ ಸಮೂಹದಿಂದ ನಮಿಸಲ್ಪಡುವಾತನೂ, ಶಂಕರಾದಿ ದೇವ ಸಮೂಹದಿಂದ ವಂದಿಸಿಕೊಳ್ಳಲು ಯೋಗ್ಯನೂ, ಮೋಕ್ಷದ ಉತ್ಪಾದಕ ಶಕ್ತಿಸ್ವರೂಪನೂ ಆಗಿರುವ ಭಗವಾನ್ ಶ್ರೀರಾಮನಿಗಾನು ನಮಿಸುವೆನು.

**ನಾನಾಶಾಸ್ತ್ರೈರ್ವೇದ ಕದಂಬೈಃ ಪ್ರತಿಪಾದ್ಯಂ ।**
**ನಿತ್ಯಾನಂದಂ ನಿರ್ವಿಷಯಜ್ಞಾನ ಮನಾದಿಂ ॥**

**ಮತ್ಸೇವಾರ್ಥಂ ಮಾನುಷಭಾವಂ ಪ್ರತಿಪನ್ನಂ ।**
**ವಂದೇರಾಮಂ ಮರಕತವರ್ಣಂ ಮಧುರೇಶಂ ॥8॥**

ಭಾವಾರ್ಥ - ನಾನಾವಿಧದ ಶಾಸ್ತ್ರಗಳಿಂದ ವರ್ಣಿಸಲ್ಪಡುವಾತನೂ, ನಿತ್ಯವೂ ಸಂತಸವನ್ನುಂಟುಮಾಡುವಾತನೂ, ವಿಷಯಾಭಿಲಾಶೆಯ ಜ್ಞಾನ ಸ್ವರೂಪಿಯೂ, ಆನಾದಿ ಪುರುಷನೂ ಆಗಿದ್ದು ಚರಾಚರ ಜಗತ್ತಿನ ಕಾರ್ಯಭಾರವನ್ನು ನಿಭಾಯಿಸಲು ಮನುಜರೂಪದಲ್ಲಿ ಪ್ರಕಟವಾದವನೂ, ಹಸಿರುವರ್ಣದ ಶರೀರವುಳ್ಳಾತನೂ, ಮಧುರಾಧಿಪತಿಯೂ ಆಗಿರುವ ಶ್ರೀರಾಮ ಭಗವಾನನಿಗಾನು ನಮಿಸುವೆನು.

**ಶ್ರದ್ಧಾಯುಕ್ತೋಯಃ ಪಠತೀಮಂ ಸ್ತವಮಾದ್ಯಂ ।**
**ಬ್ರಾಹ್ಮಂ ಬ್ರಹ್ಮಜ್ಞಾನವಿಧಾನಂ ಭುವಿಮರ್ತ್ಯಃ ॥**

**ರಾಮಂ ಶ್ಯಾಮಂ ಕಾಮಿತ ಕಾಮಪ್ರದಮೀಶಂ ।**
**ಧ್ಯಾತ್ವಾ ಧ್ಯಾತಾ ಪಾತಕಜಾಲೈರ್ವಿಗತಸ್ಯಾತ್ ॥9॥**

ಭಾವಾರ್ಥ - ಈ ಭುವಿಯ ಮೇಲಿನ ಯಾವ ಶ್ರದ್ಧಾಯುಕ್ತ ಮಾನವನು ಶ್ಯಾಮಲ ವರ್ಣನೂ, ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವವನೂ ಆಗಿರುವ ದೊರೆ ಶ್ರೀರಾಮಚಂದ್ರನನ್ನು ಧ್ಯಾನಿಸಿ ವಿಶ್ವಾತ್ಮನಿಗೆ ಸಂಬಂಧಿಸಿದ ಮತ್ತು ವೇದಜ್ಞಾನವನ್ನು ಮಾಡುವಂತಹದೂ ಆಗಿರುವ ಈ ಸ್ತುತಿಯನ್ನು ಪಠಿಸುವರೋ ಅವರು ಪಾಪಸಮೂಹಗಳಿಂದ ಮುಕ್ತಿ ಹೊಂದುವರು.

॥ ಬ್ರಹ್ಮ ದೇವಕೃತ ಶ್ರೀರಾಮ ಸ್ತುತಿಃ ॥ ಈ ತೆರನಾಗಿ ಬ್ರಹ್ಮದೇವನಿಂದ ರಚಿಸಲ್ಪಟ್ಟ ಶ್ರೀರಾಮ ಸ್ತುತಿಗಳ ಭಾವಾರ್ಥವಾಗಿದೆ ॥

## 8.15 ಜಟಾಯುಕೃತ ಶ್ರೀರಾಮ ಸ್ತೋತ್ರಂ

**ಅಗಣಿತಗುಣಮಪ್ರಮೇಯಮಾದ್ಯಂ । ಸಕಲಜಗತ್ ಸ್ಥಿತಿಸಂಯಮಾದಿ ಹೇತುಂ ॥**
**ಉಪರಮಪರಮಂ ಪರಾತ್ಮಭೂತಂ । ಸತತಮಹಂ ಪ್ರಣತೋಽಸ್ಮಿ ರಾಮಚಂದ್ರಂ ॥1॥**

ಭಾವಾರ್ಥ - ಎಣಿಕೆಗೆ ಮೀರಿದ ಗುಣಗಳನ್ನು ಹೊಂದಿರುವಾತನೂ, ದೇಶಕಾಲಾದಿಗಳ ಹಿಡಿತಕ್ಕೆ ಹೊರತಾಗಿರುವವನೂ, ಪುರಾಣಪುರುಷನೂ, ಸಮಸ್ತ ವಿಶ್ವದ ಪರಿಪಾಲನೆಗೆ ನಿಮಿತ್ತ ಮಾತ್ರನೂ, ಅತ್ಯಂತ ಶಾಂತನೂ, ಸಾಕ್ಷಾತ್ ಪರಮಾತ್ಮನೂ ಆಗಿರುವ ಪ್ರಭು ಶ್ರೀರಾಮಚಂದ್ರನಿಗಾನು ನಮಿಸುವೆನು.

**ನಿರವಧಿಸುಖಮಿಂದಿರಾಕಟಾಕ್ಷಂ । ಕ್ಷಪಿತಸುರೇಂದ್ರ ಚತುರ್ಮುಖಾದಿ ದುಃಖಂ ॥**
**ನರವರಮನಿಶಂ ನತೋಽಸ್ಮಿ ರಾಮಂ । ವರದಮಹಂ ವರಚಾಪ ಬಾಣಹಸ್ತಂ ॥2॥**

ಭಾವಾರ್ಥ - ಅಂತ್ಯರಹಿತ ಸುಖಸ್ವರೂಪನೂ, ಲಕ್ಷ್ಮಿಯ ಶೃಂಗಾರಮಯ ನೋಟಕ್ಕೆ ಪಾತ್ರನಾದವನೂ, ಬ್ರಹ್ಮೇಂದ್ರಾದಿ ದೇವತಾ ಸಮೂಹದ ದುಃಖಗಳನ್ನು ದೂರೀಕರಿಸಿದವನೂ, ಹಸ್ತಗಳಲ್ಲಿ ಶ್ರೇಷ್ಠವಾದ ಬಿಲ್ಲು ಬಾಣಗಳನ್ನು ಧರಿಸಿರುವವನೂ, ಮಾನವರೂಪಿಗಳಲ್ಲಿ ಅತಿ ಶ್ರೇಷ್ಠನೂ, ಭಕ್ತರಿಗೆ ವರದಾಯಕನೂ ಆಗಿರುವ ಪ್ರಭು ಶ್ರೀರಾಮಚಂದ್ರನಿಗಾನು ಅನವರತ ನಮಿಸುವೆನು.

**ತ್ರಿಭುವನಕಮನೀಯರೂಪಮೀಡ್ಯಂ । ರವಿಶತಭಾಸುರಮೀಹಿತಪ್ರದಾನಂ ॥**
**ಶರಣದಮನಿಶಂ ಸುರಾಗನೂಲೆ । ಕೃತನಿಲಯಂ ರಘುನಂದನಂಪ್ರಪದ್ಯೇ ॥3॥**

ಭಾವಾರ್ಥ - ಮೂರುಲೋಕಂಗಳಲ್ಲಿ ಅತಿ ಸುಂದರರೂಪಿಯೂ, ನೂರು ಸೂರ್ಯರ ತೇಜಸ್ಸನ್ನು ಹೊಂದಿರುವಾತನೂ, ಭಕ್ತರ ಇಷ್ಟಾರ್ಥಗಳನ್ನು ದಯಪಾಲಿಸುವಾತನೂ, ಶರಣಾರ್ಥಿಗಳಿಗೆ ಆಶ್ರಯದಾತನೂ, ದೊರೆಯೂ,

ಅನುರಾಗದ ನೆಲೆಯಾದ ಪವಿತ್ರಾಂತಃಕರಣದಲ್ಲಿ ನಿರಂತರವೂ ನೆಲೇಸಿರುವಾತನೂ ಆಗಿರುವ ಪ್ರಭು ಶ್ರೀರಾಮಚಂದ್ರನಿಗಾನು ನಮಿಸುವೆನು.

**ಭವವಿಪಿನದವಾಗ್ನಿ ನಾಮಧೇಯಂ । ಭವಮುಖದೈವತದೈವತಂ ದಯಲುಂ ।**
**ದನುಜಪತಿ ಸಹಸ್ರ ಕೋಟಿನಾಶಂ । ರವಿತನಯಾಸದೃಶಂ ಹರಿಂ ಪ್ರಪದ್ಯೇ ॥4॥**

ಭಾವಾರ್ಥ - ಸಂಸಾರರೂಪೀ ಘೋರಾರಣ್ಯವನ್ನು ಸುಡುವ ಕಾಡ್ಗಿಚ್ಚೆಂಬ ಹೆಸರನ್ನು ಹೊತ್ತವನೂ, ಹರನೇ ಆದಿಯಾದ ದೇವರ್ಕಳ ಸಮೂಹಕ್ಕೆ ಮಹಾದೇವನಾದವನೂ, ದಯಾವಂತನೂ, ಸಹಸ್ರಾರು ಕೋಟಿ ದಾನವರನ್ನು ನಾಶಗೊಳಿಸಿದಾತನೂ, ಸೂರ್ಯತನಯೆಯಾಗಿರುವ ಯಮುನಾ ನದಿಯವರ್ಣವನ್ನು ಹೋಲುವ ಶರೀರವುಳ್ಳಾತನೂ ಶ್ರೀಹರಿ ರೂಪಿಯೂ ಆಗಿರುವ ಪ್ರಭು ಶ್ರೀರಾಮಚಂದ್ರನಿಗಾನು ನಮಿಸುವೆನು.

**ಅವಿರತಭವ ಭಾವನಾತಿ ದೂರಂ । ಭವಮುಖೈರ್ಮುನಿಭಿಃಸದೈವ ದೃಶ್ಯಂ ॥**
**ಭವಜಲಧಿಸುತಾರಣಾಂಘ್ರಿಪೋತಂ । ಶರಣಮಹಂ ರಘುನಂದನಂ ಪ್ರಪದ್ಯೇ ॥5॥**

ಭಾವಾರ್ಥ - ಅವಿರತವಾಗಿ ಸಾಂಸಾರಿಕ ಯೋಚನೆಯಲ್ಲಿ ಮಗ್ನರಾದವರಿಗೆ ಬಹಳ ಅಂತರದಲ್ಲಿರುವಾತನೂ, ಸಂಸಾರದಿಂದ ವಿಮುಖರಾಗಿರುವ ಯೋಗಿಮುನಿವರ್ಯರಿಗೆ ಸದಾ ಕಾಣುವಾತನೂ, ಸಂಸಾರಸಾಗರವನ್ನು ದಾಟಲು ಸುಲಭರೂಪದ ಹರಿಗೋಲಿನಂತಿರುವ ಚರಣಾರವಿಂದಗಳುಳ್ಳ ರಘುಕುಲತಿಲಕ ಪ್ರಭು ಶ್ರೀರಾಮಚಂದ್ರನಿಗಾನು ನಮಿಸುವೆನು.

**ಗಿರಿಶಗಿರಿಸುತಾಮನೋನಿವಾಸಂ । ಗಿರಿವರ ಧಾರಿಣಮೀಹಿತಾಭಿರಾಮಂ ॥**
**ಸುರವರದನುಜೇಂದ್ರ ಸೇವಿತಾಂಘ್ರಿಂ । ಸುರವರದಂ ರಘುನಾಯಕಂ ಪ್ರಪದ್ಯೇ ॥6॥**

ಭಾವಾರ್ಥ - ಅನವರತವೂ ಗಿರಿಜಾಶಂಕರರ ಹೃತ್ಕಮಲ ನಿವಾಸಿಯಾಗಿರುವಾತನೂ, ಕೃಷ್ಣಾವತಾರದೊಳು ಹಿರಿದಾದ ಗೋವರ್ಧನ ಗಿರಿಯನ್ನೆತ್ತಿ ಹಿಡಿದಾತನೂ, ಬಯಸುವವರನ್ನು ತೃಪ್ತಿಗೊಳಿಸುವಾತನೂ, ಮಹಾ ಮಹಾ ದೇವ-ದಾನವರಿಂದ

ಪಾದಸೇವೆಯನ್ನು ಸ್ವೀಕರಿಸಿ ವರಗಳನ್ನು ದಯಪಾಲಿಸುವಾತನೂ ಆಗಿರುವ ರಘುಕುಲದೊಡೆಯ ಪ್ರಭು ಶ್ರೀರಾಮನಿಗಾನು ಶರಣಾಗುವೆನು.

**ಪರಧನ ಪರದಾರಾವರ್ಜಿತಾನಾಂ । ಪರಗುಣಭೂತಿಷು ತುಷ್ಟಮಾನಸಾನಾಂ ॥**
**ಪರಹಿತನಿರತಾತ್ಮನಾಂ ಸುಸೇವ್ಯಂ । ರಘುವರಮಂಬುಜಲೋಚನಂ ಪ್ರಪದ್ಯೇ ॥7॥**

ಭಾವಾರ್ಥ - ಅನ್ಯರ ಸಂಪತ್ತು ಹಾಗೂ ಪರಸ್ತ್ರೀಯರನ್ನು ವರ್ಜಿಸುವವರಿಗೂ, ಅನ್ಯರಗುಣಗಳನ್ನು ಮತ್ತು ಐಶ್ವರ್ಯವನ್ನು ಕಂಡು ಸಂತಸ ಪಡುವವರಿಗೂ, ಹಾಗೆಯೇ ಅನ್ಯರ ಒಳಿತನ್ನು ಕಾಯುವುದರಲ್ಲಿ ನಿರತರಾದವರಿಗೂ ಧ್ಯಾನಿಸಲು ಯೋಗ್ಯನಾಗಿರುವ ಕಮಲನಯನ ರಘುವಂಶಪ್ರದೀಪ ಪ್ರಭು ಶ್ರೀರಾಮನಿಗಾನು ಶರಣಾಗುವೆನು.

**ಸ್ಮಿತರುಚಿರವಿಕಾಸಿತಾನನಾಬ್ಜ- । ಮತಿಸುಲಭಂ ಸುರರಾಜ ನೀಲನೀಲಂ ॥**
**ಸಿತಜಲರುಹ ಚಾರು ನೇತ್ರ ಶೋಭಂ । ರಘುಪತಿಮೀಶಂ ಗುರೋರ್ಗುರುಂ ಪ್ರಪದ್ಯೇ ॥8॥**

ಭಾವಾರ್ಥ - ಮುಗುಳುನಗೆಯಿಂದ ಕೂಡಿ ಮನೋಹರವೂ ವಿಕಸಿತವೂ ಆಗಿ ಕಾಣುವ ಮುಖಾರವಿಂದವುಳ್ಳವನೂ, ಭಕ್ತರಿಗೆ ಅತಿ ಸುಲಭ ಲಭ್ಯನೂ, ಇಂದ್ರನೀಲರತ್ನಸದೃಶ ಶ್ಯಾಮಲ ಶರೀರನೂ, ಬೆಳ್ದಾವರೆಯಂತೆ ರಮಣೀಯವಾದ ನಯನಗಳುಳ್ಳಾತನೂ, ದೊರೆಯೂ, ಗುರುಗಳಿಗೆ ಪರಮಗುರುವೂ ಆಗಿರುವ ರಘುಕುಲಾಧಿಪ ಪ್ರಭು ಶ್ರೀರಾಮನಿಗಾನು ಶರಣಾಗುವೆನು.

**ಹರಿಕಮಲಜ ಶಂಭುರೂಪಭೇದಾತ್ವ- । ಮಿಹ ವಿಭಾಸಿಗುಣತ್ರಯಾನುವೃತ್ತಃ ॥**
**ರವಿರಿವ ಜಲಪೂರಿತೋದ ಪಾತ್ರೇಷ್ವ- । ಮರಪತಿಸ್ತುತಿ ಪಾತ್ರಮೀಶಮೀಡೆ ॥9॥**

ಭಾವಾರ್ಥ - ಜಲಭರಿತ ವಿವಿಧ ಪಾತ್ರೆಗಳಲ್ಲಿ ಸೂರ್ಯ ಪ್ರತಿಬಿಂಬವು ಹಲವು ರೂಪವಾಗಿ ಕಾಣುವಂತೆ ಸತ್ವ-ರಜತಮೊ ಗುಣಗಳೆನ್ನುವ ಮೂರು ಗುಣಗಳಿಂದ ಅನುಸರಿಸುವಂತೆ ವರ್ತಿಸುತ್ತಿರುವಾಗ ಹರಿ ಹರ ಬ್ರಹ್ಮರೆಂಬ ಭಿನ್ನ ಪ್ರಭೇದಗಳಿಂದ ನೀನು ಭಾಸವಾಗುತ್ತಿರುವೆ. ದೇವೇಂದ್ರನಿಂದ ಸ್ತುತಿಸಲ್ಪಡುವಾತನು ನೀನು. ನೀನೇ

ಜಗದೊಡೆಯನು. ಇಂತಹಾ ರಘುಕುಲಾಧಿಪ ಪ್ರಭು ಶ್ರೀರಾಮನಾಗಿರುವ ನಿನಾಗಾನು ಶರಣಾಗುವೆನು.

**ರತಿಪತಿಶತಕೋಟಿ ಸುಂದರಾಂಗಂ । ಶತಪಥ ಗೋಚರ-ಭಾವನಾವಿಧೂರಂ ॥**
**ಯತಿಪತಿ ಹೃದಯೇ ಸದಾ ವಿಭಾತಂ । ರಘುಪತಿಮಾರ್ತಿಹರಂ ಪ್ರಭುಂ ಪ್ರಪದ್ಯೇ ॥10॥**

ಭಾವಾರ್ಥ - ನೂರುಕೋಟಿ ಮನ್ಮಥರಂತೆ ಮನೋಹರವಾಗಿರುವ ದೇಹವನ್ನು ಹೊಂದಿರುವಾತನೂ, ಯಜುರ್ವೇದೀಯ ಬ್ರಾಹ್ಮಣದಲ್ಲಿ ಹೇಳಿರುವಂತೆ ಧ್ಯಾನಿಸಲು ಸುಲಭ ಲಭ್ಯನೂ, ಮಹಾ ಮಹಾ ಋಷಿ ಮುನಿ ಯೋಗಿವರೇಣ್ಯರ ಅಂತರಂಗದಲ್ಲಿ ನಿರಂತರ ಬೆಳಗುತ್ತಲಿರುವಾತನೂ, ದುಃಖಗಳನ್ನು ದೂರೀಕರಿಸುವಾತನೂ ದೊರೆಯೂ ಆಗಿರುವ ರಘುಕುಲಾಧಿಪ ಪ್ರಭು ಶ್ರೀರಾಮನಿಗಾನು ಶರಣಾಗುವೆನು.

**ಇತ್ಯೇವಂ ಸ್ತುವತಸ್ತಸ್ಯ ಪ್ರಸನ್ನೋಽಭೂದ್ರಘೂತ್ತಮಃ ।**
**ಉವಾಚ ಗಚ್ಛ ಭದ್ರಂತೇ ಮಮ ವಿಷ್ಣೋಃ ಪರಂ ಪದಂ ॥11॥**

ಭಾವಾರ್ಥ - ಈ ರೀತಿಯಾಗಿ ಸ್ತೋತ್ರ ಮಾಡುತ್ತಲಿರುವ ಆ ಜಟಾಯುವಿಗೆ ರಘುಕುಲೋತ್ತಮನಾದ ಶ್ರೀರಾಮಚಂದ್ರನು ಕರುಣೆದೋರಿ ಇಂತೆಂದು ಅನುಗ್ರಹಿಸಿದನು. " ಹೇ ಜಟಾಯುವೇ, ಮಹಾವಿಷ್ಣುವೇ ಆಗಿರುವ ನನ್ನ ಶ್ರೇಷ್ಠ ಪದವಿಯಾಗಿರುವ ಮೋಕ್ಷಧಾಮದಲ್ಲಿ ಶಾಶ್ವತವಾಗಿ ನೆಲೆಸುವವನಾಗು. ನಿನಗೆ ಶುಭವಾಗಲಿ. "

**ಶೃಣೋತಿ ಯದಿದಂ ಸ್ತೋತ್ರಂ ಲಿಖೇದ್ವಾನಿಯತಃ ಪಠೇತ್ ।**
**ಸ ಯಾತಿ ಮಮ ಸಾರೂಪ್ಯಂ ಮರಣೇಮತ ಸ್ಮೃತಿಂ ಲಭೇತ್ ॥12॥**

ಭಾವಾರ್ಥ - ಯಾವಾತನು ನಿನ್ನಿಂದ [ಜಟಾಯುವಿನಿಂದ] ರಚಿಸಲ್ಪಟ್ಟಿರುವ ಈ ಸ್ತೋತ್ರವನ್ನು ನಿಯಮಿತವಾಗಿ ಬರೆದೋದುವನೋ ಅವನು ಅಂತ್ಯಕಾಲದಲ್ಲಿ ನನ್ನ ಸ್ಮರಣೆಯುಳ್ಳವನಾಗಿ ಮರಣಾನಂತರ ನನ್ನ "ಪ್ರತಿರೂಪ"ವೆನ್ನುವ ಮುಕ್ತಿಗೆ ಪಾತ್ರನಾಗುವನು.

॥ ಇತಿ ಜಟಾಯುಕೃತ ಶ್ರೀರಾಮ ಸ್ತೋತ್ರಂ ಸಂಪೂರ್ಣಂ ॥

## 8.16 ಶ್ರೀರಾಮಚಂದ್ರಾಷ್ಟಕಂ

**ಚಿದಾಕಾರೊ ಧಾತಾ ಪರಮಸುಖದಃ ಪಾವನತನು ।**
**ಮುರ್ನೀಂದ್ರೈರ್ಯೋಗೀಂದ್ರೈರ್ಯತಿ ಪತಿ ಸುರೇಂದ್ರೈರ್ಹನುಮತಾ ॥**

**ಸದಾ ಸೇವ್ಯಃ ಪೂರ್ಣೋ ಜನಕತನಯಾಂಗಃ ಸುರಗುರು ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥1॥**

ಭಾವಾರ್ಥ - ತಿಳುವಳಿಕೆಯ ಸ್ವರೂಪನೂ, ಬ್ರಹ್ಮಾಂಡದ ಧಾರಣೆ-ಪಾಲನೆಗಳನ್ನು ಮಾಡುವಾತನೂ, ಶ್ರೇಷ್ಠವಾದ ಸುಖವನ್ನು ದಯಪಾಲಿಸುವವನೂ, ಸಮಸ್ತರನ್ನು ಪಾವನೀಕರಿಸುವ ದೇಹವುಳ್ಳಾತನೂ, ಮುನೀಂದ್ರ, ಯೋಗೀಂದ್ರ, ಯತೀಂದ್ರ, ದೇವೇಂದ್ರ, ಹನೂಮಂತರೇ ಆದಿಯಾದವರಿಂದ ಧ್ಯಾನಿಸಲ್ಪಡುವಾತನೂ, ಪರಿಪೂರ್ಣನೂ, ಸೀತಾಮಾತೆಯು ಅರ್ಧಾಂಗಿಣಿಯಾಗಿ ಇರುವಾತನೂ, ದೇವತಾ ಸಮೂಹಕ್ಕೆ ಮಾರ್ಗದರ್ಶಕನಾದ ಗುರುಸ್ವರೂಪದವನಾಗಿರುವವನೂ, ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ಮುಕುಂದೋ ಗೋವಿಂದೋ ಜನಕತನಯಾ ಲಾಲಿತಪದಃ ।**
**ಪದಂ ಪ್ರಾಪ್ತಾಯಸ್ಯಾಧಮಕುಲಭವಾ ಚಾಪಿ ಶಬರಿ ॥**

**ಗಿರಾತೀತೋಽಗಮ್ಯೋ ವಿಮಲಧಿಷಣೈರ್ವೇದ ವಚಸಾ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥2॥**

ಭಾವಾರ್ಥ - ಗೋವಿಂದನೆಂದೂ ಮುಕುಂದನೆಂದೂ ಕರೆಯಿಸಲ್ಪಡುತ್ತಾ ಸೀತೆಯಿಂದ ತನ್ನ ಚರಣಾರವಿಂದಗಳನ್ನು ಮುದ್ದಿಸಿಕೊಳ್ಳುತ್ತಾ ತನ್ನನ್ನು ಭಜಿಸಿದ ಅಧಮಕುಲದಲ್ಲಿ ಜನಿಸಿದ ಶಬರಿಗೆ ಮೋಕ್ಷತ್ವವನ್ನು ದಯಪಾಲಿಸಿದಾತನೂ, ನಿರ್ಮಲಮನದ ಜ್ಞಾನಿಗಳ ವಾಣಿಗಳಿಗೆ ದೂರದಲ್ಲಿರುವಾತನೂ ವೇದವಾಕ್ಕುಗಳಿಗೆ

ಕೂಡಾ ನಿಲುಕದಿರುವ ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ಧರಾಧೀಶೋಧೀಶಃ ಸುರನರವರಾಣಾಂ ರಘುಪತಿಃ ।**
**ಕಿರೀಟೀಕೇಯೂರೀ ಕನಕಪಿಶಃ ಶೋಭಿತವಪುಃ ॥**

**ಸಮಾಸೀನಃ ಪೀಠೇ ರವಿಶತನಿಭೇ ಶಾಂತ ಮನಸೋ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥3॥**

ಭಾವಾರ್ಥ - ಭೂಮಂಡಲಕ್ಕೆ ಅಧಿಪತಿಯಾಗಿರುವವನೂ, ಅಗ್ರಗಣ್ಯ ದೇವತೆಗಳಿಗೂ ಮನುಜಸಂತತಿಗೂ ಒಡೆಯನಾಗಿರುವವನೂ, ರಘುಕುಲಕ್ಕೆ ಅಧಿನಾಯಕನೂ, ಶಿರದ ಮೇಲೆ ಕಿರೀಟವನ್ನೂ, ಭುಜಗಳಲ್ಲಿ ಕೇಯೂರ ಹಾರವನ್ನೂ ಧರಿಸಿದಾತನೂ, ಹೇಮಸದೃಶ ಹೊಂಬಣ್ಣದ ವಸನವನ್ನು ಧರಿಸಿಕೊಂಡಾತನೂ, ದೇಹಕಾಂತಿಯುಳ್ಳಾತನೂ, ನೂರು ಸೂರ್ಯರ ಪ್ರಕಾಶವುಳ್ಳ ದೈದೀಪ್ಯಮಾನ ಸಿಂಹಾಸನದಲ್ಲಿ ಆರೂಢನಾಗಿರುವವನೂ, ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ವರೇಣ್ಯಃ ಶಾರಣ್ಯಃ ಕಪಿಪತಿಸಖಶ್ಚ್ಯುತ ವಿಧುರೋ ।**
**ಲಲಾಟೇ ಕಾಶ್ಮೀರೋ ರುಚಿರಗತಿ ಭಂಗಃ ಶಶಿಮುಖಃ ॥**

**ನರಾಕಾರೋ ರಾಮೋಯತಿ ಪತಿನುತಃ ಸಂಸ್ಕೃತಿಹರೊ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥4॥**

ಭಾವಾರ್ಥ - ಉನ್ನತನೂ, ಆಶ್ರಯದಾತನೂ, ಸುಗ್ರೀವನ ಮಿತ್ರನೂ, ಅಂತ್ಯವಿಲ್ಲದಾತನೂ, ಹಣೆಯ ಮೇಲೆ ಕೇಸರಿಯ ತಿಲಕವನ್ನು ಧರಿಸಿರುವವನೂ, ಚಂದಿರನೋಪಾದಿಯಲ್ಲಿ ಬೆಳಗುತ್ತಲಿರುವ ಮುಖಕಮಲವುಳ್ಳಾತನೂ, ಮಾನುಷ ರೂಪಿಯಾದಾಗ್ಯೂ ಯೋಗಿವರೇಣ್ಯರ ಗುರಿಯೆನಿಸಿರುವ ಪರಬ್ರಹ್ಮಸ್ವರೂಪಿಯೂ, ಗುರುವರೇಣ್ಯರುಗಳಿಂದ ಸ್ತುತಿಸಲ್ಪಡುವಾತನೂ, ಹುಟ್ಟು-ಸಾವುಗಳುಳ್ಳ ಸಾಂಸಾರಿಕ

ದುಃಖವನ್ನು ನಾಶಗೊಳಿಸುವಾತನೂ, ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ವಿರೂಪಾಕ್ಷಃ ಕಾಶ್ಯಾಮುಪದಿಶತಿ ಯನ್ನಾಮ ಶಿವದಂ ।**
**ಸಹಸ್ರಂಯನ್ನಾಮ್ನಾಂ ಪಠತಿ ಗಿರಿಜಾ ಪ್ರತ್ಯ್ಯುಷಸಿ ವೈ ॥**

**ಸ್ವಲೋಕೇ ಗಾಯಂತೀಶ್ವರ ವಿಧಿಮುಖಾ ಯಸ್ಯ ಚರಿತಂ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥5॥**

ಭಾವಾರ್ಥ - ಪುಣ್ಯ ಪ್ರದವಾದ ಕಾಶೀ ಕ್ಷೇತ್ರದಲ್ಲಿ ಭಗವಾನ್ ಶಿವಶಂಕರನು ಸಾಯುವ ಸ್ಥಿತಿಯಲ್ಲಿರುವ ಜೀವಿಗಳಿಗೆ ಯಾವಾತನ ಶುಭಪ್ರದವಾದ ನಾಮವನ್ನು ಉಪದೇಶಿಸಿದನೋ, ಪಾರ್ವತೀ ದೇವಿಯು ಅನುದಿನವೂ ಉಷಃಕಾಲದಲ್ಲಿ ಯಾವಾತನ ಸಹಸ್ರ ನಾಮಗಳನ್ನು ಪಠಿಸುವಳೋ, ಶಿವ ಬ್ರಹ್ಮರೇ ಆದಿಯಾದ ದೇವರ್ಕಳ ಸಮೂಹವು ತಮ್ಮ ತಮ್ಮ ಸ್ಥಾನಗಳಲ್ಲಿ ಯಾರ ಪಾವನ ಚರಿತೆಯನ್ನು ಹಾಡುವರೋ ಅಂತಹಾ ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ಪರೋಧೀರೋಽಧೀರೋಽಸುರಕುಲಭವಶ್ಚಾಸುರ ಹರಃ ।**
**ಪರಾತ್ಮಾ ಸರ್ವಜ್ಞೋ ನರಸುರಗಣೈರ್ಗೀತಸು ಯಶಾಃ ॥**

**ಅಹಲ್ಯಾ ಶಾಪಘ್ನಃ ಶರಕರ ಋಜುಃ ಕೌಶಿಕ ಸಖೋ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥6॥**

ಭಾವಾರ್ಥ - ಅತ್ಯಂತ ಬಲಶಾಲಿಯಾಗಿದ್ದರೂ ಅಜ್ಞಾನವನ್ನು ದೂರೀಕರಿಸುವ ಅಧೀರನೂ, ಅಸುರಕುಲದಲ್ಲಿ ಜನಿಸಿದವನಾದಾಗ್ಯೂ ಅಸುರ ಕುಲ ಸಂಹಾರಿಯೂ, ಪರಮಾತ್ಮಸ್ವರೂಪಿಯೂ, ಸರ್ವಜ್ಞನೂ, ಮಾನುಷಾದಿ ದೇವತಾ ಗಣಸಮೂಹದಿಂದ ಉತ್ತಮವಾದ ಖ್ಯಾತಿಯನ್ನು ಪಡೆದುಕೊಂಡಾತನೂ, ಅಹಲ್ಯಾ ಶಾಪ ವಿಮೋಚಕನೂ, ಹಸ್ತಗಳಲ್ಲಿ ಶುಭಪ್ರದವಾದ ಬಾಣಗಳನ್ನು ಹಿಡಿದುಕೊಂಡವನೂ, ಸರಳ

ಸ್ವಭಾವದವನೂ, ವಿಶ್ವಾಮಿತ್ರನ ಪ್ರೀತಿಯ ಸಖನೂ, ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ಹೃಷಿಕೇಶಃ ಶೌರೀರ್ಧರಣಿಧರಶಾಯಿ ಮಧುರಿಪುಃ ।**
**ರೂಪೇಂದ್ರೋ ವೈಕುಂಠೋ ಗಜರಿಪುಹರಸ್ತುಷ್ಟ ಮನಸಾ ॥**

**ಬಲಧ್ವಂಸೀ ವೀರೋ ದಶರಥ ಸುತೋ ನೀತಿ ನಿಪುಣೋ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥7॥**

ಭಾವಾರ್ಥ - ಶೌರಿ, ಹೃಷಿಕೇಶ, ಶೇಷಶಯನ, ಮಧುಸೂದನ, ಉಪೇಂದ್ರ, ವೈಕುಂಠಪತಿಯೇ ಆದಿಯಾದ ಹೆಸರುಗಳಿಂದ ಕರೆಯಿಸಿಕೊಳ್ಳುವಾತನೂ, ಗಜರಾಜನ ಮೊರೆಗೆ ಪ್ರಸನ್ನನಾಗಿ ಆತನ ವೈರಿಯಾಗಿದ್ದ ಮೊಸಳೆಯನ್ನು ಸಂಹರಿಸಿದವನೂ, ಬಲಿಚಕ್ರವರ್ತಿಯನ್ನು ರಾಜ ಪಟ್ಟದಿಂದ ಪದಚ್ಯುತಿಗೊಳಿಸಿದಾತನೂ, ವೀರನೂ, ನಿಪುಣನೂ, ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ಕವಿಃ ಸೌಮಿತ್ರೀಢ್ಯಃ ಕಪಟಮೃಗಘಾತೀ ವನಚರೋ ।**
**ರಣಶ್ಲಾಘೀದಾಂತೋ ಧರಣಿಭರಹರ್ತಾ ಸುರನುತಃ ॥**

**ಅಮನೀ ಮಾನಜ್ಞೋ ನಿಖಿಲಜನಪೂಜ್ಯೋ ಹೃದಿಶಯೋ ।**
**ರಮಾನಾಥೋ ರಾಮೋ ರಮತು ಮಮ ಚಿತ್ತೇತು ಸತತಂ ॥8॥**

ಭಾವಾರ್ಥ - ತ್ರಿಕಾಲಜ್ಞನೂ, ಲಕ್ಷ್ಮಣನಿಗೆ ಆರಾಧ್ಯನೂ, ವನದಲ್ಲಿ ವಿಹರಿಸುತ್ತಾ ಮಾಯಾಮೃಗರೂಪೀ ಮಾರೀಚನನ್ನು ಸಂಹರಿಸಿದಾತನೂ, ಯುದ್ಧಪ್ರಿಯನೂ, ಮನೋಇಂದ್ರಿಯಂಗಳ ನಿಗ್ರಹಿಸಿದವನೂ, ಭೂಭಾರವನ್ನು ಹರಣಗೊಳಿಸಿದಾತನೂ, ದೇವರ್ಕಳುಗಳಿಂದ ಸ್ತುತಿಸಿಕೊಂಬಾತನೂ, ತಾನು ಮಾನಾಪಮಾನ ವಿರಹಿತನಾದವನಾದಗ್ಯೂ ಅನ್ಯರಿಂದ ಸನ್ಮಾನಿಸಿಕೊಂಬಾತನೂ, ಸರ್ವರಿಗೂ ಆರಾಧ್ಯನೂ, ಸಮಸ್ತ ಜೀವಕೋಟಿಗಳ ಹೃತ್ಕಮಲವಾಸಿಯೂ ಲಕ್ಷ್ಮೀಕಾಂತನೂ ಆಗಿರುವ ಶ್ರೀರಾಮಚಂದ್ರನು ನನ್ನ ಮನದಲ್ಲಿ ಸದಾ ವಿಹರಿಸುತ್ತಿರಲಿ.

**ಇದಂ ರಾಮಸ್ತೋತ್ರಂ ವರಮಮರದಾಸೇನ ರಚಿತ- ।**
**ಮುಷಃಕಾಲೇಭಕ್ತ್ಯಾಯದಿ ಪಠತಿ ಯೋ ಭಾವಸಹಿತಂ ॥**

**ಮನುಷ್ಯಃ ಸ ಕ್ಷಿಪ್ರಂ ಜನಿಮೃತಿಭಯಂ ತಾಪಜನಕಂ ।**
**ಪರಿತ್ಯಜ್ಯ ಶ್ರೇಷ್ಠಂ ರಘುಪತಿ ಪದಂ ಯಾತಿ ಶಿವದಂ ॥9॥**

ಭಾವಾರ್ಥ - ಉಷಃಕಾಲದಲೆದ್ದು ಭಕ್ತಿ ಶ್ರದ್ಧಾಯುತನಾಗಿ ಅಮರದಾಸ ಕವಿಯಿಂದ ರಚಿತವಾಗಿರುವ ಈ ಸುಂದರ ರಾಮಸ್ತೋತ್ರಗಳನ್ನು ಪಠಿಸುವಾತನು ಅತ್ಯಂತ ಶೀಘ್ರವಾಗಿ ಚಿಂತಾಜನಕವಾಗಿರುವ ಹುಟ್ಟು-ಸಾವುಗಳ ಭೀತಿ ವರ್ಜಿತನಾಗಿ ಅಗ್ರಗಣ್ಯವೂ, ಶುಭದಾಯಕವೂ ಆಗಿರುವ ಶ್ರೀ ರಘುಕುಲದೊಡೆಯನ ಮಹಾ ಸಾನ್ನಿಧ್ಯ ಪದವಿಯನ್ನು ಪಡೆಯುವನು.

॥ ಇತಿ ಶ್ರೀರಾಮಚಂದ್ರಾಷ್ಟಕಂ ಸಂಪೂರ್ಣಂ ॥

## 8.17 ಶ್ರೀರಾಮಹೃದಯ

**ಯಃ ಪೃಥ್ವೀಭರವಾರಣಾಯ ದಿವಿಜೈಃ ಸಂಪ್ರಾರ್ಥಿತಶ್ಚಿನ್ಮಯಃ ಸಂಜಾತಃ ಪೃಥವೀತಲೇ ರವಿಕುಲೇ ಮಾಯಾಮನುಷ್ಯೋವ್ಯಯಃ ನಿಶ್ಚಕ್ರಂ ಹತರಾಕ್ಷಸಃ ಪುನರಗಾದ್ ಬ್ರಹ್ಮತ್ವಮಾದ್ಯಂ ಸ್ಥಿರಾಂ ಕೀರ್ತಿಂ ಪಾಪಹರಾಂ ವಿಧಾಯ ಜಗತಾಂ ತಂ ಜಾನಕೀತಂ ಭಜೇ ॥1॥**

ಭಾವಾರ್ಥ - ಭೂಮಿಯ ಭಾರವನ್ನು ಇಳಿಸಿಕೊಡಬೇಕೆಂದು ದೇವತೆಗಳು ಪ್ರಾರ್ಥಿಸಲಾಗಿ ಯಾವ ಚಿತ್ಸ್ವರೂಪನಾದ ಪರಮಾತ್ಮನು ತಾನು ಅವ್ಯಯನಾಗಿದ್ದರೂ ಮಾಯೆಯಿಂದ ಮನುಷ್ಯನಾಗಿ ಈ ಭೂಮಂಡಲದಲ್ಲಿ ಸೂರ್ಯವಂಶದಲ್ಲಿ ಅವತರಿಸಿ ಚಕ್ರಾಯುಧವಿಲ್ಲದೆಯೇ ರಾಕ್ಷಸರನ್ನು ಕೊಂದು, ಲೋಕದ ಜನಗಳ ಪಾಪವನ್ನೆಲ್ಲ ಪರಿಹರಿಸುವಂಥ ಶಾಶ್ವತವಾದ ಕೀರ್ತಿಯನ್ನು ಇಲ್ಲಿಟ್ಟು ಮತ್ತೆ ಮೊದಲಿನ ತನ್ನ ಸ್ವರೂಪವನ್ನು ಹೊಂದಿದನೋ ಆ ಜಾನಕೀಶನನ್ನು ಭಜಿಸುತ್ತೇನೆ.

**ವಿಶ್ವೋದ್ಭವಸ್ಥಿತಿಲಯಾದಿಷು ಹೇತುಮೇಕಂ ಮಾಯಾಶ್ರಯಂ ವಿಗತಮಾಯಮಚಿಂತ್ಯಮೂರ್ತಿಂ । ಆನಂದಸಾಂದ್ರಮಮಲಂ ನಿಜಬೋಧರೂಪಂ ಸೀತಾಪತಿಂ ವಿದಿತತತ್ತ್ವಮಹಂ ನಮಾಮಿ ॥2॥**

ಭಾವಾರ್ಥ - ಪ್ರಪಂಚದ ಹುಟ್ಟು, ಇರುವಿಕೆ, ಪ್ರಲಯ - ಮುಂತಾದ ಎಲ್ಲಾ ಆಗುಹೋಗುಗಳಿಗೂ ತಾನೊಬ್ಬನೇ ಕಾರಣವಾಗಿಯೂ ಮಾಯೆಗೆ ಆಸರೆಯನ್ನಿತ್ತಿದ್ದರೂ ಯಾವ ಮಾಯೆಯ ಸಂಬಂಧವೂ ತನ್ನಲ್ಲಿಲ್ಲದವನಾಗಿಯೂ ಇಂತೆಂದು ಮನಸ್ಸಿನಿಂದ ಆಲೋಚಿಸುವದಕ್ಕೆ ಕೂಡ ಆಗದಂಥ ಸ್ವರೂಪವುಳ್ಳವನಾಗಿಯೂ ಪರಮಾನಂದಸ್ವರೂಪವಾಗಿ, ನಿರ್ಮಲವಾಗಿ, ಸ್ವಾಭಾವಿಕವಾದ ಜ್ಞಾನಸ್ವರೂಪವಾಗಿರುವ ಸುಪ್ರಸಿದ್ಧ ತತ್ತ್ವವಾದ ಸೀತಾಪತಿಯನ್ನು ನಮಸ್ಕರಿಸುತ್ತೇನೆ.

**ಪಠಂತಿ ಯೇ ನಿತ್ಯಮನನ್ಯಚೇತಸಃ ಶೃಣ್ವಂತಿ ಚಾಧ್ಯಾತ್ಮಿಕಸಂಜ್ಞಿತಂ ಶುಭಂ । ರಾಮಾಯಣಂ ಸರ್ವಪುರಾಣಸಮ್ಮತಂ ನಿರ್ಧೂತಪಾಪಾ ಹರಿಮೇವ ಯಾಂತಿ ತೇ ॥3॥**

ಭಾವಾರ್ಥ - ಎಲ್ಲಾ ಪುರಾಣಗಳಿಗೂ ಒಪ್ಪಾಗಿರುವ ಆಧ್ಯಾತ್ಮಿಕವೆಂಬ ಈ ಮಂಗಲಕರವಾದ ರಾಮಾಯಣವನ್ನು ಇದರಲ್ಲಿಯೇ ಚಿತ್ತವನ್ನಿಟ್ಟು ಯಾರು ನಿತ್ಯವೂ ಪಾರಾಯಣಮಾಡುತ್ತಾರೋ ಮತ್ತು ಶ್ರವಣಮಾಡುತ್ತಾರೋ ಅವರು ಪಾಪವನ್ನೆಲ್ಲ ತೊಳೆದುಕೊಂಡು ಶ್ರೀಹರಿಯನ್ನೇ ಸೇರುವರು.

**ಆಧ್ಯಾತ್ಮರಾಮಾಯಣಮೇವ ನಿತ್ಯಂ ಪಠೇದ್ಯದೀಚ್ಛೇದ್ ಭವಬಂಧಮುಕ್ತಿಂ । ಗವಾಂ ಸಹಸ್ರಾಯುತಕೋಟಿದಾನಾತ್ ಫಲಂ ಲಭೇದ್ಯಃ ಶೃಣುಯಾತ್ ಸ ನಿತ್ಯಂ ॥4॥**

ಭಾವಾರ್ಥ - ಸಂಸಾರಬಂಧದಿಂದ ಬಿಡುಗಡೆಯಾಗಬೇಕೆಂಬ ಇಚ್ಛೆಯಿದ್ದರೆ ಆಧ್ಯಾತ್ಮರಾಮಾಯಣವನ್ನೇ ನಿತ್ಯವು ಓದಬೇಕು। ನಿತ್ಯವೂ ಇದನ್ನು ಯಾವನು ಶ್ರವಣಮಾಡುವನೋ ಅವನಿಗೆ ಒಂದು ಲಕ್ಷಕೋಟಿ ಸಂಖ್ಯೆಯ ಗೋವುಗಳನ್ನು ದಾನಮಾಡಿದ್ದಕ್ಕಿಂತಲೂ ಹೆಚ್ಚಿನ ಫಲವು ದೊರಕುವದು.

**ಪುರಾರಿಗಿರಿಸಂಭೂತಾ ಶ್ರೀರಾಮಾರ್ಣವಸಂಗತಾ । ಆಧ್ಯಾತ್ಮರಾಮಗಂಗೇಯಂ ಪುನಾತಿ ಭುವನತ್ರಯಂ ॥5॥**

ಭಾವಾರ್ಥ - ತ್ರಿಪುರಸಂಹಾರಿಯಾದ ಮಹಾದೇವನೆಂಬ ಬೆಟ್ಟದಲ್ಲಿ ಹುಟ್ಟಿ ಶ್ರೀರಾಮನೆಂಬ ಸಮುದ್ರವನ್ನು ಸೇರಿರುವ ಈ ಆಧ್ಯಾತ್ಮ ರಾಮಾಯಣವೆಂಬ ಗಂಗೆಯು ಮೂರು ಲೋಕಗಳನ್ನೂ ಪವಿತ್ರಗೊಳಿಸುವದು.

**ಕೈಲಾಸಾಗ್ರೇ ಕದಾಚಿದ್ರವಿಶತವಿಮಲೇ ಮಂದಿರೇ ರತ್ನಪೀಠೇ ಸಂವಿಷ್ಟಂ ಧ್ಯಾನನಿಷ್ಠಂ ತ್ರಿಣಯನಮಭಯಂ ಸೇವಿತಂ ಸಿದ್ಧಸಂಘೈಃ । ದೇವೀ ವಾಮಾಂಕಸಂಸ್ಥಾ ಗಿರಿವರತನಯಾ ಪಾರ್ವತೀ ಭಕ್ತಿನಮ್ರಾ ಪ್ರಾಹೇದಂ ದೇವಮಿಶಂ ಸಕಲಮಲಹರಂ ವಾಕ್ಯಮಾನಂದಕಂದಂ ॥6॥**

ಭಾವಾರ್ಥ - ಒಂದಾನೊಂದು ಕಾಲದಲ್ಲಿ ಕೈಲಾಸಪರ್ವತದ ಕೋಡುಗಲ್ಲಿನ ಮೇಲಿದ್ದ ನೂರುಸೂರ್ಯರ ಪ್ರಕಾಶವುಳ್ಳ ಒಂದು ಮಂದಿರದಲ್ಲಿ ರತ್ನಮಯಪೀಠದಲ್ಲಿ ಕುಳಿತು, ತಪಸ್ಸಿದ್ಧರಾದ ದೇವರ್ಷಿಬ್ರಹ್ಮರ್ಷಿಗಳ ತಂಡಗಳಿಂದ ಸೇವಿತನಾಗಿ ನಿರ್ಭಿತನಾಗಿ ಧ್ಯಾನಾಸಕ್ತನಾಗಿದ್ದ ಮುಕ್ಕಣ್ಣನನ್ನು ಕಂಡು ಎಡದ ತೊಡೆಯಮೇಲೆ ಕುಳಿತಿದ್ದ ಹಿಮವಂತನ ಮಗಳಾದ ಪಾರ್ವತೀದೇವಿಯು ಭಕ್ತಿಯಿಂದ ಬಾಗಿ ಸಮಸ್ತಪಾಪಗಳನ್ನು ಹೋಗಲಾಡಿಸುವವನಾಗಿಯೂ ಆನಂದಕ್ಕೆ ಮೂಲನಾದವನಾಗಿಯೂ ಇರುವ ಆ ದೇವನಾದ ಆ ಪರಮೇಶ್ವರನನ್ನು ಕುರಿತು ಈ ಮಾತನ್ನು ಕೇಳಿದಳು.

**ನಮೋಽಸ್ತು ತೇ ದೇವ ಜಗನ್ನಿವಾಸ ಸರ್ವಾತ್ಮದೃಕ್ ತ್ವಂ ಪರಮೇಶ್ವರೋಽಸಿ । ಪೃಚ್ಛಾಮಿ ತತ್ತ್ವಂ ಪುರುಷೋತ್ತಮಸ್ಯ ಸನಾತನಂ ತ್ವಂ ಚ ಸನಾತನೋಽಸಿ ॥7॥**

ಭಾವಾರ್ಥ - ಪಾರ್ವತಿಯು ಕೇಳಿದಳೇನೆಂದರೆ, ಎಲೈ ಜಗದಾಧಾರ ಭೂತನಾದ ದೇವನೆ, ನಿನಗೆ ನಮಸ್ಕಾರವಿರಲಿ! ನೀನು ಸರ್ವರ ಅಂತಃಕರಣವನ್ನೂ ನೋಡುತ್ತಿರುವ ಪರಮೇಶ್ವರನಾಗಿದ್ದೀಯಲ್ಲವೆ? ಪುರುಷೋತ್ತಮನಾದ

ಮಹಾವಿಷ್ಣುವಿನ ಸನಾತನವಾದ ತತ್ತ್ವವನ್ನು ಕುರಿತು ನಿನ್ನನ್ನು ಒಂದು ಮಾತು ಕೇಳುತ್ತೇನೆ; ಏಕೆಂದರೆ ನೀನೂ ಸನಾತನಸ್ವರೂಪನಾಗಿರುತ್ತೀಯೆ.

**ಗೋಪ್ಯಂ ಯದತ್ಯಂತಮನನ್ಯವಾಚ್ಯಂ ವದಂತಿ ಭಕ್ತೇಷು ಮಹಾನುಭಾವಾಃ । ತದಪ್ಯಹೋಹಂ ತವ ದೇವ ಭಕ್ತಾ ಪ್ರಿಯೋಸಿ ಮೇ ತ್ವಂ ವದ ಯತ್ತು ಪೃಷ್ಟಂ ॥8॥**

ಭಾವಾರ್ಥ - ಯಾವದು ಮತ್ತೊಬ್ಬರಿಗೆ ಹೇಳತಕ್ಕದ್ದಲ್ಲವೋ ಅಂಥ ರಹಸ್ಯವನ್ನು ಕೂಡ ಮಹಾನುಭಾವರಾದವರು ತಮ್ಮಲ್ಲಿ ಭಕ್ತಿಯುಳ್ಳವರಿಗೆ ಹೇಳಿಬಿಡುತ್ತಾರಲ್ಲವೆ ಎಲೈ ದೇವನೆ, ನಾನು ನಿನ್ನ ಭಕ್ತಳು ನೀನು ನನ್ನ ಪ್ರಿಯನು ಆದ್ದರಿಂದ ನಾನು ಕೇಳಿದ್ದನ್ನು ಹೇಳಬೇಕು.

**ಜ್ಞಾನಂ ಸವಿಜ್ಞಾನಮಥಾನುಭಕ್ತಿ ವೈರಾಗ್ಯಯುಕ್ತಂ ಚ ಮಿತಂ ವಿಭಾಸ್ವತ್ । ಜಾನಾಮ್ಯಹಂ ಯೋಷಿದಪಿ ತ್ವದುಕ್ತಂ ಯಥಾ ತಥಾ ಬ್ರೂಹಿ ತರಂತಿ ಯೇನ ॥9॥**

ಭಾವಾರ್ಥ - ಯಾವ ಜ್ಞಾನದಿಂದ ಜನರು ಸಂಸಾರವನ್ನು ದಾಟುವರೋ, ಅನುಭವದಿಂದಲೂ ಭಕ್ತಿವೈರಾಗ್ಯಗಳಿಂದಲೂ ಕೂಡಿರುವ ಅಂಥ ಜ್ಞಾನವನ್ನು ನೀನು ಹೇಳಿದ್ದು ಹೆಂಗಸಾದರೂ ನನಗೆ ತಿಳಿಯುವ ಹಾಗೆ ಸಂಕ್ಷೇಪವಾಗಿ ಸ್ಪಷ್ಟವಾಗಿರುವಂತೆ ಹೇಳು.

**ಪೃಚ್ಛಾಮಿ ಚಾನ್ಯಚ್ಚ ಪರಂ ರಹಸ್ಯಂ ತದೇವ ಚಾಗ್ರೇ ವದ ವಾರಿಜಾಕ್ಷ । ಶ್ರೀರಾಮಚಂದ್ರೇಖಿಲಲೋಕಸಾರೇ ಭಕ್ತಿರ್ದೃಡಾ ನೌರ್ಭಮತಿ ಪ್ರಸಿದ್ಧಾ ॥10॥**

ಭಾವಾರ್ಥ - ಎಲೈ ಕಮಲಲೊಚನೆ, ಇನ್ನು ಒಂದು ಪರಮ ರಹಸ್ಯವನ್ನು ಕೇಳುತ್ತೇನೆ, ಅದನ್ನೇ ಮೊದಲು ಹೇಳು ಸಮಸ್ತ ಲೋಕಗಳಿಗೂ ಸಂಸಾರವನ್ನೂ ದಾಟುವುದಕ್ಕೆ ಪ್ರಸಿದ್ಧವಾದ ನಾವೆಯಾಗಿರುತ್ತದೆ.

**ಭಕ್ತಿಃ ಪ್ರಸಿದ್ಧಾ ಭವಮೋಕ್ಷಣಾಯ ನಾನ್ಯತ್ತತಃ ಸಾಧನಮಸ್ತಿ ಕಿಂಚಿತ್ । ತಥಾಪಿ ಹೃತ್ಸಂಶಯಬಂಧನಂ ಮೇ ಬಿಭೇತ್ತುಮರ್ಹಸ್ಯಮಲೋಕ್ತಿಭಿಸ್ತ್ವಂ ॥11॥**

ಭಾವಾರ್ಥ - ಸಂಸಾರದಿಂದ ಬಿಡುಗಡೆ ಹೊಂದುವದಕ್ಕೆ ಭಕ್ತಿಯು ಪ್ರಸಿದ್ಧವಾದ ಸಾಧನವಾಗಿರುತ್ತದೆ। ಅದಕ್ಕಿಂತ ಹೆಚ್ಚಿನ ಸಾಧನವು ಯಾವದೂ ಇರುವದಿಲ್ಲ. ಹೀಗಿದ್ದರೂ ನನ್ನ ಮನಸ್ಸಿನಲ್ಲಿ ಉಂಟಾಗಿರುವ ಸಂಶಯದ ಗಂಟನ್ನು ನಿರ್ಮಲವಾದ ವಚನಗಳಿಂದ ನೀನು ಬಿಚ್ಚಬೇಕಾಗಿದೆ.

**ವದಂತಿ ರಾಮಂ ಪರಮೇಕಮಾದ್ಯಂ ನಿರಸ್ತಮಾಯಾಗುಣಸಂಪ್ರವಾಹಂ ಭಜಂತಿ ಚಾಹರ್ನಿಶಮಪ್ರಮತ್ತಾಃ ಪರಂ ಪದಂ ಯಾಂತಿ ತಥೈವ ಸಿದ್ಧಾಃ ॥12॥**

ಭಾವಾರ್ಥ - ರಾಮನು ಅದ್ವಿತೀಯನು, ಜಗತ್ತಿಗೆಲ್ಲ ಕಾರಣನು, ಮಾಯಾಗುಣಗಳ ಪ್ರವಾಹವೇ ತನ್ನಲ್ಲಿಲ್ಲದವನು ಎಂದು ಹೇಳುತ್ತಾರೆ ಮತ್ತು ಜ್ಞಾನಸಿದ್ಧರು ಹಗಲೂ ಇರುಳೂ ಸಾವಧಾನವಾಗಿ ಆತನನ್ನು ಭಜನೆಮಾಡಿ ಪರಮಪದವಿಯನ್ನು ಹೊಂದುತ್ತಲೂ ಇರುತ್ತಾರೆ.

**ವದಂತಿ ಕೇಚಿತ್ ಪರಮೋಽಪಿ ರಾಮಃ ಸ್ವಾವಿದ್ಯಯಾ ಸಂವೃತಮಾತ್ಮಸಂಜ್ಞಂ । ಜಾನಾತಿ ನಾತ್ಮಾನಮತಃ ಪರೇಣ ಸಂಬೋಧಿತೋ ವೇದ ಪರಾತ್ಮತತ್ತ್ವಂ ॥13॥**

ಭಾವಾರ್ಥ - ಶ್ರೀರಾಮನ ಪರಮಾತ್ಮನೇ ಆದರೂ ತನ್ನ ಅವಿದ್ಯೆಯಿಂದ ಪರಮಾತ್ಮನೆಂಬ ತನ್ನ ಸ್ವರುಪವು ಮುಚ್ಚಿರುವದರಿಂದ ಅದನ್ನು ಅರಿಯದೆ ಇರುವನೆಂದೂ ಆದ್ದರಿಂದಲೇ ಮತ್ತೊಬ್ಬರು ಬೋಧಿಸಿದ ಮೇಲೆ ಪರಮಾತ್ಮತತ್ತ್ವವನ್ನು ಅರಿತುಕೊಳ್ಳುವನೆಂದೂ ಕೆಲವರು ಹೇಳುತ್ತಾರೆ.

**ಯದಿ ಸ್ಮ ಜಾನಾತಿ ಕುತೋ ವಿಲಾಪಃ ಸೀತಾಕೃತೇ ತೇನ ಕೃತಃ ಪರೇಣ । ಜಾನಾತಿ ನೈವಂ ಯದಿ ಕೇನ ಸೇವ್ಯಃ ಸಮೋ ಹಿ ಸರ್ವೈರಪಿ ಜೀವಜಾತೈಃ ॥14॥**

ಭಾವಾರ್ಥ - ಅವನು ತತ್ತ್ವವನ್ನು ತಿಳಿದಿದ್ದರೆ ಪರಮಾತ್ಮನಾದ ಅವನು ಸೀತೆಗಾಗಿ ಅತ್ತದ್ದು ಏಕೆ? ಈ ರೀತಿಯಲ್ಲಿ ತಾನು ಪರಮಾತ್ಮನೆಂದು ಅರಿಯದಿದ್ದರೆ ಆತನನ್ನು ಏತಕ್ಕೆ ಸೇವಿಸಬೇಕು? ಆಗ ಸಮಸ್ತಜೀವರಾಶಿಗಳಿಗೆ ಅವನೂ ಸಮನಾಗುವನಲ್ಲ.!

**ಅತ್ರೋತ್ತರಂ ಕಿಂ ವಿದಿತಂ ಭವದ್ಭಿ ಸ್ತದ್ಬ್ರೂತ ಮೇ ಸಂಶಯಭೇದಿ ವಾಕ್ಯಂ ॥14॥**

ಭಾವಾರ್ಥ - ಈ ವಿಷಯದಲ್ಲಿ ನಿಮಗೆ ತಿಳಿದಿರುವ ಉತ್ತರವೇನು? ಅಂಥ ವಾಕ್ಯವನ್ನು ನನ್ನ ಸಂಶಯವು ಹೋಗುವಂತೆ ತಿಳಿಸಿರಿ.

**ಧನ್ಯಾಸಿ ಭಕ್ತಾಸಿ ಪರಾತ್ಮನಸ್ತ್ವಂ ಯಜ್ಞಾತುಮಿಚ್ಛಾ ತವ ರಾಮತತ್ತ್ವಂ । ಪುರಾ ನ ಕೇನಾಪ್ಯಭಿಚೋದಿತೋಹಂ ವಕ್ತುಂ ರಹಸ್ಯಂ ಪರಮಂ ನಿಗೂಢಂ ॥15॥**

ಭಾವಾರ್ಥ - ಶ್ರೀ ಮಹಾದೇವನು ಹೇಳಿದನೇನೆಂದರೆ - ಪಾರ್ವತಿಯೆ, ನಿನಗೆ ರಾಮತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ತವಕವುಂಟಾಗಿರುವದರಿಂದ ನೀನು ಧನ್ಯಳಾಗಿರುವೆ, ಪರಮಾತ್ಮನ ಭಕ್ತಳಾಗಿರುವೆ, ಬಹಳ ಗೋಪ್ಯವಾಗಿರುವ ಈ ರಹಸ್ಯವನ್ನು ಹೇಳಬೇಕೆಂದು ಇದಕ್ಕೆ ಮೊದಲು ಯಾರೂ ನನ್ನನ್ನು ಕೇಳಿದ್ದಿಲ್ಲ.

**ತ್ವಯಾದ್ಯ ಭಕ್ತ್ಯಾ ಪರಿನೋದಿತೋಹಂ ವಕ್ಷ್ಯೇ ನಮಸ್ಕೃತ್ಯ ರಘೋತ್ತಮಂ ತೇ । ರಾಮಃ ಪರಾತ್ಮಾ ಪ್ರಕೃತೇರನಾದಿ ರಾನಂದ ಏಕಃ ಪುರುಷೋತ್ತಮೋ ಹಿ ॥16॥**

ಭಾವಾರ್ಥ - ನೀನು ಈ ದಿನ ನನ್ನನ್ನು ಭಕ್ತಿಯಿಂದ ಪ್ರೇರಿಸಿರುತ್ತೀಯೆ, ಆದ್ದರಿಂದ ರಘುಶ್ರೇಷ್ಠನಾದ ಶ್ರೀರಾನನ್ನು ನಮಸ್ಕರಿಸಿ ನಿನಗೆ ಆ ತತ್ತ್ವವನ್ನು ಹೇಳುವೆನು। ನಿಜವಾಗಿಯೂ ರಾಮನು ಪರಮಾತ್ಮನೇ, ಅವನು ಪ್ರಕೃತಿಗಿಂತಲೂ ಅನಾದಿಯಾಗಿರುವ ಆನಂದ ಸ್ವರೂಪನು, ಪುರುಷೋತ್ತಮನು.

**ಸ್ವಮಾಯಯಾ ಕೃತ್ಸ್ನಮಿದಂ ಹಿ ಸೃಷ್ಟ್ವಾ ನಭೋವದಂತರ್ಬಹಿರಾಸ್ಥಿತೋ ಯಃ ಸರ್ವಾಂತರಸ್ಥೋಪಿ ನಿಗೂಢ ಆತ್ಮಾ ಸ್ವಮಾಯಯಾ ಸೃಷ್ಟಮಿದಂ ವಿಚಷ್ಟೇ ॥17॥**

ಭಾವಾರ್ಥ - ಈತನು ತನ್ನ ಮಾಯೆಯಿಂದ ಇದೆಲ್ಲವನ್ನೂ ಸೃಷ್ಟಿ ಮಾಡಿ ಆಕಾಶದಂತೆ ಒಳಗೂ ಹೊರಗೂ ಇರುವವನಾಗಿದ್ದಾನೆ ಮತ್ತು ಎಲ್ಲಕ್ಕೂ ಒಳಗಡೆ ಇದ್ದುಕೊಂಡು ಗೂಢವಾಗಿರುವ ಆತ್ಮನಾದರೂ ತನ್ನ ಮಾಯೆಯಿಂದ ಸೃಷ್ಟವಾಗಿರುವ ಜಗತ್ತನ್ನು ನೋಡುತ್ತಲೇ ಇರುತ್ತಾನೆ.

**ಜಗಂತಿ ನಿತ್ಯಂ ಪರಿತೋ ಭ್ರಮಂತಿ ಯತ್ಸಂನಿಧೌ ಚುಂಬಕಲೋಹವದ್ಧಿ । ಏತನ್ನ ಜಾನಂತಿ ವಿಮೂಢಚಿತ್ತಾಃ ಸ್ವಾವಿದ್ಯಯಾ ಸಂವೃತಮಾನಸಾ ಯೇ ॥18॥**

ಭಾವಾರ್ಥ - ಈತನ ಸನ್ನಿಧಿಯಲ್ಲಿದ್ದುಕೊಂಡು ಸೂಜಿಗಲ್ಲಿನ ಬಳಿಯಲ್ಲಿರುವ ಕಬ್ಬಿಣದ ಹಾಗೆ ಜಗತ್ತುಗಳು ಯಾವಾಗಲೂ ಸುತ್ತಲೂ ಓಡಾಡುತ್ತಿರುವವು. ಯಾರ ಮನಸ್ಸನ್ನು ಅವರ ಅಜ್ಞಾನವು ಕವಿದುಕೊಂಡಿರುವದೋ ಅಂಥ ವಿವಿಧವಾಗಿ ಮೋಹಗೊಂಡ ಮನಸ್ಸಿನ ಜನರು ಈ ತತ್ತ್ವವನ್ನು ಅರಿಯದೆ ಇರುವರು.

**ಸ್ವಾಜ್ಞಾನಮಪ್ಯಾತ್ಮನಿ ಶುದ್ಧಬೋಧೇ ಹ್ಯಾರೋಪಯಂತೀಹ ನಿರಸ್ತಮಾಯೇ ।**
**ಸಂಸಾರಮೇವಾನುಸರಂತಿ ತೇ ವೈ ಪುತ್ರಾದಿಸಕ್ತಾ ಪುರುಕರ್ಮಯುಕ್ತಾಃ ॥19॥**

ಭಾವಾರ್ಥ - ಅವರು ತಮ್ಮ ಅಜ್ಞಾನವನ್ನು ಶುದ್ಧನಾಗಿಯೂ ಜ್ಞಾನ ಸ್ವರೂಪನಾಗಿಯೂ ಮಾಯಾರಹಿನಾಗಿಯೂ ಇರುವ ಆ ಪರಮಾತ್ಮನಲ್ಲಿ ಅರೋಪಿಸುತ್ತಿರುವರು. ಅವರು ಮಕ್ಕಳು ಮರಿ ಮುಂತಾದದ್ದರಲ್ಲಿರುವ ಆಸಕ್ತಿಯಿಂದ ಅನೇಕ ವಿಧವಾದ ಕರ್ಮಗಳನ್ನು ಮಾಡುತ್ತಾ ಸಂಸಾರವನ್ನೇ ಹೊಂದುತ್ತಿರುವರು ಇದು ಪ್ರಸಿದ್ಧವಾಗಿದೆ.

**ಜಾನಂತಿ ನೈನಂ ಹೃದಯೇ ಸ್ಥಿತಂ ವೈ ಚಾಮಿಕರಂ ಕಂಠಗತಂ ಯಥಾಜ್ಞಾ ॥20॥**

ಭಾವಾರ್ಥ - ಮೂಢರು ತಮ್ಮ ಕೊರಳಲ್ಲಿಯೇ ಇರುವ ಚಿನ್ನದ ಮಾಲಿಕೆಯನ್ನು ಅರಿಯದೆ ಇರುವಂತೆ ತಮ್ಮ ಹೃದಯದಲ್ಲಿಯೇ ಇರುವ ಈ ಶ್ರೀರಾಮನನ್ನು ಅರಿತುಕೊಳ್ಳಲಾರದೆ ಇರುವರು.

**ಯಥಾಪ್ರಕಾಶೋ ನ ತು ವಿದ್ಯತೇ ರವೌ ಜ್ಯೋತಿಃಸ್ವಭಾವೇ ಪರಮೇಶ್ವರೇ ತಥಾ । ವಿಶುದ್ಧವಿಜ್ಞಾನಘನೇ ರಘೋತ್ತಮೇ (ಅ)ವಿದ್ಯಾ ಕಥಂ ಸ್ಯಾತ್ ಪರತಃ ಪರಾತ್ಮನಿ ॥21॥**

ಭಾವಾರ್ಥ - ಸೂರ್ಯನಲ್ಲಿ ಹೇಗೆ ಕತ್ತಲೆಯಿರುವದಿಲ್ಲವೋ ಜ್ಯೋತಿಃ ಸ್ವರೂಪನಾದ ಪರಮೇಶ್ವರನಲ್ಲಿಯೂ ಹಾಗೆಯೇ ಅಜ್ಞಾನವಿರಲಾರದು. ಅತ್ಯಂತ ಪರಿಶುದ್ಧವಾದ ಚೈತನ್ಯದ ಗಟ್ಟಿಯಾಗಿರುವ ಪರಾತ್ಪರನಾದ ಈ ರಘುಶ್ರೇಷ್ಠನಲ್ಲಿ ಹೇಗೆ ತಾನೆ ಅಜ್ಞಾನವಿದ್ದೀತು.?

**ಯಥಾ ಹಿ ಚಾಕ್ಷ್ಣಾ ಭ್ರಮತಾ ಗೃಹಾದಿಕಂ ವಿನಷ್ಟದೃಷ್ಟೇರ್ಭ್ರಮತೀವ ದೃಶ್ಯತೇ । ತಥೈವ ದೇಹೇಂದ್ರಿಯಕರ್ತುರಾತ್ಮನಃ ಕೃತಂ ಪರೇಧ್ಯಸ್ಯ ಜಸೋ ವಿಮುಹ್ಯತಿ ॥22॥**

ಭಾವಾರ್ಥ - ದೋಷದಿಂದ ದೃಷ್ಟಿಪಾಟವವನ್ನು ಕಳೆದುಕೊಂಡವನಿಗೆ ಕಣ್ಣು ತೊಳಸಲಾಗಿ ಮನೆಮಾರು ಮುಂತಾದದ್ದೆಲ್ಲ ತಿರುಗುತ್ತಿರುವಂತೆ ಹೇಗೆ ತೋರುತ್ತಿರುವದೋ ಅದರಂತೆಯೇ ಶರೀರೇಂದ್ರಿಯಗಳ ಒಡೆಯನಾದ ಜೀವನು ಮಾಡಿದ್ದನ್ನು ಪರಮಾತ್ಮನಲ್ಲಿ ಆರೋಪಿಸಿ ಜನರು ಭ್ರಾಂತಿಗೊಳ್ಳುತ್ತಿರುವರು.

**ನಾಹೋ ನ ರಾತ್ರಿಃ ಸವಿತುರ್ಯಥಾ ಭವೇತ್ಪ್ರಕಾಶರೂಪಾವ್ಯಭಿಚಾರತಃ ಕ್ವಚಿತ್ । ಜ್ಞಾನಂ ತಥಾಜ್ಞಾನಮಿದಂ ದ್ವಯಂ ಹರೌ ರಾಮೇ ಕಥಂ ಸ್ಥಾಸ್ಯತಿ ಶುದ್ಧಚಿದ್ಘನೇ ॥23॥**

ಭಾವಾರ್ಥ - ಸೂರ್ಯನಿಗೆ ಪ್ರಕಾಶಸ್ವರೂಪವು ಎಂದಿಗೂ ಬೇರ್ಪಡದೆ ಇರುವ ಕಾರಣದಿಂದ ಅವನಿಗೆ ಹಗಲಾಗಲಿ ರಾತ್ರಿಯಾಗಲಿ ಹೇಗೆ ಇರುವದಿಲ್ಲವೋ ಅದರಂತೆ ಶುದ್ಧಚೈತನ್ಯದ ಗಟ್ಟಿಯೇ ಆಗಿರುವ ಶ್ರೀಹರಿ ಸ್ವರೂಪನಾದ ರಾಮನಲ್ಲಿ ಜ್ಞಾನ, ಅಜ್ಞಾನ - ಈ ಎರಡೂ ಹೇಗೆ ಇದ್ದೀತು?

**ತಸ್ಮಾತ್ ಪರಾನಂದಮಯೇ ರಘೂತ್ತಮೇ ವಿಜ್ಞಾನರೂಪೇ ಹಿ ನ ವಿದ್ಯತೇ ತಮಃ । ಅಜ್ಞಾನಸಾಕ್ಷಿಣ್ಯರವಿಂದಲೋಚನೇ ಮಾಯಾಶ್ರಯತ್ವಾನ್ನ ಹಿ ಮೋಹಕಾರಣಂ ॥24॥**

ಭಾವಾರ್ಥ - ಆದಕಾರಣ ಪರಮಾನಂದಸ್ವರೂಪನಾಗಿಯೂ ಚೈತನ್ಯ ರೂಪನಾಗಿಯೂ ಅಜ್ಞಾನಕ್ಕೆ ಸಾಕ್ಷಿಯಾಗಿಯೂ ಇರುವ ಕಮಲನೇತ್ರನಾದ ಆ ರಘುಶ್ರೇಷ್ಠನಲ್ಲಿ ಮೋಹಕ್ಕೆ ಕಾರಣವಾದ ಅಜ್ಞಾನವು ಇರುವದೇ ಇಲ್ಲ, ಏಕೆಂದರೆ ಅವನು ಮಾಯೆಗೆ ಆಶ್ರಯನಾಗಿರುತ್ತಾನೆ.

**ಅತ್ರ ತೇ ಕಥಯಿಷ್ಯಾಮಿ ರಹಸ್ಯಮಪಿ ದುರ್ಲಭಂ ।**
**ಸೀತಾರಾಮಮರುತ್ಸೂನುಸಂವಾದಂ ಮೋಕ್ಷಸಾಧನಂ ॥25॥**

ಭಾವಾರ್ಥ - ಈ ವಿಷಯದಲ್ಲಿ ರಹಸ್ಯವಾಗಿಯೂ ದುರ್ಲಭವಾಗಿಯೂ ಇರುವ ಸೀತೆ, ರಾಮ, ಮಾರುತಿ - ಈ ಮೂವರ ಸಂವಾದವನ್ನು ನಿನಗೆ ಹೇಳುವೆನು ಇದು ಮೋಕ್ಷಕ್ಕೆ ಸಾಧನವಾಗಿರುವದು.

**ಪುರಾ ರಾಮಾಯಣೇ ರಾಮೋ ರಾವಣಂ ದೇವಕಣ್ವಕಂ । ಹತ್ವಾ ರಣೇ ರಣಶ್ಲಾಘೀ ಸಪುತ್ರಬಲವಾಹನಂ ॥26॥**

**ಸೀತಯಾ ಸಹ ಸುಗ್ರೀವಲಕ್ಷ್ಮಣಾಭ್ಯಾಂ ಸಮನ್ವಿತಃ । ಅಯೋಧ್ಯಾಮಗಮದ್ರಾಮೋ ಹನೂಮತ್ಪ್ರಮುಖೈರ್ವೃತಃ ॥27॥**

ಭಾವಾರ್ಥ - ಪೂರ್ವದಲ್ಲಿ ರಾಮಾವತಾರದ ಕಾಲಕ್ಕೆ ಕಾಳಗದಲ್ಲಿ ಹೊಗಳುವದಕ್ಕೆ ತಕ್ಕವನೆನಿಸಿದ್ದ ಶ್ರೀರಾಮನು ದೇವತೆಗಳಿಗೆ ಶತ್ರುವಾಗಿದ್ದ ರಾವಣನನ್ನು ಅವನ ಮಕ್ಕಳು, ಬಲ, ವಾಹನ ಇವುಗಳೊಡನೆ ನಾಶಮಾಡಿ ಸೀತೆಯಿಂದಲೂ ಸುಗ್ರೀವಲಕ್ಷ್ಮಣರಿಂದಲೂ ಕೂಡಿಕೊಂಡು ಹನುಮಂತನೇ ಮುಂತಾದ ಪ್ರಿವಾರದೊಡನೆ ಅಯೋಧ್ಯೆಗೆ ಬಂದನು.

**ಅಭಿಷಿಕ್ತಃ ಪರಿವೃತೋ ವಸಿಷ್ಠಾದ್ಯೈರ್ಮಹಾತ್ಮಭಿಃ । ಸಿಂಹಾಸನೇ ಸಮಾಸೀನಃ ಕೋಟಿಸೂರ್ಯಸಮಪ್ರಭಃ ॥28॥**

ಭಾವಾರ್ಥ - ಅಭಿಷಿಕ್ತನಾಗಿ ಮಹಾತ್ಮರಾದ ವಸಿಷ್ಠರೇ ಮೊದಲಾದವರು ತನ್ನನ್ನು ಬಳಸಿರಲು ಕೋಟಿಸೂರ್ಯರಂತೆ ಹೊಳೆಯುತ್ತಾ ಸಿಂಹಸನದಲ್ಲಿ ಕುಳಿತಿದ್ದನು.

**ದೃಷ್ಟ್ವಾ ತದಾ ಹನೂಮಂತಂ ಪ್ರಂಜಲಿಂ ಪುರತಃ ಸ್ಥಿತಂ । ಕೃತಕಾರ್ಯಂ ನಿರಾಕಾಂಕ್ಷಂ ಜ್ಞಾನಾಪೇಕ್ಷಂ ಮಹಾಮತಿಂ ॥29॥**

**ರಾಮಃ ಸೀತಾಮುವಾಚೇದಂ ಬ್ರೂಹಿ ತತ್ತ್ವಂ ಹನೂಮತೇ । ನಿಷ್ಕಲ್ಮಷೋಯಂ ಜ್ಞಾನಸ್ಯ ಪಾತ್ರಂ ನೌ ನಿತ್ಯಭಕ್ತಿಮಾನ್ ॥30॥**

ಭಾವಾರ್ಥ - ಆಗ ಕೃತಕೃತ್ಯನಾಗಿ ಮತ್ತೊಂದರ ಬಯಕೆಯಿಲ್ಲದೆ ಜ್ಞಾನವೊಂದೇ ಬೇಕೆಂದು ಕೈಮುಗಿದುಕೊಂಡು ಮುಂದೆ ನಿಂತಿದ್ದ ಮಹಾಬುದ್ಧಿಶಾಲಿಯಾದ

ಹನುಮಂತನನ್ನು ಕಂಡು ರಾಮನು ಸೀತೆಗೆ ಈ ಮಾತನ್ನು ಹೇಳಿದನು, ಹನುಮಂತನಿಗೆ ತತ್ತ್ವವನ್ನು ತಿಳಿಸು। ಇವನು ಪರಿಶುದ್ಧನು, ನಮ್ಮಿಬ್ಬರಲ್ಲಿ ಯಾವಾಗಲೂ ಭಕ್ತಿಯುಳ್ಳವನು, ಆದ್ದರಿಂದ ಜ್ಞಾನಕ್ಕೆ ತಕ್ಕವನು.

**ತಥೇತಿ ಜಾನಕೀ ಪ್ರಾಹ ತತ್ತ್ವಂ ರಾಮಸ್ಯ ನಿಶ್ಚಿತಂ । ಹನೂಮತೇ ಪ್ರಪನ್ನಾಯ ಸೀತಾ ಲೋಕವಿಮೋಹಿನೀ ॥31॥**

ಭಾವಾರ್ಥ - ಲೋಕವನ್ನೇ ಮೋಹಗೊಳಿಸುವ ಮಾಯಾಸ್ವರೂಪಳಾದ ಆ ಜಾನಕಿಯು ಹಾಗೆಯೇ ಆಗಲಿ! ಎಂದು ಶರಣಾಗತನಾದ ಹನುಮಂತನಿಗೆ ರಾಮನ ನಿಜವಾದ ತತ್ತ್ವವನ್ನು ಹೀಗೆಂದು ಹೇಳಿದಳು.

**ರಾಮಂ ವಿದ್ಧಿ ಪರಂ ಬ್ರಹ್ಮ ಸಚ್ಚಿದಾನಂದಮದ್ವಯಂ । ಸರ್ವೋಪಾಧಿವಿನಿರ್ಮುಕ್ತಂ ಸತ್ತಾಮಾತ್ರಮಗೋಚರಂ ॥32॥**

**ಆನಂದಂ ನಿರ್ಮಲಂ ಶಾಂತಂ ನಿರ್ವಿಕಾರಂ ನಿರಂಜನಂ । ಸರ್ವವ್ಯಾಪಿನಮಾತ್ಮಾನಂ ಸ್ವಪ್ರಕಾಶಮಕಲ್ಮಷಂ ॥33॥**

ಭಾವಾರ್ಥ - ಶ್ರೀರಾಮನು ಸಚ್ಚಿದಾನಂದರೂಪವಾಗಿಯೂ ಅದ್ವಿತೀಯವಾಗಿಯೂ ಯಾವ ಉಪಾಧಿಯೂ ಇಲ್ಲದ್ದಾಗಿಯೂ ಕೇವಲ ಸದ್ರೂಪವಾಗಿಯೂ ಮತ್ತೆ ಯಾವದಕ್ಕೂ ವಿಷಯವಲ್ಲದ್ದಾಗಿಯೂ ಶುದ್ಧಾನಂದರೂಪವಾಗಿಯೂ ಶಾಂತವಾಗಿಯೂ ಯಾವ ವಿಕಾರವೂ ಇಲ್ಲದೆಯೂ ಯಾವದೊಂದರ ಅಂಟೂ ಇಲ್ಲದ್ದಾಗಿಯೂ ಎಲ್ಲೆಲ್ಲಿಯೂ ವ್ಯಾಪಿಸಿರುವದಾಗಿಯೂ ಸ್ವಯಂಪ್ರಕಾಶಸ್ವರೂಪವಾಗಿಯೂ ಯಾವ ದೋಷವೂ ಇಲ್ಲದ್ದಾಗಿಯೂ ಇರುವ ಪರಬ್ರಹ್ಮವೆಂದು ತಿಳಿ.

**ಮಾಂ ವಿದ್ಧಿ ಮೂಲಪ್ರಕೃತಿಂ ಸರ್ಗಸ್ಥಿತ್ಯಂತಕಾರಿಣೀಂ । ತಸ್ಯ ಸಂನಿಧಿಮಾತ್ರೇಣ ಸೃಜಾಮಿದಮತಂದ್ರಿತಾ ॥34॥**

ಭಾವಾರ್ಥ - ನಾನು ಸೃಷ್ಟಿಸ್ಥಿತಿಪ್ರಲಯಗಳನ್ನು ಮಾಡುವ ಮೂಲ ಪ್ರಕೃತಿಯೆಂದು ತಿಳಿ. ಆತನು ಸಮಿಪದಲ್ಲಿದ್ದ ಮಾತ್ರದಿಂದ ಆಲಸ್ಯವಿಲ್ಲದೆ ಈ ಜಗತ್ತನ್ನು ಸೃಷ್ಟಿಮಾಡುತ್ತಿರುವೆನು.

**ತತ್ಸಾಂನಿಧ್ಯಾನ್ಮಯಾ ಸೃಷ್ಟಂ ತಸ್ಮಿನ್ನಾರೋಪ್ಯತೇಬುಧೈಃ । ಅಯೋಧ್ಯಾನಗರೇ ಜನ್ಮ ರಘುವಂಶೇತಿನಿರ್ಮಲೇ ॥35॥**

ಭಾವಾರ್ಥ - ಆತನ ಸಂನಿಧಿಯಲ್ಲಿ ನಾನು ಸೃಷ್ಟಿಮಾಡಿದ್ದನ್ನು ಮೂಢರು ಆತನಲ್ಲಿ ಅರೋಪಿಸಿರುತ್ತಾರೆ. ಹೇಗೆಂದರೆ ಅಯೋಧ್ಯಾ ನಗರದಲ್ಲಿ ಬಹುಶುದ್ಧವಾದ ರಘುವಂಶದಲ್ಲಿ ಹುಟ್ಟಿದುದ್ದು,

**ವಿಶ್ವಾಮಿತ್ರಸಹಾಯತ್ವಂ ಮಖಸಂರಕ್ಷಣಂ ತತಃ । ಅಹಲ್ಯಾಶಾಪಶಮನಂ ಚಾಪಭಂಗೋ ಮಹೇಶಿತುಃ ॥36॥**

ಭಾವಾರ್ಥ - ಆಮೇಲೆ ವಿಶ್ವಾಮಿತ್ರನಿಗೆ ಸಹಾಯವಾಗಿ ಅವರ ಯಜ್ಞವನ್ನು ಕಾಪಾಡಿದ್ದು, ಅಹಲ್ಯೆಯ ಶಾಪವನ್ನು ಪರಿಹರಿಸಿದ್ದು, ಮಹೇಶ್ವರನ ಧನುಸ್ಸನ್ನು ಮುರಿದದ್ದು,

**ಮತ್ಪಾಣಿಗ್ರಹಣಂ ಪಶ್ಚಾದ್ಭಾರ್ಗವಸ್ಯ ಮದಕ್ಷಯಃ । ಅಯೋಧ್ಯಾನಗರೇ ವಾಸೋ ಮಯಾ ದ್ವಾದಶವಾರ್ಷಿಕಃ ॥37॥**

**ದಣ್ಡಕಾರಣ್ಯಗಮನಂ ವಿರಾಧವಧ ಏವ ಚ । ಮಾಯಾಮಾರೀಚಮರಣಂ ಮಾಯಾಸೀತಾಹೃತಿಸ್ತಥಾ ॥38॥**

ಭಾವಾರ್ಥ - ನನ್ನನ್ನು ಮದುವೆಯಾದದ್ದು, ಆಮೇಲೆ ಭೃಗುಪುತ್ರನಾದ ಪರಶುರಾಮನ ಗರ್ವವನ್ನು ಹೋಗಲಾಡಿಸಿದ್ದು, ಅಯೋಧ್ಯಾ ನಗರದಲ್ಲಿ ನನ್ನೊಡನೆ ಹನ್ನೆರಡು ವರ್ಷಗಳು ಇದ್ದದ್ದು, ದಂಡಕಾರಣ್ಯಕ್ಕೆ ತೆರಳಿದ್ದು, ವಿರಾಧನನ್ನು ಸಂಹರಿಸಿದ್ದು, ಮಾಯಾರೂಪದಿಂದ ಬಂದ ಮಾರೀಚನು ಸತ್ತದ್ದು, ಮಾಯಾಕಲ್ಪಿತಸೀತೆಯನ್ನು ರಾವಣನು ಅಪಹರಿಸಿದ್ದು,

**ಜಟಾಯುಷೋ ಮೋಕ್ಷಲಾಭಃ ಕಬಂಧಸ್ಯ ತಥೈವ ಚ । ಶಬರ್ಯಾಃ ಪೂಜನಂ ಪಶ್ಚಾತ್ ಸುಗ್ರೀವೇಣ ಸಮಾಗಮಃ ॥39॥**

ಭಾವಾರ್ಥ - ಜಟಾಯುವಿಗೆ ಮೋಕ್ಷವು ದೊರಕಿದ್ದು ಮತ್ತು ಕಬಂಧನಿಗೆ ಮೋಕ್ಷವು ದೊರಕಿದ್ದು, ಶಬರಿಯು ರಾಮದೇವರನ್ನು ಪೂಜಿಸಿದ್ದು, ಆಮೇಲೆ ರಾಮನು ಸುಗ್ರೀವನನ್ನು ಕಂಡದ್ದು,

**ವಾಲಿನಶ್ಚ ವಧಃ ಪಶ್ಚಾತ್ ಸೀತಾನ್ವೇಷಣಮೇವ ಚ । ಸೇತುಬಂಧಶ್ಚ ಜಲಧೌ ಲಂಕಾಯಾಶ್ಚ ನಿರೋಧನಂ ॥40॥**

ಭಾವಾರ್ಥ - ವಾಲಿಯನ್ನು ಕೊಂದದ್ದು, ಆಮೇಲೆ ಸೀತೆಯನ್ನು ಹುಡುಕಿದ್ದು, ಸೇತುವೆಯನ್ನು ಕಟ್ಟಿದ್ದು, ಲಂಕಾನಗರಿಯನ್ನು ಮುತ್ತಿದ್ದು,

**ರಾವಣಸ್ಯ ವಧೋ ಯುದ್ಧೇ ಸಪುತ್ರಸ್ಯ ದುರಾತ್ಮನಃ । ವಿಭೀಷಣೇ ರಾಜ್ಯದಾನಂ ಪುಷ್ಪಕೇಣ ಮಯಾ ಸಹ ॥41॥**

ಭಾವಾರ್ಥ - ಯುದ್ಧದಲ್ಲಿ ದುಷ್ಟನಾದ ರಾವಣನನ್ನು ಅವನ ಮಕ್ಕಳ ಸಮೇತವಾಗಿ ಸಂಹರಿಸಿದ್ದು, ವಿಭೀಷಣನಿಗೆ ರಾಜ್ಯವನ್ನು ಕೊಟ್ಟಿದ್ದು, ಪುಷ್ಪಕವಿಮಾನದಲ್ಲಿ ನನ್ನೊಡನೆ

**ಅಯೋಧ್ಯಾಗಮನಂ ಪಶ್ಚಾದ್ರಾಜ್ಯೇ ರಾಮಾಭಿಷೇಚನಂ ॥42॥ ಏವಮಾದೀನಿ ಕರ್ಮಾಣಿ ಮಯ್ಯೈವಾಚರಿತಾನ್ಯಪಿ ॥ ಆರೋಪಯಂತಿ ರಾಮೇಸ್ಮಿನ್ನಿರ್ವಿಕಾರೇಖಿಲಾತ್ಮನಿ ॥42-1॥**

ಭಾವಾರ್ಥ - ಅಯೋಧ್ಯೆಗೆ ಹೋದದ್ದು, ಆಮೇಲೆ ರಾಜ್ಯದಲ್ಲಿ ಅಭಿಷೇಕವಾದದ್ದು ಇವೇ ಮುಂತಾದ ಕರ್ಮಗಳನ್ನು ನಾನೇ ಮಾಡಿದೆನಾದರೂ ಯಾವ ವಿಕಾರಗಳೂ ಇಲ್ಲದೆ ಎಲ್ಲಕ್ಕೂ ಆತ್ಮನಾಗಿರುವ ಈ ರಾಮನಲ್ಲಿ ಆರೋಪಿಸುತ್ತಿರುವರು.

**ರಾಮೋ ನ ಗಚ್ಛತಿ ನ ತಿಷ್ಠತಿ ನಾನುಶೋಚ- ತ್ಯಾಕಾಂಕ್ಷತೇ ತ್ಯಜತಿ ನೋ ನ ಕರೋತಿ ಕಿಂಚಿತ್ । ಆನಂದಮೂರ್ತಿರಚಲಃ ಪರಿಣಾಮಹೀನೋ ಮಾಯಾಗುಣಾನನುಗತೋ ಹಿ ತಥಾ ವಿಭಾತಿ ॥43॥**

ಭಾವಾರ್ಥ - ರಾಮನು ಓಡಾಡುವದಿಲ್ಲ, ನಿಂತಿರುವದಿಲ್ಲ, ಶೋಕಿಸುವದಿಲ್ಲ, ಇಂಥದ್ದು ತನಗೆ ಬೇಕೆನ್ನುವದಿಲ್ಲ, ಯಾವದನ್ನೂ ಮಾಡುವದೂ ಇಲ್ಲ, ಬಿಡುವದೂ ಇಲ್ಲ. ಆತನು ಆನಂದಸ್ವರೂಪನು, ಕ್ರಿಯಾ ಶೂನ್ಯನು, ಸ್ವರೂಪದಲ್ಲಿ ಯಾವ ಮಾರ್ಪಾಡುಗಳೂ ಇಲ್ಲದವನು, ಆದರೂ ಮಾಯೆಯ ಗುಣಗಳನ್ನು ಅನುಸರಿಸಿ ಆಯಾ ಕಾರ್ಯಗಳನ್ನು ಮಾಡುತ್ತಿರುವಂತೆ ತೋರುತ್ತಿರುವನು.

**ಶ್ರೀ ಮಹಾದೇವ ಉವಾಚ, ತತೋ ರಾಮಃ ಸ್ವಯಂ ಪ್ರಾಹ ಹನೂಮಂತಮುಪಸ್ಥಿತಂ । ಶೃಣು ತತ್ತ್ವಂ ಪ್ರವಕ್ಷ್ಯಾಮಿ ಹ್ಯಾತ್ಮಾನಾತ್ಮಪರಾತ್ಮನಾಂ ॥44॥**

ಭಾವಾರ್ಥ - ಶ್ರೀಮಹಾದೇವನು ಮತ್ತೆ ಹೇಳಿದನೇನೆಂದರೆ, ಎಲೌ ಪಾರ್ವತಿಯೆ, ಆಮೇಲೆ ರಾಮನು ತನ್ನ ಹತ್ತಿರವಿದ್ದ ಹನುಮಂತನನ್ನು ಕುರಿತು ತಾನೇ ಹೀಗೆಂದು ನುಡಿದನು, ಎಲೈ ಹನುಮಂತನೆ, ಆತ್ಮ, ಅನಾತ್ಮ, ಪರಮಾತ್ಮ ಇವುಗಳ ತತ್ತ್ವವನ್ನು ಹೇಳುವೆನು ಕೇಳು.

**ಅಕಾಶಸ್ಯ ಯಥಾ ಭೇದಸ್ತ್ರಿವಿಧೋ ದೃಶ್ಯತೇ ಮಹಾನ್ । ಜಲಾಶಯೇ ಮಹಾಕಾಶಸ್ತದವಚ್ಛಿನ್ನ ಏವ ಹಿ ॥45॥**

**ಪ್ರತಿಬಿಂಭಾಖ್ಯಮಪರಂ ದೃಶ್ಯತೇ ತ್ರಿವಿಧಂ ನಭಂ । ಬುದ್ಧ್ಯವಚ್ಛಿನ್ನ ಚೈತನ್ಯಮೇಕಂ ಪೂರ್ಣಮಥಾಪರಂ ॥46॥**

**ಅಭಾಸಸ್ತ್ವಪರಂ ಬಿಂಬಭೂತಮೇವಂ ತ್ರಿಧಾ ಚಿತಿಃ ॥47॥**

ಭಾವಾರ್ಥ - ಒಂದು ಜಲಾಶಯದಲ್ಲಿ ಆಕಾಶಕ್ಕೆ ಹೇಗೆ ಮೂರು ದೊಡ್ಡ ಭೇದವಿರುವದೋ-ಎಲ್ಲೆಲ್ಲಿಯೂ ಇರುವ ಮಹಾಕಾಶವೊಂದು, ಜಲಾಶಯವೆಂಬ ಉಪಾಧಿಯ ಅಳತೆಗೆ ಸಿಕ್ಕಂತಿರುವ ಆಕಾಶವೊಂದು, ಜಲದಲ್ಲಿರುವ ಪ್ರತಿಬಿಂಬವೆಂಬ

ಆಕಾಶವೊಂದು - ಈ ಮೂರು ಬಗೆಯಾಗಿ ಆಕಾಶವೊಂದೇ ಹೇಗೆ ತೋರುತ್ತಿರುವದೋ - ಇದರಂತ ಅಂತಃ ಕರಣದ ಅಳತೆಗೆ ಸಿಕ್ಕಂತಿರುವ ಚೈತನ್ಯವೊಂದು, ಪೂರ್ಣವಾಗಿರುವ ಉಪಾಧಿಯಿಲ್ಲದ ಚೈತನ್ಯವೊಂದು, ಅಂತಃಕರಣದಲ್ಲಿ ಪ್ರತಿಬಿಂಬಿಸಿರುವ ಚಿದಾಭಾಸವೊಂದು, ಎಂದೀ ಪರಿಯಲ್ಲಿ ಚೈತನ್ಯವೊಂದೇ ಮೂರು ಬಗೆಯಾಗಿರುವದು.

**ಸಾಭಾಸಬುದ್ಧೇಃ ಕರ್ತೃತ್ವಮವಿಚ್ಛಿನ್ನೇವಿಕಾರಿಣಿ । ಸಾಕ್ಷಿಣ್ಯಾರೋಪ್ಯತೇ ಭ್ರಾಂತ್ಯಾ ಜೀವತ್ವಂ ಚ ತಥಾ ಬುಧೈಃ ॥48॥**

ಭಾವಾರ್ಥ - ಚಿದಾಭಾಸದೊಡನೆ ಕೂಡಿರುವ ಅಂತಃಕರಣದಲ್ಲಿರುವ ಕರ್ತೃತ್ವವನ್ನು ಅಜ್ಞರಾದವರು ಕಡಿವಡೆಯದೆ ನಿರ್ವಿಕಾರವಾಗಿರುವ ಸಾಕ್ಷಿಚೈತನ್ಯದಲ್ಲಿ ಆರೋಪಿಸುತ್ತಿರುವರು, ಆ ಸಾಕ್ಷಿಯಲ್ಲಿ ಜೀವತ್ವವನ್ನು ಆರೋಪಿಸುತ್ತಿರುವರು.

**ಅಭಾಸಸ್ತು ಮೃಷಾ ಬುದ್ಧಿರವಿದ್ಯಾಕಾರ್ಯಮುಚ್ಯತೇ । ಅವಿಚ್ಛಿನ್ನಂ ತು ತದ್ಬ್ರಹ್ಮ ವಿಚ್ಛೇದಸ್ತು ವಿಕಲ್ಪತಃ ॥49॥**

ಭಾವಾರ್ಥ - ಚಿದಾಭಾಸವೆಂಬುದು ಮಿಥ್ಯಾವಸ್ತುವು, ಬುದ್ಧಿಯು ಅವಿದ್ಯೆಯಿಂದುಂಟಾಗಿರುವ ಉಪಾಧಿಯೆನಿಸಿರುವದು। ಬ್ರಹ್ಮವಾದರೋ ಕಡಿವಡೆಯದೆ ಇರುತ್ತದೆ, ಅದರಲ್ಲಿ ಭೇದವೋ ಎಂದರೆ ಭ್ರಾಂತಿಯಿಂದ ತೋರುತ್ತಿರುವದು.

**ಅವಚ್ಛಿನ್ನಸ್ಯ ಪೂರ್ಣೇನ ಹ್ಯೇಕತ್ವಂ ಪ್ರತಿಪಾದ್ಯತೇ । ತತ್ತ್ವಮಸ್ಯಾದಿವಾಕ್ಯೈಶ್ಚ ಸಾಭಾಸಸ್ಯಾಹಮಸ್ತಥಾ ॥50॥**

ಭಾವಾರ್ಥ - ತತ್ತ್ವಮಸಿ ಮುಂತಾದ ವೇದಾಂತವಾಕ್ಯಗಳಲ್ಲಿ ಅಂತಃಕರಣೋಪಹಿತವಾದ ಚೈತನ್ಯಕ್ಕೂ ಪೂರ್ಣಚೈತನ್ಯಕ್ಕೂ ಅಭೇದವನ್ನೂ ಹೇಳಿರುತ್ತದೆ. ಮತ್ತು ಚಿದಾಭಾಸದೊಡಗೂಡಿದ ಅಹಂಪದಾರ್ಥಕ್ಕೂ ಪೂರ್ಣಚೈತನ್ಯಕ್ಕೂ (ಅಭೇದವನ್ನು ಹೇಳಿರುತ್ತದೆ। ಅಂತಃಕರಣವೂ ಚಿದಾಭಾಸವೂ ಮಿಥ್ಯಾವಸ್ತುಗಳಾದ್ದರಿಂದ ಅವು ಪೂರ್ಣಚೈತನ್ಯಕ್ಕಿಂತ ಭಿನ್ನವಲ್ಲ.)

**ಐಕ್ಯಜ್ಞಾನಂಃಯದೋತ್ಪನ್ನಂ ಮಹಾವಾಕ್ಯೇನ ಚಾತ್ಮನೋಃ । ತದಾವಿದ್ಯಾ ಸ್ವಕಾರ್ಯೈಶ್ಚ ನಶ್ಯತ್ಯೇವ ನ ಸಂಶಯಃ ॥51॥**

ಭಾವಾರ್ಥ - ಈ ರೀತಿಯಲ್ಲಿ ಜೀವಾತ್ಮಪರಮಾತ್ಮರುಗಳು ನಿಜವಾಗಿ ಒಂದೇ ಚೈತನ್ಯವೆಂಬ ತಿಳಿವು ಮಹಾವಾಕ್ಯದಿಂದ ಯಾವಾಗ ಉಂಟಾಗುವದೋ ಆಗ ಅಜ್ಞಾನವು ತನ್ನ ಕಾರ್ಯಗಳಾದ ಅನರ್ಥಗಳೊಡನೆ ನಾಶವಾಗಿಯೇಬಿಡುವದು। ಇದಕ್ಕೆ ಸಂಶಯವಿಲ್ಲ.

**ಏತದ್ವಿಜ್ಞಾಯ ಮದ್ಭಕ್ತೋ ಮದ್ಭಾವಾಯೋಪಪದ್ಯತೇ ॥51-1॥ ಮದ್ಭಕ್ತಿವಿಮುಖಾನಾಂ ಹಿ ಶಾಸ್ತ್ರಗರ್ತೇಷು ಮುಹ್ಯತಾಂ । ನ ಜ್ಞಾನಂ ನ ಚ ಮೋಕ್ಷಃ ಸ್ಯಾತ್ತೇಷಾಂ ಜನ್ಮಶತೈರಪಿ ॥52॥**

ಭಾವಾರ್ಥ - ನನ್ನ ಭಕ್ತನಾದವನು ಇದನ್ನು ಅರಿತುಕೊಂಡು ನನ್ನ ಸ್ವರೂಪವನ್ನು ಹೊಂದಲು ಅರ್ಹನಾಗುತ್ತಾನೆ. ನನ್ನಲ್ಲಿ ಭಕ್ತಿಯಿಲ್ಲದೆ ಶಾಸ್ತ್ರದ ಗುಂಡಿಗಳಲ್ಲಿ ಬಿದ್ದು ಮುಂದುಗಾಣದೆ ಇರುವವರಿಗೆ ನೂರು ಜನ್ಮಗಳಾದರೂ ಜ್ಞಾನವಾಗಲಾರದು, ಮೋಕ್ಷವೂ ಆಗಲಾರದು.

**ಇದಂ ರಹಸ್ಯಂ ಹೃದಯಂ ಮಮಾತ್ಮನೋ ಮಯ್ಯೈವ-ಸಾಕ್ಷಾತ್ ಕಥಿತಂ ತವಾನಘ । ಮದ್ಭಕ್ತಿಹೀನಾಯ ಶಠಾಯ ನ ತ್ವಯಾ ದಾತವ್ಯಮೈಂದ್ರಾದಪಿ ರಾಜ್ಯತೋಧಿಕಂ ॥53॥**

ಭಾವಾರ್ಥ - ಎಲೈ ನಿರ್ದೋಷನಾದ ಹನುಮಂತನೆ, ಪರಮಾತ್ಮನಾದ ನನ್ನ ಹೃದಯವಾದ ಈ ರಹಸ್ಯವನ್ನು ನಾನೇ ನಿನಗೆ ನೇರಾಗಿ ಹೇಳಿರುತ್ತೇನಷ್ಟೆ. ಇಂದ್ರನ ರಾಜ್ಯವಾದ ಸ್ವರ್ಗಕ್ಕಿಂತಲೂ ಹೆಚ್ಚಿನದಾದ ಈ ಹೃದಯವನ್ನು ನನ್ನಲ್ಲಿ ಭಕ್ತಿಯಿಲ್ಲದ ವಂಚಕನಿಗೆ ನೀನು ತಿಳಿಸಿಕೊಡಬಾರದು.

**ಏತತ್ತೇ ಕಥಿತಂ ದೇವಿ ಶ್ರೀರಾಮಹೃದಯಂ ಮಯಾ । ಅತಿಗುಹ್ಯತಮಂ ಹೃದ್ಯಂ ಪವಿತ್ರಂ ಪಾಪಶೋಧನಂ ॥54॥**

ಭಾವಾರ್ಥ - ಶ್ರೀಮಹಾದೇವನು ಕೊನೆಯಲ್ಲಿ ಇಂತೆಂದನು, ದೇವಿಯೆ, ನಿನಗೆ ನಾನು ಹೇಳಿರುವ ಈ ಶ್ರೀರಾಮಹೃದಯವು ಅತಿ ರಹಸ್ಯವಾದದ್ದು, ಮನೋಹರವಾದದ್ದು, ಪಾವನಕರವಾದದ್ದು, ಪಾಪಗಳನ್ನೆಲ್ಲ ಕಳೆಯುವಂಥದ್ದು.

**ಸಾಕ್ಷಾದ್ರಾಮೇಣ ಕಥಿತಂ ಸರ್ವವೇದಾಂತಸಂಗ್ರಹಂ । ಯಃ ಪಠೇತ್ಸತತಂ ಭಕ್ತ್ಯಾ ಸ ಮುಕ್ತೋ ನಾತ್ರ ಸಂಶಯಃ ॥55॥**

ಭಾವಾರ್ಥ - ಇದನ್ನು ರಾಮನು ತಾನೇ ಹೇಳಿರುತ್ತಾನೆ, ಸಮಸ್ತ ಉಪನಿಷತ್ತುಗಳ ಸಾರವೇ ಇದು। ಇದನ್ನು ಯಾವನು ಭಕ್ತಿಯಿಂದ ಸತತವೂ ಪಠಿಸುತ್ತಿರುವನೋ ಅವನು ಮುಕ್ತನೇ ಆಗುವನು। ಈ ವಿಷಯದಲ್ಲಿ ಸಂಶಯವಿಲ್ಲ.

**ಬ್ರಹ್ಮಹತ್ಯಾದಿಪಾಪಾನಿ ಬಹುಜನ್ಮಾರ್ಜಿತಾನ್ಯಪಿ । ನಶ್ಯಂತ್ಯೇವ ನ ಸಂದೇಹೋ ರಾಮಸ್ಯ ವಚನಂ ಯಥಾ ॥56॥**

ಭಾವಾರ್ಥ - ಅನೇಕ ಜನ್ಮಗಳಿಂದ ಕೂಡಿಹಾಕಿರುವ ಬ್ರಹ್ಮಹತ್ಯೆಯೇ ಮುಂತಾದ ಪಾಮಾಣವು.

**ಯೋತಿಭ್ರಷ್ಟೋತಿಪಾಪೀ ಪರಧನಪರದಾರೇಷು ನಿತ್ಯೋದ್ಯತೋ ವಾ । ಸ್ತೇಯಿ ಬ್ರಹ್ಮಘ್ನಮಾತಾಪಿತೃವಧನಿರತೋ ಯೋಗಿಬೃಂದಾಪಕಾರೀ ॥57॥**

**ಯಃ ಸಂಪೂಜ್ಯಾಭಿರಾಮಂ ಪಠತಿ ಚ ಹೃದಯಂ ರಾಮಚಂದ್ರಸ್ಯ ಭಕ್ತ್ಯಾ । ಯೋಗೀಂದ್ರೈರಪ್ಯಲಭ್ಯಂ ಪದಮಿಹ ಲಭತೇ ಸರ್ವದೇವೈಃ ಸ ಪೂಜ್ಯಂ ॥58॥**

ಭಾವಾರ್ಥ - ಯಾವನು ಅತ್ಯಂತವಾಗಿ ಕರ್ಮಭ್ರಷ್ಟನಾದವನೋ, ಯಾವನು ಪರರ ಹಣ, ಪರರ ಹೆಂಡಿರು - ಇವುಗಳಲ್ಲಿಯೇ ಯಾವಾಗಲೂ ಆಸೆಯುಳ್ಳವನಾಗಿರುವನೋ, ಯಾವನು ಕಳ್ಳನೂ ಬ್ರಹ್ಮಹತ್ಯೆಯನ್ನು ಮಾಡಿ ತಾಯಿತಂದೆಗಳನ್ನು ಕೊಲ್ಲುವದರಲ್ಲಿಯೇ ನಿರತನಾಗಿರುವನೋ, ಯಾವನು ಯೋಗಿಗಳ ಬ್ರಹ್ಮಸಮೂಹಕ್ಕೇ ಅಪಕಾರವನ್ನೆಸಗುವ ಸ್ವಭಾವವುಳ್ಳವನೋ ಅಂಥವನೂ ರಾಮಚಂದ್ರನನ್ನು ಭಕ್ತಿಯಿಂದ ಪೂಜಿಸಿ ಮನೋಹರವಾದ

ಹೃದಯವನ್ನು ಪಠನಮಾಡಿದರೆ ಅವನು ಯೋಗೀಶ್ವರರುಗಳಿಗೂ ಸಿಕ್ಕುವದಕ್ಕೆ ಕಷ್ಟವಾಗಿಯೂ ಸಮಸ್ತ ದೇವತೆಗಳೂ ಬಹಳವಾಗಿ ಪೂಜಿಸತಕ್ಕದ್ದಾಗಿಯೂ ಇರುವ ಪದವಿಯನ್ನು ಇಲ್ಲಿ ಪಡೆಯುತ್ತಾನೆ.

॥ ಇತಿ ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರಸಂವಾದೇ ಬಾಲಕಾಂಡೇ ಶ್ರೀರಾಮಹೃದಯಂ ನಾಮ ಪ್ರಥಮಃ ಸರ್ಗಃ ಸಂಪೂರ್ಣಂ ॥

## 8.18 ಶ್ರೀರಾಮಕರ್ಣಾಮೃತಂ

**ಶ್ರೀರಾಮಃ ಸಕಲೇಶ್ವರೋ ಮಮ ಪಿತಾ ಮಾತಾ ಚ ಸೀತಾ ಮಮ ಭ್ರಾತಾ ಬ್ರಹ್ಮ ಸಖಾ ಪ್ರಭಂಜನಸುತಃ ಪತ್ನೀ ವಿರಕ್ತಿಃ ಪ್ರಿಯಾ । ವಿಶ್ವಾಮಿತ್ರವಿಭೀಷಣಾದಿವಶಗಾ ಮಿತ್ರಾಣಿ ಬೋಧಸ್ಸುತೋ ಭಕ್ತಿಃ ಶ್ರೀಹರಿಸಂಗತಾ ರತಿಸುಖಂ ವೈಕುಂಠಮಸ್ಮತ್ಪದಂ ॥1॥**

ಭಾವಾರ್ಥ - ಎಲ್ಲರಿಗೂ ಒಡೆಯನಾದ ಶ್ರೀರಾಮನು ತನ್ನ ತಂದೆ, ಸೀತೆಯು ನನ್ನ ತಾಯಿ. ಬ್ರಹ್ಮನು ಸೋದರನು. ವಾಯುಪುತ್ರನಾದ(ಹನುಮಂತನು) ಸ್ನೇಹಿತನು. ವೈರಾಗ್ಯಳೆಂಬುವಳೇ ಪ್ರಿಯಳಾದ ಹೆಂತಿಯು. ವಿಶ್ವಾಮಿತ್ರ, ವಿಭೀಷಣರೇ ಮುಂತಾದ ಅನುಯಾಯಿಗಳೇ ನನ್ನ ಮಿತ್ರರು. ಜ್ಞಾನವೇ ಪುತ್ರನು. ಶ್ರೀಹರಿಯಲ್ಲಿ ಅನುರಕ್ತವಾದ ಭಕ್ತಿಯೇ ರತಿಸುಖವು, ವೈಕುಂಠವೇ ನಮ್ಮ ಊರು.

**ರಾಮಂ ಶ್ಯಾಮಾಭಿರಾಮಂ ರವಿಶಶಿನಯನಂ ಕೋಟಿಸೂರ್ಯಪ್ರಕಾಶಂ ದಿವ್ಯಂ ದಿವ್ಯಾಸ್ತ್ರಪಾಣಿಂ ಶರಮುಖಶರಧಿಂ ಚಾರುಕೋದಂಡಹಸ್ತಂ । ಕಾಲಂ ಕಾಲಾಗ್ನಿರುದ್ರಂ ರಿಪುಕುಲದಹನಂ ವಿಘ್ನವಿಚ್ಛೇದದಕ್ಷಂ ಭೀಮಂ ಭೀಮಾಟ್ಟಹಾಸಂ ಸಕಲಭಯಹರಂ ರಾಮಚಂದ್ರಂ ಭಜೇಹಂ ॥2॥**

ಭಾವಾರ್ಥ - ಕಪ್ಪಾದ ದೇಹಕಾಂತಿಯುಳ್ಳ, ಸೂರ್ಯಚಂದ್ರರೇ ಕಣ್ಣಾಗಿ ಉಳ್ಳ, ಕೋಟಿ ಸೂರ್ಯರಂತೆ ಹೊಳೆಯುವ, ಪ್ರಕಾಶರೂಪನಾದ, ದಿವ್ಯವಾದ ಅಸ್ತ್ರಗಳನ್ನು ಹಿಡಿದಿರುವ, ಸಮುದ್ರದೋಪಾದಿಯ ಬಾಣಸಮೂಹವುಳ್ಳ, ಬಿಲ್ಲನ್ನು ಹಿಡಿದ ಸುಂದರವಾದ ಕೈಯುಳ್ಳ, (ರಾಕ್ಷಸರಿಗೆ) ಮೃತ್ಯುರೂಪನಾದ, ಕಾಲಾಗ್ನಿಯಂತೆ

ಭಯಂಕರನಾದ, ಶತ್ರುಗಳ ಗುಂಪನ್ನು ಸುಡುವ, ಅಡ್ಡಿಗಳನ್ನು ತುಂಡುಮಾಡುವದರಲ್ಲಿ ಸಮರ್ಥನಾದ, ಭೀಮನೂ, ಅಂಜಿಕೆಯುಂಟುಮಾಡುವ ಭಾರಿಯ ನಗೆಯುಳ್ಳವನೂ ಸಕಲಭಯಗಳನ್ನೂ ಪರಿಹರಿಸುವವನೂ ಆದ ಶ್ರೀರಾಮನನ್ನು ಭಜಿಸುವೆನು.

**ರಾಮೋ ಮತ್ಕುಲದೈವತಂ ಸಕರುಣಂ ರಾಮಂ ಭಜೇ ಸಾದರಂ ರಾಮೇಣಾಖಿಲಘೋರಪಾಪನಿಹತೀ ರಾಮಾಯ ತಸ್ಮೈ ನಮಃ । ರಾಮಾನ್ನಾಸ್ತಿ ಜಗತ್ತ್ರಯೈಕಸುಲಭೋ ರಾಮಸ್ಯ ದಾಸೋಸ್ಮ್ಯಹಂ ರಾಮೇ ಪ್ರೀತಿರತೀವ ಮೇ ಕುಲಗುರೋ ಶ್ರೀರಾಮ ರಕ್ಷಸ್ವ ಮಾಂ ॥3॥**

ಭಾವಾರ್ಥ - ರಾಮನು ನನ್ನ ಕುಲದೇವರು. ದಯಾಪೂರ್ಣನಾದ ರಾಮನನ್ನು ಅದರದಿಂದ ಭಜಿಸುವೆನು. ಘೋರವಾದ ಪಾಪಗಳ ನಾಶವೆಲ್ಲವೂ ರಾಮನಿಂದಲೇ ರಾಮನಿಗೆ ನಮಸ್ಕಾರ. ಮೂರು ಲೋಕಗಳಿಗೂ ರಾಮನಷ್ಟು ಸುಲಭನಾದ ಬೇರೊಬ್ಬ ದೇವರಿಲ್ಲ ನಾನು ಶ್ರೀರಾಮನ ಸೇವಕನು ನನಗೆ ರಾಮನಲ್ಲಿಯೇ ಅತಿಯಾದ ಪ್ರೇಮವು ಕುಲಗುರುವಾದ ಶ್ರೀರಾಮನೆ ನನ್ನನ್ನು ಕಾಪಾಡು.

**ವಂದಾಮಹೇ ಮಹೇಶಾನಚಂಡಕೋದಂಡಖಂಡನಂ । ಜಾನಕೀಹೃದಯಾನಂಚಂದನಂ ರಘುನಂದನಂ ॥4॥**

ಭಾವಾರ್ಥ - ಪರಮೇಶ್ವರನ ದುಸ್ಸಹವಾದ ಬಿಲ್ಲನ್ನು ತುಂಡುಮಾಡಿದ, ಜಾನಕೀ ದೇವಿಯ ಹೃದಯಕ್ಕೆ ಆನಂದವುಂಟುಮಾಡುವ ಚಂದನದಂತೆ ಇರುವ, ರಘನಂದನನಾದ ರಾಮನನ್ನು ನಮಸ್ಕರಿಸುತ್ತೇವೆ.

**ಜಾನಾತಿ ರಾಮ ತವ ನಾಮರುಚಿಂ ಮಹೇಶಃ ಜಾನತಿ ಗೌತಮಸತೀ ಚರಣಪ್ರಭಾವಂ । ಜಾನತಿ ದೋರ್ಬಲಪರಾಕ್ರಮಮಿಶಚಾಪಃ ಜಾನಾತ್ಯಮೋಘಪಟುಬಾಣಗತಿಂ ಪಯೋಧಿಃ ॥5॥**

ಭಾವಾರ್ಥ - ಎಲೈ ರಾಮನೆ, ನಿನ್ನ ನಾಮದ ರುಚಿಯನ್ನು ಪರಮೇಶ್ವರನು ಬಲ್ಲನು. ಗೌತಮನ ಹೆಂಡತಿಯಾದ ಅಹಲ್ಯೆಯು ನಿನ್ನ ಪಾದಗಳ ಮಹಿಮೆಯನ್ನು ಬಲ್ಲಳು.

ನಿನ್ನ ಬಾಹುಗಳ ಪರಾಕ್ರಮವನ್ನು ಈಶ್ವರನ ಧನಸ್ಸು ಬಲ್ಲದು ವ್ಯರ್ಥವಾಗದ ತೀಕ್ಷ್ಣವಾದ ನಿನ್ನ ಬಾಣಗಳ ಸಂಚಾರವನ್ನು ಸಮುದ್ರ(ರಾಜನು) ಬಲ್ಲನು.

**ಸಕಲಭುವನರತ್ನಂ ಸಚ್ಚಿದಾನಂದರತ್ನಂ ಸಕಲಹೃದಯರತ್ನಂ ಸೂರ್ಯಬಿಂಬಾಂತರತ್ನಂ । ವಿಮಲಸುಕೃತರತ್ನಂ ವೇದವೇದಾಂತರತ್ನಂ ಪುರಹರಜಪರತ್ನಂ ಪಾತು ಮಾಂ ರಾಮರತ್ನಂ ॥6॥**

ಭಾವಾರ್ಥ - ಎಲ್ಲಾ ಲೋಕಗಳ ರತ್ನವಾದ, ಸಚ್ಚಿದಾನಂದತತ್ತ್ವವಾದ, ಎಲ್ಲರ ಹೃದಯದೊಳಗಿರುವ ಹಾಗೂ ಸೂರ್ಯಬಿಂಬದೊಳಗಿನ ರತ್ನವಾದ, ಪರಿಶುದ್ಧವಾದ ಪುಣ್ಯದ ಸಾರವಾದ, ವೇದವೇದಾಂತಗಳ ತಿರುಳಾದ. ಮಹೇಶ್ವರನು ನಿತ್ಯವೂ ಜಪಿಸುವ ರತ್ನವಾದ ರಾಮನೆಂಬ (ದಿವ್ಯ)ರತ್ನವು ನನ್ನನ್ನು ಕಾಪಾಡಲಿ!

**ಸಕಲಸುಕೃತರತ್ನಂ ಸತ್ಯವಾಕ್ಯಾರ್ಥರತ್ನಂ ಶಮದಮಗುಣರತ್ನಂ ಮುಖ್ಯವೈಕುಂಠರತ್ನಂ । ಪ್ರಣವನಿಲಯರತ್ನಂ ನೀರಜಾಂತಸ್ಥರತ್ನಂ ಮುನಿಜನಜಪರತ್ನಂ ಪಾತು ಮಾಂ ರಾಮರತ್ನಂ ॥7॥**

ಭಾವಾರ್ಥ - ಎಲ್ಲಾ ಪುಣ್ಯಗಳ ಸಾರವಾದ, ಸತ್ಯವಾಕ್ಯದ ಅರ್ಥವೆಂಬ ರತ್ನವಾದ, ಶಮ, ದಮ - ಮುಂತಾದ ಗುಣಗಳ ಸಾರವಾದ, ವೈಕುಂಠಲೋಕದ ಮುಖ್ಯವಸ್ತುವಾದ ಓಂಕಾರವೆಂಬ ನಿಲಯದ ರತ್ನವಾದ, (ಹೃದಯವೆಂಬ) ಕಮಲದೊಳಗಿನ ರತ್ನವಾದ, ಮುನಿಜನರು ಜಪಿಸುವ ರತ್ನವಾದ ರಾಮನೆಂಬ ರತ್ನವು ನನ್ನನ್ನು ಕಾಪಾಡಲಿ!

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀರಾಮಕರ್ಣಾಮೃತಂ ಸಂಪೂರ್ಣಂ ॥

## 8.19 ಶ್ರೀ ರಾಮ ಮಂಗಲಂ

**ಮಂಗಲಂ ಕೋಸಲೇಂದ್ರಾಯ ಮಹನೀಯ ಗುಣಾಬ್ಧಯೇ ।**
**ಚಕ್ರವರ್ತಿ ತನೂಜಾಯ ಸಾರ್ವ ಭೌಮಾಯ ಮಂಗಲಂ ॥1॥**

ಭಾವಾರ್ಥ - ಕೋಸಲ ದೇಶದ ಅರಸನೂ, ಮಹನೀಯನೇ, ಸದ್ಗುಣಗಳಿಗೆ ವಿಶಾಲವಾದ ಸಮುದ್ರವಾಗಿರುವವನೂ, ದಶರಥ ಚಕ್ರವರ್ತಿಯ ಮಗನೂ ಆಗಿರುವ ಶ್ರೀರಾಮನಿಗೆ ಮಂಗಲವಾಗಲಿ.

**ವೇದ ವೇದಾಂತ ವೇದ್ಯಾಯ ಮೇಘ ಶ್ಯಾಮಲಮೂರ್ತಯೇ ।**

**ಪುಂಸಾಂ ಮೋಹನರೂಪಾಯ ಪುಣ್ಯ ಶ್ಲೋಕಾಯ ಮಂಗಲಂ ॥2॥**

ಭಾವಾರ್ಥ - ವೇದವೇದಾಂತಗಳಿಂದ ಅರಿವಾಗುವವನೂ, ಮುಗಿಲಿನ ಹಾಂಗೆ ಶ್ಯಾಮಲ ಬಣ್ಣದವನೂ, ಎಲ್ಲ ಜನರಿಗೆ ಮೋಹ ಸ್ವರೂಪದವನೂ, ಪುಣ್ಯವೇ ಕೀರ್ತಿ ಆಗಿರುವವನೂ ಆಗಿರುವ ಶ್ರೀರಾಮನಿಗೆ ಮಂಗಲವಾಗಲಿ.

**ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇ ।**

**ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಲಂ ॥3॥**

ಭಾವಾರ್ಥ - ವಿಶ್ವಾಮಿತ್ರರಿಗೆ ಅಂತರಂಗ ಶಿಷ್ಯನಾಗಿ ಮಿಥಿಲೆಯ ಅರಸನ ಭಾಗ್ಯಕ್ಕೆ ಶೋಭೆ ಕರುಣಿಸಿದವನಾಗಿರುವ ಶ್ರೀರಾಮನಿಗೆ ಮಂಗಲವಾಗಲಿ.

**ಪಿತೃ ಭಕ್ತಾಯ ಸತತಂ ಭಾತೃಭಿಃ ಸಹ ಸೀತಯಾ ।**

**ನಂದಿತಾಖಿಲಲೋಕಾಯ ರಾಮಭದ್ರಾಯ ಮಂಗಲಂ ॥4॥**

ಭಾವಾರ್ಥ - ಸೀತಾದೇವಿ ಸಮೇತನಾಗಿ ತಮ್ಮಂದಿರ ಜೊತೆಯಲ್ಲಿ ಪಿತೃ ಭಕ್ತಿಯಲ್ಲಿ ನಿರತನಾಗಿದ್ದವನೂ, ಅಖಿಲ ಬ್ರಹ್ಮಾಂಡಕ್ಕೆ ಸಂತೋಷವನ್ನು ಕರುಣಿಸುವವನೂ ಆಗಿರುವ ಶ್ರೀರಾಮನಿಗೆ ಮಂಗಲವಾಗಲಿ.

**ತ್ಯಕ್ತ ಸಾಕೇತವಾಸಾಯ ಚಿತ್ರಕೂಟವಿಹಾರಿಣೇ ।**

**ಸೇವ್ಯಾಯ ಸರ್ವಯಮಿನಾಂ ಧೀರೋದಾರಾಯ ಮಂಗಲಂ ॥5॥**

ಭಾವಾರ್ಥ - ಅಯೋಧ್ಯಾ ನಗರವನ್ನು ತ್ಯಜಿಸಿ ಚಿತ್ರಕೂಟದಲ್ಲಿ ವಿಹರಿಸಿದವನೂ, ಎಲ್ಲಾ ಋಷಿಗಳ ಸೇವೆಗೆ ಪಾತ್ರನಾದೋನೂ ಅಗಿರುವ ಧೀರೋಧಾರ ಮೂರ್ತಿ ಶ್ರೀರಾಮನಿಗೆ ಮಂಗಲವಾಗಲಿ.

**ಸೌಮಿತ್ರಿಣಾ ಚ ಜಾನಕ್ಯಾ ಚಾಪಬಾಣಾಸಿಧಾರಿಣೇ ।**
**ಸಂಸೇವ್ಯಾಯ ಸದಾ ಭಕ್ತ್ಯಾ ಸ್ವಾಮಿನೇ ಮಮ ಮಂಗಲಂ ॥6॥**

ಭಾವಾರ್ಥ - ಸೀತಾಲಕ್ಷ್ಮಣರ ಜೊತೆಯಲ್ಲಿ ಬಿಲ್ಲು-ಬಾಣ-ಕತ್ತಿ ಗಳನ್ನು ಹಿಡಿದುಕೊಂಡು ಕಾಡಿನಲ್ಲಿ ಸಂಚಾರ ಮಾಡುತ್ತಾ ಯಾವಾಗಲೂ ನಮ್ಮೆಲ್ಲರ ಭಕ್ತಿಪುರಸ್ಸರ ಸೇವೆಯನ್ನು ಮಾಡಿಸಿಕೊಳ್ಳುವ ಆ ಸ್ವಾಮಿಗೆ ಮಂಗಲವಾಗಲಿ.

**ದಂಡಕಾರಣ್ಯವಾಸಾಯ ಖಂಡಿತಾಮರ ಶತ್ರವೇ ।**
**ಗೃಧ್ರರಾಜಾಯ ಭಕ್ತಾಯ ಮುಕ್ತಿದಾಯಾಸ್ತು ಮಂಗಲಂ ॥7॥**

ಭಾವಾರ್ಥ - ದಂಡಕಾರಣ್ಯಲ್ಲಿ ವಾಸಮಾಡಿದವನೂ, ಶತೃಗಳನ್ನು ನಾಶಮಾಡಿದವನೂ, ಭಕ್ತನಾದ ಜಟಾಯುವಿಗೆ ಮುಕ್ತಿಯನ್ನು ಕರುಣಿಸಿದವನೂ, ಆಗಿರುವ ಶ್ರೀರಾಮನಿಗೆ ಮಂಗಲವಾಗಲಿ.

**ಸಾದರಂ ಶಬರೀದತ್ತ ಫಲಮೂಲಾಭಿಲಾಷಿಣೇ ।**
**ಸೌಲಭ್ಯಪರಿಪೂರ್ಣಾಯ ಸತ್ವೋದ್ರಿಕ್ತಾಯ ಮಂಗಲಂ ॥8॥**

ಭಾವಾರ್ಥ - ಶಬರಿ ಕೊಟ್ಟ ಗಡ್ಡೆ ಗೆಣಸುಗಳನ್ನು ಸಂತೋಷದಿಂದ ಸ್ವೀಕಾರ ಮಾಡಿದವನೂ, ಸೌಲಭ್ಯಂಗಳಲ್ಲಿ ಪರಿಪೂರ್ಣನಾಗಿ ಸತ್ವಭರಿತನೂ, ಆಗಿರುವ ಶ್ರೀರಾಮನಿಗೆ ಮಂಗಲವಾಗಲಿ.

**ಹನುಮತ್ಸಮವೇತಾಯ ಹರೀಷಾಭೀಷ್ಟದಾಯಿನೇ ।**
**ವಾಲಿಪ್ರಮಥನಾಯಾಸ್ತು ಮಹಾಧೀರಾಯ ಮಂಗಲಂ ॥9॥**

ಭಾವಾರ್ಥ - ಹನುಮಂತನ ಜೊತೆ ಸೇರಿ ಸುಗ್ರೀವನ ಆಶೆಯನ್ನು ಪೂರೈಸಿದವನೂ, ವಾಲಿಯನ್ನು ಸಂಹರಿಸಿದವನೂ, ಮಹಾಧೀರನೂ ಆದ ಶ್ರೀರಾಮನಿಗೆ ಮಂಗಲವಾಗಲಿ.

**ಶ್ರೀಮತೇ ರಘುವೀರಾಯ ಸೇತೂಲ್ಲಂಘಿತಸಿಂಧವೇ ।**
**ಜಿತರಾಕ್ಷಸರಾಜಾಯ ರಣಧೀರಾಯ ಮಂಗಲಂ ॥10॥**

ಭಾವಾರ್ಥ - ಯುದ್ಧಲ್ಲಿ ಅಜೇಯನೂ, ಸೇತುವಿನ ಮೇಲಿನಿಂದಾಗಿ ಸಮುದ್ರವನ್ನು ದಾಟಿದವನೂ, ರಾಕ್ಷಸರ ದೊರೆಯೂಗಿರುವ ರಾವಣನನ್ನು ಗೆದ್ದವನೂ, ಶ್ರೀದೇವಿಯೊಡನೆ ಕೂಡಿಕೊಂಡಿರುವನೂ ಆದ ರಘುವೀರನಿಗೆ ಮಂಗಲವಾಗಲಿ.

**ಆಸಾದ್ಯ ನಗರೀಂ ದಿವ್ಯಾಮಭಿಷಿಕ್ತಾಯ ಸೀತಯಾ ।**
**ರಾಜಾಧಿರಾಜ ರಾಜಾಯ ರಾಮಭದ್ರಾಯ ಮಂಗಲಂ ॥11॥**

ಭಾವಾರ್ಥ - ದಿವ್ಯ ನಗರ ಅಯೋಧ್ಯೆಯನ್ನು ಸೇರಿ ಸೀತಾಸಮೇತ ಪಟ್ಟಾಭಿಷಿಕ್ತನಾದ ರಾಜಾಧಿರಾಜ ಶ್ರೀರಾಮನಿಗೆ ಮಂಗಲವಾಗಲಿ.

**ಬ್ರಹ್ಮಾಜದೇವಸೇವ್ಯಾಯ ಬ್ರಹ್ಮಣ್ಯಾಯ ಮಹಾತ್ಮನೇ ।**
**ಜಾನಕೀ ಪ್ರಾಣನಾಥಾಯ ರಘುನಾಥಾಯ ಮಂಗಲಂ ॥12॥**

ಭಾವಾರ್ಥ - ಬ್ರಹ್ಮಾದಿ ದೇವ ದೇವತೆಗಳಿಂದ ಸೇವೆ ಮಾಡಿಸಿಕೊಳ್ಳುವಂತಹಾ ಪುಣ್ಯ ಸ್ವರೂಪನೇ ಆಗಿರುವ ಮಾಹಾತ್ಮನೂ, ಸೀತಾಕಾಂತನೂ ಆದ ರಘುಕುಲೋತ್ತಮ ಶ್ರೀರಾಮನಿಗೆ ಮಂಗಲವಾಗಲಿ.

**ಮಂಗಲಾಶಾಸನಪರೈರ್ಮದಾಚಾರ್ಯಪುರೋಗಮೈಃ ।**
**ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಲಂ ॥13॥**

ಭಾವಾರ್ಥ - ಮುಂದೆ ಬರುವಂತಹಾ ಕಲ್ಯಾಣಕಾರಕ ನಿಯಮಗಳ ಪರವಾಗಿರುವ ನಮ್ಮ ಆಚಾರ್ಯ ಪರಂಪರೆಯಿಂದಲೂ, ಅವರ ಹಿಂದಿನ ಎಲ್ಲಾ ಆಚಾರ್ಯ ಪರಂಪರೆಯಿಂದಲೂ ಪೂಜಿಸಿಕೊಳ್ಳುವ ಶ್ರೀರಾಮನಿಗೆ ಮಂಗಲವಾಗಲಿ.

॥ ಇತಿ ಶ್ರೀ ವಾಲ್ಮೀಕೀ ವಿರಚಿತ ಶ್ರೀಮದ್ರಾಮಾಯಣಾಂತರ್ಗತ ಪಾರಾಯಣ-ಸಮಾಪಾನಾ ವಿಧಿಃ ಸಂಪೂರ್ಣಂ ॥

----- ****** -----

# 9 ಶ್ರೀ ಕೃಷ್ಣ ಸ್ತೋತ್ರಗಳು

## 9.1 ವಸುದೇವಕೃತ ಶ್ರೀ ಕೃಷ್ಣಸ್ತೋತ್ರಂ

ವಸುದೇವ ಉವಾಚಃ- ವಸುದೇವ ಹೇಳುವನುಃ-

**ತ್ವಾಮತೀಂದ್ರಿಯ ಮವ್ಯಕ್ತಮಕ್ಷರಂ ನಿರ್ಗುಣಂ ವಿಭುಃ ।**
**ಧ್ಯಾನಾಸಾಧ್ಯಂಚ ಸರ್ವೇಷಾಂ ಪರಮಾತ್ಮಾ ನಮೀಶ್ವರಂ ॥1॥**

ಭಾವಾರ್ಥ - ನೀನು ಇಂದ್ರಿಯಗಳಿಗೆ ತಿಳಿಯಲು ಅಸಾಧ್ಯನಾಗಿರುವವನು. ಅವ್ಯಕ್ತರೂಪನು. ಅವಿನಾಶಿಯು. ತ್ರಿಗುಣರಹಿತನು. ಸರ್ವತ್ರ ವ್ಯಾಪಿಸಿಕೊಂಡಿರುವವನು. ಧ್ಯಾನದಿಂದ ಆರಿಗೂ ವಶವಾಗದವನು. ಎಲ್ಲರಿಗೂ ಒಡೆಯನಾಗಿರುವ ಪರಮಾತ್ಮನೇ ನೀನಾಗಿರುವೆ.

**ಸ್ವೇಚ್ಛಾಮಯಂ ಸರ್ವರೂಪಂ ಸ್ವೇಚ್ಛಾರೂಪಧರಂ ಪರಂ ।**
**ನಿರ್ಲಿಪ್ತಂ ಪರಮಂ ಬ್ರಹ್ಮ ಬೀಜರೂಪಂ ಸನಾತನಂ ॥2॥**

ಭಾವಾರ್ಥ - ನೀನು ತನ್ನಿಚ್ಛೆಯುಳ್ಳವನು. ಸಮಸ್ತಸ್ವರೂಪಿಯು. ನಿನ್ನ ಸ್ವಂತ ಬಯಕೆಯಂತೆ ರೂಪನ್ನು ಧರಿಸುವವನು. ಮಹಾತ್ಮನು. ಅತೀಹೆಚಾಗಿ ಯಾವುದನ್ನೂ ಅಂಟಿಸಿಕೊಳ್ಳದವನು. ಸನಾತನ ಬೀಜ ಸ್ವರೂಪನಾಗಿ ಪರಬ್ರಹ್ಮನೇ ನೀನಾಗಿರುವೆ.

**ಸ್ಥೂಲಾತ್ ಸ್ಥೂಲತರಂ ಪ್ರಾಪ್ತಮತಿ ಸೂಕ್ಷ್ಮಮದರ್ಶನಂ ।**
**ಸ್ಥಿತಂ ಸರ್ವ ಶರೀರೇಷು ಸಾಕ್ಷಿರೂಪಮದೃಶ್ಯಕಂ ॥3॥**

ಭಾವಾರ್ಥ - ನೀನು ಸ್ಥೂಲಕ್ಕಿಂತಲೂ ಅತಿ ಸ್ಥೂಲನು. ಸರ್ವ ವ್ಯಾಪಿಯಾದರೂ ಅತಿ ಸೂಕ್ಷ್ಮನು. ದೃಷ್ಟಿಗೆ ಗೋಚರವಾಗದವನು. ಸಮಸ್ತ ದೇಹಗಳಲ್ಲಿಯೂ ಸಾಕ್ಷಿರೂಪವಾಗಿ ನೆಲೆಯಾಗಿರುವವನು. ಅಂತೆಯೇ ಅದೃಶ್ಯನು.

**ಶರೀರವಂತಂ ಸಗುಣಮಶರೀರಂ ಗುಣೋತ್ಕರಂ ।**
**ಪ್ರಕೃತಿಂ ಪ್ರಕೃತೀಶಂ ಚ ಪ್ರಾಕೃತಂ ಪ್ರಕೃತೇ ಪರಂ ॥4॥**

ಭಾವಾರ್ಥ - ಸಾಕಾರ, ನಿರಾಕಾರ, ಸಗುಣ, ನಿರ್ಗುಣಗಳ ಸಮೂಹವೇ ನೀನಾಗಿರುವೆ. ಪ್ರಕೃತಿಯೇ ನೀನಾಗಿ ಪ್ರಕೃತಿಯ ನಿಯಮಗಳನ್ನು ರೂಪಿಸುವವನಾಗಿರುವೆ. ಪ್ರಕೃತಿಯಲ್ಲಿನ ಸಮಸ್ತ ವಸ್ತುಗಳಲ್ಲಿ ವ್ಯಾಪಿಸಿರುವೆ. ಆದರೂ ನೀನು ಪ್ರಕೃತಿಯಿಂದ ಹೊರಗಿನ ಸ್ಥಿತಿಗತಿಗಳಿಗೆ ಕಾರಣೀಭೂತನಾಗಿರುವೆ.

**ಸರ್ವೇಶಂ ಸರ್ವರೂಪಂ ಚ ಸರ್ವಾಂತರಮವ್ಯಯಂ ।**
**ಸರ್ವಾಧಾರಂ ನಿರಾಧಾರಂ ನಿರ್ವ್ಯೂಹಂ ಸ್ತೌಮಿ ಕಿಂ ವಿಭುಂ ॥5॥**

ಭಾವಾರ್ಥ - ಒಡೆಯನೇ!ನೀನು ಸಮಸ್ತಕ್ಕೂ ಅಧೀಶನಾಗಿರುವೆ. ಸಮಸ್ತರೂಪನೂ ನೀನಾಗಿರುವೆ. ನೀನುಎಲ್ಲೆಡೆಯಲ್ಲಿಯೂ ವ್ಯಾಪಿಸಿಕೊಂಡಿರುವವನು. ನೀನು ನಾಶರಹಿತನು. ಸಮಸ್ತ ಸೃಷ್ಟಿಗೂ ಆಧಾರನು. ಅಂತೆಯೇ ಆಧಾರ ವಿರಹಿತನು. ನೀನು ತರ್ಕಗಳಿಗೆ ಆತೀತನಾದವನು. ಹೀಗಿರುವ ನಿನ್ನನ್ನು ನಾನದೆಂತು ಸ್ತುತಿಸಲಿ?

**ಅನಂತಃ ಸ್ತವನೇಽಶಕ್ತೋಽಶಕ್ತಾ ದೇವೀ ಸರಸ್ವತಿ ।**
**ಯಂ ಸ್ತೋತುಮಸಮರ್ಥಶ್ಚ ಪಂಚವಕ್ತ್ರಃ ಷಡಾನನಃ ॥6॥**

ಭಾವಾರ್ಥ - ಸಹಸ್ರ ನಾಲಿಗೆಯುಳ್ಳ ಭಗವಾನ್ ಅನಂತನೆಂಬ ಮಹಾಶೇಷನು ಕೂಡಾ ನಿನ್ನನ್ನು ಸ್ತುತಿಸಲು ಸಾಮರ್ಥ್ಯವಿಲ್ಲದವನಾಗಿರುವನು. ವಾಗ್ದೇವಿ ಶಾರದೆಗೂ ನಿನ್ನನ್ನು ಸ್ತುತಿಸಲು ಸಾಮರ್ಥ್ಯವಿಲ್ಲ. ಪಂಚವದನ ಮಹಾದೇವನೂ, ಆರುಮೊಗಗಳುಳ್ಳ ಕಾರ್ತಿಕೇಯನೂ ನಿನ್ನನ್ನು ಸ್ತುತಿಸಲು ಅಸಮರ್ಥರಾದವರೇ ಆದವರು.

**ಚತುರ್ಮುಖೋ ವೇದಕರ್ತಾ ಯಂ ಸ್ತೋತುಮಕ್ಷಮಃ ಸದಾ ।**
**ಗಣೇಶೋ ನ ಸಮರ್ಥಶ್ಚ ಯೋಗೀಂದ್ರಾಣಾಂ ಗುರೋರ್ಗುರುಃ ॥7॥**

ಭಾವಾರ್ಥ - ವೇದಗಳನ್ನು ವ್ಯಕ್ತಪಡಿಸುವ ಬ್ರಹ್ಮನು ಕೂಡಾ ನಿನ್ನ ಸ್ತುತಿಸುವಿಕೆಯಲ್ಲಿ ಅಯೋಗ್ಯನೆನಿಸಿರುವವನು. ಹಾಗೆಯೇ ಮುನಿಶ್ರೇಷ್ಠರ ಗುರುಗಳಿಗೆ ಗುರುವಾದ ಶ್ರೀಗಣೇಶನು ಕೂಡಾ ನಿನ್ನನ್ನು ಸ್ತುತಿಸಲು ಅಸಮರ್ಥನಾಗಿರುವನು.

**ಋಷಯೋ ದೇವತಾಶ್ಚೈವ ಮುನೀಂದ್ರ ಮನುಮಾನವಾಃ ।**
**ಸ್ವಪ್ನೇ ತೇಷಾಮದೃಶ್ಯಂ ಚ ತ್ವಾಮೇವಂ ಕೀ ಸ್ತುವಂತಿ ತೇ ॥8॥**

ಭಾವಾರ್ಥ - ಹೀಗಿರುವಾಗ ಋಷಿಮುನಿಗಳು, ದೇವತೆಗಳು, ಶ್ರೇಷ್ಟ ಯೋಗಿಗಳು, ಶಾಸ್ತ್ರಕಾರರು, ಮಾನವರು ಅದೆಂತು ಸ್ತುತಿಸಬಲ್ಲರು? ನಿನ್ನನ್ನು ಅವರು ಎಂದೂ ಕಂಡಿರಲಾರರು.

**ಶ್ರುತಯಃ ಸ್ತವನೇಽಶಕ್ತಾಃ ಕಿಂ ಸ್ತುವಂತಿ ವಿಪಶ್ಚಿತಃ ।**
**ವಿಹಾಯೈವಂ ಶರೀರಂ ಚ ಬಾಲೋ ಭವಿತು ಮಹರ್ಸಿ ॥9॥**

ಭಾವಾರ್ಥ - ವೇದಗಳೇ ನಿನ್ನನ್ನು ಸ್ತುತಿಸಲು ಶಕ್ತವಾಗದಿರುವಾಗ ವಿದ್ವಜ್ಜನರಾದರೂ ಅದೆಂತು ಸ್ತುತಿಸಲು ಸಾಧ್ಯ? ನೀನು ನಿನ್ನ ಈ ಶ್ರೇಷ್ಠಶರೀರವನ್ನು ತ್ಯಜಿಸಿ ಮಗುವಿನ ಸ್ವರೂಪವನ್ನು ಧರಿಸಬೇಕು ಎಂಬುದು ಮಾತ್ರಾ ನನ್ನ ಅರಿಕೆ.

**ವಸುದೇವಕೃತಂ ಸ್ತೋತ್ರಂ ತ್ರಿಸಂಧ್ಯಂ ಯಃ ಪಠೇನ್ನರಃ ।**
**ಭಕ್ತಿದಾಸ್ಯಮವಾಪ್ನೋತಿ ಶ್ರೀಕೃಷ್ಣ ಚರಣಾಂಬುಜೇ ॥10॥**

ಭಾವಾರ್ಥ - ವಸುದೇವನಿಂದ ರಚಿತವಾದ ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿ ಪಠಿಸುವವರು ಶ್ರೀಕೃಷ್ಣನ ಚರಣಾರವಿಂದಗಳ ಊಳಿಗತ್ವದ ಮಹಾಭಾಗ್ಯವನ್ನು ಪಡೆಯುವರು.

**ವಿಶಿಷ್ಟಪುತ್ರಂ ಲಭತೇ ಹರಿದಾಸಂ ಗುಣಾನ್ವಿತಂ ।**
**ಸಂಕಟಂ ನಿಸ್ತರೇತ್ ತೂರ್ಣಂ ಶತ್ರುಭೀತ್ಯಾ ಪ್ರಮುಚ್ಯತೇ ॥11॥**

ಭಾವಾರ್ಥ - ಆ ತೆರನಾಗಿ ದಾಸ್ಯತ್ವವನ್ನು ಪಡೆವಾತನಿಗೆ ಶ್ರೇಷ್ಠಗುಣದ ಹರಿಭಕ್ತನಾಗಿರುವ ಸುಪುತ್ರ ಭಾಗ್ಯವು ದೊರಕುವುದು. ಆತನು ಸಮಸ್ತ ಸಂಕಷ್ಟಗಳಿಂದ ಪಾರಾಗುವನು. ಆತನನ್ನು ಶತ್ರುಗಳ ಭೀತಿಯು ಕಾಡಲಾರದು.

॥ ಇತಿ ವಸುದೇವಕೃತ ಶ್ರೀಕೃಷ್ಣಸ್ತೋತ್ರಂ ಸಂಪೂರ್ಣಂ ॥

## 9.2 ಬಾಲಕೃತಂ ಶ್ರೀ ಕೃಷ್ಣ ಸ್ತೋತ್ರಂ

**ಬಾಲಾ ಊಚುಃ** ಬಾಲಕನು ಹೇಳುವನುಃ-

**ಯಥಾ ಸಂರಕ್ಷಿತಂ ಬ್ರಹ್ಮನ್ ಸರ್ವಾಪತ್ ಸ್ವೇವ ನಃ ಕುಲಂ ।**
**ತಥಾ ರಕ್ಷಾಂ ಕುರು ಪುನರ್ದಾ ವಾಗ್ನೇಮರ್ಧುಸೂದನ ॥1॥**

ಭಾವಾರ್ಥ - ಎಲೈ ಹಿರಣ್ಯಗರ್ಭನೇ!ಸಮಸ್ತ ಆಪತ್ತುಗಳಿಂದ ನಮ್ಮ ವಂಶವನ್ನು ಯಾವ ರೀತಿಯಲ್ಲಿ ಸಂರಕ್ಷಿಸಿರುವಿಯೋ ಅದೇ ರೀತಿಯಾಗಿ ಈವಾಗ ಪುನ, ನಮ್ಮನ್ನು ಕಾಡ್ಗಿಚ್ಚಿನಿಂದ ಕಾಪಾಡು ಮಧುಸೂದನನೇ.

**ತ್ವಮಿಷ್ಟದೇವತಾಸ್ಮಾಕಂ ತ್ವಮೇವ ಕುಲದೇವತಾ ।**
**ಸೃಷ್ಟಾಪಾತಾ ಚ ಸಂಹರ್ತಾ ಜಗತಾ ಚ ಜಗತ್ಪತೇ ॥2॥**

ಭಾವಾರ್ಥ - ವಿಶ್ವದ ಸೃಷ್ಟಿ-ಸ್ಥಿತಿ-ಸಂಹಾರಕನಾಗಿರುವ ಜಗದೊಡೆಯನೇ, ನೀನೇ ನಮ್ಮ ಇಷ್ಟದೇವತೆಯೂ ಕುಲದೇವತೆಯೂ ಆಗಿರುವೆ.

**ವಹ್ನಿರ್ವಾ ವರುಣೋ ವಾಪಿ ಚಂದ್ರೋ ವಾ ಸೂರ್ಯ ಏವ ಚ ।**
**ಯಮಃ ಕುಬೇರಃ ಪವನ ಈಶಾನಾದ್ಯಾಶ್ಚ ದೇವತಾಃ ॥3॥**

ಭಾವಾರ್ಥ - ಅಗ್ನಿ, ವರುಣ, ಚಂದ್ರ, ಸೂರ್ಯ, ವಾಯು, ಯಮ, ಕುಬೇರ, ಈಶಾನಾದಿ ದೇವತೆಯರು. . .

**ಬ್ರಹ್ಮೇಶ ಶೇಷ ಧರ್ಮೇಂದ್ರಾ ಮುನೀಂದ್ರಾ ಮನವಃ ಸ್ಮೃತಾಃ ।**
**ಮಾನವಾಶ್ಚ ತಥಾ ದೈತ್ಯಾ ಯಕ್ಷ ರಾಕ್ಷಸ ಕಿನ್ನರಾಃ ॥4॥**

ಭಾವಾರ್ಥಃಬ್ರಹ್ಮ, ಈಶ, ಬಲರಾಮ, ಧರ್ಮರಾಜ, ಇಂದ್ರರು, ಮುನೀಂದ್ರರು, ಪ್ರಜಾಪತಿಗಳು, ಮನುಜರು, ಹಾಗೆಯೇ ಯಕ್ಷ, ರಾಕ್ಷಸ, ದೈತ್ಯ, ಕಿನ್ನರರು. . . . . . . .

**ಯೇ ಯೇ ಚರಾಚರಾಶ್ಚೈವ ಸರ್ವೇತವ ವಿಭೂತಯಃ ।**
**ಆವಿರ್ಭಾವಸ್ತಿರೋಭಾವಃ ಸರ್ವೇಷಾಂ ಚ ತವೇಚ್ಛಯಾ ॥5॥**

ಭಾವಾರ್ಥ - ಸೃಷ್ಟಿಯಲ್ಲಿ ಸ್ಥಿರ ಹಾಗೂ ಅಸ್ಥಿರವಾದುದು ಯಾವುವೆಲ್ಲಾ ಇವೆಯೋ ಅವೆಲ್ಲವೂ ನಿನ್ನ ಅತಿಮಾನುಷ ಶಕ್ತಿ ವಿಶೇಷಗಳಾಗಿವೆ. ಅವೆಲ್ಲವುಗಳ ಪ್ರತ್ಯಕ್ಷತೆ, ಹಾಗೂ ಅಪ್ರತ್ಯಕ್ಷತೆಗಳಿಗೆ ನಿನ್ನ ಬಯಕೆಯೇ ಕಾರಣವಾಗಿದೆ.

**ಅಭಯಂ ದೇಹಿ ಗೋವಿಂದ ವಹ್ನಿ ಸಂಹರಣಂ ಕುರು ।**
**ವಯಂ ತ್ವಾಂ ಶರಣಂ ಯಾಮೋರಕ್ಷ ನಃ ಶರಣಾಗತಂ ॥6॥**

ಭಾವಾರ್ಥ - ಹೇ!ಗೋವಿಂದನೇ,ನಮಗೆ ಅಭಯವನ್ನು ಕೊಡುವವನಾಗು. ಈ ಬೆಂಕಿಯನ್ನು ಆರಿಸು. ನಾವು ನಿನ್ನ ಆಶ್ರಯಕ್ಕಾಗಿ ಬಂದಿರುವೆವು. ಶರಣಾರ್ತಿಗಳಾದ ನಮ್ಮನ್ನು ಪರಿಪಾಲಿಸು.

**ಇತ್ಯೇವ ಮುಕ್ತ್ವಾ ತೇ ಸರ್ವೇತಸ್ಥುರ್ಧ್ಯಾತ್ವಾ ಪದಾಂಬುಜಂ ।**
**ದೂರೀಭೂತಸ್ತು ದಾವಾಗ್ನಿಃ ಶ್ರೀಕೃಷ್ಣಾಮೃತ ದೃಷ್ಟಿತಃ ॥7॥**

ಭಾವಾರ್ಥ - ಬಾಲಕರೆಲ್ಲರೂ ಇಂತೆಂದು ಮೊರೆಯಿಟ್ಟು ಆತನ ಚರಣಕಮಲಗಳನ್ನು ಧ್ಯಾನಿಸಿದರು. ಆಗ ಶ್ರೀಕೃಷ್ಣನ ಅಮೃತಮಯ ಕರುಣಾ ದೃಷ್ಟಿಯಿಂದ ದಾವಾಗ್ನಿಯ ಬೇಗೆಯು ದೂರವಾಯಿತು.

**ದೂರೀಭೂತೇ ಚ ದಾವಾಗ್ನೌ ನನೃತುಸ್ತೇಮುದಾನ್ವಿತಾಃ ।**
**ಸರ್ವಾಪದಃ ಪ್ರಣಶ್ಯಂತಿ ಹರಿಸ್ಮರಣ ಮಾತ್ರತಃ ॥8॥**

ಭಾವಾರ್ಥ - ದಾವಾಗ್ನಿಯು ದೂರವಾಗಲು ಆ ಬಾಲಕರು ಸಂತಸಭರಿತರಾದರು. ಶ್ರೀಹರಿಯ ಸ್ಮರಣಮಾತ್ರದಿಂದ ಸಮಸ್ತ ವಿಪತ್ತುಗಳು ನಾಶವಾಗುವವು.

**ಇದಂ ಸ್ತೋತ್ರಂ ಮಹಾಪುಣ್ಯಂ ಪ್ರಾತರುತ್ಥಾಯ ಯಃ ಪಠೇತ್ ।**
**ವಹ್ನಿತೋನ ಭವೇತ್ತಸ್ಯ ಭಯಂ ಜನ್ಮನಿ ಜನ್ಮನಿ ॥9॥**

ಭಾವಾರ್ಥ - ಮಹಾಪುಣ್ಯದಾಯಕವಾಗಿರುವ ಈ ಸ್ತುತಿಯನ್ನು ಉಷಃಕಾಲದಲ್ಲಿ ಎದ್ದು ಯಾವಾತನು ಪಠಿಸುವನೋ ಅಂತಹವನಿಗೆ ಜನ್ಮಜನ್ಮಾಂತರಗಳಲ್ಲಿಯೂ ಬೆಂಕಿಯಿಂದ ಯಾವುದೇ ವಿಪತ್ತು ಉಂಟಾಗಲಾರದು.

**ಶತ್ರುಗ್ರಸ್ತೇ ಚ ದಾವಾಗ್ನೌ ವಿಪತ್ತೌ ಪ್ರಾಣ ಸಂಕಟೇ ।**
**ಸ್ತೋತ್ರಮೇತತ್ಪಠಿತ್ವಾತು ಮುಚ್ಯತೇನಾತ್ರ ಸಂಶಯಃ ॥10॥**

ಭಾವಾರ್ಥ - ವೈರಿಗಳಿಂದ ಆಕ್ರಮಣಕ್ಕೊಳಗಾದಾಗ, ಕಾಡ್ಗಿಚ್ಚಿನಲ್ಲಿ ಸಿಲುಕಿಕೊಂಡಾಗ ವಿಪತ್ತುಗಳುಸಂಭವಿಸಿದಾಗ, ಪ್ರಾಣಸಂಕಟಕ್ಕೊಳಗಾದಾಗ ಈ ಸ್ತೋತ್ರವನ್ನು ಪಠಿಸಿದಲ್ಲಿ ಇವೆಲ್ಲವುಗಳಿಂದ ಪಾರಾಗುವುದರಲ್ಲಿ ಸಂದೇಹವಿಲ್ಲ.

**ಶತ್ರು ಸೈನ್ಯಂ ಕ್ಷಯಂ ಯಾತಿ ಸರ್ವತ್ರ ವಿಜಯೀ ಭವೇತ್ ।**
**ಇಹಲೋಕೇ ಹರೇಭಕ್ತಿ ಮಂತೇದಾಸ್ಯಂ ಲಭೇತ್ ಧ್ರುವಂ ॥11॥**

ಭಾವಾರ್ಥ - ವೈರಿಗಳ ಸೇನೆಯು ನಿರ್ನಾಮವಾಗುವುದು. ಸರ್ವತ್ರ ಗೆಲುವು ದೊರಕುವುದು. ಈ ಲೋಕದಲ್ಲಿ ಶ್ರೀಹರಿಯಲ್ಲಿ ಭಕ್ತಿಯೂ, ದೇಹಾಂತ್ಯದ ನಂತರ ಶ್ರೀಹರಿಯಲ್ಲಿ ಊಳಿಗತ್ವವೂ ಖಚಿತವಾಗಿ ದೊರಕುವುದು.

॥ ಇತಿ ಬಾಲಕೃತಂ ಶ್ರೀಕೃಷ್ಣಸ್ತೋತ್ರಂ ಸಂಪೂರ್ಣಂ ॥

## 9.3 ಶ್ರೀ ಕೃಷ್ಣ ಸ್ತೋತ್ರಂ

**ವಂದೇ ಘನನವಶ್ಯಾಮಂ ಪೀತಕೌಶೇಯವಾಸಸಂ ।**
**ಸಾನಂದಂ ಸುಂದರಂ ಶುದ್ಧಂ ಶ್ರೀಕೃಷ್ಣಂ ಪ್ರಕೃತೇಃಪರಂ ॥1॥**

ಭಾವಾರ್ಥ - ಹೊಸ ಮೇಘದ ವರ್ಣವುಳ್ಳವನೂ, ಅರಸಿನ ಬಣ್ಣದ ರೇಶ್ಮೆ ಬಟ್ಟೆಯನ್ನು ಧರಿಸಿದವನೂ, ಅನಂದಭರಿತನೂ, ಸುಂದರನೂ, ನಿರ್ಮಲನೂ, ಪ್ರಕೃತಿಯಿಂದ ಹೊರಗಿರುವವನೂ ಆಗಿರುವ ಶ್ರೀಕೃಷ್ಣನಿಗೆ ನಾನು ನಮಿಸುವೆ.

**ರಾಧೇಯಂ ರಾಧಿಕಾ ಪ್ರಾಣವಲ್ಲಭಂ ಬಲ್ಲವೀ ಸುತಂ ।**
**ರಾಧಾಸೇವಿತ ಪಾದಾಬ್ಜಂ ರಾಧಾವಕ್ಷ ಸ್ಥಲ ಸ್ಥಿತಂ ॥2॥**

ಭಾವಾರ್ಥ - ರಾಧೆಯ ದೊರೆಯೂ, ರಾಧೆಯ ಪ್ರಾಣಪ್ರಿಯನೂ, ಬಲ್ಲವಿಯ ಮಗನೂ, ರಾಧೆಯಿಂದ ಸೇವಿಸಿಕೊಂಬ ಪಾದಗಳುಳ್ಳವನೂ, ರಾಧೆಯ ಹೃದಯದಲ್ಲಿ ನೆಲೆಸಿರುವವನೂ. .

**ರಾಧಾನುಗಂ ರಾಧಿಕೇಷ್ಟಂ ರಾಧಾಪಹೃತ ಮಾನಸಂ ।**
**ರಾಧಾಧಾರಂ ಸರ್ವಾಧಾರಂ ನಮಾಮಿ ತಂ ॥2॥**

ಭಾವಾರ್ಥ - ರಾಧೆಯನ್ನು ಹಿಂಬಾಲಿಸಿಕೊಂಡು ಹೋಗುವವನೂ, ರಾಧೆಯ ಪ್ರೀತಿಗೊಳಗಾದವನೂ, ರಾಧೆಯ ಚಿತ್ತಾಪಹಾರಕನೂ, ರಾಧೆಗೆ ಆಧಾರವಾದವನೂ, ಸಮಸ್ತಕ್ಕೂ ಆಧಾರನೂ, ಆಗಿರುವ ಶ್ರೀಕೃಷ್ಣನಿಗೆ ನಾನು ನಮಿಸಿಸುವೆನು.

**ರಾಧಾ ಹೃದ್ಪದ್ಮ ಮಧ್ಯೇ ಚ ವಸಂತಂ ಸತತಂ ಶುಭಂ ।**
**ರಾಧಾ ಸಹಚರಂ ಶಶ್ವದ್ರಾಜ್ಞಾ ಪರಿಪಾಲಕಂ ॥4॥**

ಭಾವಾರ್ಥ - ರಾಧೆಯ ಹೃದಯ ಕಮಲದಲ್ಲಿ ನಿತ್ಯವೂ ನೆಲೆಯಾಗಿರುವವನೂ, ಶುಭವನ್ನುಂಟುಮಾಡುವವನೂ, ರಾಧೆಯ ಒಡನಾಡಿಯೂ, ರಾಧೆಯ ಅಪ್ಪಣೆಯನ್ನು ಖಚಿತವಾಗಿ ಪರಿಪಾಲಿಸುವವನೂ. . .

**ಧ್ಯಾಯಂತೇ ಯೋಗಿನೋ ಯೋಗಾನ್ ಸಿದ್ಧಾಃ ಸಿದ್ಧೇಶ್ವರಾಶ್ಚಯಂ ।**
**ತಂ ಧ್ಯಾಯೇತ್ಸತತಂ ಶುದ್ಧಂ ಭಗವಂತಂ ಸನಾತನಂ ॥5॥**

ಭಾವಾರ್ಥ - ಸಿದ್ಧರು, ಸಾಧ್ಯರು, ಯೋಗಿಗಳು, ಸಿದ್ಧೇಶ್ವರರು ಯೋಗ ಮುಖೇನ ಯಾರನ್ನು ಧ್ಯಾನಿಸುತ್ತಾರೋ ಅಂತಹಾ ನಿರ್ಮಲನೂ, ಪುರಾತನನೂ ಭಗವಂತನೂ ಆಗಿರುವ ಅವನನ್ನು ಯಾವಾಗಲೂ ಧ್ಯಾನಿಸುವೆನು.

**ಸೇವಂತೇ ಸತತಂ ಸಂತೋ ಬ್ರಹ್ಮೇಶಶೇಷ ಸಂಜ್ಞಕಾಃ ।**
**ಸೇವಂತೇ ನಿರ್ಗುಣಂ ಬ್ರಹ್ಮ ಭಗವಂತಂ ಸನಾತನಂ ॥6॥**

ಭಾವರ್ಥಃ- ನಿರ್ಗುಣನೂ, ಪ್ರಾಚೀನನೂ, ಭಗವಂತನೂ, ಆದ ಪರಬ್ರಹ್ಮವನ್ನು ಬ್ರಹ್ಮ, ಈಶ, ಆದಿಶೇಷರು ಸೇವಿಸುವರು.

**ನಿರ್ಲಿಪ್ತಂ ಚ ನಿರೀಹಂ ಚ ಪರಮಾತ್ಮಾ ನ ಮೀಶ್ವರಂ ।**
**ನಿತ್ಯಂ ಸತ್ಯಂ ಚ ಭಗವಂತಂ ಸನಾತನಂ ॥7॥**

ಭಾವಾರ್ಥ - ಅಲಿಪ್ತನೂ, ಪುರಾತನನೂ, ಯಾವುದೇ ಅಪೇಕ್ಷೆಯೂ ಇಲ್ಲದವನೂ ಪರಮಾತ್ಮನು. ಆತನು ಈಶ್ವರನು. ನಿತ್ಯನು. ಸತ್ಯನು. ಮಹಾತ್ಮನು. ಆತನು ಅನಾದಿ ಪುರುಷ ಭಗವಂತನು.

**ಯಂ ಸೃಷ್ಟೇರಾದಿ ಭೂತಂ ಚ ಸರ್ವಬೀಜಂ ಪರಾತ್ಪರಂ ।**
**ಯೋಗಿನಸ್ತಂ ಪ್ರಪದ್ಯಂತೇ ಭಗವಂತಂ ಸನಾತನಂ ॥8॥**

ಭಾವಾರ್ಥ - ಯಾವಾತನು ಉತ್ಪತ್ತಿಯ ಮೂಲಪುರುಷನೋ, ಅವನು ಸಮಸ್ತಕ್ಕೂ ಬೀಜರೂಪನು. ಮಹಾತ್ಮರಲ್ಲಿ ಮಹಾತ್ಮನಾದ ಆ ಅನಾದಿ ಪುರುಷನಾಗಿರುವ ಭಗವಂತನನ್ನು ಯೋಗಿಗಳು ಭಜಿಸುವರು.

**ಬೀಜಂ ನಾನಾವತಾರಾಣಾಂ ಸರ್ವಕಾರಣ ಕಾರಣಂ ।**
**ವೇದಾವೇದ್ಯಂ ವೇದಬೀಜಂ ವೇದಕಾರಣ ಕಾರಣಂ ॥9॥**

ಭಾವಾರ್ಥ - ವಿವಿಧಾವತಾರಗಳಿಗೆ ಮೂಲಕಾರಣನೂ, ಸಮಸ್ತಗಳಿಗೂ ನೆಪಮಾತ್ರನೂ, ವೇದಗಳಿಗೆ ಅರಿತುಕೊಳ್ಳಲು ಸಾಧ್ಯವಾಗದವನೂ, ವೇದಗಳ ಉತ್ಪತ್ತಿಗೆ ನಿಮಿತ್ತನೂ, ವೇದಗಳ ಉದ್ದೇಶಗಳಿಗೆ ಹೇತುವಾದವನೂ. . . . . .

**ಯೋಗಿನಸ್ತಂ ಪ್ರಪದ್ಯಂತೇ ಭಗವಂತಂ ಸನಾತನಂ ।**
**ಇತ್ಯೇವ ಮುಕ್ತ್ವಾ ಗಂಧರ್ವಃ ಪ್ರಪಾತ ಧರಣೀತಲೇ ॥10॥**

ಭಾವಾರ್ಥ - ಪುರಾತನನೂ, ಭಗವಂತನೂ ಆಗಿರುವ ಅವನನ್ನು ಯೋಗಿಗಳು ಸ್ತುತಿಸುವರು. ಇಂತೆಂದು ನುಡಿದು ಗಂಧರ್ವನು ಭೂಮಂಡಲದಲ್ಲಿ ಬಿದ್ದುಕೊಂಡನು.

**ನ ನಾಮ ದಂಡವದ್ಭೂಮೌ ದೇವದೇವಂ ಪರಾತ್ಪರಂ ।**
**ಇತಿ ತೇನ ಕೃತಂ ಸ್ತೋತ್ರಂ ಯಃ ಪಠೇತ್ ಪ್ರಯತಃ ಶುಚಿಃ ॥11॥**

ಭಾವಾರ್ಥ - ಭೂತಲದಲ್ಲಿ ಬಡಿಗೆಯಂತೆ ಬಿದ್ದುಕೊಂಡು ಪರಮಪರಾತ್ಪರನಾದ ದೇವರದೇವನನ್ನು ಸ್ತುತಿಸಿದನು. ಈ ರೀತಿಯಾಗಿ ಆತನಿಂದ ಮಾಡಲ್ಪಟ್ಟಂತಹಾ ಸ್ತುತಿಯನ್ನು ಪರಿಶುದ್ಧ ಮನಸ್ಸಿನಿಂದ ಯಾವಾತನು ಪಠಿಸುವನೋ ಆತನು. . . . . .

**ಇಹೈವ ಜೀವನ್ಮುಕ್ತಶ್ಚ ಪರಂ ಯಾತಿ ಪರಾಂಗತಿಂ ।**
**ಹರಿಭಕ್ತಿ ಹರೇರ್ದಾಸ್ಯಂ ಗೋಲೋಕೇ ಚ ನಿರಾಮಯಃ ।**
**ಪಾರ್ಷದ ಪ್ರವರತ್ವಂ ಚ ಲಭತೇ ನಾತ್ರ ಸಂಶಯಃ ॥12॥**

ಭಾವಾರ್ಥ - ಇಲ್ಲಿಯೇ ಜೀವನ್ಮುಕ್ತನಾಗುವನು. ಪರಲೋಕದಲ್ಲಿ ಉತ್ತಮವಾದ ಗತಿಯನ್ನು ಹೊಂದುವನು. ಶ್ರೀಹರಿಯಸೇವಾಭಾಗ್ಯ, ಗೋಲೋಕದಲ್ಲಿ ಆರೋಗ್ಯವಂತನಾಗಿ ಸಭ್ಯನಾಗಿ ಶ್ರೇಷ್ಠತ್ವವನ್ನು ಹೊಂದುವನು. ಇದರಲ್ಲಿ ಯಾವ ಸಂದೇಹವೂ ಇಲ್ಲ.

॥ ಇತಿ ಶ್ರೀಕೃಷ್ಣ ಸ್ತೋತ್ರಂ ಸಂಪೂರ್ಣಂ ॥

## 9.4 ವಿಪ್ರಪತ್ನೀಕೃತ ಶ್ರೀ ಕೃಷ್ಣ ಸ್ತೋತ್ರಂ

**ವಿಪ್ರಪತ್ನೀ ಊಚುಃ** ಬ್ರಾಹ್ಮಣ ಸತಿಯರು ಹೇಳಿದರುಃ-

**ತ್ವಂ ಬ್ರಹ್ಮ ಪರಮಂ ಧಾಮ ನಿರೀಹೋನಿರಹಂಕೃತಿಃ ।**
**ನಿರ್ಗುಣಾಶ್ಚ ನಿರಾಕಾರಃ ಸಾಕಾರಃ ಸಗುಣಃ ಸ್ವಯಂ ॥1॥**

ಭಾವಾರ್ಥ - ಹೇ ಭಗವಂತನೇ, ನೀನು ಸ್ವತಃ ಪರಬ್ರಹ್ಮನು. ಉತ್ಕೃಷ್ಟ ಶರೀರವನ್ನು ಹೊಂದಿರುವಾತನು. ಬಯಕೆಗಳಿಲ್ಲದವನು. ಅಹಂಕಾರವಿರಹಿತನು. ಗುಣರಹಿತನು. ಆಕಾರವಿಲ್ಲದವನು. ಹಾಗೆಯೇ ಗುಣ ಸಹಿತನೂ, ಆಕಾರಸ್ವರೂಪನೂ ಆಗಿರುವೆ.

**ಸಾಕ್ಷಿರೂಪಶ್ಚ ನಿರ್ಲಿಪ್ತಃ ಪರಮಾತ್ಮಾ ನಿರಾಕೃತಿಃ ।**
**ಪ್ರಕೃತಿಃಪುರುಷಸ್ತ್ವಂ ಚ ಕಾರಣಂ ಚ ತಯೋಃ ಪರಂ ॥2॥**

ಭಾವಾರ್ಥ - ನೀನು ಎಲ್ಲದಕ್ಕೂ ಪ್ರಾತ್ಯಕ್ಷನು. ನೀನು ಅಲಿಪ್ತನು. ಹಾಗೆಯೇ ಆಕಾರವಿಲ್ಲದ ಪರಮಾತ್ಮನಾಗಿರುವೆ. ನೀನು ಸ್ತ್ರೀ ಮತ್ತು ಪುರುಷ ರೂಪಿಯು. ಅಂತೆಯೇ ಅವೆರಡೂ ಲಿಂಗಗಳ ಉತ್ಪತ್ತಿಗೆ ಕಾರಣನೂ ಆಗಿರುವವನು.

**ಸೃಷ್ಟಿ ಸ್ಥಿತ್ಯಂಚ ವಿಷಯೇ ಚ ದವಾಸ್ತ್ರಯಃ ಸ್ಮೃತಾಃ ।**
**ತೇ ತ್ವದಂಸಾಃ ಸರ್ವಬೀಜಾ ಬ್ರಹ್ಮ ವಿಷ್ಣು ಮಹೇಶ್ವರಾಃ ॥3॥**

ಭಾವಾರ್ಥ - ಉತ್ಪತ್ತಿ, ಪರಿಪಾಲನೆ ಮತ್ತು ನಾಶಗಳ ವಿಚಾರಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ದೇವರ್ಕಳನ್ನು ನಿಯಮಿಸಲ್ಪಟ್ಟಿರುವದೆಂದು ತಿಳಿಯಲ್ಪಟ್ಟಿದೆ. ಅವರು ನಿನ್ನದೇ ಸಮಸ್ತ ಬೀಜಾಂಶರಾಗಿರುವರು.

**ಯಸ್ಯ ರೋಮ್ಣಾಂ ಚ ವಿವರೇ ಚಾಖಿಲಂ ವಿಶ್ವಮೀಶ್ವರ ।**
**ಮಹಾವೀರಾಣ್ಮಹಾ ವಿಷ್ಣುಸ್ತ್ವಂ ತಸ್ಯ ಜನಕೋ ವಿಭೊ ॥4॥**

ಭಾವಾರ್ಥ - ಹೇ!ಜಗದೀಶ್ವರನೇ, ಯಾರ ರೋಮರಂಧ್ರಗಳಲ್ಲಿ ಸಮಸ್ತ ಬ್ರಹ್ಮಾಂಡವೇ ನೆಲೆಯಾಗಿಹುದೋ ಅವನು ಅಸಾಧಾರಣನೂ ಶ್ರೇಷ್ಟನೂ ಆದ ಮಹಾವಿಷ್ಣುವೇ ಆಗಿರುವನು. ಒಡೆಯನೇ!ಆತನಿಗೆ ಜನಕನಿರುವೆ.

**ತೇಜಸ್ತ್ವಂ ಚಾಪಿ ತೇಜಸ್ವೀ ಜ್ಞಾನಂ ಜ್ಞಾನೀ ಚ ತತ್ಪರಃ ।**
**ವೇದೇಽನಿರ್ವಚನೀಯಸ್ತ್ವಂ ಕಸ್ತ್ವಾಂ ಸ್ತೋತುಮಹೇಶ್ವರಃ ॥5॥**

ಭಾವಾರ್ಥ - ನೀನು ಪೂಜ್ಯನು, ಶಕ್ತಿವಂತನು. ತಿಳುವಳಿಕೆಯೂ, ವಿದ್ವಾಂಸನೂ ನೀನೇ ಆಗಿರುವೆ. ಹಾಗೆಯೇ ಇವೆಲ್ಲವುಗಳ ಪರಿಧಿಯಿಂದ ಹೊರಗಿರುವೆ. ವೇದಗಳಲ್ಲಿ ನಿನ್ನನ್ನು ವರ್ಣನೆಗೆ ಅಸಾಧ್ಯನಾದವನು ಎಂದು ಹೇಳಲಾಗಿದೆ. ಹೀಗಿರುವಾಗ ನಿನ್ನನ್ನು ಸ್ತುತಿಸಲು ಅದಾರಿಂದ ಸಾಧ್ಯ?

**ಮಹದಾದಿ ಸೃಷ್ಟಿ ಸೂತ್ರಂ ಪಂಚತನ್ಮಾತ್ರಮೇವ ಚ ।**
**ಬೀಜಂ ತ್ವಂ ಸರ್ವ ಶಕ್ತೀನಾಂ ಸರ್ವಶಕ್ತಿ ಸ್ವರೂಪಕಃ ॥6॥**

ಭಾವಾರ್ಥ - ಪ್ರಪಂಚದ ಸೃಷ್ಟಿಗೆ ಕಾರಣೀಭೂತವಾಗಿರುವ ಮಹದಾದಿ ಮತ್ತು ಪಂಚ ತನ್ಮಾತ್ರಗಳು ಯಾವುವಿವೆಯೋ ಅವು ನಿನ್ನಿಂದ ಪ್ರತ್ಯೇಕವಾಗಿಲ್ಲ. ನೀನು ಸಮಸ್ತ ಶಕ್ತಿಗಳಿಗೆ ಬೀಜರೂಪಿಯೂ ಸರ್ವ ಶಕ್ತಿಗಳ ಸ್ವರೂಪನೂ ಆಗಿರುವೆ.

**ಸರ್ವ ಶಕ್ತೀಶ್ವರಃ ಸರ್ವಃ ಸರ್ವಶಕ್ತ್ಯಾಶ್ರಯಃ ಸದಾ ।**
**ತ್ವಮನೀಹಃ ಸ್ವಯಂ ಜ್ಯೋತಿಃ ಸರ್ವಾನಂದಃ ಸನಾತನಃ ॥7॥**

ಭಾವಾರ್ಥ - ಸಮಸ್ತ ಶಕ್ತಿಗಳಿಗೆ ನೀನು ಒಡೆಯನು. ನೀನು ಸರ್ವಸ್ವರೂಪನು. ಅಂತೆಯೇ ಸಮಸ್ತ ಶಕ್ತಿಗಳಿಗೆ ಆಶ್ರಯದಾತನೂ ಆಗಿರುವೆ. ಹಾಗೆಯೇ ನೀನು ಸ್ವಯಂಪ್ರಕಾಶಿತನಾಗಿ ಸರ್ವಾನಂದದಾಯಕನಾಗಿಯೂ ಇರುವೆ. ಮತ್ತು ಆದಿ ಪುರುಷನೂ ನೀನಾಗಿರುವೆ.

**ಅಹೋ ಆಕಾರ ಹೀನಸ್ತ್ವಂ ಸರ್ವ ವಿಗ್ರಹವಾನಪಿ ।**
**ಸರ್ವೇಂದ್ರಿಯಾಣಾಂ ವಿಷಯಂ ಜಾನಾಸಿ ನೇಂದ್ರಿಯೀ ಭವಾನ್ ॥8॥**

ಭಾವಾರ್ಥ - ಸ್ವಾಮಿಯೇ! ನೀನು ಆಕಾರರಹಿತನಾದರೂ ಸಮಸ್ತ ವಿಗ್ರಹಗಳ ಸ್ವರೂಪವಾಗಿರುವೆ. ಎಲ್ಲಾ ಆಕಾರಗಳೂ ನಿನ್ನವೇ ಆಗಿವೆ. ನೀನು ಸಮಸ್ತ ಇಂದ್ರಿಯಂಗಳ ವಿಚಾರವಾಗಿ ತಿಳಿದಿರುವವನು. ಆದಾಗ್ಯೂ ನೀನು ಇಂದ್ರಿಯಗಳಿಲ್ಲದವನಂತಿರುವೆ.

**ಸರಸ್ವತೀ ಜಡೀಭೂತಾ ಯತ್ ಸ್ತೋತ್ರೇಯನ್ನಿರೂಪಣೆ ।**
**ಜಡೀ ಭೂತೋ ಮಹೇಶಶ್ಚ ಶೇಷೋ ಧರ್ಮೋವಿಧಿಃ ಸ್ವಯಂ ॥9॥**

ಭಾವಾರ್ಥ - ನಿನ್ನನ್ನು ಸ್ತೋತ್ರಮಾಡುವುದರಲ್ಲಿ, ನಿನ್ನ ತತ್ವವನ್ನು ವಿವರಿಸಿ ಹೇಳುವುದರಲ್ಲಿ ಸರಸ್ವತಿಯು ಕೂಡಾ ಮೂಢಳಾಗಿಹಳು. ಮಹೇಶ್ವರ, ಆದಿಶೇಷ, ಯಮಧರ್ಮ ಹಾಗೂ ಬ್ರಹ್ಮನು ಕೂಡಾ ನಿರ್ಜೀವಸಮಾನರಾಗಿಹರು.

**ಪಾರ್ವತೀಕಮಲಾರಾಧಾ ಸಾವಿತ್ರೀ ವೇದಸೂರಪಿ ।**
**ವೇದಶ್ಚ ಜಡತಾಂ ಯಾತಿ ಕೇವಾ ಶಕ್ತಾ ವಿಪಶ್ಚಿತಃ ॥10॥**

ಭಾವಾರ್ಥ - ಪಾರ್ವತಿ, ಲಕ್ಷ್ಮಿ, ರಾಧಾ, ಮತ್ತು ವೇದಮಾತಾ ಸಾವಿತ್ರಿ- ಇವರೆಲ್ಲರೂ ಚೈತನ್ಯರಹಿತರಾಗುವರು. ಹೀಗಿರುವಾಗ ಮತ್ತಾವ ವಿದ್ವಾಂಸರು ನಿನ್ನನ್ನು ಸ್ತೋತ್ರಮಾಡಲು ಸಮರ್ಥರಾದಾರು?

**ವಯಂ ಕಿಂ ಸ್ತವನಂ ಕುರ್ಮಃ ಸ್ತ್ರೀಯಃ ಪ್ರಾಣೇಶ್ವರೇಶ್ವರ ।**
**ಪ್ರಸನ್ನೋಭವನೋದೇವ ದೀನ ಬಂಧೋಕೃಪಾಂ ಕುರು ॥11॥**

ಭಾವಾರ್ಥ - ಹೇ, ಪ್ರಾಣೇಶ್ವರೇಶ್ವರನೇ! ಸ್ತ್ರೀಯರಾದ ನಾವುಗಳಾದರೂ ನಿನ್ನಸ್ತೋತ್ರವನ್ನೆಂತು ಮಾಡಲು ಸಾಧ್ಯ? ಬಡವರ ಆಪ್ತನೇ, ನಮ್ಮ ಮೇಲೆ ಕರುಣೆದೋರು. ಪ್ರಸನ್ನನಾಗು.

**ಇತಿ ಪೇತುಶ್ಚ ತಾ ವಿಪ್ರಪತ್ನ್ಯಸ್ತಚ್ಚರಣಾಂಬುಜೆ ।**
**ಅಭಯಂ ಪ್ರದದೌ ತಾಭ್ಯಃ ಪ್ರಸನ್ನವದನೇಕ್ಷಣಃ ॥12॥**

ಭಾವಾರ್ಥ - ಈ ರೀತಿಯಾಗಿ ಸ್ತೋತ್ರಮಾಡುತ್ತಾ ವಿಪ್ರಪತ್ನಿಯರೆಲ್ಲರೂ ಆತನ ಚರಣಾರವಿಂದಗಳಿಗೆರಗಿದರು. ಆಗ ಶ್ರೀಕೃಷ್ಣನು ಪ್ರಸನ್ನವದನನಾಗಿ ಕರುಣಾ ದೃಷ್ಟಿಯುಳ್ಳವನಾಗಿ ಅವರೆಲ್ಲರಿಗೂ ಅಭಯಪ್ರದಾನ ಮಾಡಿದನು.

**ವಿಪ್ರಪತ್ನೀ ಕೃತಂ ಸ್ತೋತ್ರಂ ಪೂಜಾಕಾಲೇ ಚ ಯಃ ಪಠೇತ್ ।**
**ಸ ಗತಿಂ ವಿಪ್ರಪತ್ನೀನಾಂ ಲಭತೇನಾತ್ರ ಸಂಶಯಃ ॥13॥**

ಭಾವಾರ್ಥ - ಬ್ರಾಹ್ಮಣಸತಿಯರಿಂದ ಮಾಡಲಾಗಿರುವ ಈಸ್ತೋತ್ರಗಳನ್ನು ಪೂಜಾಕಾಲದಲ್ಲಿ ಯಾವಾತನು ಪಠಿಸುವನೋ ಆತನು ಆ ವಿಪ್ರಪತ್ನಿಯರಿಗೆ ದೊರಕಿದ ಸ್ಥಿತಿಯೇ ದೊರಕುವುದು. ಇದರಲ್ಲಿ ಯಾವುದೇ ಸಂದೇಹವಿಲ್ಲ.

॥ ಇತಿ ವಿಪ್ರಪತ್ನೀಕೃತ ಶ್ರೀಕೃಷ್ಣ ಸ್ತೋತ್ರಂ ಸಂಪೂರ್ಣಂ ॥

## 9.5 ಶ್ರೀ ಕೃಷ್ಣ ಕರ್ಣಾಮೃತಂ

**ಹೇ ದೇವ ಹೇ ದಯಿತ ಹೇ ಜಗದೇಕ ಬಂಧೋ ಹೇ ಕೃಷ್ಣ ಹೇ ಚಪಲ ಹೇ ಕರುಣೈಕ ಸಿಂಧೋ । ಹೇ ನಾಥ ಹೇ ರಮಣ ಹೇ ನಯನಾಭಿರಾಮ ಹಾ ಹಾ ಕದಾ ನು ಭವಿತಾಸಿ ಪದಂ ದೃಶೋರ್ಮೇ ॥1॥**

ಭಾವಾರ್ಥ - ಹೇ!ಪರಮೇಶನೇ, ಹೇ!ಆತ್ಮೀಯನೇ, ಬ್ರಹ್ಮಾಂಡದ ಏಕಮಾತ್ರ ನೆಂಟನೇ, ಹೇ!ಕೃಷ್ಣಾ, ಹೇ!ಚಂಚಲನೇ, ಹೇ!ದಯಾವಾರಿಧಿಯೇ, ಹೇ!ದೊರೆಯೇ, ಹೇ!ಸ್ವಾಮಿಯೇ, ಹೇ!ನಯನಮನೋಹರನೇ, ಹಾ!ಹಾ!ನೀನೆಂದುನನ್ನ ಕಣ್ಣುಗಳಿಗೆ ಕಾಣಲು ಸಿಗುವೆ?

**ತತ್ಕೈಶೋರಂ ತಚ್ಚ ವಕ್ತ್ರಾರವಿಂದಂ ತತ್ಕಾರುಣ್ಯಂ ತೇ ಲೀಲಾಕಟಾಕ್ಷಾಃ ।**
**ತತ್ ಸೌಂದರ್ಯಂ ಸಾ ಚ ಮಂದಸ್ಮಿತಶ್ರೀಃ ಸತ್ಯಂ ಸತ್ಯಂ ದುರ್ಲಭಂ ದೈವತೇಷು ॥2॥**

ಭಾವಾರ್ಥ - ನಿನ್ನ ಆ ಬಾಲ್ಯ, ಆ ನಿನ್ನ ಚರಣಾರವಿಂದಗಳು, ನಿನ್ನ ಆ ದಯೆ, ನಿನ್ನ ಚೇಷ್ಟಾಭರಿತ ನಯನಗಳು, ಅಪ್ರತಿಮವಾಗಿರುವ ನಿನ್ನ ಸೌಂದರ್ಯ, ನಿನ್ನ ಆ ಮುಗುಳ್ನಗೆಯ ಸಂಪತ್ತು ಇವುಗಳು ಬೇರಾವ ದೇವದೇವತೆಗಳಲ್ಲಿಯೂ ಕಾಣಲು ಅಸಾಧ್ಯ. ಇದು ಸತ್ಯ.

**ಪೇಮದಂ ಚ ಮೇ ಕಾಮದಂ ಚ ಮೇ ವೇದನಂ ಚ ಮೇ ವೈಭವಂ ಚ ಮೇ ।**
**ಜೀವನಂ ಚ ಮೇ ಜೀವಿತಂ ಚ ಮೇ ದೈವತಂ ಚ ಮೇ ದೇವ ನಾಪರಂ ॥3॥**

ಭಾವಾರ್ಥ - ಹೇ!ಭಗವಂತನೇ, ನೀನೇ ನನ್ನ ಭಕ್ತಿದಾತ ಮತ್ತು ಸಮಸ್ತ ಮನೋ ಕಾಮನೆಗಳನ್ನು ದಯಪಾಲಿಸುವಾತನು. ನೀನೇ ನನ್ನರಿವು ಮತ್ತು ಘನತೆ. ನೀನು ನನ್ನ ಬಾಳು, ಬದುಕು ಮತ್ತು ದೇವರು. ನನಗೆ ಅನ್ಯ ಯಾವುದೂ ಇಲ್ಲ.

**ಕರಾರವಿಂದೇನ ಪದಾರವಿಂದಂ ಮುಖಾರವಿಂದೇನ ವಿನಿವೇಷಯಂತಂ ।**
**ವಟಸ್ಯ ಪತ್ರಸ್ಯ ಪುಟೇ ಶಯಾನಂ ಬಾಲಂ ಮುಕುಂದಂ ಮನಸಾ ಸ್ಮರಾಮಿ ॥4॥**

ಭಾವಾರ್ಥ - ತಾವರೆಯಂತಿರುವ ಕೈಗಳಿಂದ ತಾವರೆಯಂತಿರುವ ಪಾದಗಳನ್ನು ತಾವರೆಯಂತಿರುವ ಮೊಗದಲ್ಲಿರಿಸಿಕೊಂಡು ಆಲದ ಎಲೆಯ ಮೇಲೆ ಪವಡಿಸಿರುವ ಬಾಲ ಮುಕುಂದನನ್ನು ಮನದಲ್ಲಿ ಸ್ಮರಿಸುತ್ತೇನೆ.

**ತ್ವಯಿ ಪ್ರಸನ್ನೇ ಮಮ ಕಿಂ ಗುಣೇನ ತ್ವಯ್ಯಪ್ರಸನ್ನೇ ಮಮ ಕಿಂ ಗುಣೇನ ।**
**ರಕ್ತೇ ವಿರಕ್ತೇ ವರೇ ವಧೂನಾಂ ನಿರರ್ಥಕಃ ಕುಂಕುಮ ಪತ್ರ ಭಂಗಃ ॥5॥**

ಭಾವಾರ್ಥ - ಹೇ!ಸ್ವಾಮಿಯೇ, ನೀನು ನನ್ನ ಮೇಲೆ ಹರ್ಷಿತನಾದರೆ ಅದರಿಂದ ನನಗೇನು ಲಾಭ? ನೀನು ನನ್ನ ಮೇಲೆ ಹರ್ಷಿತನಾಗದಿದ್ದರೆ ಅದರಿಂದ ನನಗೇನು ಲಾಭ? ವರನು ವಧುವಿನಲ್ಲಿ ಅನುರಾಗವುಳ್ಳವನಾದರೂ, ಅನುರಾಗರಹಿತನಾದರೂ ಓಲೆಯಾಕಾರದ ಕುಂಕುಮಾಲಂಕಾರವು ವ್ಯರ್ಥವಾಗುವುದು.

**ಸಂಧ್ಯಾವಂದನ ಭದ್ರಮಸ್ತು ಭವತೇ ಭೋಃ ಸ್ನಾನ ತುಭ್ಯಂ ನಮಃ ಭೋ ದೇವಾಃ ಪಿತರಶ್ಚ ತರ್ಪಣವಿಧೌ ನಾಹಂ ಕ್ಷಮಃ ಕ್ಷಮ್ಯತಾಂ । ಯತ್ರ ಕ್ವಾಪಿ ನಿಷೀಧ್ಯ ಯಾದವಕುಲೋತ್ತಂಸಸ್ಯ ಕಂಸದ್ವಿಷಃ ಸ್ಮಾರಂ ಸ್ಮಾರಮಘಂ ಹರಾಮಿ ತದಲಂ ಮನ್ಯೇ ಕಿಮನ್ಯೇನ ಮೇ ॥6॥**

ಭಾವಾರ್ಥ - ಹೇ! ಸಂಧ್ಯಾಕಾಲಗಳಲ್ಲಿ ನಮಿಸಲ್ಪಡುವಾತನೇ ನಿನಗೆ ಒಳಿತಾಗಲಿ. ಹೇ! ಪವಿತ್ರನೇ ನಿನಗಿದೋ ನಮನಗಳು. ಎಲೈ, ದೇವರ್ಕಳುಗಳಿರಾ, ಪಾಲಕರುಗಳಿರಾ, ನಾನು ನಿಮ್ಮನ್ನು ತರ್ಪಣ ಕೊಡುವುದರ ಮೂಲಕ ಸಮಾಧಾನಗೊಳಿಸಲಾರೆನು. ಎಲ್ಲೋ ಒಂದೆಡೆ ನಾನು ಕುಳಿತುಕೊಂಡು ಯಾದವವಂಶದ ಶ್ರೇಷ್ಟನಾದ ಹಾಗೆಯೇ ಕಂಸಾರಿಯೂ ಆಗಿರುವ ಶ್ರೀಕೃಷ್ಣನನ್ನು ಪುನಃಪುನಃ ಸ್ತುತಿಸುತ್ತಾ ನನ್ನ ಅನೀತಿಗಳನ್ನು ನಾಶಮಾಡಿಕೊಳ್ಳುತ್ತೇನೆ. ನನಗಿದುವೇ ಸಾಕು. ಅನ್ಯತ್ರ ಯಾವುದರಿಂದಲೂ ನನಗೆ ಲಾಭವಿಲ್ಲ.

**ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಃಸ್ಥಲೇ ಕೌಸ್ತುಭಂ ನಾಸಾಗ್ರೇ ನವಮೌಕ್ತಿಕಂ ಕರತಲೇ ವೇಣುಂ ಕರೇ ಕಂಕಣಂ । ಸರ್ವಾಂಗೇ ಹರಿಚಂದನಂ ಚ ಕಲಯನ್ ಕಂಠೇ ಚ ಮುಕ್ತಾವಲಿಂ ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೋಪಾಲ ಚೂಡಾಮಣಿಃ ॥7॥**

ಭಾವಾರ್ಥ - ನೊಸಲಿನಲ್ಲಿ ಕಸ್ತೂರಿಯ ತಿಲಕದಿಂದ ಶೋಭಿಸುವಾತನೂ, ಎದೆಯಮೇಲೆ ಕೌಸ್ತುಭಮಣಿಗಳ ಹಾರವನ್ನು ಧರಿಸಿಕೊಂಡಾತನೂ, ಮೂಗಿನ ತುದಿಯಲ್ಲಿ ಮುತ್ತಿನ ದರ್ಪಣವನ್ನು ಧರಿಸಿರುವಾತನೂ, ಅಂಗೈಯಲ್ಲಿ ಕೊಳಲನ್ನೂ, ಹಸ್ತಗಳಲ್ಲಿ ಬಳೆಗಳನ್ನೂ ಧರಿಸಿಕೊಂಡು ಶರೀರದ ಅಂಗಾಂಗಗಳಿಗೆಲ್ಲಾ ಶ್ರೀಗಂಧವನ್ನು ಪೂಸಿಕೊಂಡು, ಕೊರಳಿನಲ್ಲಿ ಮುತ್ತಿನ ಹಾರಗಳನ್ನು ಧರಿಸಿ ಬೆಳಗುತ್ತಾ, ಗೋಪಿಕಾ ಕನ್ನಿಕೆಯರಿಂದ ಸುತ್ತುವರಿಯಲ್ಪಟ್ಟ ಗೋಪಾಲಕರಲ್ಲಿ ಶ್ರೇಷ್ಟನಾಗಿರುವ ಆ ಶ್ರೀಕೃಷ್ಣನು ಸರ್ವೋತ್ತಮನಾಗಿರುವನು.

**ಲೋಕಾನುನ್ಮದಯನ್ ಶ್ರುತೀರ್ಮುಖರಯನ್ ಕ್ಷೋಣೀರುಹಾನ್ ಹರ್ಷಯನ್**
**ಶೈಲಾನ್ವಿದ್ರವಯನ್ ಮೃಗಾನ್ವಿವಶಯನ್ ಗೋಬೃಂದ ಮಾನಂದಯನ್ ।**
**ಗೋಪಾನ್ಸಂಭ್ರಮಯನ್ ಮುನೀನ್ಮುಕುಲಯನ್ ಸಪ್ತಸ್ವರಾನ್ ಜೃಂಭಯನ್**
**ಓಂಕಾರಾರ್ಥಮುದೀರಯನ್ ವಿಜಯತೇ ವಂಶೀನಿನಾದಶ್ಶಿಶೋಃ ॥8॥**

ಭಾವಾರ್ಥ - ಬ್ರಹ್ಮಾಂಡಕ್ಕೆಲ್ಲಾ ಮುದವನ್ನು ಕೊಡುವಾತ್ತಾ, ವೇದಗಳಿಗೆ ಪ್ರತಿಧ್ವನಿಯನ್ನುಮಾಡುತ್ತಾ, ಮರಗಿಡಗಳಿಗೆ ಆಹ್ಲಾದವನ್ನುಂಟುಮಾಡುತ್ತಾ, ಗಿರಿಕಂದರಗಳನ್ನು ಕರಗಿಸುತ್ತಾ, ಹುಲ್ಲೆಗಳಿಗೆ ತಮ್ಮ ದೇಹವನ್ನು ಮರೆಯುವಂತೆ ಮಾಡುತ್ತಾ, ಗೋಸಮೂಹಕ್ಕೆ ಸಂತಸವನ್ನುಂಟುಮಾಡುತ್ತಾ, ಪಶುಪಾಲಕರಿಗೆ ಭ್ರಾಂತಿಯನ್ನು ಹುಟ್ಟಿಸುತ್ತಾ, ಯೋಗಿಮುನಿವರ್ಯರು ಧ್ಯಾನನಿರತರಾಗಿ ತಮ್ಮ ನಯನಗಳನ್ನು ಮುಚ್ಚುವಂತೆ ಮಾಡುತ್ತಾ, ಸಪ್ತಸ್ವರಗಳನ್ನು ಆಲಾಪಿಸುತ್ತಾ, ಓಂಕಾರದ ಅರ್ಥದ ಅರಿವು ಮೂಡಿಸುತ್ತಾ ಇರುವ ಆ ಬಾಲ ಶ್ರೀಕೃಷ್ಣನ ಕೊಳಲಿನ ಸ್ವರವು ಸರ್ವೋತ್ಕೃಷ್ಟವಾಗಿದೆ.

**ಫುಲ್ಲೇಂದೀವರಕಾಂತಿಮಿಂದುವದನಂ ಬರ್ಹಾವತಂಸಪ್ರಿಯಂ**
**ಶ್ರೀವತ್ಸಾಂಕಮುದಾರಕೌಸ್ತುಭಧರಂ ಪೀತಾಂಬರಂ ಸುಂದರಂ ।**
**ಗೋಪೀನಾಂ ನಯನೋತ್ಪಲಾರ್ಚಿತತನುಂ ಗೋಗೋಪಸಂಘಾವೃತಂ ಗೋವಿಂದಂ**
**ಕಲವೇಣುವಾದನಿರತಂ ದಿವ್ಯಾಂಗಭೂಷಂ ಭಜೇ ॥9॥**

ಭಾವಾರ್ಥ - ಬಿರಿದ ತಾವರೆಯಂತೆ ನೀಲಕಾಂತಿಯನ್ನು ಹೊಂದಿರುವಾತನೂ, ಶಶಿವದನನೂ, ತನಗತಿ ಪ್ರಿಯವೆನಿಸಿದ ನವಿಲುಗರಿಯನ್ನು ಧರಿಸಿಕೊಂಡವನೂ, ಶ್ರೀವತ್ಸ ಲಾಂಛನನೂ, ಕೌಸ್ತುಭಹಾರವನ್ನು ಧರಿಸಿರುವಾತನೂ, ಹಳದಿವರ್ಣದ ರೇಶ್ಮೆ ವಸ್ತ್ರವನ್ನು ಉಟ್ಟುಕೊಂಡು ಮನ ಮೋಹಕನಾಗಿ ಕಾಣಿಸುವಾತನೂ, ಗೋಪಿಕಾಸ್ತ್ರೀಯರುಗಳ ತಾವರೆಯನ್ನು ಹೋಲುವ ಕಣ್ಣುಗಳಿಂದ ಆರಾಧಿಸಲ್ಪಡುವ ಶರೀರವುಳ್ಳಾತನೂ, ಗೋಪಾಲಕರಿಂದ ಹಾಗೂ ಗೋವುಗಳಿಂದ ಸುತ್ತುವರಿಯಲ್ಪಟ್ಟವನೂ, ತನ್ನ ಕೋಳಲನ್ನು ನುಡಿಸುವದರಲ್ಲಿಯೇ ತಲ್ಲೀನನಾದವನೂ, ಶ್ರೇಷ್ಠವಾಗಿರುವ ರತ್ನಾಭರಣಗಳಿಂದ ಅಲಂಕೃತನಾದವನೂ ಆದ ಗೋವಿಂದನೆಂಬ ಹೆಸರಿನ ಶ್ರೀಕೃಷ್ಣನನ್ನು ನಾನು ಸ್ತುತಿಸುತ್ತಿರುವೆನು.

**ಸಾಯಂಕಾಲೇ ವನಾಂತೇ ಕುಸುಮಿತಸಮಯೇ ಸೈಕತೇ ಚಂದ್ರಿಕಾಯಾಂ**

**ತ್ರೈಲೋಕ್ಯಾಕರ್ಷಣಾಂಗಂ ಸುರನರಗಣಿಕಾಮೋಹನಾಪಾಂಗಮೂರ್ತಿಂ ।**

**ಸೇವ್ಯಂ ಶೃಂಗಾರಭಾವೈರ್ನವರಸಭರಿತೈರ್ಗೋಪಕನ್ಯಾ ಸಹಸ್ರೈಃ ವಂದೇಽಹಂ**

**ರಾಸಕೇಲೀರತಮತಿಸುಭಗಂ ವಶ್ಯಗೋಪಾಲಕೃಷ್ಣಂ ॥10॥**

ಭಾವಾರ್ಥ - ಸಾಯಂಕಾಲದ ಸಮಯ. ಬನದ ಅಂತ್ಯ ಸ್ಥಳ. ಮನಮೋಹಕ ಸುವಾಸಿತ ಪುಷ್ಪಗಳು ಅರಳುವ ಹೊತ್ತು. ಯಮುನಾನದಿಯ ಮರಳಿನರಾಶಿಯ ಮೇಲೆ ಚಂದ್ರನ ಬೆಳಕು ತಾಗಿ ಬೆಳಗುತ್ತಲಿದೆ. ಇಂತಹಾ ಉಲ್ಲಾಸ ಭರಿತ ಹೊತ್ತಿನಲ್ಲಿ ಮೂರು ಲೋಕಂಗಳನ್ನೂ ಆಕರ್ಷಿಸುವ ದೇಹಕಾಂತಿಯುಳ್ಳ ಭೂಲೋಕ ಸುರಲೋಕಗಳ ದೇವದಾಸಿಯರನ್ನು ಪರವಶತೆಗೆ ಒಳಪಡಿಸುವಂತಹಾ ಆಕಾರವುಳ್ಳ, ಪ್ರೇಮಭರಿತ ಹಾವಭಾವಾದಿ ನವರಸಭಾವಗಳಿಂದ ಕೂಡಿ ಸಹಸ್ರ ಸಂಖ್ಯೆಯ ಗೋಪಿಕಾ ಕನ್ನಿಕೆಯರಿಂದ ಸೇವಿಸಲ್ಪಡುತ್ತಾ, ರಾಸಕ್ರೀಡೆಯಲ್ಲಿ ತೊಡಗಿರುವ, ಅತ್ಯಂತ ಮನೋಹರನಾಗಿ ಕಂಗೊಳಿಸುತ್ತಲಿರುವ ಗೋಪಾಲಕೃಷ್ಣನಿಗಾನು ವಂದಿಸುತ್ತಲಿರುವೆ.

**ಯಾ ಪ್ರೀತಿರ್ವಿದುರಾರ್ಪಿತೇ ಮುರರಿಪೋ ಕುಂತ್ಯರ್ಪಿತೇ ಯಾದೃಶೀ ಯಾ**

**ಗೋವರ್ಧನಮೂರ್ಧ್ನಿ ಯಾ ಚ ಪೃಥುಕೇ ಸ್ತನ್ಯೇ ಯಶೋದಾರ್ಪಿತೇ ।**

**ಭಾರದ್ವಾಜ ಸಮರ್ಪಿತೇ ಶಬರಿಕಾದತ್ತೇಽಧರೇ ಯೋಷಿತಾಂ ಯಾ**

**ಪ್ರೀತಿರ್ಮುನಿಪತ್ನಿಭಕ್ತಿರಚಿತೇಽಪ್ಯತ್ರಾಪಿತಾಂ ತಾಂ ಕುರು ॥11॥**

ಭಾವಾರ್ಥ - ಎಲೆ ಮುರಾರಿಯೇ!ಯಾವ ಪ್ರೀತಿಯನ್ನು ವಿದುರನಿಗೆ ಅರ್ಪಿಸಿದೆಯೋ, ಯಾವ ದಯಾಪೂರಿತ ನೋಟವು ಕುಂತಿಗರ್ಪಿತವಾಯಿತೋ, ಗೋವರ್ಧನ ಗಿರಿಯನ್ನು ಎತ್ತಿ ಹಿಡಿವಾಗ ನಿನ್ನಲ್ಲಿ ಯಾವ ಕರುಣಾದೃಷ್ಟಿಯಿತ್ತೋ, ಕುಚೇಲನು ನಿನಗರ್ಪಿಸಿದ ಅವಲಕ್ಕಿಯಲ್ಲಿ ಯಾವ ಸ್ನೇಹ ಭಾವವು ತುಂಬಿತ್ತೊ, ಯಶೋದೆಯು ನಿನಗರ್ಪಿಸಿದ ಸ್ತನ್ಯಪಾನದಲ್ಲಿ ಯಾವ ವಾತ್ಸಲ್ಯವು ತುಳುಕುತ್ತಿತ್ತೋ, ಭಾರದ್ವಾಜ ಮುನಿಯು ನಿನಗರ್ಪಿಸಿದುದರಲ್ಲಿ, ಶಬರಿಯು ನೀಡಿರುವುದರಲ್ಲಿ, ಗೋಕುಲದ ಸುಂದರಾಂಗಿಯರ ತುಟಿಗಳಲ್ಲಿ ಮುನಿಪತ್ನಿಯರು ನಿನಗರ್ಪಿಸಿದುದರಲ್ಲಿ, ಯಾವ ಅನುರಾಗವನ್ನು ತೋರಿಸಿರುವೆಯೋ ಅದೇ ಅನುರಾಗಪೂರ್ಣ ದಯೆಯನ್ನು ಇಲ್ಲಿ ಕೂಡಾ ತೋರಿಸು.

॥ ಇತಿ ಶ್ರೀಕೃಷ್ಣಕರ್ಣಾಮೃತಂ ಸಂಪೂರ್ಣಂ ॥

----- ****** -----

# 10 ಶ್ರೀ ಸುಬ್ರಹ್ಮಣ್ಯ ಸ್ತೋತ್ರಗಳು.

## 10.1 ಶ್ರೀ ಸುಬ್ರಹ್ಮಣ್ಯ ಧ್ಯಾನ ಶ್ಲೋಕ

**ಶರಣ್ಯಂ ಸರ್ವ ಲೋಕಾನಾಂ ಅಗ್ರಗಣ್ಯಂ ದಿವೌಕಸಾಂ ।**

**ವರೇಣ್ಯಂ ದೇವಸೇನಾಯಾಃ ಸುಬ್ರಮಣ್ಯಮುಪಾಸ್ಮಹೇ ॥1॥**

ಭಾವಾರ್ಥ - ಸಮಸ್ತ ಲೋಕಕ್ಕೂ ಆಶ್ರಯದಾತನೂ, ದೇವತೆಗಳಲ್ಲಿ ಅಗ್ರಗಣ್ಯನೂ, ದೇವತೆಗಳ ಸೇನಾಧಿಪನೂ, ಆಗಿರುವ ಸುಬ್ರಮಣ್ಯನನ್ನು ಧ್ಯಾನಿಸೋಣಾ.

**ಲೋಕೈಕ ವೀರಂ ದ್ವಿರದಾಸ್ಯಸೋದರಂ ತ್ರಿನೇತ್ರಪುತ್ರಂ ಚತುರಾಸ್ಯವಂದಿತಂ ।**

**ಪಂಚಾಸ್ಯತುಲ್ಯ-ಪ್ರಚುರ-ಪ್ರತಾಪಂ ಷಡಾನನಂ ಸಪ್ತ ಜಗನ್ನುತಂ ನಮಃ ॥2॥**

ಭಾವಾರ್ಥ - ಲೋಕದ ಏಕಮಾತ್ರ ವೀರನೂ, ಎರಡು ದಾಡೆಯನ್ನು ಹೊಂದಿರ್ಪ ಗಜಾನನನ ಸೋದರನೂ, ಮುಕ್ಕಣ್ಣನ ಪುತ್ರನೂ ಆದ, ಚತುರ್ಮುಖ ಬ್ರಹ್ಮನಿಂದ ನಮಸ್ಕರಿಸಲ್ಪಡುವವನಾದ, ಸಿಂಹದಂತೆ ಬಹು ಪ್ರತಾಪಿಯೂ, ಆರು ಮುಖವುಳ್ಳವನೂ, ಸಪ್ತಲೋಕಗಳಿಂದಲೂ ವಂದಿಸಲ್ಪಡುವವನೂ ಆದ ಸುಬ್ರಮಣ್ಯನನ್ನು ಸ್ತುತಿಸೋಣ.

**ಪದ್ಮಸವ್ಯ ಕಟಿ ಸಂಯುತವಾಮಂ ಪದ್ಮಕಾಂತಿನಿಭಮೇಕಮುಖಂಚ ।**
**ಬಾಲವೃದ್ಧಿಕರಮೀಶ್ವರಸೂನುಂ ಬಾಲಮುನ್ನತಭುಜಂ ಪ್ರಣತೋಸ್ಮಿ ॥3॥**
[ಕುಮಾರತಂತ್ರ]

ಭಾವಾರ್ಥ - ಬಲಗೈಯಲ್ಲಿಕಮಲದ ಪುಷ್ಪವನ್ನು ಹಿಡಿದು, ಎಡಗೈಯನ್ನು ಸೊಂಟದ ಮೇಲಿರಿಸಿ, ತಾವರೆಯ ವರ್ಣದವನಾಗಿ, ಉನ್ನತವಾದ ಭುಜವನ್ನು ಹೊಂದಿರುವ ಈಶ್ವರನ ಮಗನಾದ, ಬಾಲಕರಿಗೆ ಉನ್ನತಿಯನ್ನು ಕರುಣಿಸುವ ಬಾಲಸುಬ್ರಹ್ಮಣ್ಯನಿಗೆ ನಾನು ನಮಸ್ಕರಿಸುವೆ.

**ಷಡಾನನಂ ಕುಂಕುಮರಕ್ತ ವರ್ಣಂ ಮಹಾಮತಿಂ ದಿವ್ಯ ಮಯೂರವಾಹಂ ।**
**ರುದ್ರಸ್ಯಸೂನುಂ ಸುರಸೈನ್ಯನಾಥಂ ಗುಹಂ ಸದಾ ಶರಣಮಹಂ ಪ್ರಪದ್ಯೇ ॥4॥**

ಭಾವಾರ್ಥ - ಆರು ಮುಖಗಳಿಂದ ಕೂಡಿದವನಾಗಿ, ಕುಂಕುಮವನ್ನು ಹೋಲುವ ವರ್ಣದವನಾಗಿ, ಜ್ಞಾನಿಯಾಗಿ, ದಿವ್ಯವಾದ ಮಯೂರವನ್ನು ವಾಹನವನ್ನಾಗಿ ಹೊಂದಿರುವ ಶಿವತನಯನಾದ, ದೇವತೆಗಳ ಸೇನಾಧಿಪನಾದ ಗುಹನಿಗೆ ಸದಾ ನಾನು ಶರಣಾಗುವೆ.

**ಕರಧೃತ ನವನಾಗಂ ಕಲ್ಪಿತಾಶೇಷಭೂಷಂ ವರಮಪಿ ಕಟಿಭಾಗೇನ್ಯಸ್ತ ಹಸ್ತಾಂಭುಜೈಕಂ । ಅರುಣಕಿರಣಶೋಭಂ ತಾರಕ ಧ್ವಂಸಿನಾಥಂ ಶರವಣಭವಮೀಡೇ ಶಾಂಕರಂ ಸ್ಕಂದಮೀಶಂ ॥5॥**

ಭಾವಾರ್ಥ - ಹಸ್ತದಲ್ಲಿ ಹಾವಿನ ಮರಿ ಅಥವಾ ಮೊಟ್ಟೆಯನ್ನು ಧರಿಸಿ, ಸರ್ವಾಭರಣ ಭೂಷಿತನಾಗಿ, ಮತ್ತೊಂದು ಹಸ್ತವನ್ನು ಸೊಂಟದ ಮೇಲಿರಿಸಿದ, ಕೆಂಪಾದ ಕಾಂತಿಯಿಂದ ಬೆಳಗುತ್ತಿರುವ, ತಾರಕಾಸುರನನ್ನು ಹರಣಗೈದ, ಆನೆಹುಲ್ಲಿನ ಕಾಡಿನಲ್ಲಿ ಜನಿಸಿದ, ಶಂಕರನ ಮಗನಾಗಿರುವ ದೊರೆ ಸ್ಕಂದನನ್ನು ಸ್ತುತಿಸುತ್ತೇನೆ.

**ಸ್ಫುರನ್ ಮಕುಟ-ಪತ್ರಕುಂಡಲ ವಿಭೂಷಿತಂ ಚಂಪಕ- ಸ್ರಜಾ ಕಲಿತ ಕಂಧರಂ**
**ಕರಯುಗೇನ ಶಕ್ತಿಂ ಪವಿಂ । ದಧಾನಮಥವಾ ಕಟೀಕಲಿತ ವಾಮಹಸ್ತೇಷ್ಟದಂ ಗುಹಂ**
**ಘುಸೃಣಭಾಸುರಂ ಸ್ಮರತಪೀತ ವಾಸೋವಸಂ ॥6॥** [ತಂತ್ರ ಸಮುಚ್ಚಯ]

ಭಾವಾರ್ಥ - ಹೊಳೆಯುವ ಕಿರೀಟ ಹಾಗೂ ಪತ್ರಕುಂಡಲಗಳಿಂದ ಅಲಂಕರಿಸಲ್ಪಟ್ಟವನಾಗಿ, ಕೊರಳಲ್ಲಿ ಸಂಪಿಗೆಯಮಾಲೆಯನ್ನು ಧರಿಸಿ, ತನ್ನೆರಡು ಹಸ್ತಗಳಲ್ಲಿ ಶಕ್ತಿ ಹಾಗೂ ವಜ್ರಾಯುಧವನ್ನು ಧರಿಸಿ, ಒಂದು ಹಸ್ತವನ್ನು ಸೊಂಟದ ಮೇಲಿರಿಸಿಕೊಂಡು, ಮತ್ತೊಂದು ಹಸ್ತದ ಮೂಲಕ ವರದ ಮುದ್ರೆಯನ್ನು ತೋರುವ, ಕುಂಕುಮದ ವರ್ಣದ ದೇಹ ಕಾಂತಿ ಹಾಗೂ ಅರಸಿನ ವಸನಧಾರಿಯಾದ ಗುಹನನ್ನು ಸ್ಮರಿಸೋಣಾ.

**ಸುಬ್ರಹ್ಮಣ್ಯಸ್ಯ ಮಾಹಾತ್ಮ್ಯಂ ವರ್ಣಿತುಂ ಕೇನ ಶಕ್ಯತೇ? ।**
**ಯತ್ರೋಚ್ಛಿಷ್ಟಮಪಿ ಸ್ಪೃಷ್ಟಂ ಶ್ವಿತ್ರಿಣಃ ಶೋಧಯತ್ಯಹೋ! ॥7॥** [ತೀರ್ಥ ಪ್ರಬಂಧ]

ಭಾವಾರ್ಥ - ಸುಬ್ರಹ್ಮಣ್ಯ ದೇಗುಲದಲ್ಲಿ ಎಂಜಲು ಅನ್ನವೇ ಕುಷ್ಠದಂತಹಾ ಭೀಕರ ಚರ್ಮವ್ಯಾಧಿಯಿಂದ ಪೀಡಿತರಾದವರನ್ನು ಗುಣಪಡಿಸುತ್ತಿರುವಾಗ ಆ ಷಣ್ಮುಖ ಸ್ವಾಮಿಯ ಮಹಿಮೆಯನ್ನು ಎಂತು ವರ್ಣಿಸಲು ಸಾಧ್ಯ?

॥ ಇತಿ ಶ್ರೀ ಸುಬ್ರಮಣ್ಯ ಸ್ತುತಿ ಶ್ಲೋಕಾಃ ಸಂಪೂರ್ಣಂ ॥

## 10.2 ಶ್ರೀ ಸುಬ್ರಹ್ಮಣ್ಯಾಷ್ಟಕಂ

**ಪ್ರಣಮ್ಯ ಶಿರಸಾ ದೇವಂ ಶಂಕರಂ ಲೋಕ ಶಂಕರಂ ।**
**ಕೈಲಾಸವಾಸಿನಂ ಶಾಂತಂ ತಥಾ ಗೌರೀಂ ಸುಮಂಗಳಾಂ ॥1॥**

ಭಾವಾರ್ಥ - ಶಾಂತನೂ, ಲೋಕಕ್ಕೆ ಸುಖವನ್ನುಂಟು ಮಾಡುವವನೂ, ಕೈಲಾಸವಾಸಿಯೂ ಆಗಿರುವ ದೇವನಿಗೂ, ಅದೇ ರೀತಿಯಾಗಿ ಸೌಭಾಗ್ಯದಾಯಿನಿಯಾದ ಗೌರಿಗೂ ತಲೆಬಾಗಿ ನಮಸ್ಕರಿಸುವೆ.

**ಸುಬ್ರಹ್ಮಣ್ಯಾಷ್ಟಕಂ ಸ್ತೋತ್ರಂ ಪಠೇದಾರೋಗ್ಯಸಿದ್ಧಯೇ ।**
**ಧನಧಾನ್ಯಾದಿಸಿದ್ಧ್ಯರ್ಥಂ ದೃಢಕಾಯತ್ವಸಿದ್ಧಯೇ ॥2॥**

ಭಾವಾರ್ಥ - ಧನ ಧಾನ್ಯಾದಿ ಸಿದ್ಧಿಗೋಸ್ಕರವಾಗಿಯೂ, ದೃಢ ಶರೀರಕ್ಕಾಗಿಯೂ, ಆರೋಗ್ಯ ಸಿದ್ಧಿಗಾಗಿಯೂ ಸುಬ್ರಹ್ಮಣ್ಯಾಷ್ಟಕ ಸ್ತೋತ್ರಗಳನ್ನು ಪಠಿಸಬೇಕು.

**ಕಾರ್ತಿಕೇಯಂ ಮಹಾತ್ಮಾನಂ ಕುಮಾರಸ್ವಾಮಿನಂ ಪ್ರಭುಂ ।**
**ಆಯುರಾರೋಗ್ಯದಾತಾರಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥3॥**

ಭಾವಾರ್ಥ - ಕಾರ್ತಿಕೇಯನೂ, ಮಹಾತ್ಮನೂ, ಕುಮಾರಸ್ವಾಮಿಯೂ, ದೊರೆಯೂ, ಆಯುರಾರೋಗ್ಯವನ್ನು ಕರುಣಿಸುವವನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಈಶಪುತ್ರಂ ಪ್ರೇಮಪುತ್ರಂ ಗೌರೀಪುತ್ರಂ ದಯಾನಿಧಿಂ ।**
**ಜ್ಞಾನವೈರಾಗ್ಯಸಂಪನ್ನಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥4॥**

ಭಾವಾರ್ಥ - ಶಿವ ತನಯನೂ ಗೌರೀ ಪುತ್ರನೂ, ಅವರೀರ್ವರ ಪ್ರೀತಿಯ ಮಗನೂ, ದಯಾನಿಧಿಯೂ, ಜ್ಞಾನ, ವೈರಾಗ್ಯಗಳಿಂದ ಕೂಡಿರುವಂತಹವನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಸ್ಕಂದಂ ಷಾಣ್ಮಾತುರಂ ಪ್ರಾಜ್ಞಂ ಸರ್ವ ಶತ್ರುವಿಮರ್ದನಂ ।**
**ಸಮರ್ಥಂ ಭಾಗ್ಯದಾತಾರಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥5॥**

ಭಾವಾರ್ಥ - ಸ್ಕಂದನೂ, ಕಾರ್ತಿಕೇಯನೂ, ಕುಶಲಮತಿಯೂ, ಸರ್ವ ಶತ್ರುಗಳನ್ನು ಸಂಹರಿಸುವವನೂ, ಸಮರ್ಥನೂ ಭಾಗ್ಯವನ್ನು ಕರುಣಿಸುವವನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಮಹಾಸೇನಂ ಮಹಾಪ್ರಾಜ್ಞಂ ಸರ್ವಜ್ಞಂ ಚ ಷಡಾನನಂ ।**
**ಪಾರ್ವತೀನಂದನಂ ಕಾಂತಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥6॥**

ಭಾವಾರ್ಥ - ದೊಡ್ಡ ಪಡೆಯನ್ನು ಹೊಂದಿರುವವನೂ, ಮಹಾ ನಿಪುಣನೂ, ಎಲ್ಲವನ್ನೂ ಬಲ್ಲವನೂ, ಆರು ಮುಖಗಳನ್ನು ಹೊಂದಿರುವವನೂ, ಪಾರ್ವತೀ ತನಯನೂ, ಷಣ್ಮುಖ ಸ್ವಾಮಿಯೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಗುಹಂ ಧೀರಂ ತಥಾ ವೀರಂ ಹಸಂತಂ ಶಿಖಿವಾಹನಂ ।**
**ಸತ್ಸಂತಾನ ಪ್ರದಾತಾರಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥7॥**

ಭಾವಾರ್ಥ - ಗುಹನೂ, ಧೀರನೂ, ಹಾಗೆಯೇ ವೀರನೂ, ಮಂದಸ್ಮಿತನೂ, ಸತ್ಸಂತಾನವನ್ನು ಕರುಣಿಸುವವನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಶ್ರೀವಲ್ಲ್ಯಾ ಸಹಿತಂ ಶಾಂತಂ ದೇವಸೇನ್ಯಾ ಸುಸೇವಿತಂ ।**
**ಪಿತೃಭಕ್ತಂ ಮಾತೃ ಭಕ್ತಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥8॥**

ಭಾವಾರ್ಥ - ಸಂಪತ್ಪ್ರದವಾಗಿರುವ ನೆಲ್ಲಿಕಾಯಿಯ ಸಹಿತವಾಗಿರುವ, ಶಾಂತನೂ, ದೇವಸೇನೆಯಯಿಂದ ಸೇವಿಸಲ್ಪಡುವವನೂ, ಪಿತೃ ಭಕ್ತನೂ, ಮಾತೃಭಕ್ತನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಸದ್ಗೃಹಸ್ತಂ ಚ ಸತ್ಪುತ್ರಂ ಸದಾಚಾರ್ಯಂ ಸದಾಶ್ರಯಂ ।**
**ಸದಾ ಸದ್ಗುಣ ಸಂಪೂರ್ಣಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥9॥**

ಭಾವಾರ್ಥ - ಉತ್ತಮ ಗೃಹಸ್ಥನೂ, ಉತ್ತಮ ಪುತ್ರನೂ, ಉತ್ತಮ ಆಚಾರವಂತನೂ, ಉತ್ತಮರಿಗೆ ಆಶ್ರಯದಾತನೂ, ಯಾವತ್ತೂ ಸದ್ಗುಣಗಳಿಂದ ಪರಿಪೂರ್ಣನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಬ್ರಹ್ಮಣ್ಯಂ ಬ್ರಹ್ಮಸಂಪನ್ನಂ ವೇದವೇದಾಂತಕೋವಿದಂ ।**
**ವೇದವೇದಾಂತಸಂವೇದ್ಯಂ ಸುಬ್ರಹ್ಮಣ್ಯಂ ಭಜಾಮ್ಯಹಂ ॥10॥**

ಭಾವಾರ್ಥ - ಪುಣ್ಯರೂಪಿಯೂ, ತತ್ವ ಜ್ಞಾನಿಯೂ, ವೇದ ವೇದಾಂತಗಳನ್ನು ಬಲ್ಲವನೂ, ಅವುಗಳಿಂದ ತಿಳಿಯಲ್ಪಡುವಂತಹವನೂ ಆಗಿರುವ ಸುಬ್ರಹ್ಮಣ್ಯನನ್ನು ನಾನು ಭಜಿಸುವೆ.

**ಸುಬ್ರಹ್ಮಣ್ಯಾಷ್ಟಕಂ ಸ್ತೋತ್ರಂ ಯಃ ಪಠೇತ್ ಸತತಂ ನರಃ ।**
**ಆಯುರಾರೋಗ್ಯದಂ ಪುಣ್ಯಂ ಸರ್ವಸೌಭಾಗ್ಯದಾಯಕಂ ॥11॥**

ಭಾವಾರ್ಥ - ಈ ಸುಬ್ರಹ್ಮಣ್ಯಾಷ್ಟಕಗಳನ್ನು ಸತತವಾಗಿ ಯಾವ ಮನುಷ್ಯನು ಓದುವನೋ ಅವನು ಆಯುರಾರೋಗ್ಯಗಳಿಂದ ಕೂಡಿ ಪುಣ್ಯಶಾಲಿಯಾಗಿ ಸರ್ವ ಸೌಭಾಗ್ಯವನ್ನೂ ಹೊಂದುವನು.

**ಸರ್ವಾನ್ ಕಾಮಾನವಾಪ್ನೋತಿ ವಿದ್ಯಾಂ ಬುದ್ಧಿಂ ಯಶೋ ಧನಂ ।**
**ನಿತ್ಯಾರೋಗ್ಯಂ ಚ ಲಭತೇ ಸುಬ್ರಹ್ಮಣ್ಯಪ್ರಸಾದತಃ ॥12॥**

ಭಾವಾರ್ಥ - ಸಮಸ್ತ ವಾಂಛಿತಾರ್ಥಗಳು ಲಭಿಸುವುದರೊಂದಿಗೆ ವಿದ್ಯೆ, ಬುದ್ಧಿ, ಯಶಸ್ಸು, ಧನ, ನಿತ್ಯಾರೋಗ್ಯಗಳು ಶ್ರೀ ಸುಬ್ರಹ್ಮಣ್ಯ ಪ್ರಸಾದದಿಂದ ಲಭಿಸುತ್ತವೆ

॥ ಇತಿ ವಿದ್ವಾನ್ ಶ್ರೀ ಕೆ. ಜಿ. ಸುಬ್ರಾಯ ಶರ್ಮ ವಿರಚಿತ ಶ್ರೀ ಸುಬ್ರಹ್ಮಣ್ಯಾಷ್ಟಕಂ ಸಂಪೂರ್ಣಂ ॥

----- ****** -----

# 11 ಶ್ರೀ ದತ್ತಾತ್ರೇಯ ಸ್ತೋತ್ರಗಳು

## 11.1 ಶ್ರೀ ದತ್ತಾತ್ರೇಯ ಧ್ಯಾನಸ್ತೋತ್ರಂ

**ಭೂತಪ್ರೇತಪಿಶಾಚಾದ್ಯಾ ಯಸ್ಯ ಸ್ಮರಣಮಾತ್ರತಃ ।**
**ದೂರಾದೇವ ಪಲಾಯಂತೇ ದತ್ತಾತ್ರೇಯಂ ನಮಾಮಿ ತಂ ॥1॥**

ಭಾವಾರ್ಥ - ಯಾರ ಸ್ಮರಣೆ ಮಾತ್ರದಿಂದಲೇ ಭೂತ ಪ್ರೇತ ಪಿಶಾಚಾದಿಗಳು ದೂರವಾಗುವವೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ಯನ್ನಾಮಸ್ಮರಣಾದ್ದೈನ್ಯಂ ಪಾಪಂ ತಾಪಶ್ಚ ನಶ್ಯತಿ ।**
**ಭೀತಿಗ್ರಹಾರ್ತಿದುಃಸ್ವಪ್ನಂ ದತ್ತಾತ್ರೇಯಂ ನಮಾಮಿ ತಂ ॥2॥**

ಭಾವಾರ್ಥ - ಯಾವಾತನ ಸ್ಮರಣೆ ಮಾತ್ರದಿಂದಲೇ ಪಾಪ, ದೈನ್ಯ, ತಾಪತ್ರಯ, ದುಃಸ್ವಪ್ನಾದಿಗಳು ಪರಿಹಾರಗೊಳ್ಳುವವೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ದದ್ರು-ಸ್ಫೋಟಕ ಕುಷ್ಠಾದಿ- ಮಹಾಮಾರೀ ವಿಷೂಚಿಕಾ ।**
**ನಶ್ಯಂತ್ಯನ್ಯೇಽಪಿ ರೋಗಾಶ್ಚ ದತ್ತಾತ್ರೇಯಂ ನಮಾಮಿ ತಂ ॥3॥**

ಭಾವಾರ್ಥ - ಚರ್ಮರೋಗ-ಗೌಪ್ಯವಾಗಿರುವ ಕುಷ್ಠರೋಗ-ಸಾಂಸರ್ಗಿಕ ರೋಗವಾಗಿರುವ ಬಲಿಷ್ಟವಾದ ಮಾರಿಕಾಬೇನೆ[ಕಾಲೆರಾ]ಗಳನ್ನು ನಾಶಮಾಡುವುದರೊಂದಿಗೆ ಇತರ ರೋಗಗಳನ್ನೂ ನಾಶಮಾಡುವ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ಸಂಗಜಾ ದೇಶಕಾಲೋತ್ಥಾ ಅಪಿ ಸಾಂಕ್ರಾಮಿಕಾ ಗದಾಃ ।**
**ಶಾಮ್ಯಂತಿ ಯತ್ ಸ್ಮರಣತೋ ದತ್ತಾತ್ರೇಯಂ ನಮಾಮಿ ತಂ ॥4॥**

ಭಾವಾರ್ಥ - ಸಂಸರ್ಗದಿಂದ ಉಂಟಾಗುವ ಹಾಗೂ ದೇಶಕಾಲ-ನಿಸರ್ಗ ದೋಷಗಳಿಂದುಂಟಾಗುವ ರೋಗಾದಿಗಳು,ವಿಪತ್ತುಗಳಿಗೆ ಸಿಲುಕುವುದರಿಂಟಾಗಬಹುದಾದ ಹಾನಿಗಳು,ಸಾಂಕ್ರಾಮಿಕರೋಗಗಳು,

ಆಯುಧಗಳಿಂದುಂಟಾಗಬಹುದಾದ ಬಲಿಷ್ಠವಾದ ಹಾನಿಗಳೆಲ್ಲವೂ ಯಾರ ಸ್ಮರಣೆ ಮಾತ್ರದಿಂದಲೇ ನಾಶವಾಗುವವೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ಸರ್ಪ ವೃಶ್ಚಿಕದಂಷ್ಟ್ರಾನಾಂ ವಿಷಾರ್ತಾನಾಂ ಶರೀರಿಣಾಂ ।**
**ಯನ್ನಾಮ ಶಾಂತಿದಂ ಶೀಘ್ರಂ ದತ್ತಾತ್ರೇಯಂ ನಮಾಮಿ ತಂ ॥5॥**

ಭಾವಾರ್ಥ - ಸರ್ಪ, ಚೇಳು ಮೊದಲಾದ ವಿಷ ಜಂತುಗಳ ವಿಷದ ಸಂಕಟಕ್ಕೆ ಸಿಲುಕಿ ತೊಂದರೆಗೊಳಗಾದ ದೇಹದವನ ದುಃಖವು ಯಾವಾತನ ನಾಮಸ್ಮರಣೆಯಿಂದ ಶೀಘ್ರವಾಗಿ ಶಾಂತಗೊಳ್ಳುವವೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ತ್ರಿವಿಧೋತ್ಪಾತಶಮನಂ ವಿವಿಧಾರಿಷ್ಠನಾಶನಂ ।**
**ಯನ್ನಾಮ ಕ್ರೂರಭೀತಿಘ್ನಂ ದತ್ತಾತ್ರೇಯಂ ನಮಾಮಿ ತಂ ॥6॥**

ಭಾವಾರ್ಥ - ವಾತ-ಪಿತ್ಥ-ಕಫಗಳು, ಹಾಗೂ ಭೀಕರವಾಗಿರುವ ಭೀತಿಗಳು ಶಮನಗೊಳ್ಳುವುದರೊಂದಿಗೆ ವಿವಿಧ ಶಾಪ ದೋಷಗಳು ಯಾವಾತನ ನಾಮಸ್ಮರಣೆಯಿಂದ ಶೀಘ್ರವಾಗಿ ಶಾಂತಗೊಳ್ಳುವವೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ವೈರ್ಯಾದಿಕೃತಮಂತ್ರಾದಿಪ್ರಯೋಗಾ ಯಸ್ಯ ಕೀರ್ತನಾತ್ ।**
**ನಶ್ಯಂತಿ ದೇವಭಾಧಾಶ್ಚ ದತ್ತಾತ್ರೇಯಂ ನಮಾಮಿ ತಂ ॥7॥**

ಭಾವಾರ್ಥ - ಶತ್ರುಗಳು ಮಾಡಿರುವ ಮಾಟ ಮಂತ್ರಾದಿ ದುಷ್ಟ ಪ್ರಯೋಗಗಳು, ದೇವತೆಗಳ ಬಾಧಾದೋಷಗಳು ಯಾರ ಕೀರ್ತನೆಯಿಂದ ಇಲ್ಲವಾಗುವವೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ಯಚ್ಛಿಷ್ಯಸ್ಮರಣಾತ್ ಸದ್ಯೋ ಗತಂನಷ್ಟಾದಿ ಲಭ್ಯತೇ ।**
**ಯ ಈಶಃ ಸರತಸ್ತ್ರಾತಾ ದತ್ತಾತ್ರೇಯಂ ನಮಾಮಿ ತಂ ॥8॥**

ಭಾವಾರ್ಥ - ಯಾವಾತನ ಮನಃಪೂರ್ವಕ ಸ್ಮರಣೆ ಮಾಡುವುದರಿಂದ ಕಳೆದು ಹೋದಹಾಗೂ ನಷ್ಟವಾದ ವಸ್ತುಗಳು ದೊರಕುವವೋ, ಯಾರು ಒಡೆಯನೋ, ಸರ್ವತ್ರನಾಗಿರುವನೋ ಅಂತಹಾ ದತ್ತಾತ್ರೇಯಸ್ವಾಮಿಯೇ ನಿನಗೆ ವಂದಿಸುವೆ.

**ಜಯಲಾಭಯಶಃಕಾಮದಾತುರ್ದತ್ತಸ್ಯ ಯಃ ಸ್ತವಂ ।**
**ಭೋಗಮೋಕ್ಷಪ್ರದಸ್ಯೇಮಂ ಪಠೇದ್ದತ್ತಪ್ರಿಯೋ ಭವೇತ್ ॥9॥**

ಭಾವಾರ್ಥ - ಈ ಸ್ತೋತ್ರವನ್ನು ಪಠಿಸುವುದರಿಂದ ಜಯ, ಲಾಭ, ಯಶಸ್ಸು, ಇಷ್ಟಾರ್ಥಗಳು ಪೂರ್ಣವಾಗಿ ಒದಗಿಬರುವುದರೊಂದಿಗೆ ಅವರಿಗೆ ಸುಖಾದಿ ಭೋಗಗಳು ದೊರಕುವುದರೊಡನೆ, ಮೋಕ್ಷ ಪ್ರಾಪ್ತಿಯಾಗುವುದು. ಇವುಗಳ ಜೊತೆಯಲ್ಲಿ ದತ್ತಾತ್ರೇಯ ಸ್ವಾಮಿಯ ಪ್ರೀತಿಗೆ ಪಾತ್ರರಾಗುವರು.

॥ ಇತಿ ಶ್ರೀ ದತ್ತಾತ್ರೇಯ ಧ್ಯಾನ ಸ್ತೋತ್ರಂ ಸಂಪೂರ್ಣಂ ॥

## 11.2 ಶ್ರೀ ದತ್ತಾತ್ರೇಯ ಸ್ತೋತ್ರಂ

**ಜಟಾಧರಂ ಪಾಂಡುರಂಗಂ ಶೂಲಹಸ್ತಂ ಕೃಪಾನಿಧಿಂ ।**
**ಸರ್ವರೋಗಹರಂ ದೇವಂ ದತ್ತಾತ್ರೇಯಮಹಂ ಭಜೇ ॥1॥**

ಭಾವಾರ್ಥ - ಜಟಾಧಾರಿಯೂ ಪಾಂಡುರಂಗನೂ ತ್ರಿಶೂಲವನ್ನು ಕೈಯಲ್ಲಿ ಹಿಡಿದುಕೊಂಡಿರುವವನೂ ಕೃಪಾಸಾಗರನೂ ಸಮಸ್ತ ರೋಗ ನಿವಾರಕನೂ ಆಗಿರುವ ದತ್ತಾತ್ರೇಯನನ್ನು ನಾನು ಭಜಿಸುವೆ.

**ಅಸ್ಯ ಶ್ರೀ ದತ್ತಾತ್ರೇಯ ಸ್ತೋತ್ರ ಮಂತ್ರಸ್ಯ ಭಗವಾನ್ನಾರದ ಋಷಿಃ । ಅನುಷ್ಟುಪ್ ಛಂದಃ । ಶ್ರೀ ದತ್ತ ಪರಮಾತ್ಮಾ ದೇವತಾ । ಶ್ರೀ ದತ್ತ ಪ್ರೀತ್ಯರ್ಥಂ ಜಪೇ ವಿನಿಯೋಗಃ ॥**

ಭಾವಾರ್ಥ - ಈ ದತ್ತಾತ್ರೇಯ ಸ್ತೋತ್ರವೆಂಬ ಮಹಾಮಂತ್ರಕ್ಕೆ ಭಗವಾನ್ ನಾರದರು ಮಹರ್ಷಿಗಳು. ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಶ್ರೀ ದತ್ತದೇವರು ಇದರ

ದೇವತೆಯಾಗಿರುವವರು. ಶ್ರೀ ದತ್ತ ದೇವರ ಕರುಣೆಗಾಗಿ ಜಪಿಸಲು ಇದನ್ನು ವಿನಿಯೋಗಿಸುವುದಾಗಿದೆ.

**ಜಗದುತ್ಪತ್ತಿಕರ್ತ್ರೇ ಚ ಸ್ಥಿತಿಸಂಹಾರಹೇತವೇ ।**
**ಭವ ಪಾಶ ವಿಮುಕ್ತಾಯ ದತ್ತಾತ್ರೇಯಂ ನಮೋಸ್ತುತೇ ॥1॥**

ಭಾವಾರ್ಥ - ಬ್ರಹ್ಮಾಂಡದ ಉತ್ಪತ್ತಿ, ಪಾಲನೆ, ನಾಶಗಳಿಗೆ ಯಜಮಾನನಾಗಿರುವನೂ ಸಂಸಾರವೆಂಬ ಬಂಧನದಿಂದ ಮುಕ್ತಿಗೊಳಿಸುವವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಜರಾಜನ್ಮವಿನಾಶಾಯ ದೇಹಶುದ್ಧಿಕರಾಯ ಚ ।**
**ದಿಗಂಬರ ದಯಾಮೂರ್ತೇ ದತ್ತಾತ್ರೇಯಂ ನಮೋಸ್ತುತೇ ॥2॥**

ಭಾವಾರ್ಥ - ಹುಟ್ಟು ವಾರ್ಧಕ್ಯಗಳಿಲ್ಲದ, ಶರೀರವನ್ನು ಶುದ್ಧಗೊಳಿಸುವ ದಿಗಂಬರನಾದ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಕರ್ಪೂರಕಾಂತಿದೇಹಾಯ ಬ್ರಹ್ಮಮೂರ್ತಿಧರಾಯ ಚ ।**
**ವೇದಶಾಸ್ತ್ರಪರಿಜ್ಞಾಯ ದತ್ತಾತ್ರೇಯಂ ನಮೋಸ್ತುತೇ ॥3॥**

ಭಾವಾರ್ಥ - ಕರ್ಪೂರದ ಹೊಳಪಿನ ಶರೀರವುಳ್ಳವನೂ ಬ್ರಹ್ಮಮೂರ್ತಿಯನ್ನು ಧರಿಸಿರುವವನೂ ವೇದಶಾಸ್ತ್ರಗಳನ್ನು ಚೆನ್ನಾಗಿ ತಿಳಿದವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಹ್ರಸ್ವದೀರ್ಘಕೃಶಸ್ಥೂಲ ನಾಮಗೋತ್ರ ವಿವರ್ಜಿತ ।**
**ಪಂಚಭೂತೈಕ ದೀಪ್ತಾಯ ದತ್ತಾತ್ರೇಯಂ ನಮೋಸ್ತುತೇ ॥4॥**

ಭಾವಾರ್ಥ - ಸಣ್ಣ-ದೊಡ್ಡ, ಕೃಶ-ಸ್ಥೂಲ, ಹೆಸರು-ಗೋತ್ರಗಳಿಗೆ ಹೊರತಾದವನೂ ಪಂಚಭೂತಾತ್ಮಗಳನ್ನು ಬೆಳಗಿಸುವವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಯಜ್ಞಭೋಕ್ತ್ರೇ ಚ ಯಜ್ಞಾಯ ಯಜ್ಞರೂಪಧರಾಯ ಚ ।**
**ಯಜ್ಞಪ್ರಿಯಾಯ ಸಿದ್ಧಾಯ ದತ್ತಾತ್ರೇಯಂ ನಮೋಸ್ತುತೇ ॥5॥**

ಭಾವಾರ್ಥ - ಯಾಗಗಳಲ್ಲಿನ ಆಹುತಿಯನ್ನು ಸ್ವೀಕರಿಸುವವನೂ, ಯಜ್ಞಸ್ವರೂಪಿಯೂ, ಯಜ್ಞೇಶ್ವರನೂ, ಯಜ ್ಞ ಪ್ರಿಯನೂ ಸಿಡ್ಧನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಆದೌ ಬ್ರಹ್ಮಾ ಮಧ್ಯೇ ವಿಷ್ಣುರಂತ್ಯೇ ದೇವಃ ಸದಾಶಿವಃ ।**
**ಮೂರ್ತಿತ್ರಯಸ್ವರೂಪಾಯ ದತ್ತಾತ್ರೇಯಂ ನಮೋಸ್ತುತೇ ॥6॥**

ಭಾವಾರ್ಥ - ಆದಿಯಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ಅಂತ್ಯದಲ್ಲಿ ಸದಾಶಿವ ಸ್ವರೂಪಿಯಾಗಿರುವವನೂ, ದೇವನೂ, ಮೂರುಮೂರ್ತಿಗಳ ಸ್ವರೂಪಹೊಂದಿರುವವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಭೋಗಾಲಯಾಯ ಭೋಗಾಯ ಯೋಗಯೋಗ್ಯಾಯ ಧಾರಿಣೇ ।**
**ಜಿತೇಂದ್ರಿಯ ಜಿತಜ್ಞಾಯ ದತ್ತಾತ್ರೇಯಂ ನಮೋಸ್ತುತೇ ॥7॥**

ಭಾವಾರ್ಥ - ಸಂಪತ್ತನ್ನು ಆವಾಸ ಸ್ಥಾನವನ್ನಾಗಿರಿಸಿಕೊಂಡವನೂ ಸುಖಾನುಭವಿಯೂ ಹಿತವಾದವನೂ ಹಿತವಾದವುಗಳನ್ನು ಧರಿಸಿರುವವನೂ ಇಂದ್ರಿಯಗಳನ್ನು ಗೆದ್ದವನೂ ಹಾಗೆಯೇ ಜೀವಾತ್ಮವನ್ನು ಗೆದ್ದವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ದಿಗಂಬರಾಯ ದಿವ್ಯಾಯ ದಿವ್ಯರೂಪಧರಾಯ ಚ ।**
**ಸದೋದಿತ ಪರಬ್ರಹ್ಮ ದತ್ತಾತ್ರೇಯಂ ನಮೋಸ್ತುತೇ ॥8॥**

ಭಾವಾರ್ಥ - ದಿಗಂಬರನೂ ದಿವ್ಯವಾದವನೂ ದಿವ್ಯ ಸ್ವರೂಪಿಯೂ, ಸದಾಕಾಲವೂ ಪರಬ್ರಹ್ಮನಾಗಿರುವವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಜಂಬುದ್ವೀಪೇ ಮಹಾಕ್ಷೇತ್ರೇ ಮಾತಾಪುರವಾಸಿನೇ ।**
**ಜಯಮಾನಸತಾಂ ದೇವ ದತ್ತಾತ್ರೇಯಂ ನಮೋಸ್ತುತೇ ॥9॥**

ಭಾವಾರ್ಥ - ಜಂಬುದ್ವೀಪದಲ್ಲಿನ ಮಾತಾಪುರವೆಂಬ ಮಹಾಕ್ಷೇತ್ರದಲ್ಲಿ ವಾಸಿಸುವವನೂ ಮಾನವತ್ವವನ್ನು ಗೆದ್ದವನೂ ದೇವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಭಿಕ್ಷಾಟನಂ ಗೃಹೇ ಗ್ರಾಮೇ ಪಾತ್ರಂ ಹೇಮಮಯಂ ಕರೇ ।**
**ನಾನಾಸ್ವಾದಮಯೀ ಭಿಕ್ಷಾ ದತ್ತಾತ್ರೇಯಂ ನಮೋಸ್ತುತೇ ॥10॥**

ಭಾವಾರ್ಥ - ಹೊಂಬಣ್ಣದ ಪಾತ್ರವನ್ನು ಹಸ್ತದಲ್ಲಿ ಹಿಡಿದು ರುಚಿಕರವಾಗಿರುವ ನಾನಾ ವಿಧದ ಭಿಕ್ಷವನ್ನೆತ್ತಲು ಮನೆ-ಮನೆ, ಗ್ರಾಮ-ಗ್ರಾಮಗಳಲ್ಲಿ ಭಿಕ್ಷಾಟನೆಗೈಯುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಬ್ರಹ್ಮಜ್ಞಾನಮಯೀ ಮುದ್ರಾ ವಸ್ತ್ರೇ ಚಾಕಾಶ ಭೂತಲೇ ।**
**ಪ್ರಜ್ಞಾನಘನಭೋಧಾಯ ದತ್ತಾತ್ರೇಯಂ ನಮೋಸ್ತುತೇ ॥11॥**

ಭಾವಾರ್ಥ - ಬ್ರಹ್ಮಜ್ಞಾನಮಯವಾಗಿರುವ ಮುಖಮುದ್ರೆಯನ್ನು ಹೊಂದಿ ಆಕಾಶ ಭೂಮಿಗಳನ್ನು ವಸ್ತ್ರಗಳಾಗಿರಿಸಿಕೊಂಡು ಶ್ರೇಷ್ಠವಾದ ಬ್ರಹ್ಮಜ್ಞಾನದ ಪ್ರಜ್ಞೆಯುಳ್ಳವನಾಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಅವಧೂತ ಸದಾನಂದ ಪರಬ್ರಹ್ಮ ಸ್ವರೂಪಿಣೇ ।**
**ವಿದೇಹ ದೇಹರೂಪಾಯ ದತ್ತಾತ್ರೇಯಂ ನಮೋಸ್ತುತೇ ॥12॥**

ಭಾವಾರ್ಥ - ವಿರಕ್ತನೂ, ಸದಾನಂದನೂ, ಪರಬ್ರಹ್ಮಸ್ವರೂಪಿಯೂ ಶರೀರವನ್ನು ಹೊಂದಿದ್ದರೂ ಅಶರೀರಿಯೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಸತ್ಯರೂಪ ಸದಾಚಾರ ಸತ್ಯಧರ್ಮ ಪರಾಯಣ ।**
**ಸತ್ಯಾಶ್ರಯ ಪರೋಕ್ಷಾಯ ದತ್ತಾತ್ರೇಯಂ ನಮೋಸ್ತುತೇ ॥13॥**

ಭಾವಾರ್ಥ - ಸತ್ಯ ಸ್ವರೂಪಿಯೂ ಸತ್ಯ ಧರ್ಮಗಳ ಆರಾಧಕನೂ, ಸತ್ಯಕ್ಕೆ ಆಶ್ರಯದಾತನೂ ಅಪ್ರತ್ಯಕ್ಷನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಶೂಲಹಸ್ತ ಗದಾಪಾಣೇ ವನಮಾಲಾಸುಕಂಧರ ।**
**ಯಜ್ಞಸೂತ್ರಧರ ಬ್ರಹ್ಮನ್ ದತ್ತಾತ್ರೇಯಂ ನಮೋಸ್ತುತೇ ॥14॥**

ಭಾವಾರ್ಥ - ತ್ರಿಶೂಲ ಹಾಗೂ ಗದೆಯನ್ನು ಕೈಯಲ್ಲಿ ಧರಿಸಿದವನೂ ವನಮಾಲೆಯಿಂದ ಶೋಭಿಸುತ್ತಿರುವ ಕೊರಳುಳ್ಳವನೂ ಯಾಗಗಳ ನಿಯಮವನ್ನು ಧರಿಸಿದವನೂ ಸಾಕ್ಷಾತ್ ಬ್ರಹ್ಮನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಕ್ಷರಾಕ್ಷರ ಸ್ವರೂಪಾಯ ಪರಾತ್ಪರತರಾಯ ಚ ।**
**ದತ್ತಮುಕ್ತಿ ಪರಸ್ತೋತ್ರ ದತ್ತಾತ್ರೇಯಂ ನಮೋಸ್ತುತೇ ॥15॥**

ಭಾವಾರ್ಥ - ನಾಶವಾಗುವ ಹಾಗೂ ನಾಶವಾಗದ ರೂಪವುಳ್ಳವನೂ, ಅಪರಿಚಿತರಲ್ಲಿ ಅತ್ಯಂತ ಅಪರಿಚಿತನಾದವನೂ ಮುಕ್ತಿಯನ್ನು ಕರುಣಿಸುವ ಕೀರ್ತಿವಂತನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ದತ್ತವಿದ್ಯಾಢ್ಯ ಲಕ್ಷ್ಮೀಶ ದತ್ತಸ್ವಾತ್ಮಸ್ವರೂಪಿಣೇ ।**
**ಗುಣನಿರ್ಗುಣ ರೂಪಾಯ ದತ್ತಾತ್ರೇಯಂ ನಮೋಸ್ತುತೇ ॥16॥**

ಭಾವಾರ್ಥ - ತಕ್ಕುದಾದ ಸತ್ಯಜ್ಞಾನದ ಶ್ರೀಮಂತನೂ ವರದಾಯಕನ ಆತ್ಮ ಸ್ವರೂಪನೂ ಸಂಪತ್ತಿನ ಅಧೀಶನೂ ಯೋಗ್ಯತೆ ಹಾಗೂ ಅಯೋಗ್ಯತೆಗಳ ಆಕಾರವುಳ್ಳವನೂ ಆಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಶತ್ರುನಾಶಕರಂ ಸ್ತೋತ್ರಂ ಜ್ಞಾನವಿಜ್ಞಾನದಾಯಕಂ ।**
**ಸರ್ವಪಾಪ ಶಮಂ ಯಾತಿ ದತ್ತಾತ್ರೇಯಂ ನಮೋಸ್ತುತೇ ॥17॥**

ಭಾವಾರ್ಥ - ಈ ಪ್ರಾರ್ಥನೆಯು ವೈರಿಗಳನ್ನು ನಾಶಗೊಳಿಸುತ್ತದೆ. ಹಾಗೂ ಬ್ರಹ್ಮಜ್ಞಾನವನ್ನು ಮತ್ತು ಅದಕ್ಕಿಂತಲೂ ಶ್ರೇಷ್ಠವಾದ ಅರಿವಿನ ಶಕ್ತಿಯನ್ನು ಕರುಣಿಸುವ ಶಕ್ತಿಯುಳ್ಳದ್ದಾಗಿದೆ. ಸಮಸ್ತ ಪಾಪಗಳನ್ನು ಶಮನಗೊಳಿಸುವಂತಹದ್ದಾಗಿದೆ. ಇಂತಹಾ ಪ್ರಶಂಸೆಗೆ ಪಾತ್ರನಾಗಿರುವ ದತ್ತಾತ್ರೇಯ ಸ್ವಾಮಿಯೇ ನಿನಗೆ ನಾನು ನಮಿಸುವೆ.

**ಇದಂ ಸ್ತೋತ್ರಂ ಮಹದ್ದಿವ್ಯಂ ದತ್ತ ಪ್ರತ್ಯಕ್ಷಕಾರಕಂ ।**
**ದತ್ತಾತ್ರೇಯ ಪ್ರಸಾದಾಚ್ಚ ನಾರದೇನ ಪ್ರಕೀರ್ತಿತಂ ॥18॥**

ಭಾವಾರ್ಥ - ಈ ಸ್ತುತಿಯು ಶ್ರೇಷ್ಠವಾದ ಶಕ್ತಿಯನ್ನು ಹೊಂದಿದ್ದು ದತ್ತಾತ್ರೇಯಸ್ವಾಮಿಯ ಅನುಗ್ರಹದಿಂದ ನಾರದರಿಂದ ಪ್ರಾರ್ಥಿಸಲ್ಪಟ್ಟಿರುವುದಾಗಿದೆ.

॥ ಇತಿ ಶ್ರೀನಾರದಪುರಾಣೇ ನಾರದವಿರಚಿತಂ ಶ್ರೀ ದತ್ತಾತ್ರೇಯ ಸ್ತೋತ್ರಂ ಸಂಪೂರ್ಣಂ ॥

## 11.3 ಶ್ರೀ ದತ್ತಾತ್ರೇಯ ಸ್ತುತಿಃ ಸ್ತೋತ್ರಂ

**ದತ್ತಾತ್ರೇಯಂ ಮಹಾತ್ಮಾನಂ ನೈಷ್ಠಿಕಂ ಬ್ರಹ್ಮಚಾರಿಣಂ ।**
**ಬ್ರಹ್ಮನಿಷ್ಠಂ ನಿರಾಕಾರಂ ಪ್ರಣಮಾಮಿ ಸದಾಶಿವಂ ॥1॥**

ಭಾವಾರ್ಥ - ಸ್ಥಿರವಾಗಿಯೂ ಅಚಂಚಲವಾಗಿಯೂ ಇರುವ ಬ್ರಹ್ಮಚಾರಿಯೂ, ವೇದ ನಿಷ್ಠನೂ, ನಿರಾಕಾರಿಯೂ, ಸದಾಕಾಲವೂ ಮಂಗಲದಾಯಕನೂ ಆಗಿರುವ, ಹಾಗೆಯೇ ಮಹಾತ್ಮನೂ ಆಗಿರುವ ದತ್ತಾತ್ರೇಯ ಸ್ವಾಮಿಗೆ ನಮಿಸುತ್ತೇನೆ.

**ಶ್ರೀದತ್ತಂ ಶ್ರೀಕರಂ ಶಾಂತಂ ಸತ್ಯದರ್ಮ ಪರಾಯಣಂ ।**
**ಗುರುಣಾಂ ಪರಮಂ ದಿವ್ಯಂ ವಂದೇಽಹಂ ಅತ್ರಿ ನಂದನಂ ॥2॥**

ಭಾವಾರ್ಥ - ಸಂಪತ್ಪ್ರದಾಯಕನೂ, ತೃಪ್ತನೂ, ಸತ್ಯ ಹಾಗೂ ಧರ್ಮಗಳ ಬಗ್ಗೆ ಅತ್ಯಂತ ಆಸಕ್ತನೂ ಗುರುಗಳಲ್ಲಿ ಅಗ್ರಗಣ್ಯನೂ, ಶ್ರೇಷ್ಠನೂ, ಅತ್ರಿ ಮಹರ್ಷಿಯ ತನಯನೂ ಅಗಿರುವ ಶ್ರೀ ದತ್ತ ಗುರುಗಳಿಗೆ ನಾನು ನಮಿಸುತ್ತೇನೆ.

**ಅಸೂಯಾರಹಿತಂ ದೇವಂ ಜ್ಞಾನವಿಜ್ಞಾನ ರೂಪಿಣಂ ।**

**ನಮಾಮಿ ಶಿರಸಾ ಭಕ್ತ್ಯಾ ಶ್ರೀದತ್ತಂ ಗುಣ ವರ್ಜಿತಂ ॥3॥**

ಭಾವಾರ್ಥ - ಪತಿವ್ರತಾಪರಾಯಣೆಯಾದ ಅನಸೂಯಾ ದೇವಿಯ ತನಯನಾಗಿ, ಅಸೂಯಾ ರಹಿತನಾಗಿ, ವಿದ್ವಾಂಸನೂ, ವಿಶಿಷ್ಟವಾದ ಜ್ಞಾನ ಸ್ವರೂಪನೂಸತ್ವ, ರಜ, ತಮಗಳೆಂಬ ತ್ರಿಗುಣ ವರ್ಜಿತನೂ ಆದ ಶ್ರೀದತ್ತ ಗುರುವಿಗೆ ನಾನು ನಮಿಸುತ್ತೇನೆ.

**ಶ್ರೀದತ್ತಂ ಜ್ಞಾನದಾತಾರಂ ಸರ್ವಸಂಗ ವಿವರ್ಜಿತಂ ।**

**ಅವಧೂತ ವರಿಷ್ಠಂ ಶ್ರೀ ಶಂಕರಂ ಪ್ರಣಮಾಮ್ಯಹಂ ॥4॥**

ಭಾವಾರ್ಥ - ತಿಳುವಳಿಕೆಯನ್ನು ನೀಡುವವನಾದ, ಸಮಸ್ತ ಸಂಗಗಳನ್ನು ಪರಿತ್ಯಜಿಸಿದವನಾದ, ವಿರಕ್ತ ಯೋಗಿಗಳಲ್ಲಿ ಅಗ್ರಗಣ್ಯನೂ ಮಂಗಲದಾಯಕನೂ ಆಗಿರುವ ಶ್ರೀದತ್ತ ಗುರುಗಳಿಗೆ ನಾನು ನಮಸ್ಕರಿಸುತ್ತೇನೆ.

**ಮಂಗಳಂ ಯತಿರಾಜಾಯ ಗುರುರಾಜಾಯ ಮಂಗಳಂ ।**

**ಮಂಗಳಂ ಬ್ರಹ್ಮನಿಷ್ಠಾಯ ದತ್ತಾತ್ರೇಯಾಯ ಮಂಗಳಂ ॥5॥**

ಭಾವಾರ್ಥ - ಶರಣರಿಗೆ ಒಡೆಯನಾದ, ಗುರುಗಳಲ್ಲಿ ಅಗ್ರಗಣ್ಯರಾಗಿರುವ, ದೇವಾದಿದೇವರಲ್ಲಿ ಏಕಚಿತ್ತನಾಗಿರುವ ದತ್ತಾತ್ರೇಯ ಗುರುವಿಗೆ ಮಂಗಲವಾಗಲಿ.

॥ ಇತಿ ಶ್ರೀ ದತಾತ್ರೇಯ ಸ್ತುತಿಃ ಸ್ತೋತ್ರಂ ಸಂಪೂರ್ಣಂ ॥

----- ****** -----

# 12 ಆಂಜನೇಯ ಸ್ತೋತ್ರಗಳು

## 12.1 ಶ್ರೀ ಆಂಜನೇಯ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತಃಸ್ಮರಾಮಿ ಹನುಮಂತಮನಂತ ವೀರ್ಯಂ ।**
**ಶ್ರೀ ರಾಮಚಂದ್ರ ಚರಣಾಂಬುಜ ಚಂಚರೀಕಂ ॥**

**ಲಂಕಾಪುರೀ ದಹನ ನಂದಿತ ದೇವ ವೃಂದಂ ।**
**ಸರ್ವಾರ್ಥ ಸಿದ್ಧಿ ಸದನಂ ಪ್ರಥಿತ ಪ್ರಭಾವಂ ॥1॥**

ಭಾವಾರ್ಥ - ಉಷಃಕಾಲದಲ್ಲಿ ನಾನು ಹನುಮಂತನನ್ನು ನೆನೆಯುತ್ತಿರುವೆ. ಅವನಾದರೋ ಮಹಾಬಲಶಾಲಿಯಾಗಿದ್ದು ಶ್ರೀರಾಮಚಂದ್ರನ ಅಡಿದಾವರೆಯಲ್ಲಿ ಭ್ರಮರದಂತಿರುವನು. ಆತನಿಂದ ಲಂಕಾಪಟ್ಟಣವು ದಹಿಸಲ್ಪಟ್ಟಾಗ ದೇವತಾಸಮೂಹವೆಲ್ಲಾ ಸಂತಸಪಟ್ಟಿತ್ತು. ಸಮಸ್ತ ಸಿದ್ಧಿಗಳ ಕೇಂದ್ರಬಿಂದುವಿನಂತಿರುವ ಆತನು ವಿಶಾಲವಾದ ಪ್ರಭಾಶಕ್ತಿಯನ್ನು ಹೊಂದಿರುವನು.

**ಪ್ರಾರ್ನಮಾಮಿ ವೃಜಿನಾರ್ಣವ ತಾರಣೈಕಾ- ।**
**ಧಾರಂ ಶರಣ್ಯ ಮುದಿತಾನುಪಮ ಪ್ರಭಾವಂ ॥**

**ಸೀತಾऽಧಿಸಿಂಧು ಪರಿಶೋಷಣ ಕರ್ಮದಕ್ಷಂ ।**
**ವಂದಾರು ಕಲ್ಪತರುಮವ್ಯಯಮಾಂಜನೇಯೇಯಂ ॥2॥**

ಭಾವಾರ್ಥ - ಸಂಕಷ್ಟಗಳ ಸಾಗರವನ್ನು ದಾಟಲು ಇರುವ ಪ್ರಮುಖ ಆಧಾರದಂತಿರುವ, ಆಶ್ರಿತರನ್ನು ಪೊರೆಯುವ ಆದ್ವಿತೀಯವಾದ ಘನತೆಯುಳ್ಳ, ಸೀತಾದೇವಿಯ ಮನೋವ್ಯಥೆ ಎನ್ನುವ ಸಾಗರವನ್ನು ಇಂಗಿಸುವ ಮಹತ್ಕಾರ್ಯದಲ್ಲಿ ಸಮರ್ಥನೆನಿಸಿದ, ವಂದಿಸುವವರಿಗೆ ಕೊನೆಯಿಲ್ಲದ ಕಲ್ಪವೃಕ್ಷದಂತಿರುವ ಅಂಜನಾದೇವೀ ಸುಪುತ್ರನಾದ ಆಂಜನೇಯನನ್ನು ನಾನು ಉಷಃಕಾಲದಲ್ಲಿ ವಂದಿಸುತ್ತಲಿರುವೆ.

**ಪ್ರಾತರ್ಭಜಾಮಿ ಶರಣೋಪಸೃತಾಖಿಲಾರ್ತಿ- । ಪುಂಜ ಪ್ರಣಾಶನ ವಿಧೌ ಪ್ರಥಿತ ಪ್ರತಾಪಂ ॥ ಅಕ್ಷಾಂತಕಂ ಸಕಲ ರಾಕ್ಷಸ ವಂಶ ಧೂಮ- । ಕೇತುಂ ಪ್ರಮೋದಿತ ವಿದೇಹಸುತಂ ದಯಾಲುಂ ॥3॥**

ಭಾವಾರ್ಥ - ಶರಣುಹೊಕ್ಕವರ ಸಮಸ್ತ ದುರಿತಗಳ ಸಮೂಹವನ್ನೇ ನಾಶಮಾಡುವ ಕೀರ್ತಿಶಾಲಿ ಅಪ್ರತಿಮಶೌರಿಯೂ, ರಾವಣನ ಸುತನಾದ ಅಕ್ಷ ಕುಮಾರನ ಪ್ರಾಣಹರಣ ಗೈದ, ಸಮಸ್ತ ದಾನವಕುಲದ ನಾಶದ ಕುರುಹಾದ, ಜನಕರಾಜನ ತನಯೆ ಸೀತಾದೇವಿಯನ್ನು ಸಂತೋಷಗೊಳಿಸಿದ ಆ ದಯಾಮೂರುತಿ ಆಂಜನೇಯ ಸ್ವಾಮಿಯನ್ನು ನಾನು ಉಷಃಕಾಲದಲ್ಲಿ ಭಜಿಸುತ್ತೇನೆ.

॥ ಇತಿ ಶ್ರೀ ಅಂಜನೇಯ ಪ್ರಾತಃಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 12.2 ಶ್ರೀ ಹನುಮತ್ಪಂಚರತ್ನಂ

**ವೀತಾಖಿಲವಿಷಯೇಚ್ಛಂ ಜಾತಾನಂದಾಶ್ರುಪುಲಕಮತ್ಯಚ್ಛಂ । ಸೀತಾಪತಿದೂತಾದ್ಯಂ ವಾತಾತ್ಮಜ ಮದ್ಯ ಭಾವನೆಯೇ ಹೃದ್ಯಂ ॥1॥**

ಭಾವಾರ್ಥ - ವಿಷಯ ಸುಖಗಳ ಆಶೆಗಳೆಲ್ಲವನ್ನೂ ಬಿಟ್ಟು,ಸಂತೋಷದ ಕಣ್ಣೀರಿನಿಂದ ಪುಳಕಿತನಾದಂತಹಾ, ಅತ್ಯಂತ ಪರಿಶುಧ್ಧನಾಗಿರುವ, ಜಾನಕೀರಮಣನ ಆದಿ ಸೇವಕನಾದ, ಸುಂದರ ರೂಪಿನ ಆ ವಾಯುಪುತ್ರ ಆಂಜನೇಯನನ್ನು ನಾನಿಂದು ಹೃದಯಾಂತರಾಳದಿಂದ ಸ್ಮರಿಸುವೆನು.

**ತರುಣಾರುಣಮುಖಕಮಲಂ ಕರುಣಾರಸಪೂರಿತಾಪಾಂಗಂ ।**
**ಸಂಜೀವನಮಾಶಾಸೇ ಮಂಜುಲಮಹಿಮಾನಮಂಜನಾಭಾಗ್ಯಂ ॥2॥**

ಭಾವಾರ್ಥ - ಉದಯಸೂರ್ಯನ ಹಾಗೆ ಕಾಂತಿಯುಕ್ತವಾದ ಮುಖವನ್ನು ಹೊಂದಿದವನಾದ,ದಯಾರಸದ ಹರಿವು ತುಂಬಿದ ಕಡೆಗಣ್ಣುಗಳಿರುವ,ಜೀವದಾನ ಮಾಡುವ ಮನೋಜ್ಞ ಮನಸ್ಸಿನ, ಅಂಜನಾದೇವಿಯ ಪಾಲಿಗೆ ಭಾಗ್ಯಕಾರಕನಾದ ಆ ಹನುಮಂತನನ್ನು ನಾನು ಸ್ತುತಿಸುತ್ತೇನೆ.

**ಶಂಬರವೈರಿಶರಾತಿಗಮಂಬುಜದಲ ವಿಪುಲಲೋಚನಾದಾರಂ ।**
**ಕಂಬುಗಲಮನಿಲದಿಶಷ್ಟಂ ಬಿಂಬಜ್ವಲಿತೋಷ್ಠಮೇಕಮವಲಂಬೇ ॥3॥**

ಭಾವಾರ್ಥ - ಮನ್ಮಥನ ಬಾಣವನ್ನು ದೂರೀಕರಿಸಿದವನಾಗಿರುವ,ತಾವರೆಯ ದಳಗಳನ್ನು ಹೋಲುವ ವಿಶಾಲವಾದ ಕಣ್ಣುಗಳಿಂದ ಕೂಡಿ ಉದಾರ ಚರಿತನಾಗಿರುವ, ಶಂಖಾಕಾರದ ಕೊರಳನ್ನು ಹೊಂದಿರುವ,ಆ ವಾಯು ದೇವನಿಗೆ ಭಾಗ್ಯವನ್ನು ತಂದುಕೊಟ್ಟ, ತೊಂಡೆಯ ಹಣ್ಣಿನ ತೆರದ ಕಾಂತಿಯುಕ್ತ ತುಟಿಯನ್ನು ಹೊಂದಿದ ಆ ಅಂಜನೇಯನನ್ನು ಮಾತ್ರಾ ನಾನು ಆಶ್ರಯಿಸುವೆನು.

**ದೂರೀಕೃತಸೀತಾರ್ತಿಃಪ್ರಕಟೀಕೃತರಾಮ ವೈಭವಸ್ಫೂರ್ತಿಃ ।**
**ದಾರಿತ ದಶಮುಖಕೀರ್ತಿಃ ಪುರತೋ ಮಮ ಭಾತು ಹನುಮತೋ ಮೂರ್ತಿಃ ॥4॥**

ಭಾವಾರ್ಥ - ಜಾನಕೀದೇವಿಯ ವ್ಯಥೆಯನ್ನು ದೂರಮಾಡಿದ, ಶ್ರೀ ರಾಮಚಂದ್ರನ ವೈಭವದ ಸ್ಫೂರ್ತಿಯನ್ನು ಲೋಕಕ್ಕೆ ಪ್ರಕಟಗೊಳಿಸಿದ, ದಶಮುಖ ರಾವಣನ ಕೀರ್ತಿಯನ್ನು ಹರಣ ಮಾಡಿದ ಆ ಹನುಮಂತನ ಮೂರ್ತಿಯು ಯಾವಾಗಲೂ ನನ್ನೆದುರಿನಲ್ಲಿ ಶೋಭಿಸಲಿ.

**ವಾನರನಿಕರಾಧ್ಯಕ್ಷಂ ದಾನವಕುಲಕುಮುದರವಿಕರಸದೃಶಂ ।**
**ದೀನಜನಾವನದೀಕ್ಷಂ ಪವನತಪಃಪಾಕಪುಂಜಮದ್ರಾಕ್ಷಂ ॥5॥**

ಭಾವಾರ್ಥ - ವಾನರ ಸೈನ್ಯಕ್ಕೆ ಅಧಿನಾಯಕನಾಗಿ, ದೈತ್ಯಕುಲವೆಂದು ಹೇಳುವ ನೈದಿಲೆಗಳಿಗೆ ಸೂರ್ಯನ ಕಿರಣವಾಗಿ ನಾಶ ಮಾಡಿದ, ದೀನ ಜನರನ್ನು ರಕ್ಷಿಸುವುದರಲ್ಲಿ ದೀಕ್ಷಾಬಧ್ಧನ ತೆರದಿ ಆಸಕ್ತಿ ಹೊಂದಿದ್ದ, ಆ ವಾಯುದೇವರ ತಪ್ಪಸ್ಸಿನ ಸಿಧ್ಧಿಗಳ ಸಮೂಹ ರೂಪವೇ ಆಗಿರುವ ಆ ಆಂಜನೇಯ ಸ್ವಾಮಿಯನ್ನು ನಾನು ದರ್ಶನ ಮಾಡಿದೆನು.

**ಏತತ್ಪವನಸುತಸ್ಯ ಸ್ತೋತ್ರಂ ಯಃ ಪಠತಿ ಪಂಚರತ್ನಾಖ್ಯಂ ।**
**ಚಿರಮಿಹ ನಿಖಿಲಾನ್ಭೋಗಾನುಂಕ್ತ್ವಾ ಶ್ರೀರಾಮ ಭಕ್ತಿ ಭಾಗ್ಭವತಿ ॥6॥**

ಭಾವಾರ್ಥ - ಈ ಪಂಚರತ್ನ ಸ್ತೋತ್ರಂಗಳನ್ನು ಯಾರು ಪಠಣ ಮಾಡುವರೋ ಅವರು ಬಹುಕಾಲ ಈ ಲೋಕದ ಭೋಗಭಾಗ್ಯಂಗಳನ್ನು ಅನುಭವಿಸಿ ಭಗವಾನ್ ಶ್ರೀ ರಾಮಚಂದ್ರನ ಭಕ್ತಿಗೆ ಭಾಜನರಾವರು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಶ್ರೀ ಹನುಮತ್ಪಂಚರತ್ನಂ ಸಂಪೂರ್ಣಂ ॥

## 12.3 ಆಂಜನೇಯ ಶ್ಲೋಕ

**ಮಂಗಳಂ ಜ್ಞಾನರೂಪಾಯ ಮಹಾವಿಶ್ವ ಸ್ವರೂಪಿಣೇ ।**
**ಪ್ರಣವಾರ್ಥ ಸ್ವರೂಪಾಯ ಪ್ರಾಣ ರೂಪಾಯ ಮಂಗಳಂ ।**
**ಶ್ರಿಯಃಪತಿಂ ಸದಾಚಾರ್ಯಂ ನತ್ವಾ ಸರ್ವಾರ್ಥಕಾಮದಂ ।**
**ಕಪೀಶಾರಾಧನಂ ವಕ್ಷ್ಯೇ ರಾಜ್ಯ ರಾಷ್ಟ್ರಾಭಿ ವೃಧ್ಧಿದಂ ॥**

ಭಾವಾರ್ಥ - ಜ್ಞಾನ ಸ್ವರೂಪನೂ ಮಹಾ ವಿಶ್ವ ಸ್ವರೂಪನೂ ಓಂ ಕಾರ ರೂಪನೂ ಪ್ರಾಣ ರೂಪನೂ ಆದ ಆಂಜನೇಯ ಸ್ವಾಮಿಯೆ ನಿನಗೆ ಮಂಗಳವಾಗಲಿ. ನಿನ್ನನ್ನು ಆರಾಧಿಸುವುದರಿಂದ ಶ್ರೇಯಸ್ಸು, ಸದಾಚಾರಂಗಳೊಡನೆ ಸರ್ವ ರೀತಿಯ ಅರ್ಥ, ಕಾಮಗಳೂ ಈಡೇರಿ ರಾಜ್ಯ ರಾಷ್ಟ್ರಂಗಳು ಅಭಿವೃದ್ಧಿ ಆಗುವವು.

## 12.4 ಹನುಮಾನ್ ಪ್ರಾರ್ಥನಾ

**ಓಂ ನಮೋ ಹನುಮತೇ ಪೂರ್ವಸಂಧ್ಯಾರ್ಚಿತಂ ಮಯಾ ।**
**ನಮಸ್ತೇಸ್ತು ಮಹಾತೇಜಾಃ ತ್ರಾಹಿ ಮಾಂ ಭವಸಾಗರಾತ್ ॥**

ಭಾವಾರ್ಥ - ಹೇ! ಹನುಮಾನ್ಸ್ವಾಮೀಯೇ! ಉಷಃಕಾಲದಲ್ಲಿ ನಿನ್ನ ಅರ್ಚಿಸುವುದರ ಮೂಲಕವಾಗಿ ನಿನಗೆ ನಮಸ್ಕರಿಸುತ್ತೇನೆ, . ಮಹಾತೇಜೋಮಯನೇ ನಿನಗೆ ನನ್ನ ಪ್ರಣಾಮಂಗಳು. ನಿನ್ನಲ್ಲಿ ಶರಣು ಹೊಂದಿರುವ ನನ್ನನ್ನು ಈ ಸಂಸಾರ ಸಾಗರದಿಂದ ಪಾರು ಮಾಡು.

## 12.5 ಆಂಜನೇಯ ಪ್ರಾರ್ಥನಾ

**ಮರ್ಕಟೇಶ ಮಹೋತ್ಸಾಹ ಸರ್ವ ಶತ್ರುವಿನಾಶನ ।**

**ಶತ್ರೂಸಂಹರ ಮಾಂ ರಕ್ಷ ಶ್ರಿಯಂ ದಾಪಯ ದೇಹಿ ಮೇ ॥**

**ಆಂಜನಾಗರ್ಭಸಂಭೂತಂ ಮಹಾವೀರ್ಯಂ ಮಹೋಜ್ವಲಂ ।**

**ಮಹಾಪಾತಕ ಜಾಲಘ್ನಂ ಮಾರುತಿಂ ಪ್ರಣಮಾಮ್ಯಹಂ ॥**

ಭಾವಾರ್ಥ - ಕಪಿ ಸಮೂಹಕ್ಕೆ ಅಧಿಪತಿಯೂಗಿ,ಮಹಾ ಉತ್ಸಾಹ ಶಾಲಿಯೂಗಿ, ಕಾರ್ಯಚತುರನೂ ಆಗಿ, ಸರ್ವಶತ್ರುಗಳನಾಶಮಾಡುವವನೂ ಆದಂತಹಾ ಹೇ ಮಾರುತಿಯೇ ನನಗೆ ಶುಭವ ಕರುಣಿಸಿ ಆಪತ್ತಿಂದ ಕಾಪಾಡು. ಅಂಜನಾದೇವಿಯ ಗರ್ಭದಲ್ಲಿ ಹುಟ್ಟಿದ ಮಹಾ ಶಕ್ತಿಶಾಲಿಯೂ ಮಹಾ ಪ್ರಕಾಶವಂತನೂ ಮಹಾಪಾತಕಂಗಳನ್ನು ಜಾಲಾಡುವವನೂ ಆದ ಮಾರುತಿಯೇ ನಾನು ನಮಸ್ಕರಿಸುತ್ತೇನೆ

## 12.6 ಶ್ರೀ ಪಂಚಮುಖಿ ಹನುಮಾನ್ ಕವಚ ಸ್ತೋತ್ರಂ

**ಓಂ ಅಸ್ಯ ಶ್ರೀ ಪಂಚಮುಖಿ ಹನುಮತ್ ಕವಚ ಸ್ತೋತ್ರ ಮಹಾ ಮಂತ್ರಸ್ಯ ಬ್ರಹ್ಮಾ ಋಷಿಃ । ಗಾಯತ್ರೀ ಛಂದಃ । ಶ್ರೀ ಹನುಮಾನ್ ದೇವತಾ । ರಾಂ ಬೀಜಂ । ಮಂ ಶಕ್ತಿಃ । ಚಂದ್ರ ಇತಿ ಕೀಲಕಂ । ಓಂ ರೌಂ ಕವಚಾಯ ಹುಂ । ಹ್ರೌಂ ಅಸ್ತ್ರಾಯ ಫಟ್ ॥**

ಭಾವಾರ್ಥ - ಪಂಚಮುಖಿ ಹನುಮಾನ್ ಕವಚ ಸ್ತೋತ್ರ ಮಹಾ ಮಂತ್ರದ ಋಷಿ ಬ್ರಹ್ಮ, ಇದು ಗಾಯತ್ರೀ ಛಂದಸ್ಸಿನಲ್ಲಿ ಇದ್ದು ಹನುಮಂತನು ಇದರ ಉಪಾಸ್ಯ ದೇವತೆ. "ರಾಂ" ಇದರ ಬೀಜಾಕ್ಷರ. "ಮಂ" ಇದರ ಶಕ್ತಿ, "ಚಂದ್ರ" ಎಂಬುದು ಇದರ ಕೀಲಕ. "ರೌಂ" ಇದರ ಕವಚ. "ಹ್ರೌಂ" ಈ ಸ್ತೋತ್ರಕ್ಕೆ ಬಾಣದ ಹಾಗೆ ಬಲ ಕೊಡುತ್ತದೆ. " ಫಟ್ " ಇದಕ್ಕೆ ರಕ್ಷಾತ್ಮಕವಾಗಿದೆ.

**ಈಶ್ವರ ಉವಾಚ**

ಭಾವಾರ್ಥ - ಈಶ್ವರನು ಪಾರ್ವತೀ ದೇವಿಗೆ ಹೇಳುವನು

**ಅಥ ಧ್ಯಾನಂ ಪ್ರವಕ್ಷ್ಯಾಮಿ ಶೃಣು ಸರ್ವಾಂಗ ಸುಂದರಂ ।**
**ಯತ್ಕೃತ್ವಾ ದೇವ ದೇವೇಶಿ ಧ್ಯಾನಃ ಹನುಮತಃ ಪ್ರಿಯಂ ॥1॥**

**ಪಂಚವಕ್ತ್ರಂ ಮಹಾಬೀಮಂ ಕಪಿಯೂಥ ಸಮನ್ವಿತಂ ।**
**ಬಾಹುಬಿರ್ದಶಭಿರ್ಯುಕ್ತಂ ಸರ್ವ ಕಾಮಾರ್ಥ ಸಿದ್ಧಿದಂ ॥2॥**

**ಪೂರ್ವಂತು ವಾನರಂ ವಕ್ತ್ರಂ ಕೋಟಿಸೂರ್ಯ ಸಮಪ್ರಭಂ ।**
**ದಂಷ್ಟ್ರಾಕರಾಲವದನಂ ಭ್ರುಕುಟೀ ಕುಟಿಲೇಕ್ಷಣಂ ॥3॥**

**ಅಸ್ಯೈವ ದಕ್ಷಿಣಂ ವಕ್ತ್ರಂ ನಾರಸಿಂಹ ಮಹಾದ್ಭುತಂ ।**
**ಅತ್ಯುಗ್ರ ತೇಜೋವಪುಷಂ ಭೀಷಣಂ ಭಯನಾಶನಂ ॥4॥**

**ಪಶ್ಚಿಮೇ ಗಾರುಡಂ ವಕ್ತ್ರಂ ವಕ್ರತುಂಡಂ ಮಹಾಬಲಂ ।**
**ಸರ್ವನಾಶಪ್ರಶಮನಂ ಸರ್ವಭೂತಾದಿ ಕೃಂತನಂ ॥5॥**

**ಉತ್ತರೇ ಸೌಕರಂ ವಕ್ತ್ರಂ ಕೃಷ್ಣ ದೀಪನಭೋಮಯಂ ।**
**ಪಾತಾಲೇ ಸಿದ್ಧಿವೇತಾಲಂ ಜ್ವರರೋಗಾದಿ ಕೃಂತನಂ ॥6॥**

**ಊರ್ಧ್ವಂ ಹಯಾನನಂ ಘೋರಂ ದಾನವಾಂತ ಕರಂ ಪರಂ ।**
**ಏನ ವಕ್ತ್ರೇಣ ವಿಪ್ರೇಂದ್ರ ತಾಟಕಾಯ ಮಹಾಹವೇ ॥7॥**

**ದುರ್ಗತೇಶ್ಶರಣಂ ತಸ್ಯ ಸರ್ವಶತ್ರುಹರಂ ಪರಂ ।**
**ಧ್ಯಾತ್ವಾ ಪಂಚಮುಖಂ ರುದ್ರಂ ಹನುಮಂತಂ ದಯಾನಿಧಿಂ ॥8॥**

**ಖಡ್ಗಂ ತ್ರಿಶೂಲಂ ಖಟ್ವಾಂಗಂ ಪಾಶಮಂಕುಶಪರ್ವತಂ ।**
**ಮುಷ್ಟೌಚ ಮೋದಕೌ ವೃಕ್ಷಂ ಧಾರಯಂತಂ ಕಮಂಡಲುಂ ॥9॥**

**ಭಿಂದಿ ಪಾಲಂ ಜ್ಞಾನಮುದ್ರಾಂ ದಶಮಂ ಪುನಿಪುಂಗವ ।**
**ಏತಾನ್ಯಾಯುಧ ಜಾಲಾನಿ ಧಾರಯಂ ತಂ ಭಯಾವಹಂ ॥10॥**

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।**
**ಸರ್ವೈಶ್ವರ್ಯಮಯಂ ದೇವಂ ಹನುಮದ್ವಿಶ್ವತೋ ಮುಖಂ ॥11॥**

**ಪಂಚಾಸ್ಯಮಚ್ಯುತಮನೇತ ವಿಚಿತ್ರವರ್ಣಂ ।**

**ವಕ್ತ್ರಂ ಸಶಂಖ ವಿಭೃತಂ ಕವಿರಾಜ ವೀರ್ಯಂ ॥**

**ಪೀತಾಂಬರಾದಿ ಮುಕುಟೈರಪಿ ಶೋಭಿತಾಂಗಂ ।**

**ಪಿಂಗಾಕ್ಷಮಂಜನಾಸುತಂ ಹ್ಯನಿಶಂ ಸ್ಮರಾಮಿ ॥12॥**

**ಮರ್ಕಟಸ್ಯ ಮಹೋತ್ಸಾಹಂ ಸರ್ವ ಶೋಕವಿನಾಶನಂ ।**

**ಶತ್ರು ಸಂಹಾರಕಂ ಚೈತಕ್ ಕವಚಂ ಹ್ಯಾಪದಂ ಚರೇತ್ ॥13॥**

**॥ ಓಂ ಹರಿ ಮರ್ಕಟ ಮರ್ಕಟಾಯ ಘಟ್ ಸ್ವಾಹಾ॥**

**ಓಂ ನಮೋ ಭಗವತೇ ಪಂಚವದನಾಯ ಪೂರ್ವ ಕಪಿಮುಖಾಯ ಸಕಲ ಶತ್ರು ಸಂಹರಣಾಯ ಘಟ್ ಸ್ವಾಹಾ ॥14॥**

**ಓಂ ನಮೋ ಭಗವತೇ ಪಂಚವದನಾಯ ಉತ್ತರ ಮುಖಾಯ ಆದಿವರಾಹಾಯ ಸಕಲ ಸಂಪತ್ಕರಾಯ ಘಟ್ ಸ್ವಾಹಾ ॥15॥**

**ಓಂ ನಮೋ ಭಗವತೇ ಪಂಚವದನಾಯ ಊರ್ಧ್ವಮುಖಾಯ ಹಯಗ್ರೀವಾಯ ಕಲಿಜನ ವಶ್ಯಕರಾಯ ಘಟ್ ಸ್ವಾಹಾ ॥16॥**

॥ ಇತಿ ಶ್ರೀ ಸುದರ್ಶನ ಸಂಹಿತಾಯಾಂ ಚಿಂತಾಮಣಿ ರಾಮಭದ್ರ ಅಧ್ಯಾಯೇ ಪಂಚಮುಖಿ ಹನುಮಾನ್ ಕವಚ ಸ್ತೋತ್ರಂ ಸಂಪೂರ್ಣಂ ॥

ಭಾವಾರ್ಥ - ಪಂಚಮುಖಿ ಹನುಮಂತಂಗೆ5ಮುಖಗಳು10ತೋಳುಗಳೂ ಇದ್ದು ಭಕ್ತಾದಿಗಳಿಗೆ ಅನುಗ್ರಹ ನೀಡುವ ರೂಪದಲ್ಲಿ ಇದ್ದು. ಪೂರ್ವ ದಿಕ್ಕಿನಲ್ಲಿ ಮಂಗನ ಮುಖವೂ, ದಕ್ಷಿಣ ದಿಕ್ಕಿನಲ್ಲಿ ನರಸಿಂಹ ದೇವರ ಮುಖವೂ, ತೇಜೋಮಯವಾಗಿ ಇದ್ದು. ಪಶ್ಚಿಮ ದಿಕ್ಕಿನಲ್ಲಿ ಗರುಡನ ಮುಖವೂ, ಉತ್ತರ ದಿಕ್ಕಿನಲ್ಲಿ ಹಂದಿಯ ಮುಖವೂ ಇದ್ದು ನಾಗ ಭೇತಾಳಾದಿ ದುಷ್ಟ ಶಕ್ತಿಗಳನ್ನು ನಾಶ ಪಡಿಸುತ್ತಿದೆ. ಊರ್ಧ್ವ ಮುಖವು [ಮೇಲ್ಮೊಗ] ಕುದುರೆಯ ಮುಖವನ್ನು ಹೋಲುತ್ತಿದ್ದು ದೈತ್ಯ ಶಕ್ತಿಯನ್ನು ನಾಶ ಮಾಡುವ ಶಕ್ತಿ ಹೊಂದಿರುತ್ತದೆ. ಈ ರೀತಿಯಾಗಿರುವಂತಹಾ

ದಯಾನಿಧಿಯೂ ದುಃಖ ನಿವಾರಕನೂ ಆಗಿರುವ ಪಂಚ ಮುಖಿ ಹನುಮನನ್ನು ಸ್ಮರಣೆ ಮಾಡಬೇಕು

ಹನುಮಂತನ ಕೈಗಳಲ್ಲಿ ಕತ್ತಿ, ತ್ರಿಶೂಲ, ಪಾಶ, ಮಂಚದ ಕಾಲುಗಳನ್ನು ಹೋಲುವ ಆಯುಧ, ಅಂಕುಶ, ಬಂಡೆ, ಮೋದಕಂಗಳು, ಮರ, ಕಮಂಡಲು, ಭಿಂದಿ, ಹಾಗೂ ಜ್ಞಾನಮುದ್ರೆಯೂ ಇದ್ದು. ಈರೀತಿಯಾಗಿರುವ ಹನುಮಂತ ದಿವ್ಯ ಮಂದಾರ ಹೂವಿನ ಮಾಲೆಯನ್ನು ಧರಿಸಿ ಸರ್ವ ಐಶ್ವರ್ಯವನ್ನು ದಯಪಾಲಿಸುವವನಾಗಿರುವನು. ಅಂತಹಾ ಪಂಚವದನ,ಪಂಚ ವರ್ಣ, ಪೀತಾಂಬರ, ಕಿರೀಟಾದಿಗಳಿಂದ ಶೃಂಗಾರವಾಗಿರುವ ಆಂಜನೇಯ ಸ್ವಾಮಿಯನ್ನು ನಾನು ಧ್ಯಾನಿಸುತ್ತೇನೆ. ಕಪಿ ಸೈನ್ಯಕ್ಕೆ ಉತ್ಸಾಹವದಾಯಕನೂ, ಎಲ್ಲಾ ಸಂಕಷ್ಟಗಳ ವಿನಾಶಕನೂ, ಶತೃ ಸಂಹಾರಕಾರಕನೂ ಆಗಿರುವ ಹನಮಂತನ ಕವಚ ಆಪತ್ ನಾಶಕವಾಗಿ ಚೈತನ್ಯವನ್ನು ಕೊಡುತ್ತದೆ. ಕಪಿರೂಪದ ಹನುಮಂತನ ನಾಮಸ್ಮರಣೆಯು ಜಪಯಜ್ಞದ ಸ್ವಾಹಾಕಾರವಾಗಿದ್ದು ಐದು ಮುಖಗಳನ್ನು ಹೊಂದಿ ಪೂರ್ವ ದಿಕ್ಕಿನ ಕಪಿ ಮೊಗವು ಶತೃ ಸಂಹಾರಕವಾಗಿದ್ದು. ಉತ್ತರದಿಕ್ಕಿನ ಹಂದಿಯ ಮೊಗದ ಹನುಮಂತನ ನಾಮ ಸ್ಮರಣೆ ಸರ್ವ ಸಂಪತ್ಪ್ರದಾಯಕವಾಗಿದ್ದು. ಐದು ಮೊಗಗಳನ್ನು ಹೊಂದಿ ಮೇಲ್ಮೊಗನಾಗಿರುವ ಸಕಲ ಜನ ವಶೀಕರಣ ಶಕ್ತಿಯ ಅನುಗ್ರಹಿಸುವ ಹನುಮಂತನಿಗೆ ಸ್ವಾಹಾಕಾರ ಸಹಿತವಾಗಿ ನಮಸ್ಕಾರಗಳು.

## 12.7 ಶ್ರೀ ಹನುಮತ್ ಸ್ತೋತ್ರಂ

**ಅಕ್ಷಾದಿ ರಾಕ್ಷಸಹರಂ ದಶಕಂಠದರ್ಪನಿರ್ಮೂಲನಂ ರಘುವರಾಂಘ್ರಿಸರೋಜಭಕ್ತಂ ।**
**ಸೀತಾವಿಷಹ್ಯ ಘನದುಃಖ ನಿವಾರಕಂ ತಂ ವಾಯೋಃ ಸುತಂ ಗಿಲಿತ ಭಾನುಮಹಂ ನಮಾಮಿ ॥1॥**

**ಮಾಂ ಪಶ್ಯ ಪಶ್ಯ ದಯಯಾ ನಿಜದೃಷ್ಟಿಪಾತೈಃ ಮಾ ರಕ್ಷ ರಕ್ಷ ಪರಿತೋ ರಿಪುದುಃಖಪುಂಜಾತ್ ।**
**ವಶ್ಯಂ ಕುರು ತ್ರಿಜಗತಾಂ ವಸುಧಾಧಿಪಾನಾಂ ಮೇ ದೇಹಿ ದೇಹಿಮೇ ವಸುಧಾಶ್ರಯಂಚ ॥2॥**

**ಆಪದ್ಭ್ಯೋ ರಕ್ಷ ಸರ್ವತ್ರ ಆಂಜನೇಯ ನಮೋಸ್ತುತೇ ।**
**ಬಂಧನಂ ಛೇದಯಾಭುಕ್ತ ಕಪಿವರ್ಯ ನಮೊಸ್ತುತೇ ॥3॥**

**ಮೇ ದೇಹಿಮೇ ಸಂಪದೋ ನಿತ್ಯಂ ತ್ರಿಲೋಚನ ನಮೋಸ್ತುತೇ ।**
**ದುಷ್ಟರೋಗಾನ್ ಹನ ಹನ ರಾಮದೂತ ನಮೋಸ್ತುತೇ ॥4॥**

**ಉಚ್ಚಾಟಯ ರಿಪೂನ್ಸರ್ವಾನ್ ಮೋಹನಂ ಕುರು ಭೂಭುಜಾಂ ।**
**ವಿದ್ವೇಷಿನೋ ಮಾರಯ ತ್ವಂ ತ್ರಿಮೂರ್ತ್ಯಾತ್ಮಕ ಸರ್ವದಾ ॥5॥**

**ಸಂಜೀವ ಪರ್ವತೋದ್ಧಾರ ಮಮ ದುಃಖಾನ್ನಿವಾರಯ ।**
**ಘೋರಾನುಪದ್ರವಾನ್ಸರ್ವಾನ್ ನಾಶಯಾಕ್ಷಾಸುರಾಂತಕ ॥6॥**

**ಏವಂ ಸ್ತುತ್ವಾ ಹನೂಮಂತಂ ನರಃ ಶ್ರದ್ಧಾ ಸಮನ್ವಿತಃ ।**
**ಪುತ್ರಪೌತ್ರಾದಿ ಸಹಿತಃ ಸರ್ವಾನ್ ಕಾಮಾನವಾಪ್ನುಯಾತ್ ॥7॥**

**ಮರ್ಕಟೇಶ ಮಹೋತ್ಸಾಹ ಸರ್ವ ಶೋಕ ವಿನಾಶಕ ।**
**ಶತ್ರೂನ್ ಸಂಹರ ಮಾಂ ರಕ್ಷ ಶ್ರಿಯಂ ದತ್ವಾಚ ಮಾಂ ಭರ ॥8॥**

॥ ಇತಿ ಶ್ರೀ ಹನುಮತ್ ಸ್ತೋತ್ರಂ ಸಂಪೂರ್ಣಂ ॥

ಭಾವಾರ್ಥ - ರಾವಣನ ಮಗನಾದ ಅಕ್ಷಯ ಕುಮಾರಾದಿ ರಾಕ್ಷಸರ ಸಮೂಹವನ್ನು ನಿರ್ಮೂಲನೆ ಮಾಡಿ ರಾವಣನ ದರ್ಪವನ್ನು ಮುರಿದಂತಹಾ ಶ್ರೀರಾಮನ ಚರಣದಾಸನೂ ಸೀತಾದೇವಿಯ ದುಃಖವನ್ನು ನಿವಾರಿಸಿದವನೂ, ಆಗಿರುವ ವಾಯುಕುಮಾರ ಹನುಮಂತನೇ ನಿನಗಿದೋ ನನ್ನ ನಮಸ್ಕಾರ.

ಹೇ! ಹನುಮಾ, ನನ್ನತ್ತ ದಯಾದೃಷ್ಟಿಯಿಂದ ನೋಡಿ ಶತೃಗಳಿಂದ ರಕ್ಷಿಸು,ರಾಜನನ್ನು ವಷೀಕರಿಸುವ ಶಕ್ತಿ ಹಾಂಗೂ ಸರ್ವ ಜನರನ್ನು ವಶೀಕರಣಗೊಳಿಸಿಕೊಳ್ಳುವ ಶಕ್ತಿಯನ್ನು ಕರುಣಿಸಿ ಐಶ್ವರ್ಯವನ್ನು ದಯಪಾಲಿಸು.

ಆಪತ್ತುಗಳಿಂದ ನನ್ನನ್ನು ರಕ್ಷಿಸುವುದರೊಂದಿಗೆ ಬಂಧನದಿಂದ ಬಿಡುಗಡೆ ಮಾಡುವ ಯುಕ್ತಿಶಾಲೀ ಹೇ! ವಾನರ ನಾಯಕ ಆಂಜನೇಯ ಸ್ವಾಮಿಯೇ ನಿನಗೆ ನನ್ನ ನಮಸ್ಕಾರಂಗಳು.

ನನಗೆ ಸದಾ ಸಂಪತ್ತನ್ನೇ ಕರುಣಿಸುವ ತ್ರಿಲೋಚನಾ ನನ್ನನ್ನಾಕ್ರಮಿಸುವ ಸಕಲ ರೋಗಂಗಳನ್ನೂ ಪರಿಹರಿಸು ಅಂತ ನಾನು ಬೇಡಿಕೊಳ್ಳುವೆನು.

ಸ್ವಾಮೀ, ಆಂಜನೇಯಾ, ನನ್ನ ಶತೃಗಳನ್ನು ದೂರವಿಡು. ರಾಜರೂ ಅಧಿಕಾರಿಗಳೂ ನನಗೆ ಅನುಕೂಲರಾಗಿರುವ ಹಾಗೆ ಅವರನ್ನು ನಿನ್ನ ಮೋಹಾಪಾಶಕ್ಕೆ ಸಿಲುಕಿಸು. ನನ್ನನ್ನು ದ್ವೇಷಿಸುವವರನ್ನು ಶಿಕ್ಷೆಗೆ ಗುರಿ ಮಾಡು. ಹೇ! ತ್ರಿಮೂರ್ತಿ ಸ್ವರೂಪಾ ನಿನಗೆ ನನ್ನ ನಮಸ್ಕಾರಗಳು.

ಸಂಜೀವಿನಿ ಪರ್ವತವನ್ನು ಹೊತ್ತ ಧೀರ ಮಾರುತಿಯೇ, ನನ್ನ ಶೋಕಂಗಳನ್ನು ಎಲ್ಲಾ ಪರಿಹರಿಸಿ ಘೋರವಾದಂತಹಾ ಉಪದ್ರವಗಳಿಂದ [ಶತ್ರು ಭಯವೇ ಆದಿಯಾಗಿ ಋಣ ಭಾರಂಗಳಿಂದ] ನನ್ನನ್ನು ಸದಾ ರಕ್ಷಿಸು ಸ್ವಾಮೀ.

ಈರೀತಿಯಾಗಿ ಯಾರು ಶ್ರದ್ಧಾಭಕ್ತಿಯಿಂದ ಆಂಜನೇಯನನ್ನು ಸ್ತುತಿಸುತ್ತಾರೋ ಅವರು ಮಕ್ಕಳು ಮೊಮ್ಮಕ್ಕಳ ಸಹಿತವಾಗಿ ಸಕಲ ಸೌಭಾಗ್ಯವನ್ನು ಅನುಭವಿಸುತ್ತಾರೆ.

ಕಪಿ ಸಮೂಹಕ್ಕೆ ಅಧಿಪತಿಯೂ, ಮಹಾ ಉತ್ಸಾಹ ಶಾಲಿಯೂ, ಕಾರ್ಯಚತುರನೂ, ಸರ್ವಶತ್ರುಗಳನ್ನು ನಾಶಮಾಡುವವನೂ ಆದಂತಹಾ ಹೇ ಮಾರುತಿಯೇ ನನಗೆ ಶುಭವನ್ನು ಕರುಣಿಸಿ ಆಪತ್ತಿನಿಂದ ಕಾಪಾಡು.

## 12.8 ಹನುಮದ್ರಕ್ಷಾ ಸ್ತೋತ್ರಂ

**ವಾಮೇಕರೇ ವೈರಿಭಿದಂ ವಹಂತಂ ಶೈಲಂ ಪರೇ ಶೃಂಖಲಹಾರಿಟಂಕಂ ।**

**ದಧಾನಮಚ್ಛಂತು ಸುವರ್ಣ ವರ್ಣಂ ಭಜೇ ಜ್ವಲತ್ಕುಂಡಲಮಾಂಜನೇಯಂ ॥1॥**

**ಪದ್ಮರಾಗ ಮಣಿಕುಂಡಲತ್ವಿಷಾ ಪಾಟಲೀ ಕೃತ ಕಪೋಲಮಸ್ತಕಂ ।**
**ದಿವ್ಯ ಹೇಮಕದಲೀವನಾಂತರೇ ಭಾವಯಾಮಿ ಪವಮಾನನಂದನಂ ॥2॥**

**ಉದ್ಯದಾದಿತ್ಯ ಸಂಕಾಶಮುದಾರ ಭುಜವಿಕ್ರಮಂ ।**
**ಕಂದರ್ಪಕೋಟಿಲಾವಣ್ಯಂ ಸರ್ವ ವಿದ್ಯಾವಿಶಾರದಂ ॥3॥**

**ಶ್ರೀ ರಾಮ ಹೃದಯಾನಂದಂ ಭಕ್ತ ಕಲ್ಪಮಹೀರುಹಂ ।**
**ಅಭಯಂ ವರದಂ ದೋರ್ಭ್ಯಾಂ ಕಲಯೇ ಮಾರುತಾತ್ಮಜಂ ॥4॥**

**ವಾಮಹಸ್ತ ಮಹಾಕೃಚ್ಛ್ರ ದಶಾಸ್ಯಕರ ಮರ್ದನಂ ।**
**ಉದ್ಯದ್ವೀಕ್ಷಣ ಕೋದಂಡಂ ಹನೂಮಂತಂ ವಿಚಿಂತಯೇತ್ ॥5॥**

**ಹನೂಮಾನಂಜನೀ ಸೂನುಃ ವಾಯು ಪುತ್ರೋ ಮಹಾಬಲಃ ।**
**ರಾಮೇಷ್ಟಃ ಫಲ್ಗುಣ ಸಖಃ ಪಿಂಗಾಕ್ಷೋಸ್ ಮಿತವಿಕ್ರಮಃ ॥6॥**

**ಉದಧಿಕ್ರಮಣಶ್ಚೈವ ಸೀತಾಶೋಕವಿನಾಶನಃ ।**
**ಲಕ್ಷ್ಮಣ ಪ್ರಾಣದಾತಾ ಚ ದಶಗ್ರೀವಸ್ಯ ದರ್ಪಹಾ ॥7॥**

**ಏವಂ ದ್ವಾದಶನಾಮಾನಿ ಕಪೀಂದ್ರಸ್ಯ ಮಹಾತ್ಮನಃ ।**
**ಸ್ವಾಪಕಾಲೇ ಪ್ರಬೋಧೇಚ ಯಾತ್ರಾಕಾಲೇ ಚ ಯಃ ಪಠೇತ್ ।**
**ತಸ್ಯ ಸರ್ವಭಯಂ ನಾಸ್ತಿ ರಣೇ ಚ ವಿಜಯೋ ಭವೇತ್ ॥8॥**

**ಉಲ್ಲಂಘ್ಯ ಸಿಂಧೋಸ್ಸಲಿಲಂ ಸಲೀಲಂ ಯಃ ಶೋಕವಹ್ನಿಃ ಜನಕಾತ್ಮಜಾಯಾಃ ।**
**ಆದಾಯ ತೇನೈವ ದದಾಹ ಲಂಕಾಂ ನಮಾಮಿ ತಂಪ್ರಾಂಜಲಿರಾಂಜನೇಯಂ ॥9॥**

**ಸ್ಫಟಿಕಾಭಂ ಸ್ವರ್ಣಕಾಂತಿಂ ದ್ವಿಭುಜಂ ಕೃತಾಂಜಲಿಂ ।**
**ಕುಂಡಲದ್ವಯ ಸಂಶೋಭಿ ಮುಖಾಂಭೋಜಂ ಹರಿಂ ಭಜೇ ॥10॥**

**ಮನೋಜವಂ ಮಾರುತತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ ।**
**ವಾತಾತ್ಮಜಂ ವಾನರ ಯೂಥಮುಖ್ಯಂ ಶ್ರೀ ರಾಮ ದೂತಂ ಶಿರಸಾ ನಮಾಮಿ ॥11॥**

॥ ಇತಿ ಶ್ರೀ ಸುದರ್ಶನ ಸಂಹಿತಾಯಾಂ ಹನುಮದ್ರಕ್ಷಾ ಸ್ತೋತ್ರಂ ಸಂಪೂರ್ಣಂ ॥

ಭಾವಾರ್ಥ - ಈ ಸ್ತೋತ್ರಂಗೊ ಸುದರ್ಶನ ಸಂಹಿತೆ ಇಪ್ಪದು. ಎಡ ಗೈಯಲ್ಲಿ ವಜ್ರಾಯುಧವನ್ನೂ, ಬಲಗೈಯಲ್ಲಿ ಪರ್ವತ ಹಾಗೂ ಕಲ್ಲುಳಿ [ಟಂಕ] ವನ್ನೂ ಹಿಡಿದುಕೊಂಡು ಶುದ್ಧ ಬಂಗಾರದ ಕಾಂತಿಯ ಶರೀರವನ್ನು ಹೊಂದಿ, ಹೊಳೆವ ಕರ್ಣಕುಂಡಲಧಾರಿಯಾಗಿರುವ ಹನುಮನನ್ನು ನಾನು ಭಜಿಸುತ್ತೇನೆ.

ಪದ್ಮರಾಗದ ಹಾಗೆ ನಸುಕೆಂಪು ಬಣ್ಣದಿಂದ ಹೊಳೆವ ಕೆನ್ನೆ, ಹಾಗೂ ಮುಂದಲೆಗಳಿಂದ ಶೋಭಿತನಾಗಿ ಕದಳೀ ವನದಲ್ಲಿ ನೆಲೆಸಿಕೊಂಡು ಇರುವ ವಾಯು ಕುಮಾರನನ್ನು ನಾನು ಸದಾ ಪ್ರಾರ್ಥಿಸುತ್ತೇನೆ.

ಉದಯಸೂರ್ಯನ ಹಾಗೆ ಪ್ರಕಾಶಮಾನವಾಗಿರುವ, ವಿಶಾಲವಾಗಿರುವ ಭುಜಗಳನ್ನು ಹೊಂದಿರುವ ಕೋಟಿ ಮನ್ಮಥರನ್ನು ಮೀರಿಸುವಷ್ಟು ಸೌಂದರ್ಯವಿರುವ, ಸಕಲ ವಿದ್ಯಾ ಪಾರಂಗತನಾಗಿ ಶ್ರೀರಾಮನಿಗೆ ಸಂತೋಷ ಆಗುವ ಹಾಗೆ ವರ್ತಿಸುವ, ಭಕ್ತಾದಿಗಳಿಗೆ ಕಲ್ಪವೃಕ್ಷದ ಹಾಗಿದ್ದು ಅಭಯ ವರದ ಹಸ್ತನಾಗಿರುವ ವಾಯು ಪುತ್ರನನ್ನು ನಾನು ಪ್ರಾರ್ಥಿಸುತ್ತೇನೆ.

ಎಡ ಕೈಯಿಂದಲೇ ರಾವಣನ ಕೈಗಳಿಗೆ ಹಾನಿ ಮಾಡಿ ತೀಕ್ಷ್ಣವಾದ ದೃಷ್ಟಿಯನ್ನೇ ಬಿಲ್ಲಾಗಿ ಉಪಯೋಗಿಸುತ್ತಾ ಇರುವ ಹನುಮನನ್ನು ನಾನು ಪ್ರಾರ್ಥಿಸುತ್ತೇನೆ.

ಹನುಮಾನ್, ಅಂಜನಾಪುತ್ರ, ವಾಯು ಪುತ್ರ, ಮಹಾಬಲ, ರಾಮಪ್ರಿಯ, ಫಲ್ಗುಣ ಸಖ, ಪಿಂಗಾಕ್ಷ, ಅಮಿತವಿಕ್ರಮ ಉದಧಿವಿಕ್ರಮ, ಸೀತಾಶೋಕವಿನಾಶಕ, ಲಕ್ಷ್ಮಣ ಪ್ರಾಣದಾತಾ, ದಶಗ್ರೀವ ದರ್ಪಘ್ನ ಈ ರೀತಿಯಲ್ಲಿರುವ ಹನುಮಂತನ ಹನ್ನೆರಡು ಪುಣ್ಯಕರವಾಗಿಪ್ಪ ಹೆಸರುಗಳನ್ನು ಯಾರು ಉಷ ಕಾಲದಲ್ಲಿ ನಿದ್ರೆಯಿಂದ ಏಳುವಾಗ, ರಾತ್ರೆ ಮಲಗುವಾಗ, ಪ್ರಯಾಣ ಮಾಡುವ ಮೊದಲು ಸ್ಮರಿಸುತ್ತಾರೋ ಅವರಿಗೆ ಸರ್ವ ಭಯವೂ ನಾಶ ಆಗಿ ವಾದ ವಿವಾದಗಳಲ್ಲಿ, ಯುದ್ಧಗಳಲ್ಲಿ, ಖಂಡಿತವಾಗಿಯೂ ಜಯ ದೊರಕುವುದು.

ಮಹಾಸಾಗರವನ್ನು ಲೀಲಜಾಲವಾಗಿ ದಾಟಿ, ಸೀತೆಯ ದುಃಖಾಗ್ನಿಯಿಂದಲೇ ಲಂಕೆಯನ್ನು ಸುಟ್ಟು, ಶ್ರೀರಾಮನ ಮುಂದೆ ಸದಾ ಅಂಜಲೀಬದ್ಧನಾಗಿ ನಮಸ್ಕಾರ ಮಾಡುವ ಆಂಜನೇಯನಿಗೆ ನಮಸ್ಕಾರಗಳು,

ಸ್ಫಟಿಕದ ಹಾಗೆ ಅಪ್ಪಟ ಬಂಗಾರದಾಗೆ ಪ್ರಕಾಷಮಾನವಾಗಿರುವ, ಸದಾ ಕೈ ಮುಗಿದು ಕೊಂಡಿರುವ ಕುಂಡಲಧಾರಿ ಆದ ವಾನರವೀರನಿಗೆ ನನ್ನ ನಮಸ್ಕಾರಗಳು.

ಮನೋವೇಗದಲ್ಲಿ ಸಂಚಾರ ಮಾಡುವವನೂ, ಇಂದ್ರಿಯಂಗಳನ್ನು ಜೈಸಿದವನೂ, ಮಹಾಬುದ್ಧಿವಂತನೂ, ಆಗಿ ಕಪಿಸೇನಾನಿಯೂ ಆಗಿರುವ ಆಪತ್ಪರಿಹಾರಕ ಶ್ರೀರಾಮ ದೂತನಿಗೆ ನಾನು ಶಿರಸಾ ನಮಸ್ಕರಿಸುತ್ತೇನೆ.

## 12.9 ಆಪದುದ್ಧರಣ ಹನುಮತ್ ಸ್ತೋತ್ರಂ

**ಅಸ್ಯ ಶ್ರೀ ಆಪದುದ್ಧರಣ ಹನುಮತ್ ಸ್ತೋತ್ರ ಮಂತ್ರಸ್ಯ ವಿಭೀಷಣ ಋಷಿಃ ।**
**ಆಪದುದ್ಧರಣೋ ಹನುಮಾನ್ ದೇವತಾ । ಆಪದುದ್ಧರಣ ಹನುಮತ್ಪ್ರಸಾದ**
**ಸಿದ್ಧ್ಯರ್ಥೇ ಜಪೇ ವಿನಿಯೋಗಃ ॥**

ಭಾವಾರ್ಥ - ಈ ಆಪದುದ್ಧರಣ ಸ್ತೋತ್ರ ಮಂತ್ರಕ್ಕೆ ವಿಭೀಷಣನು ಋಷಿ. ಹನುಮಾನ್ ದೇವತೆ. ಹನುಮನ ಪ್ರಸಾದ ಸಿದ್ಧಿಗಾಗಿ ನಾನು ಜಪಾನುಷ್ಠಾನ ಮಾಡುತ್ತಿದ್ದೇನೆ.

**॥ ಧ್ಯಾನಂ ॥**

**ವಾಮೇ ಕರೇ ವೈರಿಭಿದಂ ವಹಂತಂ ಶೈಲಂ ಪರೇ ಶೃಂಖಲಹಾರಿ ಟಂಕಂ ।**
**ಪಿಧಾನಮಚ್ಛಚ್ಛವಿ ಯಜ್ಞಸೂತ್ರಂ ಭಜೇ ಜ್ವಲತ್ಕುಂಡಲಮಾಂಜನೇಯಂ ॥1॥**

ಭಾವಾರ್ಥ - ಹನುಮಂತ ಎಡ ಕೈಯಲ್ಲಿ ವಜ್ರಾಯುಧ,ಬಲ ಕೈಯಲ್ಲಿ ಸಂಜೀವನ ಪರ್ವತದ ಒಟ್ಟಿಗೆ ಕಲ್ಲುಳಿ[ಟಂಕ]ಗಳನ್ನು ಹಿಡಿದುಕೊಂಡು ಇರುವವನು. ಅವನು ಯಜ್ಞೋಪವೀತವನ್ನು ಧರಿಸಿಕೊಂಡು ಪ್ರಕಾಶಮಾನವಾಗಿ ಇದ್ದಾನೆ. ಅವನನ್ನು ಸ್ಮರಣೆ ಮಾಡಬೇಕು.

**ಸಪೀತ ಕೌಪೀನಮುದಂಚಿತಾಂಜಲಿಂ ಸಮುಜ್ವಲನ್ ಮೌಂಜ್ಯಜಿನೋಪವೀತಿನಂ ।**
**ಸಕುಂಡಲಂ ಲಂಬಶಿಖಾ ಸಮಾವೃತಂ ತಮಾಂಜನೇಯ ಶರಣಂ ಪ್ರಪದ್ಯೇ ॥2॥**

ಭಾವಾರ್ಥ - ಹನುಮಂತನು ಪೀತಾಂಬರದ ಕೌಪೀನವನ್ನೂ, ಬಿಡಿಸಿಕೊಂಡ ಬೆರಳುಗಳಿಂದಲೂ, ಸೊಂಟಕ್ಕೆ ಉಡಿದಾರವನ್ನೂ, ಉದ್ಧವಾದ ಜುಟ್ಟನ್ನೂ ಹೊಂದಿ ಶೋಭಾಯಮಾನ ರೂಪದಲ್ಲಿ ಆಂಜನಾ ಪುತ್ರನಾಗಿರುವ ಆ ಮಾರುತಿಯನ್ನು ಶರಣು ಹೋಗಬೇಕು.

**ಆಪನ್ನಾಖಿಲ ಲೋಕಾರ್ತಿಹಾರಿಣೇ ಶ್ರೀ ಹನೂಮತೇ ।**
**ಅಕಸ್ಮಾದಾಗತೋತ್ಪಾತ ನಾಶನಾಯ ನಮೋಸ್ತು ತೇ ॥3॥**

ಭಾವಾರ್ಥ - ಸಕಲ ಜಗತ್ತಿಗೆ ಬಂದೊದಗುವ ದುಃಖವಿಪತ್ತುಗಳನ್ನು ಪರಿಹರಿಸಿ, ಮಹಾ ಉತ್ಪಾತ ಎನಿಸಿಕೊಳ್ಳುವ ಪ್ರವಾಹ, ಭೂಕಂಪಂಗಳಿಂದ ಕಾಪಾಡಿ ರಕ್ಷಿಸುವ ಹನುಮಂತನೇ ನಿನಗೆ ನನ್ನ ನಮಸ್ಕಾರಗಳು.

**ಸೀತಾವಿಯುಕ್ತ ಶ್ರೀರಾಮಶೋಕದುಃಖಭಯಾಪಹ ।**
**ತಾಪತ್ರಿತಯ ಸಂಹಾರಿನ್ ಆಂಜನೇಯ ನಮೋಽಸ್ತು ತೇ ॥4॥**

ಭಾವಾರ್ಥ - ಸೀತಾವಿಯೋಗದಿಂದ ದುಃಖಪೀಡಿತನಾಗಿದ್ದ ಶ್ರೀರಾಮನ ಶೋಕವನ್ನು ಪರಿಹರಿಸಿದವನೇ, ಅಧಿ ಭೌತಿಕ, ಅದಿದೈವಿಕ, ಆಧ್ಯಾತ್ಮಿಕಗಳೆನ್ನುವ ತಾಪತ್ರಯಂಗಳನ್ನು ದೂರ ಮಾಡುವ ಆಂಜನೇಯನೇ ನಿನಗೆ ನನ್ನ ನಮಸ್ಕಾರಗಳು.

**ಆದಿವ್ಯಾದಿ ಮಹಾಮಾರಿ ಗ್ರಹಪೀಡಾಪಹಾರಿಣೇ ।**
**ಪ್ರಾಣಾಪಹರ್ತೇ ದೈತ್ಯಾನಾಂ ಯಮಪ್ರಾಣಾತ್ಮನೇ ನಮಃ ॥5॥**

ಭಾವಾರ್ಥ - ರೋಗರುಜಿನಾದಿಗಳು, ತುಂಬಾ ವರ್ಷಗಳಿಂದ ಕಾಡುವ ಮನೋ ವ್ಯಥೆಗಳು, ಮಹಾ ಮಾರೀ ಪೀಡೆಗಳು ಇವೆಲ್ಲವುಗಳನ್ನೂ ಪರಿಹರಿಸಿ, ದೈತ್ಯರುಗಳ ಸಮೂಹವನ್ನೇ ಸಂಹಾರಮಾಡಿ, ಅವರಿಗೆ ಯಮಸ್ವರೂಪಿಯೇ ಆಗಿದ್ದ ಹೇ ! ದೇವಾ !! ಹನುಮಾ, ನಿನಗೆ ಇದೋ ನನ್ನ ನಮಸ್ಕಾರಗಳು.

**ಸಂಸಾರ ಸಾಗರಾವರ್ತ ಕರ್ತವ್ಯ ಭ್ರಾಂತಚೇತಸಾಂ ।**

**ಶರಣಾಗತ ಮರ್ತ್ಯಾನಾಂ ಶರಣ್ಯಾಯ ನಮೊಸ್ತುತೇ ॥6॥**

ಭಾವಾರ್ಥ - ಸಂಸಾರವೆನ್ನುವ ಸಾಗರಗಳ ಅಲೆಗಳ ಸುಳಿಯಲ್ಲಿ ಸಿಲುಕಿ ದಿಕ್ಕುದೆಸೆ ಕಾಣದೆ ಮಾನಸಿಕ ನೆಮ್ಮದಿಯನ್ನು ಕಳೆದು ಕೊಂಡ ಜನರು ನಿನಗೆ ಶರಣು ಹೊಕ್ಕಾಗ ಅವರನ್ನು ಕಾಪಾಡುವ ಏ ದೇವಾ ! ಹನುಮಾ !! ನಿನಗೆ ಇದೋ ನನ್ನ ನಮಸ್ಕಾರಗಳು.

**ರಾಜದ್ವಾರೇ ಬಿಲದ್ವಾರೇ ಪ್ರವೇಶೇ ಭೂತಸಂಕುಲೇ ।**

**ಗಜ ಸಿಂಹ ಮಹಾವ್ಯಾಘ್ರ ಚೋರ ಭೀಷಣ ಕಾನನೇ ॥7॥**

ಭಾವಾರ್ಥ - ರಾಜಗೃಹ, ದುರ್ಗಮವಾಗಿರುವ ಜಾಗಗಳನ್ನು ಒಳಹೊಗುವ ದಾರಿಗಳಲ್ಲಿ, ಭೂತಪ್ರೇತಾದಿಗಳ ನಡುವೆ, ಅಪಾಯಕಾರೀ ಪ್ರಾಣಿಗಳ ನಡುವೆ, ಆನೆ, ಸಿಂಹ, ಕಳ್ಳರು ಇರುವ ದಟ್ಟ ಕಾಡಿನ ನಡುವೆ ಆಂಜನೇಯನ ಧ್ಯಾನ ಮಾಡಿದರೆ ಹೆದರಿಕೆ ನಾಶ ಆಗುವುದು.

**ಶರಣಾಯ ಶರಣ್ಯಾಯ ವಾತಾತ್ಮಜ ನಮೋಸ್ತುತೇ ।**

**ನಮಃ ಪ್ಲವಗ ಸೈನ್ಯಾನಾಂ ಪ್ರಾಣಭೂತಾತ್ಮನೇ ನಮಃ ॥8॥**

ವಾನರ ಸೈನ್ಯಕ್ಕೆ ಜೀವದಾತನಾಗಿರುವ ಹೇ ಧೀರ ವಾಯುಪುತ್ರ ಹನುಮಂತನೇ ನಿನಗೆ ಇದೋ ನನ್ನ ನಮಸ್ಕಾರಗಳು.

**ರಾಮೇಷ್ಟಂ ಕರುಣಾ ಪೂರ್ಣಂ ಹನೂಮಂತಂ ಭಯಾಪಹಂ ।**

**ಶತೃನಾಶಕರಂ ಭೀಮಂ ಸರ್ವಾಭೀಷ್ಟ ಫಲಪ್ರದಂ ॥9॥**

ಭಾವಾರ್ಥ - ಶ್ರೀರಾಮನಿಗೆ ಪ್ರಾಣ ಪ್ರಿಯ ಸಖನೂ, ಕರುಣಾಸಾಗರನೂ, ಜ್ಞಾನಿಯೂ, ಭಯನಾಶಕನೂ, ಶತ್ರುಗಳನ್ನು ನಾಶ ಮಾಡುವವನೂ, ಭೀಮಕಾಯನೂ, ಆಗಿರುವ ಸರ್ವಾರ್ಥದಾಯಕ ಆದ ಆಂಜನೇಯ ಸ್ವಾಮಿಯ ನಾನು ಸ್ಮರಿಸುತ್ತೇನೆ.

**ಪ್ರದೋಷೇ ವಾ ಪ್ರಭಾತೇ ವಾ ಯೇ ಸ್ಮರಂತ್ಸಂಜನಾಸುತಂ ।**
**ಅರ್ಥಸಿದ್ಧಿ ಯಶಃಕೀರ್ತಿಂ ಪ್ರಾಪ್ನುವಂತಿ ನ ಸಂಶಯಃ ॥10॥**

ಭಾವಾರ್ಥ - ಸಂಧ್ಯಾಕಾಲದ ಪ್ರದೋಷ ಸಮಯದಲ್ಲಿ, ನಸುಕಿನ ಪ್ರಭಾತ ಸಮಯದಲ್ಲಿ ಯಾರು ಹನೂಮಾನ್ ಸ್ವಾಮಿಯನ್ನು ಸ್ಮರಣೆಮಾಡುವರೋ ಅವರು ಜೀವನದಲ್ಲಿ ಯಶಸ್ಸು, ಕೀರ್ತಿಗಳನ್ನು ಹೊಂದಿ ಸಂಪತ್ಸೌಭಾಗ್ಯವನ್ನು ಪಡುವುದರಲ್ಲಿ ಯಾವ ಸಂಶಯ ಇಲ್ಲ.

**ಕಾರಾಗೃಹೇ ಪ್ರಯಾಣೇ ಚ ಸಂಗ್ರಾಮೇ ದೇಶವಿಪ್ಲವೇ ।**
**ಯೇ ಸ್ಮರಂತಿ ಹನೂಮಂತಂ ತೇಷಾಂ ನಾಸ್ತಿ ವಿಪತ್ತದಾ ॥11॥**

ಭಾವಾರ್ಥ - ಸೆರೆಮನೆ ವಾಸದ ಸಮಯದಲ್ಲಿ, ಪ್ರಯಾಣ ಕಾಲದಲ್ಲಿ, ಯುದ್ಧ, ಬರಗಾಲದಂತಹಾ, ಅತಿವೃಷ್ಟಿಗಳಂತಹಾ ವಿಪ್ಲವ ಸಮಯದಲ್ಲಿ ಯಾರು ಆಂಜನೇಯನನ್ನು ಸ್ಮರಿಸುವರೋ ಅವರಿಗೆ ಎಂದೂ ವಿಪತ್ತು ಬರಲಾರದು.

**ವಜ್ರದೇಹಾಯ ಕಾಲಾಗ್ನಿ ರುದ್ರಾಯಾಸ್ಮಿತ ತೇಜಸೇ ।**
**ಬ್ರಹ್ಮಾಸ್ತ್ರ ಸ್ತಂಭನಾಯಾಸ್ಮೈ ನಮಃ ಶ್ರೀ ರುದ್ರಮೂರ್ತಯೇ ॥12॥**

ಭಾವಾರ್ಥ - ವಜ್ರ ಶರೀರನೂ ಪ್ರಳಯ ರುದ್ರನ ಹಾಗೆ ಅತಿ ಭೀಕರನೂ ಬ್ರಹ್ಮಾಸ್ತ್ರವನ್ನೆ ತಡೆದು ನಿಲ್ಲಿಸಿದವನೂ ಆದಂತಹಾ ರುದ್ರ ಸ್ವರೂಪೀ ಹನೂಮಂತನಿಗೆ ನಾನು ಶರಣಾಗುವೆ.

**ಜಪ್ತ್ವಾ ಸ್ತೋತ್ರಮಿದಂ ಮಂತ್ರಂ ಪ್ರತಿವಾರಂ ಪಠೇನ್ನರಃ ।**
**ರಾಜಸ್ಥಾನೇ ಸಭಾಸ್ಥಾನೇ ಪ್ರಾಪ್ತವಾದೇ ಜಪೇತ್ ಧ್ರುವಂ ॥13॥**

ಭಾವಾರ್ಥ - ಈ ಸ್ತೋತ್ರಂಗಳನ್ನು ಪ್ರತಿದಿನ ಯಾರು ಶುದ್ಧವಾದ ಮನಸ್ಸಿನಿಂದ ಪಾರಾಯಣ ಮಾಡುವರೋ ಅವರು ರಾಜನ ಸಮ್ಮುಖದಲ್ಲಿ [ಅಧಿಕಾರಿಗಳ ಎದುರು], ಸಭೆಗಳಲ್ಲಿ, ಒದಗಿ ಬರುವಂತಹಾ ಸಕಲ ತೊಂದರೆಗಳಿಂದ ಬಿಡುಗಡೆ ಹೊಂದುತ್ತಾರೆ.

**ವಿಭೀಷಣಕೃತಂ ಸ್ತೋತ್ರಂ ಯಃ ಪಠೇತ್ ಪ್ರಯತೋ ನರಃ ।**
**ಸರ್ವಾಪದ್ಭ್ಯೋವಿಮುಚ್ಯೇತ ನಾತ್ರ ಕಾರ್ಯಾ ವಿಚಾರಣಾ ॥14॥**

ಭಾವಾರ್ಥ - ಲಂಕಾದಹನದ ಸಮಯಲ್ಲಿ ವಿಭೀಷಣನು ಈ ಸ್ತೋತ್ರಂಗಳಿಂದ ಹನೂಮಂತನನ್ನು ಪ್ರಾರ್ಥಿಸಿದ್ದನು ಅಂತ ಆಧ್ಯಾತ್ಮ ರಾಮಾಯಣದಲ್ಲಿ ಹೇಳಿದ್ದು. ವಿಭೀಷಣನಿಂದ ರಚಿತವಾದ ಈ ಸ್ತೋತ್ರಂಗಳನ್ನು ಯಾರು ಭಕ್ತಿ ಶ್ರದ್ಧೆಯಿಂದ ಪಾರಾಯಣ ಮಾಡುವರೋ ಅವರು ಸರ್ವ ವಿಪತ್ತುಗಳಿಂದಲೂ ಬಿಡುಗಡೆ ಹೊಂದುತ್ತಾರೆ.

॥ ಇತಿ ಶ್ರೀ ಆಧ್ಯಾತ್ಮ ರಾಮಾಯಣಾಂತರ್ಗತ ವಿಭೀಷಣ ಕೃತಂ ಆಪದುದ್ಧರಣ ಹನುಮತ್ ಸ್ತೋತ್ರಂ ಸಂಪೂರ್ಣಂ ॥

## 12.10 ಶ್ರೀ ಹನುಮಾನ್ ಧ್ಯಾನ ಶ್ಲೋಕಾ

**ವಂದೇ ವಾನರ ನಾರಸಿಂಹ ಖಗರಾಟ್ ಕ್ರೋಢಾಶ್ವ ವಕ್ತ್ರಾನ್ವಿತಂ ।**
**ದಿವ್ಯಾಲಂಕರಣಂ ತ್ರಿಪಂಚನಯನಂ ದೇದೀಪ್ಯಮಾನಂರುಚಾ ॥**

**ಹಸ್ತಾಭ್ಯಾಮಸಿಖೇಟ ಪುಸ್ತಕ ಸುಧಾ ಕುಂಭಾಂಕುಶಾದಿಂಹಲಂ।**
**ಖಟ್ವಾಂಗಂ ಫಣಿಭೂರುಹಂ ದಶಬುಜಂ ಸರ್ವಾರಿ ದರ್ಪಾಪಹಂ ॥**

ಭಾವಾರ್ಥ - ವಾನರ,ನಾರಸಿಂಹ,ಗರುಢ,ವರಾಹ,ಕುದುರೆ ಈ ರೀತಿಯಲ್ಲಿ ಐದು ಮೊಗದವನಾಗಿ ಹತ್ತು ಭುಜಂಗಳ ಸ್ವಾಮಿಯಾಗಿ ಕೈಗಳಲ್ಲಿ ಖಡ್ಗ, ಗುರಾಣಿ, ಪುಸ್ತಕ, ಅಮೃತ ಕಲಶ, ಅಂಕುಶ, ನೇಗಿಲು, ಮಂಚದಕಾಲಿನರೂಪದ ಗದೆ, ಸರ್ಪ, ಬಂಡೆ, ಮರಗಳೇ ಮೊದಲಾದ ವಸ್ತುಗಳಿಂದ ಅಲಂಕೃತನಾಗಿ ಮಹಾತೇಜೋ ಸ್ವರೂಪದಿಂದ ಬೆಳಗುತ್ತಾ ಸರ್ವ ಶತ್ರುಗಳ ದರ್ಪವನ್ನು ನಾಶ ಮಾಡುವ ಸ್ವಾಮಿಯೇ ನಿಮಗೆ ನಾನು ನಮಸ್ಕರಿಸುತ್ತೇನೆ.

## 12.11 ಶ್ರೀ ಹನೂಮತ್ಕವಚಂ

**ಓಂ ಅಸ್ಯಶ್ರೀ ಹನುಮತ್ಕವಚಸ್ಯ ರಾಮಚಂದ್ರ ಋಷಿಃ । ವೀರಹನುಮಾನ್ ದೇವತಾ । ಅನುಷ್ಟುಪ್ ಛಂದಃ । ಮಾರುತಾತ್ಮಜ ಇತಿ ಬೀಜಂ । ಅಂಜನಾಸೂನುರಿತಿ ಶಕ್ತಿಃ ।**

**ಶ್ರೀರಾಮಕಿಂಕರ ಇತಿ ಕೀಲಕಂ । ಮಮ ಸರ್ವ ರಕ್ಷಾರ್ಥಂ ಶ್ರೀಹನುಮತ್ಕವಚ ಸ್ತೋತ್ರ ಜಪೇ ವಿನಿಯೋಗಃ ॥**

**॥ ಸ್ತೋತ್ರಂ ॥**

**ಧ್ಯಾಯೇದ್ಬಾಲ ದಿವಾಕರ ದ್ಯುತಿನಿಭಂ ದೇವಾರಿದರ್ಪಾಪಹಂ ।**
**ದೇವೇಂದ್ರ ಪ್ರಮುಖ ಪ್ರಶಸ್ತಯಶಸಂ ದೇದೀಪ್ಯಮಾನಂ ರುಚಾ ॥1॥**

**ಸುಗ್ರೀವಾದಿ ಸಮಸ್ತವಾನರಯುತಂ ಸುವ್ಯಕ್ತ ತತ್ವ ಪ್ರಿಯಂ ।**
**ಸಂರಕ್ತಾರುಣಲೋಚನಂ ಪವನಜಂ ಪೀತಾಂಬರಾಲಂಕೃತಂ ॥2॥**

**ಹನೂಮಾನ್ ಪೂರ್ವತಃ ಪಾತು ದಕ್ಷಿಣೇ ಪವನಾತ್ಮಜಃ ।**
**ಪಾತು ಪ್ರಚೀಚ್ಯಾಮಕ್ಷಘ್ನಃ ಪಾತು ಸಾಗರ ಪಾರಗಃ ॥3॥**

**ಉದೀಚ್ಯಾಂ ಊರ್ಧ್ವಗಃ ಪಾತು ಕೇಸರೀ ಪ್ರಿಯನಂದನಃ ।**
**ಅಧಸಾದ್ವಿಷ್ಣುಭಕ್ತಸ್ತು ಪಾತು ಮಧ್ಯೇತು ಪಾವನಿಃ ॥4॥**

**ಲಂಕಾವಿದಾಹಕಃ ಪಾತು ಸರ್ವಾಪದ್ಭ್ಯೋ ನಿರಂಜನಃ ।**
**ಸುಗ್ರೀವ ಸಚಿವಃ ಪಾತು ಮಸ್ತಕೇ ವಾಯುನಂದನಃ ॥5॥**

**ಭಾಲಂ ಪಾತು ಮಹಾವೀರೋ ಭೃವೋರ್ಮಧ್ಯೇ ನಿರಂಜನಃ ।**
**ನೇತ್ರೇ ಛಾಯಾಪಹಾರೀ ಚ ಪಾತು ನಃ ಪ್ಲವಗೇಶ್ವರಃ ॥6॥**

**ಕಪೋಲೌ ಕರ್ಣಮೂಲೇ ತು ಪಾತು ಶ್ರೀ ರಾಮಕಿಂಕರಃ ।**
**ನಾಸಾಗ್ರಮಂಜನಾಸೂನುಃ ಪಾತು ವಕ್ತ್ರಂ ಹರೀಶ್ವರಃ ॥7॥**

**ಪಾತು ಕಂಠಂತು ದೈತ್ಯಾರಿಃ ಸ್ಕಂಧೌ ಪಾತು ಸುರಾರ್ಚಿತಃ ।**
**ಭುಜೌ ಪಾತು ಮಹಾತೇಜಾಃ ಕರೌತು ಚರಣಾಯುಧಃ ॥8॥**

**ಲಂಕಾವಿದಾಹಕಃ ಪಾತು ಪೃಷ್ಠದೇಶೇ ನಿರಂತರಂ ।**
**ನಾಭಿಂಚ ರಾಮದೂತಸ್ತು ಕಟಿಂ ಪಾತ್ವನಿಲಾತ್ಮಜಃ ॥9॥**

ಗುಹ್ಯಂ ಪಾತು ಮಹಾಪ್ರಾಜ್ಞಃ ಸಕ್ಥಿನೀ ಚ ಶಿವಪ್ರಿಯಃ ।
ಊರೂ ಚ ಜಾನುನೀ ಪಾತು ಲಂಕಾಪ್ರಾಸಾದ ಭಂಜನಃ ॥10॥

ಜಂಘೇ ಪಾತು ಕಪಿಶ್ರೇಷ್ಠೋ ಗುಲ್ಫೌ ಪಾತು ಮಹಾಬಲಃ ।
ಅಚಲೋದ್ಧಾರಕಃ ಪಾತು ಪಾದೌ ಭಾಸ್ಕರಃ ಸನ್ನಿಭಃ ॥11॥

ಅಂಗಾನ್ಯಮಿತ ಸತ್ವಾಢ್ಯಃ ಪಾತು ಪಾದಾಂಗುಲಿಃ ಸದಾ ।
ಸರ್ವಾಂಗಾನಿ ಮಹಾಶೂರಃ ಪಾತು ರೋಮಾಣಿಚಾತ್ಮವಾನ್ ॥12॥

॥ ಫಲಶೃತಿಃ ॥

ಹನೂಮತ್ಕವಚಂ ಯಸ್ತು ಪಠೇದ್ವಿದ್ವಾನ್ ವಿಚಕ್ಷಣಃ ।
ಸ ಏವ ಪುರುಷ ಶ್ರೇಷ್ಠೋ ಭುಕ್ತಿಂ ಮುಕ್ತಿಂ ಚ ವಿಂದತಿ ॥13॥

ತ್ರಿಕಾಲಮೇಕಕಾಲಂ ವಾ ಜಪೇನ್ಮಾಸತ್ರಯಂ ಪುನಃ ।
ಸರ್ವಾನ್ಕಾಮಾನವಾಪ್ನೋತಿ ಐಶ್ವರ್ಯಂ ಜಯಮಾಪ್ನುಯಾತ್ ॥14॥

ನಾಭಿಮಾತ್ರಜಲೇ ಸ್ಥಿತ್ವಾ ಸಪ್ತವಾರಂ ಪಠೇದ್ಯದಿ ।
ಕ್ಷಯಾಪಸ್ಮಾರ ಕುಷ್ಠಾದಿ ತಾಪಜ್ವರ ನಿವಾರಣಂ ॥15॥

ದೇವಾಲಯೇಸ್ತ್ಯಶ್ವತ್ಥಮೂಲೇ ಸ್ಥಿತ್ವಾ ಪಠತಿ ಯಃ ಪುಮಾನ್ ।
ಸ ಪುಮಾನ್ ಜಯಮಾಪ್ನೋತಿ ಸಂಗ್ರಾಮೇಚ ಸ್ಥಳಾಂತರೇ ॥16॥

ಯಃ ಕರೇ ಧಾರಯೇನ್ನಿತ್ಯಂ ಸರ್ವಾನ್ ಕಾಮಾನವಾಪ್ನುಯಾತ್ ।
ಲಿಖಿತ್ವಾ ಪೂಜಯೇದ್ಯಸ್ತು ಸ ಪುಮಾನ್ ಜಯಮಾಪ್ನುಯಾತ್ ॥17॥

ಶೃಂಖಲಾಬಂಧನೇ ಯಸ್ತು ಇಮಂ ಜಪತಿ ಮಾನವಃ।
ತತ್ಕ್ಷಣನ್ಮುಕ್ತಿಮಾಪ್ನೋತಿ ಕಾರಾಗೇಹೇ ತಥೈವಚ ॥18॥

ಭೂರ್ಜಪತ್ರೇ ಲಿಖಿತ್ವಾತು ಬುಧ್ನೀಯಾತ್ಕಂಠದೇಶತಃ ।
ಸರ್ವಕಾಲ ಫಲಂ ತೇಷಾಂ ಸರ್ವತ್ರ ವಿಜಯೋಭವೇತ್ ॥19॥

॥ ಇತಿ ಶ್ರೀ ಸುದರ್ಶನ ಸಂಹಿತಾಯಾಂ ಹನೂಮತ್ಕವಚಂ ಸಂಪೂರ್ಣಂ ॥

ಭಾವಾರ್ಥ - ಈ ಕವಚ ಸ್ತೋತ್ರಕ್ಕೆ ರಾಮಚಂದ್ರ ಋಷಿ. ವೀರ ಹನುಮಾನ್ ದೇವತೆ. ಇದು ಅನುಷ್ಟುಪ್ ಛಂದಸ್ಸಿನಲ್ಲಿ ಇದೆ. ಮಾರುತಾತ್ಮಜ ಇದರ ಬೀಜ ಮಂತ್ರ. ಅಂಜನಾಸೂನು ಇದರ ಶಕ್ತಿ. ಶ್ರೀ ರಾಮ ಕಿಂಕರ ಇದರ ಕೀಲಕ. ನನ್ನ ಸರ್ವ ರಕ್ಷೆಗಾಗಿ ಶ್ರೀ ಹನುಮತ್ಕವಚವನ್ನು ನಾನು ಜಪ ಮಾಡುವೆನು.

ಉಷಕಾಲದ ಸೂರ್ಯನ ಹಾಗೆ ಹೊಳೆಯುವ, ರಾಕ್ಷಸ ಕುಲದ ಗರ್ವವನ್ನು ನಾಶ ಮಾಡಿದ, ದೇವೇಂದ್ರನೇ ಆದಿಯಾದಿ ಪ್ರಮುಖರಿಗೆ ಯೋಗ್ಯವಾದ ಯಶಸ್ಸನ್ನು ಕರುಣಿಸಿದ ದೇವ ವಂದಿತ ಹನುಮನನ್ನು, . ಸುಗ್ರೀವಾದಿ ವಾನರರ ಜೊತೆಯಲ್ಲಿರುವ ಜ್ಞಾನಿಯಾದ. ತತ್ವ ಪ್ರಿಯನಾಗಿರುವ, ಪೀತಾಂಬರಧಾರಿಯಾಗಿದ್ದು ಸೂರ್ಯ ಕಿರಣದ ಹಾಗೆ ಹೊಂಬಣದಿಂದ ಹೊಳೆವ ಕಣ್ಣುಗಳಿಂದ ಕೂಡಿದ ವಾಯು ಪುತ್ರ ಹನುಮನನ್ನು ಧ್ಯಾನಿಸಬೇಕು. ಪೂರ್ವದಿಕ್ಕಿನಲ್ಲಿ ಹನುಮಂತನು ರಕ್ಷಿಸಲಿ, ದಕ್ಷಿಣದಿಸೆಯಲ್ಲಿ ಪವನಕುಮಾರ ರಕ್ಶಿಸಲಿ ಪಶ್ಚಿಮದಿಸೆಯಲ್ಲಿ ರಾಕ್ಷಸ ಸಂಹಾರಿಯೂ ಆದ ಸಾಗರವನ್ನು ದಾಟಿದವನು ರಕ್ಷಿಸಲಿ. ಉತ್ತರದಿಸೆಯಲ್ಲಿ ಊರ್ದ್ವಗಮನ ಕೇಸರೀ ಪುತ್ರ ರಕ್ಷಿಸಲಿ. ಅಧೋ ದಿಕ್ಕುಗಳಲ್ಲಿ ಪವನಸುತ ರಕ್ಷಿಸಲಿ .

ಆಪತ್ಕಾಲಂಗಳಲ್ಲಿ ಲಂಕಾ ನಾಶಕ ರಕ್ಷಿಸಲಿ, ತಲೆಯನ್ನು ಸುಗ್ರೀವ ಸಚಿವ ನಿರಂಜನ ರೂಪೀ ವಾಯು ನಂದನ ರಕ್ಷಿಸಲಿ. ಹಣೆಯನ್ನು ಮಹಾವೀರ ರಕ್ಷಿಸಲಿ . ಹುಬ್ಬುಗಳ ನಡುವಿನ ಪ್ರದೇಶವನ್ನು ನಿರಂಜನ ರೂಪಿ ರಕ್ಷಿಸಲಿ, ಕಣ್ಣುಗಳನ್ನು ಹೆಣ್ಣು ಸಿಂಹದ ನೆರಳನ್ನು ಹಿಡಿದುಕೊಂಡಿರುವ ವಾನರೇಶ್ವರ ರಕ್ಷಿಸಲಿ. ಕೆನ್ನೆಯನ್ನು ಮತ್ತು ಕಿವಿಗಳನ್ನು ಶ್ರೀರಾಮದಾಸ ರಕ್ಷಿಸಲಿ . ಮೂಗನ್ನು ಅಂಜನಾಪುತ್ರ ರಕ್ಷಿಸಲಿ . ಮುಖವನ್ನ ವಾನರಾಧಿಪ ರಕ್ಷಿಸಲಿ. ಕೊರಳನ್ನು ದೈತ್ಯಕುಲವಿನಾಶಕ ರಕ್ಷಿಸಲಿ . ಹೆಗಲನ್ನು ದೇವತೆಗಳಿಂದ ಪೂಜಿಸಿಗೊಳ್ಳುವವನು ರಕ್ಷಿಸಲಿ . ಭುಜಗಳನ್ನ ಮಹಾ ಜೇಜೋವಂತ ರಕ್ಷಿಸಲಿ . ಕೈಗಳನ್ನು ಪಾದಂಗಳನ್ನೇ ಅಯುಧವಾಗಿ ಮಾಡಿಕೊಂಡಿಪ್ಪವನು ರಕ್ಷಿಸಲಿ. ಸೊಂಟವನ್ನು ವಾಯು ಪುತ್ರ ರಕ್ಷಿಸಲಿ . ಹೊಕ್ಕುಳನ್ನು ಶ್ರೀರಾಮದೂತ ರಕ್ಷಿಸಲಿ. ಬೆನ್ನನ್ನು ಲಂಕೆಯ ನಾಶ ಮಾಡಿದವನು

ನಿರಂತರ ರಕ್ಷಿಸಲಿ. ಜನನೇಂದ್ರಿಯವನ್ನು ಮಾಹಾಜ್ಞಾನಿಯಾಗಿರುವ ಶಿವನಿಗೆ ಪ್ರೀತಿ ಪಾತ್ರನಾದವ ರಕ್ಷಿಸಲಿ . ತೊಡೆಗಳನ್ನು ವಾಯುಕುಮಾರ ಹನುಮ ರಕ್ಷಿಸಲಿ . ಮೊಳ ಕಾಲ ಮಂಡಿಗಳನ್ನು ಲಂಕೆಯ ಅರಮನೆಯನ್ನು ನಾಶಮಾಡಿದವ ರಕ್ಷಿಸಲಿ.

ಕಿರು ತೊಡೆಗಳನ್ನು ಕಪಿ ಶ್ರೇಷ್ಠನು ರಕ್ಷಿಸಲಿ. ಅಡಿಪಾದಂಗಳನ್ನು ಅತಿ ಮಹಾಬಲಶಾಲಿ ಹನುಮ ರಕ್ಷಿಸಲಿ. ಪಾದಂಗಳನ್ನು ಸೂರ್ಯ ಸಮಾನವಾಗಿರುವ ಆಂಜನೇಯ ರಕ್ಷಿಸಲಿ. ಕಾಲ್ಬೆರಗಳನ್ನೂ, ಸರ್ವಾಂಗಂಗಳನ್ನೂ ಮಹಾ ಶೂರ ಹನುಮಂತ ರಕ್ಷಿಸಲಿ.

॥ ಫಲ ಶೃತಿ ॥

ಈ ಹನುಮತ್ ಕವಚವನ್ನು ಯಾರು ಶ್ರದ್ಧಾಭಕ್ತಿಯಿಂದ ಓದುವರೋ ಅವರು ಮನುಷ್ಯರಲ್ಲಿ ಶ್ರೇಷ್ಟರಾಗಿ ಪ್ರಪಂಚದಲ್ಲಿ ಬಾಳಿ ಭುಕ್ತಿ-ಮುಕ್ತಿಯ ಹೊಂದುವರು.

ಯಾರು ದಿನದಲ್ಲಿ ಒಂದು ಸಲ ಅಥವಾ ಮೂರು ಸಲವಾಗಲೀ ಮೂರು ತಿಂಗಳು ಜಪಿಸುತ್ತಾರೋ ಅಂತಹವರಿಗೆ ಸಕಲೈಶ್ವರ್ಯ ಒದಗಿ ಬರುತ್ತದೆ.

ಈ ಸ್ತೋತ್ರವನ್ನು ಯಾರು ಹರಿವ ನೀರಿನಲ್ಲಿ ಹೊಕ್ಕುಳ ಮುಳುಗುವಷ್ಟು ಮುಳುಗಿ ನಿತ್ತು ದಿನಂಪ್ರತಿ ಏಳು ಸಲ ಜಪ ಮಾಡಿದರೆ ಎಂತಹಾ ಕುಷ್ಟ, ಕ್ಷಯಾಪಸ್ಮಾರ,ಜ್ವರಾದಿ ಭಯಂಕರ ರೋಗಗಳೂ ನಾಶ ಆಗುವವು. ದೇವಸ್ಥಾನದಲ್ಲಿ ದೇವರ ಸನ್ನಿಧಿಯಲ್ಲಿ, ಅಶ್ವತ್ಥ ಮರದ ಮೂಲದಲ್ಲಿ, ಯಾವ ವ್ಯಕ್ತಿ ಜಪಿಸುವನೋ ಅವನಿಗೆ ಯುದ್ಧದಲ್ಲಿ [ವಾದ-ವಿವಾದಗಳಲ್ಲಿ], ಪ್ರಯಾಣ ಕಾಲದಲ್ಲಿ ಯಶಸ್ಸು ದೊರಕುವುದು. ಯಾರು ಈ ಸ್ತೋತ್ರಂಗಳನು ಬರೆದ ತಾಯಿತವನ್ನು ತೋಳಿನಲ್ಲಿ ಧರಿಸಿಕೊಳ್ಳುವರೋ ಅವರಿಗೆ ಸರ್ವ ಸಿದ್ಧಿ ಲಹಿಸುವುದು. ಯಾರು ಇದನ್ನು ಯಂತ್ರದಲ್ಲಿ ಬರೆದು ಪೂಜಿಸುವರೋ ಅವರಿಗೆ ಸರ್ವ ಕಾರ್ಯಂಗಳಲ್ಲೂ ಜಯ ಲಭಿಸುವುದು. ಸೆರೆಮನೆ ವಾಸದ ಕಾಲದಲ್ಲಿ ಈ ಸ್ತೋತ್ರಂಗಳನ್ನು ಯಾವ ವ್ಯಕ್ತಿ ಜಪಿಸುವನೋ ಅವನಿಗೆ ತತ್ಕ್ಷಣ ಸೆರೆಮನೆಂದ ಮುಕ್ತಿ ದೊರಕುವುದು ಭೂರ್ಜ ಪತ್ರದಲ್ಲಿ ಬರೆದು ಕೊರಳಿಗೆ ಯಾರು ಕಟ್ಟಿಗೊಳ್ಳುವರೋ ಅವರಿಗೆ ಸಮಸ್ತ ಕಾರ್ಯ

ಸಿದ್ಧಿಯಾಗಿ ಅವರು ವಿಜಯಶಾಲಿಗಳಾಗುವರು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

## 12.12 ಶ್ರೀ ಆಂಜನೇಯಾಷ್ಟೋತ್ತರ ಶತನಾಮ ಸ್ತೋತ್ರಂ

**ಆಂಜನೇಯೋ ಮಹಾವೀರೋ ಹನೂಮಾನ್ಮಾರುತಾತ್ಮಜಃ ।**
**ತತ್ವಜ್ಞಾನಪ್ರದಸ್ಸೀತಾದೇವೀ ಮುದ್ರಾ ಪ್ರದಾಯಕಃ ॥1॥**

**ಅಶೋಕಾವನಿಕಾಚ್ಛೇತ್ತಾ ಸರ್ವಮಾಯಾ ವಿಭಂಜನಃ ।**
**ಸರ್ವಬಂಧವಿಮೋಕ್ತಾ ಚ ರಕ್ಷೋ ವಿಧ್ವಂಸಕಾರಕಃ ॥2॥**

**ಪರವಿದ್ಯಾಪರೀಹಾರಃ ಪರಶೌರ್ಯ ವಿನಾಶನಃ ।**
**ಪರಮಂತ್ರ ನಿರಾಕರ್ತಾ ಪರಯಂತ್ರ ಪ್ರಭೇದಕಃ ॥3॥**

**ಸರ್ವಗ್ರಹಾವಿನಾಶೀ ಚ ಭೀಮಸೇನ ಸಹಾಯಕೃತ್ ।**
**ಸರ್ವ ದುಃಖಹರಸ್ಸರ್ವಲೋಕಚಾರೀ ಮನೋಜವಃ ॥4॥**

**ಪಾರಿಜಾತದ್ರುಮಮೂಲಸ್ಥಃ ಸರ್ವಮಂತ್ರ ಸ್ವರೂಪವಾನ್ ।**
**ಸರ್ವ ತಂತ್ರ ಸ್ವರೂಪೀ ಚ ಸರ್ವ ಯಂತ್ರಾತ್ಮಕಸ್ತಥಾ ॥5॥**

**ಕಪೀಶ್ವರೋ ಮಹಾಕಾಯಸ್ಸರ್ವರೋಗಹರಃ ಪ್ರಭುಃ ।**
**ಬಲಸಿದ್ಧಿ ಕರಸ್ಸರ್ವ ವಿದ್ಯಾಸಂಪತ್ಪ್ರದಾಯಕಃ ॥6॥**

**ಕಪಿಸೇನಾ ನಾಯಕಶ್ಚ ಭವಿಷ್ಯಚ್ಚತುರಾನನಃ ।**
**ಕುಮಾರಬ್ರಹ್ಮಚಾರೀ ಚ ರತ್ನಕುಂಡಲ ದೀಪ್ತಿಮಾನ್ ॥7॥**

**ಸಂಚಲದ್ವಾಲಸನ್ನದ್ಧ ಲಂಬಮಾನ ಶಿಖೋಜ್ವಲಃ ।**
**ಗಂಧರ್ವವಿದ್ಯಾತತ್ವಜ್ಞೋ ಮಹಾಬಲ ಪರಾಕ್ರಮಃ ॥8॥**

**ಕಾರಾಗ್ರಹವಿಮೋಕ್ತಾ ಚ ಶೃಂಖಲಾಬಂಧಮೋಚಕಃ ।**
**ಸಾಗರೋತ್ತಾರಕಃ ಪ್ರಾಜ್ಞೋ ರಾಮದೂತಃ ಪ್ರತಾಪವಾನ್ ॥9॥**

ವಾನರಃ ಕೇಸರೀ ಸುತಃ ಸೀತಾಶೋಕ ನಿವಾರಣಃ ।
ಅಂಜನಾಗರ್ಭ ಸಂಭೂತೋ ಬಾಲಾರ್ಕಸದೃಶಾನನಃ ॥10॥

ವಿಭೀಷಣ ಪ್ರಿಯಕರೋ ದಶಗ್ರೀವಕುಲಾಂತಕಃ ।
ಲಕ್ಷ್ಮಣಪ್ರಾಣದಾತಾ ಚ ವಜ್ರಕಾಯೋ ಮಹಾದ್ಯುತಃ ॥11॥

ಚಿರಂಜೀವೀ ರಾಮಭಕ್ತೋ ದೈತ್ಯಕಾರ್ಯವಿಘಾತಕಃ ।
ಅಕ್ಷಹಂತಾ ಕಾಂಚನಾಭಃ ಪಂಚವಕ್ತ್ರೋ ಮಹಾತಪಃ ॥12॥

ಲಂಕಿಣೀಭಂಜನಃ ಶ್ರೀಮಾನ್ ಸಿಂಹಿಕಾ ಪ್ರಾಣ ಭಂಜನಃ ।
ಗಂದಮಾದನಶೈಲಸ್ಥೋ ಲಕಾಪುರವಿದಾಹಕಃ ॥13॥

ಸುಗ್ರೀವಸಚಿವೋ ಧೀರಃ ಶೂರೋ ದೈತ್ಯಕುಲಾಂತಕಃ ।
ಸುರಾರ್ಚಿತೋ ಮಹಾತೇಜಾಃ ರಾಮಚೂಡಾಮಣಿಪ್ರದಃ ॥14॥

ಕಾಮರೂಪೀ ಪಿಂಗಳಾಕ್ಷೋ ವಾರ್ಧಿಮೈನಾಕಪೂಜಿತಃ ।
ಕಬಳೀಕೃತಮಾರ್ತಾಂಡಮಂಡಲೋ ವಿಜಿತೇಂದ್ರಿಯಃ ॥15॥

ರಾಮಸುಗ್ರೀವ ಸಂಧಾತಾ ಮಹಾರಾವಣಮರ್ದನಃ ।
ಸ್ಫಟಿಕಾಭೋವಾಗಧೀಶೋ ನವವ್ಯಾಕೃತಿಪಂಡಿತಃ ॥16॥

ಚತುರ್ಬಾಹುಃ ದೀನಬಂದುರ್ಮಹಾತ್ಮಾಭಕ್ತವತ್ಸಲಃ ।
ಸಂಜೀವನ ಗಾಹರ್ತಾ ಶುಚಿರ್ವಾಗ್ಮೀ ದೃಢವ್ರತಃ ॥17॥

ಕಾಲನೇಮಿ ಪ್ರಮಥನೋ ಹರಿಮರ್ಕಟ ಮರ್ಕಟಃ ।
ದಾಂತಃ ಶಾಂತಃ ಪ್ರಸನ್ನಾತ್ಮಾ ಶತಕಂಠಮದಾಪಹೃತ್ ॥18॥

ಯೋಗೀ ರಾಮಕಥಾಲೋಲಃ ಸೀತಾನ್ವೇಷಣಪಂಡಿತಃ ।
ವಜ್ರದಂಷ್ಟ್ರೋ ವಜ್ರನಖೋ ರುದ್ರವೀರ್ಯಸಮುದ್ಭವಃ ॥19॥

ಇಂದ್ರಜಿತ್ಪ್ರಹಿತಾಽಮೋಘ ಬ್ರಹ್ಮಾಸ್ತ್ರವಿನಿವಾರಕಃ ।
ಪಾರ್ಥಧ್ವಜಾಗ್ರಸಂವಾಸೀ ಶರಪಂಜರಭೇದಕಃ ॥20॥

**ದಶಬಾಹುರ್ಲೋಕಪೂಜ್ಯೋ ಜಾಂಬವತ್ಪ್ರೀತಿವರ್ಧನಃ ।**
**ಸೀತಾಸಮೇತ ಶ್ರೀರಾಮಪಾದ ಸೇವಾಧುರಂಧರಃ ॥21॥**

**ಇತ್ಯೇವಂ ಶ್ರೀ ಹನುಮತೋ ನಾಮ್ನಾಮಷ್ಟೋತ್ತರಂ ಶತಂ ।**
**ಯಃ ಪಠೇಶ್ರುಣುಯಾನ್ನಿತ್ಯಂ ಸರ್ವ ಕಾಮಾನವಾಪ್ನುಯಾತ್ ॥22॥**

॥ ಇತಿ ಶ್ರೀಕಾಳಿಕಾರಹಸ್ಯೇ ಆಂಜನೇಯಾಷ್ಟೋತ್ತರಶತನಾಮ ಸ್ತೋತ್ರಂ ಸಂಪೂರ್ಣಂ ॥

## 12.13 ಶ್ರೀ ಆಂಜನೇಯ ಅಷ್ಟೋತ್ತರ ಶತನಾಮಾವಲಿ

ಓಂ ಆಂಜನೇಯಾಯ ನಮಃ । ಓಂ ಮಹಾವೀರಾಯ ನಮಃ । ಓಂ ಹನುಮತೇ ನಮಃ । ಓಂ ಮಾರುತಾತ್ಮಜಾಯ ನಮಃ । ಓಂ ತತ್ವಜ್ಞಾನಪ್ರದಾಯ ನಮಃ । ಓಂ ಸೀತಾದೇವೀಮುದ್ರಾಪ್ರದಾಯಕಾಯ ನಮಃ । ಓಂ ಅಶೋಕವನಿಕಾಚ್ಛೇತ್ರೇ ನಮಃ । ಓಂ ಸರ್ವಮಾಯಾವಿಭಂಜನಾಯ ನಮಃ । ಓಂ ಸರ್ವಬಂಧವಿಮೋಕ್ತ್ರೇ ನಮಃ । ಓಂ ರಾಕ್ಷಸವಿಧ್ವಂಸಕಾರಕಾಯ ನಮಃ । 10

ಓಂ ಪರವಿದ್ಯಾಪರಿಹಾರಾಯ ನಮಃ । ಓಂ ಪರಶೌರ್ಯವಿನಾಶನಾಯ ನಮಃ । ಓಂ ಪರಮಂತ್ರನಿರಾಕರ್ತ್ರೇ ನಮಃ । ಓಂ ಪರ ಯಂತ್ರ ಪ್ರಭೇಧಕಾಯ ನಮಃ । ಓಂ ಸರ್ವಗ್ರಹ ವಿನಾಶಿನೇ ನಮಃ । ಓಂ ಭೀಮಸೇನ ಸಹಾಯಕೃತೇ ನಮಃ । ಓಂ ಸರ್ವದುಃಖ ಹರಾಯ ನಮಃ । ಓಂ ಸರ್ವಲೋಕಚಾರಿಣೇ ನಮಃ । ಓಂ ಮನೋಜವಾಯ ನಮಃ । ಓಂ ಪಾರಿಜಾತದ್ರುಮಮೂಲಸ್ಥಾಯ ನಮಃ । 20

ಓಂ ಸರ್ವಮಂತ್ರ ಸ್ವರೂಪವತೇ ನಮಃ । ಓಂ ಸರ್ವತಂತ್ರಸ್ವರೂಪಿಣೇ ನಮಃ । ಓಂ ಸರ್ವ ಯಂತ್ರಾತ್ಮಕಾಯ ನಮಃ । ಓಂ ಕಪೀಶ್ವರಾಯ ನಮಃ । ಓಂ ಮಹಾ ಕಾಯಾಯ ನಮಃ । ಓಂ ಸರ್ವರೋಗ ಹರಾಯ ನಮಃ । ಓಂ ಪ್ರಭವೇ ನಮಃ । ಓಂ ಬಲ ಸಿದ್ಧಿಕರಾಯ ನಮಃ । ಓಂ ಸರ್ವವಿದ್ಯಾಸಂಪತ್ಪ್ರದಾಯಕಾಯ ನಮಃ । ಓಂ ಕಪಿಸೇನಾ ನಾಯಕಾಯ ನಮಃ । 30

ಓಂ ಭವಿಷ್ಯಚ್ಚತುರಾನನಾಯ ನಮಃ । ಓಂ ಕುಮಾರಬ್ರಹ್ಮಚಾರಿಣೇ ನಮಃ । ಓಂ ರತ್ನಕುಂಡಲದೀಪ್ತಿಮತೇ ನಮಃ । ಓಂ ಚಂಚಲ ದ್ವಾಲ ಸನ್ನದ್ಧ ಲಂಬಮಾನ ಶಿಖೋಜ್ಜ್ವಲಾಯ ನಮಃ । ಓಂ ಗಂಧರ್ವವಿದ್ಯಾತತ್ವಜ್ಞಾಯ ನಮಃ । ಓಂ ಮಹಾಬಲಪರಾಕ್ರಮಾಯ ನಮಃ । ಓಂ ಕಾರಗೃಹವಿಮೋಕ್ತ್ರೇ ನಮಃ । ಓಂ ಶೃಂಖಲಾಬಂಧಮೋಚಕಾಯ ನಮಃ । ಓಂ ಸಾಗರೋತ್ತಾರಕಾಯ ನಮಃ । ಓಂ ಪ್ರಾಜ್ಞಾಯ ನಮಃ । 40

ಓಂ ರಾಮದೂತಾಯ ನಮಃ । ಓಂ ಪ್ರತಾಪವತೇ ನಮಃ । ಓಂ ವಾನರಾಯ ನಮಃ । ಓಂ ಕೇಸರೀ ಪುತ್ರಾಯ ನಮಃ । ಓಂ ಸೀತಾ ಶೋಕನಿವಾರಣಾಯ ನಮಃ । ಓಂ ಅಂಜನಾಗರ್ಭ ಸಂಭೂತಾಯ ನಮಃ । ಓಂ ಬಾಲಾರ್ಕಸದ್ರೃಶಾನನಾಯ ನಮಃ । ಓಂ ವಿಭೀಷಣ ಪ್ರಿಯಕರಾಯ ನಮಃ । ಓಂ ದಶಗ್ರೀವಕುಲಾಂತಕಾಯ ನಮಃ । ಓಂ ಲಕ್ಷ್ಮಣಪ್ರಾಣದಾತ್ರೇ ನಮಃ । 50

ಓಂ ವಜ್ರಕಾಯಾಯ ನಮಃ । ಓಂ ಮಹಾದ್ಯುತೇ ನಮಃ । ಓಂ ಚಿರಂಜೀವಿನೇ ನಮಃ । ಓಂ ರಾಮಭಕ್ತಾಯ ನಮಃ । ಓಂ ದೈತ್ಯಕಾರ್ಯವಿಘಾತಕಾಯ ನಮಃ । ಓಂ ಅಕ್ಷಹಂತ್ರೇ ನಮಃ । ಓಂ ಕಾಂಚನಾಭಾಯ ನಮಃ । ಓಂ ಪಂಚವಕ್ತ್ರಾಯ ನಮಃ । ಓಂ ಮಾಹಾತಪಸೇ ನಮಃ । ಓಂ ಲಂಕಿನೀಭಂಜನಾಯ ನಮಃ । 60

ಓಂ ಶ್ರೀಮತೇ ನಮಃ । ಓಂ ಸಿಂಹಿಕಾ ಪ್ರಾಣಭಂಜಕಾಯ ನಮಃ । ಓಂ ಗಂಧಮಾದನ ಶೈಲಸ್ಥಾಯ ನಮಃ । ಓಂ ಲಂಕಾಪುರವಿದಾಹಕಾಯ ನಮಃ । ಓಂ ಸುಗ್ರೀವ ಸಚಿವಾಯ ನಮಃ । ಓಂ ಧೀರಾಯ ನಮಃ । ಓಂ ಶೂರಾಯ ನಮಃ । ಓಂ ದೈತ್ಯಕುಲಾಂತಕಾಯ ನಮಃ । ಓಂ ಸುರಾರ್ಚಿತಾಯ ನಮಃ । ಓಂ ಮಹಾತೇಜಸೇ ನಮಃ । 70

ಓಂ ರಾಮ ಚೂಡಾಮಣಿಪ್ರದಾಯ ನಮಃ । ಓಂ ಕಾಮರೂಪಿಣೇ ನಮಃ । ಓಂ ಪಿಂಗಲಾಕ್ಷಾಯ ನಮಃ । ಓಂ ವಾರ್ಧಿ ಮೈನಾಕ ಪೂಜಿತಾಯ ನಮಃ । ಓಂ ಕಬಲೀಕೃತಮಾರ್ತಾಂಡ ಮಂಡಲಾಯ ನಮಃ । ಓಂ ವಿಜಿತೇಂದ್ರಿಯಾಯ ನಮಃ । ಓಂ

ರಾಮ ಸುಗ್ರೀವ ಸಂಧಾತ್ರೇ ನಮಃ । ಓಂ ಮಹಿರಾವಣ ಮರ್ದನಾಯ ನಮಃ । ಓಂ ಸ್ಪಟಿಕಾಭಾಯ ನಮಃ । ಓಂ ವಾಗಧೀಶಾಯ ನಮಃ । 80

ಓಂ ನವವ್ಯಾಕೃತಿಪಂಡಿತಾಯ ನಮ । ಓಂ ಚತುರ್ಬಾಹವೇ ನಮಃ । ಓಂ ದೀನಬಂಧವೇ ನಮಃ । ಓಂ ಮಹಾತ್ಮನೇ ನಮಃ । ಓಂ ಭಕ್ತವತ್ಸಲಾಯ ನಮಃ । ಓಂ ಸಂಜೀವನಗಾಹತ್ರ್ರೇ ನಮಃ । ಓಂ ಶುಚಯೇ ನಮಃ । ಓಂ ವಾಗ್ಮಿನೇ ನಮಃ । ಓಂ ದೃಢವ್ರತಾಯ ನಮಃ । ಓಂ ಕಾಲನೇಮಿಪ್ರಮಥನಾಯ ನಮಃ । 90

ಓಂ ಹರಿಮರ್ಕಟ ಮರ್ಕಟಾಯ ನಮಃ । ಓಂ ದಾಂತಾಯ ನಮಃ । ಓಂ ಶಾಂತಾಯ ನಮಃ । ಓಂ ಪ್ರಸನ್ನಾತ್ಮನೇ ನಮಃ । ಓಂ ಶತಕಂಠಮುದಾಪಹೃತೇ ನಮಃ । ಓಂ ಯೋಗಿನೇ ನಮಃ । ಓಂ ರಾಮಕಥಾಲೋಲಾಯ ನಮ ನಮಃ । ಓಂ ಸೀತಾನ್ವೇಷಣ ಪಂಡಿತಾಯ ನಮಃ । ಓಂ ವಜ್ರ ದಂಷ್ಟ್ರಾಯ ನಮಃ । ಓಂ ವಜ್ರ ನಖಾಯ ನಮಃ । 100

ಓಂ ರುದ್ರವೀರ್ಯ ಸಮುದ್ಭವಾಯ ನಮಃ । ಓಂ ಇಂದ್ರಜಿತ್ಪ್ರಹಿತಾಮೋಘ ಬ್ರಹ್ಮಾಸ್ತ್ರವಿನಿವಾರಕಾಯ ನಮಃ । ಓಂ ಪಾರ್ಥಧ್ವಜಾಗ್ರ ಸಂವಾಸಿನೇ ನಮಃ । ಓಂ ಶರಪಂಜರಭೇದಕಾಯ ನಮಃ । ಓಂ ದಶಬಾಹವೇ ನಮಃ । ಓಂ ಲೋಕಪೂಜಿತಾಯ ನಮಃ । ಓಂ ಜಾಂಬವತ್ಪ್ರೀತಿ ವರ್ಧನಾಯ ನಮಃ । ಓಂ ಸೀತಾಸಮೇತ ಶ್ರೀರಾಮಪಾದಸೇವಾಧುರಂಧರಾಯ ನಮಃ । ಶ್ರೀಮತೇ ಪ್ರಸನ್ನಾಂಜನೇಯಾಯ ನಮಃ ॥

॥ ಇತಿ ಶ್ರೀ ಕಾಳಿಕಾ ರಹಸ್ಯೇ ಆಂಜನೇಯಾಷ್ಟೋತ್ತರ ಶತನಾಮಾವಲಿಃ ಸಂಪೂರ್ಣಂ ॥

## 12.14 ಹನುಮಾನ್ ಗಾಯತ್ರಿ

**ಓಂ ಶಬ್ದರಾಜಾಯವಿದ್ಮಹೇ ವಾಯುಪುತ್ರಾಯ ಧೀಮಹಿ ।**

**ತನ್ನೋ ಹನುಮಾನ್ ಪ್ರಚೋದಯಾತ್ ॥**

ಭಾವಾರ್ಥ - ಆಕಾಶತತ್ವಕ್ಕೆ ಒಡೆಯನಾಗಿರುವವನನ್ನು ಅರಿತುಕೊಳ್ಳ ಬಯಸುವೆವು. ವಾಯುಪುತ್ರನಾಗಿರುವ ಆತನನ್ನು ಅನುಗ್ರಹಿಸಲೋಸುಗ ಪ್ರಾರ್ಥಿಸುವೆವು. ಮಹಿಮಾನ್ವಿತನಾಗಿರುವ ಆ ಹನುಮಂತನು ಸದಾ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಣಾ ಶಕ್ತಿ ಕರುಣಿಸಲಿ.

**ಆಂಜನೇಯಾಯ ವಿದ್ಮಹೇ ವಾಯುಪುತ್ರಾಯ ಧೀಮಹೀ ।**
**ತನ್ನೋ ಹನುಮಾನ್ ಪ್ರಚೋದಯಾತ್ ॥**

ಆಂಜನೇಯನನ್ನು ನಾವು ಅರಿತುಕೊಳ್ಳಬಯಸುವೆವು. ವಾಯುಪುತ್ರನಾಗಿರುವ ಆತನನ್ನು ಅನುಗ್ರಹಿಸಲೋಸುಗ ಪ್ರಾರ್ಥಿಸುವೆವು.

**ಪಂಚವದನಾಯವಿದ್ಮಹೇ ಮಹಾಬಲಾಯ ಧೀ ಮಹಿ ।**
**ತನ್ನೋ ಹನುಮಾನ್ ಪ್ರಚೋದಯಾತ್॥**

ಭಾವಾರ್ಥ - ಪಂಚಮುಖಿಯನ್ನು ಅರಿತುಕೊಳ್ಳಬಯಸುವೆವು. ಆತನನ್ನು ಅನುಗ್ರಹಸ್ಸಲೋಸುಗ ಬೇಡಿಕೊಳ್ಳುತ್ತಿರುವೆವು. ಅಂತಹಾ ಮಹಿಮಾನ್ವಿತನಾಗಿರುವ ಹನುಮನು ನಮಗೆ ಸದಾ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತಿರಲಿ.

## 12.15 ಆಂಜನೇಯ ಸ್ತುತಿ

**ಶೋಣಾನನಂ ವಿಶಾಲಾಕ್ಷಂ ದೀರ್ಘಬಾಹುದ್ವಯಾನ್ವಿತಂ ।**
**ಉತ್ತುಂಗ ಶಿರಸಾಯುಕ್ತಂ ವಾಮಪಾದಂ ತು ಕುಂಚಿತಂ ॥**

**ಸುಸ್ಮಿತಂ ದಕ್ಷಿಣಂ ಪಾದಂ ಕಟಕಾದ್ಯೈರ್ವಿಭೂಷಿತಂ ।**
**ರಸಾಲಕೋರಕಾಯುಕ್ತ ಕರಂ ವಾಮಕಟಿಸ್ಥಿತಂ ॥**

**ಊರ್ಧ್ವಪ್ರಸಾರಿತಂಚಾನ್ಯಕರಂ ವೈ ಮಾರುತಾತ್ಮಜಂ ।**
**ದೀರ್ಘವಾಲಸಮಾಯುಕ್ತಂ ನಾನಾಲಂಕಾರಸಂಯುತಂ ॥**

**ಇನ್ದ್ರಾದಿಭಿಶ್ಚ ಸಂಸೇವ್ಯಂ ಸಿದ್ಧಚಾರಣ ಸೇವಿತಂ ।**
**ನಮಸ್ಯಾಮಿ ಮಹಾತೇಜಂ ಕಪೀಶಂ ಕಾಮಿತಾರ್ಥದಂ ॥**

ಭಾವಾರ್ಥ - ಕೆಂಪಾದ ಮೊಗದವನೂ, ವಿಸ್ತಾರವಾಗಿರುವ ನೇತ್ರವುಳ್ಳವನೂ, ಧೀಘವಾದ ತೋಳುಗಳನ್ನು ಹೊಂದಿರುವವನೂ ಉನ್ನತವಾಗಿರುವ ಶಿರವನ್ನು ಹೊಂದಿರುವವನೂ, ಕುಬ್ಜವಾಗಿರುವ ಪಾದಗಳಿಂದ ಕುಗ್ಗಿ ಹೋದವನೂ, ಮಂದಹಾಸನೂ, ವಿನಯಶೀಲನೂ, ಕಡಗಗಳಿಂದ ವಿಭೂಷಿತವಾಗಿರುವ ಪಾದಗಳನ್ನು ಹೊಂದಿರುವವನೂ, ಕೈಯಲ್ಲಿ ಸಿಹಿ ಮಾವಿನ ಮೊಗ್ಗುಗಳನ್ನು ಹಿಡಿದಿರುವವನೂ, ಎಡ ಟೊಂಕದವನೂ, ಎತ್ತರಕ್ಕೆ ವಿಸ್ತರಿಸಿದವನೂ, ಮಾರುತನ ಪುತ್ರನೂ, ಉದ್ದವಾಗಿರುವ ಬಾಲವನ್ನು ಹೊಂದಿರುವವನೂ, ನಾನಾ ಅಲಂಕಾರಗಳಿಂದ ಕೂಡಿರುವವನೂ, ಇಂದ್ರಾದಿ ದೇವತೆಗಳಿಂದ ಸೇವಿಸಲ್ಪಡುವವನೂ, ಸಿದ್ಧ ಸಾಧ್ಯರಿಂದ ಸೇವೆಗೊಂಬವನೂ, ಮಹಾತೇಜೋವಂತನೂ, ಕಪಿ ಸಮೂಹದ ಒಡೆಯನೂ ಆಗಿ ಇಷ್ಟಾರ್ಥಗಳನ್ನೀವ ಹನೂಮಂತನಿಗೆ ನಾನು ನಮಸ್ಕರಿಸುತ್ತಿರುವೆ.

॥ ಇತಿ ಆಂಜನೇಯಸ್ತುತಿ ಸಂಪೂರ್ಣಂ ॥

## 12.16 ಶ್ರೀ ಹನುಮ ಸ್ತೋತ್ರ

**ವಿಪ್ರಾದಯೋ ಜನಗಣಾಃ ಸ್ತವನಂ ಪ್ರಚಕ್ಷುರ್ಬ್ರಹ್ಮ ಸ್ವರೂಪ ಜಗತಾಂ ಪರಿಪಾಲಕಸ್ಯ । ರಾಮಪ್ರಭಾವಬಲಪೂರಿತ ರುದ್ರಮೂರ್ತೇಃ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥1॥**

**ಶ್ರೀರಾಮದೂತ ಶರಣಾಗತ ದೀನಬಂಧೋ ವಜ್ರಾಂಗದೇಹ ಕರುಣಾಕರ ರುದ್ರಮೂರ್ತೇಃ । ಶ್ರೀರಾಮರಾಮ ಇತಿ ಜಪಕೃತಾತ್ಮ ಶಕ್ತೇ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥2॥**

**ಸಿಂಧೂರ ತೈಲರಚಿತಾತಿ ವಿಭೂಷಣಾತ್ಮಲಾಂಗೂಲತಾಡನ ಕೃತಾಸುರಸಂಘ ನಾಶ । ಕ್ರೋಧಾದ್ದಶಾನನಪುರೀದಹನ ಪ್ರಕಾರಿನ್ ಶ್ರೀರಾಮದೂತಂ ಸತತಂ ಹನುಮನ್ನಮಸ್ತೇ ॥3॥**

ರಾಮಾರಿಣಾಕೃತಹೃತೌ ಜನಕಾತ್ಮಜಾಯಾ ಲಂಕಾಸ್ಥಿತಾ ಜನಕಜೇತಿ ಸುಶೋಧಕಾರಿನ್ । ಸೀತಾತಿಶೋಕಹರಣ ಪ್ರಬಲಾರಿಹಂತಃ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥4॥

ಸಂಮೂರ್ಛಿತಾಂಗ ವಿಭು ಲಕ್ಷಣಸೌಖ್ಯಕಾರಿನ್ ರೌದ್ರಾಂಗದೀರ್ಘ ಹನುಮನ್ನಗಹಸ್ತಧಾರಿನ್ । ದುಷ್ಟಾಸುರಾಹಿಮಹಿರಾವಣ ನಾಶಕಾರಿನ್ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥5॥

ಶೈಲಿ-ಗದಾದರ ಸಮರ್ಜಿತ ವಜ್ರಕಚ್ಛಿನ್ನಾಂಘ್ರಿಮಾಂಘ್ರಿಪೀಡಿತ ಮನೋಜ ಸುಲಬ್ಧಕೀರ್ತೇ । ಹೇ ಮಾರುತೇ ಭವಸಮಸ್ತ ಭಯಾರ್ತಿಹಾರಿನ್ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥6॥

ವಿಪ್ರಾದಿಜಾತಿಕ ನಿಕೇತನ್ಮಾರೀಚಾನಾಗ್ರಾಮಾಧಿವಾಸ ಕೃತಧಾಮ ವಿಶಾಲಕೀರ್ತೇ । ಶ್ರೀರಾಮದಾಸದೃಢ- ಬುದ್ಧಿಮತಾಂ ವರಿಷ್ಟಂ ಶ್ರೀರಾಮದೂತ ಹನುಮನ್ನಮಸ್ತೇ ॥7॥

ಪಲ್ಗೂನದೀತಟಸಮುದ್ಭವ ಚಾಲಿವಕ್ಷೇಪ್ರಾಸಾದ ಮಂಡಿತ ಮನೋಹರ ವಾಸಧಾಮ್ನಿ । ರೂಪಂ ವಿಭಾತಿ ಕಪಿರಾಜ ಮನೋಹರಂ ತೇ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥8॥

ಶುಕ್ಲಾಶು ಭಾದ್ರಪದಮಾಸಭವಾ ದ್ವಿತೀಯಾ ಭಾತಿ ತ್ವದೀಯ ಹವನೋತ್ಸವಜಾತ ಹರ್ಷಾ । ಯಾತ್ರಾಲುಸಂಘರಚಿತಾ ಜನವೀಥಿಕಾತ್ರ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥9॥

ಜನ್ಮಾದಿಹೀನ ಪವನಾಂಜನಿಕಾತ್ತದೇಹ ಶ್ರೀಜಾನಕೀಪತಿ ಮನೋಜವ ದೀಪ್ತಕಾಂತೇ । ನಾನಾ ಕಪೀಂದ್ರಂಚ ನಾಯಕ ಬ್ರಹ್ಮಚಾರಿನ್ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥10॥

**ಲಾಂಗೂಲಧಾರಕ ಜಿತೇಂದ್ರಿಯ ವಾಯುಪುತ್ರ ಷಟ್ಪಂಚಹಸ್ತ ರಚಿತ ದ್ವಜ ದೀರ್ಘಮಾನ । ಶ್ರೀರಾಮಸೇವನಪರೇಣ ಸದೋರ್ದ್ವಕಾಯ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥11॥**

**ಹೇ ಪಾವನೇಯ ಜನರಕ್ಷಕ ರಾಮಭಕ್ತ ರಾಜೀವಲೋಚನ ವಿಶಾಲ ಸುಭಾಧಾರಿನ್ । ದೀರ್ಘಾರ್ಕಸ್ರಗ್ದ್ವರ ಜಟಾಮುಕುಟಾದಿ ಧಾರಿನ್ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥12॥**

**ಆವಾಹನಾದಿ ಶುಭಷೋಡಶಕೋಪಚಾರಾಸ್ತುಭ್ಯಂ ನಿವೇದನ ಕೃತಾ ಹನುಮನ್ಮಯಾ ಯೇ । ಅಂಗೀಕುರುಷ್ವ ಭಗವನ್ ಹನುಮನ್ಮಹೇಶ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥13॥**

**ರೋಗಾನ್ವಿನಾಶಯ ರಿಪೂನಥವಿಘ್ನಜಾಲಂ ತಾಪತ್ರಯಂ ಯಮಭಯಂ ಭವಪಾಪ ಸಂಘಂ । ದುಃಖಾನಿ ನಾಶಯ ವಿನಾಶಯರಿಷ್ಟಕಷ್ಟಂ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥14॥**

**ಹೇ ಭಕ್ತವತ್ಸಲ ವಿಭೋ ಭಗವನ್ ದಯಾಲೋ ಪುತ್ರಾನ್ಯಶಾಂಸಿ ಖಲು ದೇಹಿ ಧನಾನಿ ದೇಹಿ । ಜಾಯಾ ಸುಭಾಗ್ಯಕ ಗವಾತಿರಿಕ್ತ ಭವದೋಷ ಚಯಂ ಕ್ಷಮಸ್ತ ಪೂಜಾಂಗೃಹಾಣ ಸಕಲಾಂ ಸ್ತುತಿಪಾಠಯುಕ್ತಾಂ । ದೇವಪ್ರಸೀದ ಭಗವನ್ ಹನುಮಾನ್ ಕೃಪಾಲೋ ಶ್ರೀರಾಮದೂತ ಸತತಂ ಹನುಮನ್ನಮಸ್ತೇ ॥15॥**

**ವಾಕ್ಪೂಜನಂ ತ್ವಯಿ ಸಮರ್ಪಿತಮೇವ ಭಕ್ತ್ಯಾ ದೋಷಾನ್ವಿಹಾಯ ಸಕಲಾನ್ ಖಲುತತ್ರ ಸಂಸ್ಥಾನ್ । ಸಮ್ಯಗ್ಗೃಹಾಣ ಸುಗುಣಾನಿವ ರಾಜಹಂಸಃಶ್ರೀರಾಮದೂತ ಸತತಂ ಹರ ಸಂಕಟಂ ಮೇ ॥16॥**

ಭಾವಾರ್ಥ - ವಿಪ್ರಾದಿ ಜನಸಮೂಹಕ್ಕೆ ಬ್ರಹ್ಮ ಸ್ವರೂಪನಾಗಿ ಜಗತ್ತನ್ನು ಪರಿಪಾಲಿಸುವ ಶ್ರೀರಾಮನ ಪ್ರಭಾವ ಬಲದಿಂದ ರುದ್ರಮೂರ್ತಿಯೆನಿಸಿಕೊಂಡ ಶ್ರೀರಾಮದೂತ ಹನುಮಂತನಿಗೆ ನಮನಗಳು. ಶ್ರೀರಾಮದೂತನಾಗಿ ಶರಣು ಹೊಕ್ಕವರ ಪಾಲಿಗೆ ದೀನ ರಕ್ಷಕನಾಗಿ ವಜ್ರದೇಹಿಯೂ ಕರುಣಾಕರನೂ

ರುದ್ರಸ್ವರೂಪಿಯೂ ತಾನಾಗಿ ಶ್ರೀರಾಮ ರಾಮ ಎಂಬುದಾಗಿ ರಾಮನಾಮ ಸಂಸ್ಮರಣೆಯನ್ನು ಮಾಡುತ್ತಾ ಆತ್ಮಶಕ್ತಿಯಾಗಿರುವ ಶ್ರೀರಾಮದೂತ ಹನುಮಂತನಿಗೆ ನಮನಗಳು. ಚಂದನದ ತೈಲದಿಂದ ಭೂಷಿತನಾಗಿ ತನ್ನ ಬಾಲದ ಹೊಡೆತದಿಂದ ಅಸುರ ಸಮೂಹವನ್ನು ನಾಶಗೊಳಿಸಿದ, ಅತಿ ಕ್ರೋಧಾವೇಷಭರಿತನಾಗಿ ಲಂಕಾಪುರವನ್ನು ದಹನ ಮಾಡಿದ ಅಸಮಾನ ಶೂರಿಯಾಗಿರುವ ಶ್ರೀ ರಾಮದೂತ ಹನುಮಂತನಿಗೆ ನಮನಗಳು. ಶ್ರೀರಾಮನ ಶತ್ರುವಿನಿಂದ ಅಪಹರಿಸಲ್ಪಟ್ಟು ಲಂಕೆಯಲ್ಲಿರಿಸಿದ ಜನಕಸುತೆ ಸೀತೆಯ ಸಂಶೋಧಕನಾಗಿ ಸೀತೆಯ ಶೋಕವನ್ನು ನಾಶಗೊಳಿಸಿದ ಶಕ್ತಿಯುತನಾದ ಶ್ರೀರಾಮದೂತ ಹನುಮಂತನಿಗೆ ನಮನಗಳು. ಯುದ್ಧರಂಗದಲ್ಲಿ ಪ್ರಜ್ಞಾಶೂನ್ಯನಾದ ಲಕ್ಷ್ಮಣನಿಗೆ ಸುಖವನ್ನು ಒದಗಿಸಿದ ರುದ್ರ ಸ್ವರೂಪಿಯಾಗಿ ಬೆಟ್ಟವನ್ನು ಕೈಯಲ್ಲಿ ಧರಿಸಿ ಭೂಮ್ಯಾಕಾಶಕ್ಕೆ ವಿಸ್ತರಿಸಿ ರಾವಣಾದಿಗಳ ನಾಶಕ್ಕೆ ಕಾರಣನಾದ ಶ್ರೀರಾಮದೂತ ಹನುಮನಿಗೆ ನಮನಗಳು. ಧೃಢವಾದ ಬುದ್ಧಿವಂತನೂ, ಪಲ್ಗುಣಿ ನದೀ ತೀರದಲ್ಲಿ ಉದ್ಭವಿಸಿದವನೂ, ಮನೋಹರನೂಬ್ರಹ್ಮಚಾರಿಯೂ, ಕಪಿಸಮೂಹದ ನಾಯಕನೂ, ಜಿತೇಂದ್ರಿಯನೂ ರಾಜೀವಲೋಚನನೂ, ಸರ್ವಶಕ್ತಿ ಸಮನ್ವಿತನಾಗಿರುವ ಶ್ರೀರಾಮದೂತ ಹನುಮನೇ!, ನಾನು ಸಮರ್ಪಿಸುತ್ತಿರುವ ಷೋಡಶೋಪಚಾರಗಳನ್ನು ಸ್ವೀಕರಿಸಿ ಸಮಸ್ತ ದುಃಖ ರೋಗರುಜಿನಾದಿಗಳನ್ನೂ ದೂರೀಕರಿಸಿ ನ್ಯೂನಾರಿಕ್ತಗಳನ್ನು ಮನ್ನಿಸಿ ಸುಪ್ರಸನ್ನನಾಗು. ಸದಾಕಾಲವೂ ನನ್ನ ಎಲ್ಲಾ ಸಂಕಟಗಳನ್ನೂ ಪರಿಹರಿಸಿ ಕಾಪಾಡು ಸ್ವಾಮೀ. ಹನುಮನೇ ನಿನಗೆ ನಮನಗಳು.

॥ ಇತಿ ಶ್ರೀ ಹನುಮ ಸ್ತೋತ್ರ ಸಂಪೂರ್ಣಂ ॥

## 12.17 ಶ್ರೀ ಆಂಜನೇಯ ಧ್ಯಾನಂ

**ನಮೋಸ್ತು ರಾಮಾಯ ಸ ಲಕ್ಷ್ಮಣಾಯ । ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ॥**

**ನಮೋಸ್ತು ರುದ್ರೇಂದ್ರ ಯಮಾನಿಲೇಭ್ಯೋ ।**

**ನಮೋಸ್ತು ಚಂದ್ರಾರ್ಕ ಮರುದ್ಗಣೇಭ್ಯಃ ॥1॥**

**ಧರ್ಮಾತ್ಮಾ ಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ ।**
**ಪೌರುಷೇಚಾ ಪ್ರತಿದ್ವಂದ್ವಃ ಶರೈನಂ ಜಹಿ ರಾವಣಿಂ ॥**

**ಗೋಷ್ಪದೀಕೃತವಾರಾಶಿಂ ಮಶಕೀಕೃತ ರಾಕ್ಷಸಂ ।**
**ರಾಮಾಯಣ ಮಹಾಮಾಲಾರತ್ನಂ ವಂದೇನಿಲಾತ್ಮಜಂ ॥2॥**

**ಅಂಜನಾನಂದನಂ ವೀರಂ ಜಾನಕೀ ಶೋಕ ನಾಶನಂ ।**
**ಕಪೀಶಮಕ್ಷ ಹಂತಾರಂ ವಂದೇ ಲಂಕಾಭಯಂಕರಂ ॥3॥**

**ಆಂಜನೇಯ ಮತಿಪಾಟಲಾನನಂ । ಕಾಂಚನಾದ್ರಿ ಕಮನೀಯವಿಗ್ರಹಂ ॥**
**ಪಾರಿಜಾತ ತರುಮೂಲವಾಸಿನಂ । ಭಾವಯಾಮಿ ಪವಮಾನನಂದನಂ ॥4॥**

**ಯತ್ರ ಯತ್ರ ರಘುನಾಥ ಕೀರ್ತನಂ । ತತ್ರ ತತ್ರ ಕೃತ ಮಸ್ತಕಾಂಜಲಿಂ ।**
**ಬಾಷ್ಪವಾರಿ ಪರಿಪೂರ್ಣಲೋಚನಂ । ಮಾರುತಿಂ ನಮತ ರಾಕ್ಷಸಾಂತಕಂ ॥5॥**

**ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।**
**ಅಜಾಢ್ಯಂ ವಾಕ್ಪಟುತ್ವಂ ಚ ಹನೂಮತ್ ಸ್ಮರಣಾದ್ಭವೇತ್ ॥6॥**

**ಸರ್ವಾರಿಷ್ಟನಿವಾರಕಂ ಶುಭಕರಂ ಪಿಂಗಾಕ್ಷಮಕ್ಷಾಪಹಂ ।**
**ಸೀತಾನ್ವೇಷಣ ತತ್ಪರಂ ಕಪಿವರಂ ಕೋಟೀಂದು ಸೂರ್ಯ ಪ್ರಭಂ ॥**

**ಲಂಕಾದ್ವೀಪ ಭಯಂಕರಂ ಸಕಲದಂ ಸುಗ್ರೀವ ಸಮ್ಮಾನಿತಂ ।**
**ದೇವೇಂದ್ರಾದಿ ಸಮಸ್ತ ದೇವವಿನುತಂ ಕಾಕುತ್ಸ್ಥ ದೂತಂ ಭಜೇ ॥7**

ಭಾವಾರ್ಥ - ಸೀತಾಲಕ್ಷ್ಮಣರೊಡಗೂಡಿರುವ ಶ್ರೀರಾಮನಿಗೂ ಇಂದ್ರಾದಿ ದೇವರ್ಕಳಿಗೂ ನಮಸ್ಕಾರಗಳು. ಅಪರಿಮಿತವಾದ ಸಾಗರವನ್ನು ಕಿಂಚಿತ್ಪ್ರಮಾಣವೆಂಬುದಾಗಿ ಭಾವಿಸಿ ಲಂಘಿಸಿ ರಾಕ್ಷಸಾದಿಗಳನ್ನು ಕ್ಷುದ್ರ ಜಂತುಗಳೆಂದು ಭಂಗಿಸಿದ ವಾಯು ಪುತ್ರನಿಗೆ ನಾನು ನಮಸ್ಕರಿಸುವೆ. ಎಲ್ಲೆಲ್ಲಿ ಶ್ರೀರಾಮನ ಕೀರ್ತನೆಗಳು ಕೇಳಿ ಬರುತ್ತದೆಯೋ ಅಲ್ಲೆಲ್ಲಾ ತನ್ನ ಶಿರದ ಮೇಲೆ ಅಂಜಲೀ ಬದ್ಧನಾಗಿ ಆನಂದ ಭಾಷ್ಪವನ್ನು ಸುರಿಸುತ್ತಾ ಪರಮಾನಂದ ಭರಿತನಾಗುವ

ರಾಕ್ಷಸಕುಲ ನಾಶಕನಾಗಿರುವ ಮಾರುತಿಯನ್ನು ಸ್ಮರಿಸೋಣ. ಹನುಮಂತನ ಸ್ಮರಣೆ ಮಾತ್ರದಿಂದ ಬುದ್ಧಿ, ಶಕ್ತಿ, ಯಶಸ್ಸು, ಧೈರ್ಯ ಮುಂತಾದ ಸಕಲವೂ ಲಭಿಸುತ್ತವೆ. ಇಂತಹಾ ಸರ್ವಾರಿಷ್ಟ ನಿವಾರಕನಾಗಿರುವ, ಸಮಸ್ತ ಶುಭಂಕರನಾದ, ಕೋಟಿ ಸೂರ್ಯಪ್ರಭಾ ತೇಜದಿಂದ ಶೋಭಿಸುತ್ತಿರುವ ದೇವೇಂದ್ರಾದಿ ಸಮಸ್ತ ದೇವ ದೇವತೆಯರಿಂದ ಸ್ಮರಿಸಲ್ಪಡುತ್ತಿರುವ ಶ್ರೀರಾಮದೂತ ಹನುಮಂತನನ್ನು ಸ್ಮರಿಸೋಣಾ.

॥ ಇತಿ ಶ್ರೀ ಆಂಜನೇಯ ಧ್ಯಾನಂ ಸಂಪೂರ್ಣಂ ॥

## 12.18 ಶ್ರೀಮದಾಂಜನೇಯ ಪ್ರಾರ್ಥನಾ ಶ್ಲೋಕ

**ಮನೋಜವಂ ಮಾರುತತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ ।**
**ವಾತಾತ್ಮಜಂ ವಾನರಯೂಥ ಮುಖ್ಯಂ ಶ್ರೀರಾಮ ದೂತಂ ಶರಣಂ ಪ್ರಪದ್ಯೇ ॥1॥**

**ಆಂಜನೇಯಂ ವಾಯುಸೂನುಂ ರಾಮಕಾರ್ಯ ಧುರಂಧರಂ ।**
**ಲಂಘಿತಾಬ್ಧಿಂ ರಾಕ್ಷಸಾಂತಂ ಧಾಮಾಮ್ಯತ್ರ ಸಾದರಂ ॥2॥**

**ಆಂಜನಾ ಗರ್ಭ ಸಂಭೂತೋ ವಾಯು ಪುತ್ರೋ ಮಹಾಬಲಃ।**
**ಕುಮಾರೋ ಬ್ರಹ್ಮಚಾರೀ ತಸ್ಮೈ ಶ್ರೀ ಹನುಮತೇ ನಮಃ ॥3॥**

**ಪಂಚವಕ್ತ್ರಂ ಮಹಾಭೀಮಂ ತ್ರಿಪಂಚ ನಯನೈರ್ಯುತಂ ।**
**ದಶಭೀರ್ಬಾಹುಭಿರ್ಯುಕ್ತಂ ಸರ್ವ ಕಾಮಾರ್ಥಸಿದ್ಧಿದಂ ॥4॥**

ಭಾವಾರ್ಥ - ಮನೋವೇಗವನ್ನು ಹೊಂದಿರುವವನೂ ಜಿತೇಂದ್ರಿಯನೂ, ಬುದ್ಧಿಮತ್ತೆಯಲ್ಲಿ ಶ್ರೇಷ್ಠನೂ ವಾಯುಪುತ್ರನೂ, ಕಪಿಗಳ ಸಮೂಹದಲ್ಲಿ ಮುಖ್ಯನೂ, ಶ್ರೀರಾಮದೂತನೂ ಆಗಿರುವ ಹನುಮಂತನಿಗೆ ನಾನು ಶರಣಾಗುವೆನು. ಆಂಜನೇಯನೂ, ವಾಯು ಪುತ್ರನೂ, ಶ್ರೀರಾಮನ ಸೇವಾಕಾರ್ಯಗಳ ಪ್ರಮುಖನೂ ಸಾಗರವನ್ನು ಉಲ್ಲಂಘಿಸಿದವನೂ, ರಾಕ್ಷಸಾಂತಕನೂ, ತನ್ನ ಪ್ರಕಾಶವನ್ನು ಸಾದರಪಡಿಸಿದವನೂ ಅಂಜನಾದೇವೀಗರ್ಭದಲ್ಲಿ ಜನಿಸಿದವನೂ ಮಹಾಬಲಶಾಲಿಯೂ, ವಾಯುಪುತ್ರನೂ ಯುವಕನೂ, ಬ್ರಹ್ಮಚಾರಿಯೂ ಆಗಿರುವ

ಶ್ರೀಹನುಮಂತನಿಗೆ ನಾನು ನಮಸ್ಕರಿಸುವೆ. ಐದು ಮೊಗಗಳನ್ನು ಹೊಂದಿರುವವನಾಗಿರುವ, ಮಹಾಭಯಂಕರನೂ, ಮೂರುಲೋಕಗಳನ್ನು ಕಣ್ಣಾಗಿಸಿಕೊಂಡು ಹತ್ತು ತೋಳುಗಳನ್ನು ಹೊಂದಿ ಸಮಸ್ತ ಇಷ್ಟಾರ್ಥಗಳ ಸಿದ್ಧಿದಾಯಕನೂ ಆಗಿರುವ ಹನುಮಂತನಿಗೆ ನಾನು ಶರಣಾಗುವೆ.

॥ ಇತಿ ಶ್ರೀಮದಾಂಜನೇಯ ಪ್ರಾರ್ಥನಾ ಶ್ಲೋಕ ಸಂಪೂರ್ಣಂ ॥

## 12.19 ಶ್ರೀ ಪಂಚಮುಖಿ ಹನುಮಾನ್ ಧ್ಯಾನ ಮಂತ್ರಂ

**ಉದ್ಯನ್ಮಾರ್ತಾಂಡ ಕೋಟೀರುಚಿರ್ಮಯಯುತಂ ಚಾರು ವೀರಾಸನಸ್ಥಂ ।**
**ಮೌಂಜೀ ಯಜ್ಞೋಪವೀತಾಭರಣ ಮುರುಜಟಾ ಶೋಭಿತಂ ಕುಂಡಲಾಭ್ಯಾಂ ।**
**ಭಕ್ತಾನಾಮಿಷ್ಟದಂ ತಂ ಪ್ರಣಯಮನುದಿತಂ ವೇದನಾದ ಪ್ರಣಾದಂ ।**
**ಧ್ಯಾಯೇದ್ದೇವಂ ವಿಧೇಯಂ ಪ್ಲವಗ ಕುಲಪತಿಂ ಗೋಷ್ಪದೀ ಭೂತವಾರ್ಧಿಂ ॥**

**ಶ್ರೀರಾಮಚಂದ್ರದೂತಾಯ ಅಂಜನಾ ವಾಯು ಪುತ್ರಾಯ ಮಹಾಬಲಾಯ ಸೀತಾದುಃಖ ನಿವಾರಣಾಯ ಲಂಕಾದಹನಕಾರಣಾಯ ಮಹಾಭಯಪ್ರಚಂಡಾಯ ಪಲ್ಗುನಸಖಾಯ ಕೋಲಾಹಲ ಸಕಲ ಬ್ರಹ್ಮಾಂಡ ವಿಶ್ವರೂಪಾಯ ಸಪ್ತ ಸಮುದ್ರ ನಿರಾಲಂಬಿತಾಯ ಪಿಂಗಲನಯನಾಮಿತ ವಿಕ್ರಮಾಯ ಸೂರ್ಯಬಿಂಬ ಫಲಸೇವಿತಾಯ ದುಷ್ಟ ನಿರಾಲಂಕೃತಾಯ ಅಂಗದ ಲಕ್ಷ್ಮಣ ಕಪಿಸೈನ್ಯಪ್ರಾಣನಿರ್ವಾಹಕಾಯ ದಶಕಂಠವಿಧ್ವಂಸನಾಯರಾಮೇಷ್ಟಾಯ ಫಲ್ಗುನಸಖಾಯ ಸೀತಾಸಮೇತ ಶ್ರೀರಾಮಚಂದ್ರಪ್ರಸಾದಕಾಯ ಪ್ರಸೀದ ಪ್ರಸೀದಾಂ ದೇಹಿ ॥**

ಭಾವಾರ್ಥ - ಉದಯಿಸುವ ಕೋಟಿಸೂರ್ಯರ ಪ್ರಕಾಶಮಯನಾಗಿ ಸುಂದರವಾಗಿರುವ ಶಕ್ತಿಯುತ ಆಸನದಲ್ಲಿ ಕುಳಿತಿರುವ ಮುಂಜೀ, ಯಜ್ಞೋಪವೀತ, ಆಭರಣ, ವಿಸ್ತಾರವಾಗಿರುವ ಜಟೆಯಿಂದ ಶೋಭಿತನಾದವನೂ, ಭಕ್ತರಿಗೆ ಇಷ್ಟಾರ್ಥದಾಯಕನೂ, ವೇದಗಳ ದೊಡ್ಡ ಸ್ವರದಿಂದ ಸಂತಸಗೊಳ್ಳುವವನೂ ವಿಧೇಯನೂ, ಕಪಿಕುಲಾಧಿಪತಿಯೂ ಆಗಿರುವ ದೇವನನ್ನು ಧ್ಯಾನಿಸುವೆ. ಶ್ರೀರಾಮಚಂದ್ರನ ದೂತನೂ ಅಂಜನಾದೇವಿ ಮತ್ತು ವಾಯುವಿನ ಪುತ್ರನೂ,

ಮಹಾಶಕ್ತಿಶಾಲಿಯೂ, ಸೀತಾದುಃಖವನ್ನು ನಿವಾರಿಸಿದವನೂ, ಲಂಕಾದಹನಕ್ಕೆ ಕಾರಣೀಭೂತನೂ, ಮಹಾಭಯಂಕರನೂ, ಪಲ್ಗುಣಿನದಿ ಪ್ರಿಯನೂ, ಕೋಲಾಹಲಕಾರಕನೂ, ಸಮಸ್ತ ಬ್ರಹ್ಮಾಂಡಸ್ವರೂಪನೂ, ಏಳು ಸಮುದ್ರಗಳನ್ನು ಅವಲಂಬಿಸದಿರುವವನೂ, ಸಿಂಧೂರ ವರ್ಣದ ಕಣ್ಣುಗಳನ್ನು ಹೊಂದಿರುವವನೂ, ಮಹಾ ವಿಕ್ರಮಶಾಲಿಯೂ, ಸೂರ್ಯಬಿಂಬವನ್ನು ಹಣ್ಣೆಂದು ಸೇವಿಸ ಹೊರಟವನೂ, ಅಲಂಕಾರ ರಹಿತನೂ, ಅಂಗದ, ಲಕ್ಷ್ಮಣ, ಹಾಗೂ ಕಪಿ ಸೈನ್ಯದ ಪ್ರಾಣವ ರಕ್ಷಿಸಿದವನೂ, ದಶಕಂಠನನ್ನು ಧ್ವಂಸ ಮಾಡಿದವನೂ, ಶ್ರೀರಾಮನಿಗೆ ಇಷ್ಟನಾಗಿರುವ ಅರ್ಜುನನ ಸಖನಾದ ಸೀತಾಸಮೇತ ಶ್ರೀರಾಮಚಂದ್ರ ಪ್ರಸಾದಕ್ಕೆ ಪಾತ್ರನಾದವನೂ ಆಗಿರುವ ಶ್ರೀ ಆಂಜನೇಯ ಸ್ವಾಮಿಯೇ ಪ್ರಸನ್ನನಾಗು. ಪ್ರಸನ್ನನಾಗು.

॥ ಇತಿ ಶ್ರೀ ಪಂಚಮುಖಿ ಹನುಮಾನ್ ಧ್ಯಾನ ಮಂತ್ರಂ ಸಂಪೂರ್ಣಂ ॥

## 12.20 ಪ್ರಸನ್ನಾಂಜನೇಯ ಸ್ತೋತ್ರಾಣಿ

**ಆಪನ್ನಾಖಿಲ ಲೋಕಾರ್ತಿಹಾರಿಣೇ ಶ್ರೀ ಹನೂಮತೇ ।**
**ಅಕಸ್ಮಾದಾಗತೋತ್ಪಾತ ನಾಶನಾಯ ನಮೋಽಸ್ತು ತೇ ॥1॥**

**ಅಂಜನಾ ನಂದನಂ ವೀರಂ ಜಾನಕೀ ಶೋಕ ನಾಶನಂ ।**
**ಕಪೀಶಮಕ್ಷ ಹಂತಾರಂ ವಂದೇ ಲಂಕಾ ಭಯಂಕರಂ ॥2॥**

**ನಮಸ್ತೇ ನಮಸ್ತೇ ಮಹಾವಾಯುಸೂನೋ ನಮಸ್ತೇ ನಮಸ್ತೇ ಭವಿಷ್ಯದ್ವಿಧಾತಃ ।**
**ನಮಸ್ತೇ ನಮಸ್ತೇ ಮಹಾಭೀಷ್ಟದಾತಃ ನಮಸ್ತೇ ನಮಸ್ತೇಽಸ್ಮಿಶಂ ರಾಮ ಭಕ್ತಃ ॥3॥**

**ನಮಸ್ತೇ ವಾಯು ಪುತ್ರಾಯ ದ್ವಂಸಿತಾಮರ ವೈರಿಣೇ ।**
**ಸುಜನಾಂಬುಧಿ ಚಂದ್ರಾಯ ಭವಿಷ್ಯ ಬ್ರಹ್ಮಣೇ ನಮಃ ॥4॥**

**ಗೋಷ್ಪದೀಕೃತವಾರಾಶಿಂ ಮಶಕೀ ಕೃತರಾಕ್ಷಸಂ ।**
**ರಾಮಾಯಣ ಮಹಾಮಾಲಾ ರತ್ನಂ ವಂದೇಽನಿಲಾತ್ಮಜಂ ॥5॥**

**ಆಂಜನೇಯಮತಿಪಾಟಲಾನನಂ ಕಾಂಚನಾದ್ರಿ ಕಮನೀಯ ವಿಗ್ರಹಂ ।**
**ಪಾರಿಜಾತ ತರು ಮೂಲವಾಸಿನಂ ಭಾವಯಾಮಿ ಪವಮಾನ ನಂದನಂ ॥6॥**

**ಸದಾ ರಾಮ ರಾಮೇತಿ ರಾಮಾಮೃತಂತೇ । ಸದಾರಾಮ ಮಾನಂದ ನಿಷ್ಕಂದ ಕಂದಂ ।**
**ಪಿಬಂತಂ ನಮಂತಂ ಸುದಂತಂ ಹಸಂತಂ । ಹನೂಮಂತ ಮಂತರ್ಭಜೇ ತಂ ನಿತಾಂತಂ ॥7॥**

**ಲಂಕಾದ್ವೀಪ ಭಯಂಕರಂ ಸಕಲದಂ ಸುಗ್ರೀವ ಸಮ್ಮಾನಿತಂ ।**
**ದೇವೇಂದ್ರಾದಿಸಮಸ್ತದೂತ ವಿನುತಂ ಕಾಕುತ್ಸ್ಥದೂತಂ ಭಜೇ ॥8॥**

**ಹೃದಯಾಬ್ಜೇ ಸ್ಥಿರಭಾವಂ ಮಂಜುಲರೂಪಂ ಮಹೋಜ್ವಲಂ ಧಾಮಃ ।**
**ಹಸ್ತಾಬ್ಜೇ ಪಶ್ಯಂತಂ ಧನ್ಯಂ ಕಲಯೋಽಞ್ಜನಾತನಯಂ ॥9॥**

**ಸರ್ವಾನಿಷ್ಟನಿವಾರಕಂ ಶುಭಕರಂ ಪಿಂಗಾಕ್ಷಮಕ್ಷಾಪಹಂ ।**
**ಸೀತಾನ್ವೇಷಣಂ ಕಪಿವರಂ ಕೋಟೀಂದು ಸೂರ್ಯ ಪ್ರಭಂ ॥10॥**

ಭಾವಾರ್ಥ - ಆಪತ್ತಿಗೆ ಸಿಲುಕಿದ ಸಕಲ ಲೋಕಗಳ ದುಃಖಗಳನ್ನು ಪರಿಹರಿಸುವ ಹನುಮಂತನೇ, ಆಕಸ್ಮಿಕವಾಗಿ ಒದಗುವ ಅವಲಕ್ಷಣಗಳನ್ನು ನಾಶಗೊಳಿಸುವ ಹನುಮಂತನೇ ನಿನಗಿದೋ ನಮನಗಳು. ಪುನರಪಿ ನಮನಗಳು. ಅಂಜನಾದೇವಿಯ ಮಗನೂ, ವೀರನೂ, ಜಾನಕಿಯ ಶೋಕ ನಾಶಕನೂ, ಕಪಿಗಳ ಗುಂಪಿನ ನಾಯಕನೂ, ರಾವಣನ ಸುತ ಅಕ್ಷನನ್ನು ಸಂಹರಿಸಿದವನೂ, ಲಂಕಾಪುರಿಯ ಪಾಲಿಗೆ ಭಯಂಕರನೂ ಆದವನೇ ನಮನಗಳು. ಮಹಾವಾಯುಸುತನೇ ನಿನಗಿದೋ ನಮನಗಳು. ಪುನರಪಿ ನಮನಗಳು. ಅದೃಷ್ಟದಾತನೇ ನಮನಗಳು. ಶ್ರೇಷ್ಠವಾಗಿರುವ ಬಯಕೆಗಳನ್ನು ಪೂರೈಸುವವನೇ ನಿನಗಿದೋ ನಮನಗಳು, ಪುನರಪಿ ನಮನಗಳು. ವಾಯುವಿನ ಸುಪುತ್ರನೇ ನಿನಗಿದೋ ನಮನಗಳು. ದೇವತೆಗಳ ಶತ್ರು ಸಂಹರನೇ, ಸಜ್ಜನರೆಂಬ ಸಾಗರಕ್ಕೆ ಚಂದ್ರನಂತಿರುವವನೇ, ಅದೃಷ್ಟಗಳನ್ನು ಕರುಣಿಸುವಾತನೇ ನಿನಗಿದೋ ನಮನಗಳು. ಸಾಗರವನ್ನು ಗೋಪಾದದ ವಿಸ್ತಾರವನ್ನಾಗಿಸಿಕೊಂಡು ಲಂಘಿಸಿ ನೊಣವಾಗಿಕಾಡಿದ ರಾಕ್ಷಸನನ್ನು ನಿಗ್ರಹಿಸಿ ಶ್ರೇಷ್ಠವಾಗಿರುವ ರಾಮಾಯಣದ

ಮಾಣಿಕ್ಯನಾಗಿರುವ ವಾಯುವಿನ ಆತ್ಮ ಸಂಭೂತನೇ ನಿನಗಿದೋ ನಮನಗಳು. ಆಂಜನೇಯನು ಸೀಳು ಮೊಗವನ್ನು ಹೊಂದಿದವನು. ಕಾಂಚನಾದ್ರಿಯನ್ನು ಚೆಲುವಾದ ವಿಗ್ರಹವನ್ನಾಗಿಸಿದವನು. ಪಾರಿಜಾತ ಗಿಡದ ಬುಡದಲ್ಲಿ ವಾಸಿಸುವವನು. ಅಂತಹಾ ವಾಯು ಪುತ್ರನನ್ನು ಸದಾ ನೆಪಿಸಿಕೊಳ್ಳುವೆ. ಸದಾ ರಾಮ ರಾಮಾ ಎಂಬುದಾಗಿ ರಾಮ ನಾಮಾಮೃತದಲ್ಲಿ, ಸದಾ ರಾಮನಾಮದ ಆನಂದ ಲೀನನಾಗಿ, ರಾಮ ನಾಮಾಮೃತವನ್ನು ಕುಡಿಯುತ್ತಾ ನಮಿಸುತ್ತಾ. ಸಂತಸಪಡುತ್ತಾ. ಅಂತರ್ಯದಲ್ಲಿ ಬಹಳವಾಗಿ ಭಜಿಸುತ್ತಾ ಇರುವ ಹನುಮನೇ ನಿನಗಿದೋ ನಮನಗಳು.

ಲಂಕಾದ್ವೀಪಕ್ಕೆ ಭಯವನ್ನು ಹುಟ್ಟಿಸಿದವನೂ, ಸುಗ್ರೀವನಿಗೆ ಸರ್ವಸ್ವವಾಗಿ ಗೌರವಿಸಲ್ಪಟ್ಟವನೂ, ದೇವೇಂದ್ರಾದಿ ಸಮಸ್ತರೂ ಸ್ತುತಿಸುವ ರಾಮದಾಸನೂ, ಅಯೋಧ್ಯೆಯ ಅಪ್ರತಿಮ ಸೇವಕನೂ ಆಗಿರುವ ಹನುಮಂತನನ್ನು ಭಜಿಸುತ್ತೇನೆ. ಹೃದಯಕಮಲದಲ್ಲಿ ರಾಮನನ್ನು ಸ್ಥಿರಭಾವದಲ್ಲಿ ಇರಿಸಿ ಆತನ ಸುಂದರವಾಗಿರುವ ದೇಹದವನ್ನು ಕಾಣುತ್ತಾ, ಶ್ರೀರಾಮನಮಹಾ ಕಾಂತಿಯುತ ಶರೀರವನ್ನು ಸ್ಮರಿಸುತ್ತಾ, ಕರಕಮಲದಲ್ಲಿ ರಾಮನನ್ನೇ ಕಾಣುತ್ತಾ ಮಧುರಧ್ವನಿಯನ್ನು ಮಾಡುತ್ತಲಿರುವ ಅಂಜನಾ ತನಯನನ್ನು ನಾನು ಭಜಿಸುತ್ತೇನೆ. ಸರ್ವಾನಿಷ್ಟ ನಿವಾರಕನಾಗಿರುವವನೂ, ಶುಭವನ್ನು ಮಾಡುತ್ತಿರುವವನೂ, ರುದ್ರ ಭಯಂಕರನಾಗಿ ರಾವಣನ ಮಗ ಅಕ್ಷನನ್ನು ನಿಗ್ರಹಿಸಿ ಸೀತಾನ್ವೇಷಣೆ ಗೈದ ಕೋಟಿ ಚಂದ್ರ ಸೂರ್ಯರ ಕಾಂತಿಯನ್ನು ಹೊಂದಿರುವ ಕಪಿಶ್ರೇಷ್ಠನಾಗಿರುವ ಆಂಜನೇಯ ಸ್ವಾಮಿಗೆ ನನ್ನ ನಮನಗಳು.

॥ ಇತಿ ಪ್ರಸನ್ನಾಂಜನೇಯ ಸ್ತೋತ್ರಾಣಿ ಸಂಪೂರ್ಣಂ ॥

## 12.21 ಶ್ರೀಮದಾಂಜನೇಯ ಸ್ತೋತ್ರಂ

**ಅಸ್ಯ ಶ್ರೀಮದ್ಾಂಜನೇಯ ಸ್ತೋತ್ರ ಮಹಾಮಂತ್ರಸ್ಯ । ಶ್ರೀ ರಾಮಚಂದ್ರ ಋಷಿಃ । ವೀರಹನುಮಾನ್ ದೇವತಾ । ಅನುಷ್ಟುಪ್ ಛಂದಃ । ಶ್ರೀ ರಾಮದೂತ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥**

ಭಾವಾರ್ಥ - ಶ್ರೀಮತ್ ಆಂಜನೇಯ ಸ್ತೋತ್ರಗಳಿಗೆ ಶ್ರೀ ರಾಮಚಂದ್ರನು ಋಷಿ, ವೀರ ಹನುಮನು ದೇವತೆ, ಇದು ಅನುಷ್ಟುಪ್ ಛಂದಸ್ಸಿನಲ್ಲಿದೆ. ಇದನ್ನು ಶ್ರೀರಾಮಚಂದ್ರನ ಪ್ರೀತಿಯನ್ನು ಪಡೆಯುವ ಸಲುವಾಗಿ ಉಪಯೋಗಿಸುವುದಾಗಿದೆ.

**ಹನುಮಾನಂಜನಾಸೂನುಃ ವಾಯುಪುತ್ರೋ ಮಹಾಬಲಃ ।**
**ರಾಮೇಷ್ಟಃ ಫಲ್ಗುಣಸಖಃ ಪಿಂಗಾಕ್ಷೋಽಮಿತವಿಕ್ರಮಃ ॥1॥**

ಭಾವಾರ್ಥ - ಹನುಮ. ಅಂಜನಾಸೂನು, ವಾಯುಪುತ್ರ, ಮಹಾಬಲ, ರಾಮೇಷ್ಟ, [ರಾಮನಿಗೆ ಇಷ್ಟನಾದವನು], ಪಲ್ಗುಣಸಖ[ ಅರ್ಜುನನಮಿತ್ರ], ಪಿಂಗಾಕ್ಷ[ರುದ್ರ], ಅಮಿತವಿಕ್ರಮ[ಮಹಾಶೂರ]------

**ಉದದಿಕ್ರಮಣಶ್ಚೈವ ಸೀತಾಶೋಕವಿನಾಶನಃ ।**
**ಲಕ್ಷ್ಮಣ ಪ್ರಾಣದಾತಾ ಚ ದಶಗ್ರೀವಸ್ಯ ದರ್ಪಹಾ ॥2॥**

ಭಾವಾರ್ಥ - ಉದದಿಕ್ರಮಣ[ಸಾಗರವನ್ನು ದಾಟಿದವ], ಸೀತಾಶೋಕ ವಿನಾಶನ, ಲಕ್ಷ್ಮಣಪ್ರಾಣದಾತ, ದಶಗ್ರೀವದರ್ಪಹರ[ದಶಕಂಠನ ದರ್ಪವನ್ನು ನಾಶಗೊಳಿಸಿದವ]--------

**ಏವಂ ದಶನಾಮಾನಿ ಕಪೀಂದ್ರಸ್ಯ ಮಹಾತ್ಮನಃ ।**
**ಸ್ವಾಪಕಾಲೇ ಪಠೇನ್ನಿತ್ಯಂ ಯಾತ್ರಕಾಲೇ ವಿಶೇಷತಃ ॥3॥**

ತಸ್ಯ ಮೃತ್ಯು ಭಯಂ ನಾಸ್ತಿ ಸರ್ವತ್ರ ವಿಜಯೀ ಭವೇತ್ । ಭಾವಾರ್ಥ - ಈ ರೀತಿಯಾಗಿ ಹತ್ತು ಹೆಸರುಗಳು ಮಹಾತ್ಮನಾಗಿರುವ ಕಪೀಶ್ವರನಿಗೆ ಇವೆ. ಇವುಗಳನ್ನು ಯಾವಾತನು ಪ್ರತಿದಿವಸ ನಿದ್ರಿಸುವ ಸಮಯದಲ್ಲಿ,ವಿಶೇಷವಾಗಿ ಪ್ರವಾಸ ಕಾಲದಲ್ಲಿ ಪಠಿಸುವನೋ ಆತನಿಗೆ ಮೃತ್ಯುವಿನ ಭಯವಿರುವುದಿಲ್ಲ ಮಾತ್ರವಲ್ಲದೆ ಆತನಿಗೆ ಎಲ್ಲೆಡೆಯೂ ವಿಜಯ ಲಭಿಸುತ್ತದೆ.

**ಸ್ಫಾಟಿಕಾಭಂ ಸ್ವರ್ಣಕಾಂತಿಂ ದ್ವಿಭುಜಂ ಚ ಕೃತಾಂಜಲಿ ।**
**ಕುಂದಲದ್ವಯ ಸಂಶೋಭಿಮುಖಾಂಭೋಜಂ ಹರಿಂ ಭಜೇತ್ ॥4॥**

ಭಾವಾರ್ಥ - ಕರ್ಪೂರದ ಕಾಂತಿ ಹಾಗೂ ಬಂಗಾರದ ಹೊಳಪಿನಿಂದ ಕೂಡಿ ಭಕ್ತಿ ವಿನಯಗಳಿಂದ ನಮಸ್ಕರಿಸುತ್ತಿರುವ, ಎರಡು ತಾವರೆ ಪುಷ್ಪಗಳನ್ನು ಕೈಯಲ್ಲಿ ಹಿಡಿದವನಾಗಿ ಶೋಭಾಯಮಾನನಾಗಿದ್ದು ಶ್ರೀ ಹರಿಯನ್ನು ಆಂಜನೇಯನು ಪೂಜಿಸುತ್ತಿರುವನು.

**ಆಂಜನೇಯಮತಿಪಾಟಲಾನನಂ ಕಾಂಚನಾದ್ರಿ ಕಮನೀಯ ವಿಗ್ರಹಂ ।**
**ಪಾರಿಜಾತ ತರುಮೂಲವಾಸಿನಂ ಭಾವಯಾಮಿ ಪವಮಾನ ನಂದನಂ ॥5॥**

ಭಾವಾರ್ಥ - ಆಂಜನೇಯ ನಸುಗೆಂಪು ಮೊಗದವನೂ, ಸುಮೇರು ಪರ್ವತದ ರಮಣೀಯವಾದ ವಿಗ್ರಹ ರೂಪನೂ, ಪಾರಿಜಾತ ಗಿಡದ ಬುಡದಲ್ಲಿ ವಾಸಿಸುವವನೂ,ಆಗಿದ್ದು ಅಂತಹಾ ವಾಯುಪುತ್ರನನ್ನು ಸ್ಮರಿಸುವೆನು.

**ಯತ್ರ ಯತ್ರ ರಘುನಾಥಕೀರ್ತನಂ ತತ್ರ ತತ್ರ ಕೃತಮಸ್ತಕಾಂಜಲಿಂ ।**
**ಬಾಷ್ಪವಾರಿಪರಿ ಪೂರ್ಣಲೋಚನಂ ಮಾರುತಿಂ ನಮತ ರಾಕ್ಷಸಾಂತಕಂ ॥6॥**

ಭಾವಾರ್ಥ - ಎಲ್ಲೆಲ್ಲಿ ಶ್ರೀರಾಮನ ಸಂಕೀರ್ತನೆ ಕೇಳಿಸಲ್ಪಡುತ್ತಿದೆಯೋ ಅಲ್ಲಲ್ಲಿ ಶಿರವಾಗಿ ಕೈಮುಗಿದುಕೋಂಡು ಕಣ್ತುಂಬಾ ಆನಂದ ಭಾಷ್ಪವನ್ನು ಸುರಿಸುತ್ತಾ ರಾಕ್ಷಸಾಂತಕನಾದ ಹನುಮನು ನಮಿಸುತ್ತಾ ಇರುವನು.

**ವಿಜಯಂ ಲಭತೇ ಸತ್ಯಂ ಪರಂಸೌಖ್ಯಮಾಪ್ನುಯಾತ್ ।**
**ಭೂತಪ್ರೇತ ಪಿಶಾಚಾಶ್ಚ ಬ್ರಹ್ಮರಾಕ್ಷಸದರ್ಶನೇ ॥7॥**

ಭಾವಾರ್ಥ - ಈ ಸ್ತೋತ್ರಗಳನ್ನು ಪಠಿಸುವುದರಿಂದ ಸತ್ಯವಾಗಿಯೂ ವಿಜಯ ಲಭಿಸುತ್ತದೆ. ಮತ್ತು ಪರಲೋಕದಲ್ಲಿ ಸುಖವು ಲಭಿಸುತ್ತದೆ. ಭೂತ ಪ್ರೇತ ಪಿಶಾಚಾದಿಗಳಿಂದಲೂ ಬ್ರಹ್ಮ ರಾಕ್ಷಸ ದರ್ಶನ ಕಾಲದಲ್ಲಿ,--------

**ಸಿಂಹವ್ಯಾಘ್ರ ಭಯಪ್ರಾಪ್ತೇ ಶತ್ರು ಶಸ್ತ್ರಾಸ್ತ್ರಪಂಜರೇ ।**
**ದುಃಖೇ ಮಹಾರಣೇ ಚೈವ ಪಿಶಾಚಗ್ರಹ ಪಾತಕೇ ॥8॥**

ಭಾವಾರ್ಥ - ಸಿಂಹ, ವ್ಯಾಘ್ರಾದಿ ಕ್ರೂರ ಮೃಗಗಳಿಂದ, ಶತ್ರುಗಳಿಂದ, ಶಸ್ತ್ರಾಸ್ತ್ರಗಳಿಂದ ಅಪಾಯದ ಸಂಭವವಿರುವ ಕಾಲದಲ್ಲಿ, ಸೆರೆಮನೆ ವಾಸದ ಭೀತಿಗೊಳಗಾಗಿರುವಾಗ, ದುಃಖದ ಸಮಯದಲ್ಲಿ, ಯುದ್ಧಭೂಮಿಯಲ್ಲಿ, ಗ್ರಹದೋಷಗಳಲ್ಲಿ, --------

**ಶತವಾರಂ ಪಠೇನ್ನಿತ್ಯಂ ಮಂಡಲಂ ಭಕ್ತಿತತ್ಪರಃ**

**ಸರ್ವ ಸೌಖ್ಯಮವಾಪ್ನೋತಿ ತ್ರಿಸಂಧ್ಯಂ ರಾಮಪೋಷಿತಃ ॥9॥**

ಭಾವಾರ್ಥ - ಶ್ರದ್ಧಾ ಭಕ್ತಿ ಪುರಸ್ಸರನಾಗಿ ನೂರು ಬಾರಿ ಪ್ರತಿನಿತ್ಯವೂ ಮೂರು ಹೊತ್ತೂ ಒಂದು ಮಂಡಲ ಕಾಲ[ನಲುವತ್ತೆಂಟು ದಿವಸಗಳ ಕಾಲ] ಪಠಿಸಿದಲ್ಲಿ ಸಮಸ್ತ ಸುಖಗಳೂ ಲಭಿಸಿ ಶ್ರೀರಾಮನಿಂದ ರಕ್ಷಿಸಲ್ಪಡುತ್ತಾನೆ.

**ಅಪರಾಜಿತ ಪಿಂಗಾಕ್ಷ ನಮಸ್ತೇ ರಾಮಪೂಜಿತ ।**
**ಪ್ರಸ್ಥಾನಂ ಚ ಕರಿಷ್ಯಾಮಿ ಸಿದ್ಧಿರ್ಭವತು ಮೇ ಸದಾ ॥10॥**

ಭಾವಾರ್ಥ - ಸೋಲಿಸಲಸಾಧ್ಯವಾಗಿರುವವನೂ, ಹಳದಿ ಕಣ್ಣುಗಳನ್ನು ಹೊಂದಿರುವವನೂ,ನಮಸ್ಕರಿಸುತ್ತಾ,. ರಾಮನನ್ನು ಪೂಜಿಸುತ್ತಾ, ಸದಾ ಸಂಚರಿಸುತ್ತಾ, ಶುಭ ಫಲವನ್ನು ಕರುಣಿಸುತ್ತಿರುವವನು

**ಆಯುಃಪ್ರಜ್ಞಾ ಯಶೋಲಕ್ಷ್ಮೀ ಶ್ರದ್ಧಾಪುತ್ರಾಃ ಸುಶೀಲತಾ ।**
**ಆರೋಗ್ಯಂ ದೇಹಸೌಖ್ಯಂ ಚ ಕಪಿನಾಥ ನಮೋಸ್ತು ತೇ ॥11॥**

ಭಾವಾರ್ಥ - ಆಯುಷ್ಯವನ್ನೂ, ಪ್ರಜ್ಞೆಯನ್ನೂ, ಯಶಸ್ಸನ್ನೂ, ಸಂಪದವನ್ನೂ, ಆರೋಗ್ಯವನ್ನೂ, ಶರೀರ ಸೌಖ್ಯವನ್ನೂ, ಕರುಣಿಸುತ್ತಿರುವ ಕಪಿಕುಲದೊಡೆಯನಿಗೆ ನಮಸ್ಕರಿಸುವೆ

**ದೀನೇಮಯಿ ದಯಾಂ ಕೃತ್ವಾ ಮಮ ದುಃಖಂ ವಿನಾಶಯ ।**
**ಐಶ್ವರ್ಯಂ ಪುತ್ರಲಾಭಂ ಚ ಲಕ್ಷ್ಮೀಂ ದೇಹಿ ಸದಾಪ್ರಭೋ ॥12॥**

ಭಾವಾರ್ಥ - ಸಂಕಷ್ಟದಲ್ಲಿರುವ ನನಗೆ ದಯೆತೋರಿ ನನ್ನ ದುಃಖಗಳನ್ನು ನಾಶಗೊಳಿಸಿ ನನಗೆ ಸಂಪದೈಶ್ವರ್ಯ, ಪುತ್ರಸಂತಾನವನ್ನು ಕರುಣಿಸು ಸ್ವಾಮಿಯೇ.

**ತ್ವತ್ಪಾದಪಂಕಜದ್ವಂದ್ವಂ ವಿನಾ ನಾನ್ಯಂ ಭಜಾಮ್ಯಹಂ ।**
**ನ್ಯೂನಾರಿಕ್ತಂ ಯತ್ಕಿಂಚಿತ್ತ್ಸರ್ವಂ ಕ್ಷಂತು ಮಹರ್ಸಿ ॥13॥**

ಭಾವಾರ್ಥ - ನಿನ್ನ ಚರಣಾರವಿಂದದ್ವಯಗಳ ಹೊರತಾಗಿ ಅನ್ಯ ನಾನು ಭಜಿಸುವುದಿಲ್ಲ. ನನ್ನ ಈ ಕಾರ್ಯದಲ್ಲಿ ಏನಾದರೂ ನ್ಯೂನತೆಗಳು, ಅತಿಶಯಗಳು, ಇತ್ಯಾದಿ ಹೆಚ್ಚು ಕಡಿಮೆಯಾಗಿದ್ದಲ್ಲಿ ಅವೆಲ್ಲವನ್ನೂ ಸದಾ ಮನ್ನಿಸು ಪ್ರಭುವೇ

**ಮಾತಾ ತ್ವಂ ಚ ಪಿತಾ ತ್ವಂಚ ಭ್ರಾತಾ ತ್ವಂ ಚ ಪ್ರಭುರ್ಮಮ ।**
**ತ್ವಮೇವ ಶರಣಂ ಪ್ರಾಪ್ತಂ ರಕ್ಷ ಮಾಂ ಕರುಣಾನಿದೇ ॥14॥**

ಭಾವಾರ್ಥ - ನೀನೇ ನನ್ನ ತಾಯಿ,ತಂದೆ, ಸಹೋದರ, ನನ್ನ ಒಡೆಯ. ನಿನ್ನಲ್ಲಿ ನಾನು ಶರಣಾಗುವೆ. ನನ್ನನ್ನು ರಕ್ಷಿಸು ಕರುಣಾನಿಧಿಯೇ

**ನಾನಾ ವಿಘ್ನಾಂಶ್ಚ ರೋಗಾಂಶ್ಚ ನಾಶಯ ತ್ವಂ ಸದಾ ಮಮ ।**
**ತ್ರಿ ಲಕ್ಷಂ ಹನುಮನ್ನಾಮಯೋ ಜಪೇದ್ಭಕ್ತಿ ತತ್ಪರಃ ॥15॥**

ಭಾವಾರ್ಥ - ನನ್ನ ನಾನಾ ವಿಧದ ಅಡ್ಡಿಆತಂಕಗಳನ್ನು, ರೋಗ ಭಾಧೆಗಳನ್ನು, ಸದಾ ನಾಶಗೊಳಿಸು ಸ್ವಾಮಿಯೇ. ಯಾವಾತನು ಮೂರು ಲಕ್ಷಸಂಖ್ಯೆ ಹನುಮ ನಾಮಗಳನ್ನು ಭಕ್ತಿಯುತನಾಗಿ ಜಪಿಸುವನೋ ಅವನಿಗೆ------

**ರಾಜದ್ವಾರೇ ಮಹಾಘೋರೇ ಭಯಂ ನೈವಾರಿಸಂಕಟೇ ।**
**ಬ್ರಹ್ಮರಾಕ್ಷಸಂ ಭೂತಾನಾಂ ಭಯಲೇಶೋ ನ ವಿದ್ಯತೇ ।16॥**

ಭಾವಾರ್ಥ - ಅರಮನೆಯ ಮೂಲಕವಾಗಿ ಬರಬಹುದಾದ, ಮಹಾಘೋರ ಭೀತಿಯನ್ನು, ಶತ್ರುಗಳ ಕಾಟಗಳನ್ನು, ಬ್ರಹ್ಮರಾಕ್ಷಸ, ಭೂತಾದಿಗಳ ಭೀತಿಯನ್ನು ಕಿಂಚಿತ್ತೂ ಇಲ್ಲದಂತೆ ಕಾಪಾಡುತ್ತಿರು ಸ್ವಾಮಿಯೇ.

॥ ಇತಿ ಶ್ರೀಮದಾಂಜನೇಯ ಸ್ತೋತ್ರಂ ಸಂಪೂರ್ಣಂ ॥

## 12.22 ಶ್ರೀ ಆಂಜನೇಯ ಕವಚಂ

ಏಕದಾ ಸುಖಮಾಸೀನಂ ಶಂಕರಂ ಲೋಕ ಶಂಕರಂ ।
ಪಪ್ರಚ್ಛ ಪಾರ್ವತೀ ಭಕ್ತ್ಯಾ ಕರ್ಪೂರಧವಳಂ ಶುಭಂ ॥

ಶ್ರೀ ಪಾರ್ವತ್ಯುವಾಚ -

ಭಗವನ್ ದೇವದೇವೇಶ ಶಂಭೋ ಶಂಕರ ಶಾಶ್ವತ ।
ಮಹಾದೇವ ಜಗನ್ನಾಥ ಶಿವ ವಿಶ್ವಾರ್ತಿಹಾರಕ ॥1॥

ಸಂಗ್ರಾಮೇ ಸಂಕಟೇ ಘೋರೇ ಭೂತಪ್ರೇತಾದಿಕೇ ಭಯೇ ।
ದುಃಖದಾವಾಗ್ನಿ ಸಂತಪ್ತೇ ಬಂಧನೇ ವ್ಯಾಧಿ ಸಂಕುಲೇ ॥2॥

ದಾರಿದ್ರ್ಯೇಮಹತಿ ಪ್ರಾಪ್ತೇ ಕುಷ್ಠರೋಗೇ ಜ್ವರೇ ಭ್ರಮೇ ।
ಚಾತುರ್ಥಿಕೇ ಸನ್ನಿಪಾತೇ ವಾತೇ ಪಿತ್ತೇ ಕಫೇ ತಥಾ ॥3॥

ಶೋಕಾಕುಲೇಷು ಮರ್ತ್ಯೇಷು ಕೇನ ರಕ್ಷಾ ಭವೇದ್ಧ್ರುವಂ ।
ಶ್ರೀ ರುದ್ರ ಉವಾಚ -

ಶೃಣು ದೇವಿ ಪ್ರವಕ್ಷ್ಯಾಮಿ ಲೋಕಾನಾಂ ಹಿತ ಕಾಮ್ಯಯಾ ।
ವಿಭೀಷಣಾಯ ರಾಮೇಣ ಪ್ರೇಮ್ಣಾದತ್ತಂಚ ಯತ್ಪುರಾ ॥4॥

ಕವಚಂ ಕಪಿನಾಥಸ್ಯ ವಾಯು ಪುತ್ರಸ್ಯ ಧೀಮತಃ ।
ತದ್ಗುಹ್ಯಂ ಸಂಪ್ರವಕ್ಷ್ಯಾಮಿ ವಿಶೇಷಾಚ್ಛೃಣು ಸುಂದರಿ ॥5॥

ಉದ್ಯದಾದಿತ್ಯಸಂಕಾಶ ಉದಾರ ಭುಜವಿಕ್ರಮಂ ।
ಕಂದರ್ಪ ಕೋಟಿಲಾವಣ್ಯಂ ಸರ್ವ ವಿದ್ಯಾ ವಿಶಾರದಂ ॥6॥

ಶ್ರೀರಾಮ ಹೃದಯಾನಂದಂ ಭಕ್ತ ಕಲ್ಪಮಹೀರುಹಂ ।
ಅಭಯಂ ವರದಂ ದೋರ್ಭ್ಯಾಂ ಕಲಯೇ ಮಾರುತಾತ್ಮಜಂ ॥7॥

**ಶ್ರೀ ರಾಮ ರಾಮ ರಾಮೇತಿ ರಮೇರಾಮೇ ಮನೋರಮೇ ।**
**ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥8॥**

**ಉಲ್ಲಂಘ್ಯ ಸಿಂಧೋ ಸಲೀಲಂ ಸ್ಸಲಿಲಂ ಯಶ್ಶೋಕವಹ್ನಿಂ ಜನಕಾತ್ಮಜಾಯಾಃ ।**
**ಆದಾಯತೇ ನೈವದದಾಹ ಲಂಕಾಂ ನಮಾಮಿ ತಂ ಪ್ರಾಂಜಲೀರಾಂಜನೇಯಂ ॥9॥**

**ಮನೋಜವಂ ಮಾರುತತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂವರಿಷ್ಠಂ ।**
**ವಾತಾತ್ಮತಂ ವಾನರಯೂಥ ಮುಖ್ಯಂ ಶ್ರೀರಾಮದೂತಂ ಶಿರಸಾನಮಮಿ ॥10॥**

ಭಾವಾರ್ಥ - ಒಂದು ದಿನ ಲೋಕಕ್ಕೆ ಒಳಿತನ್ನು ಕರುಣಿಸುವವನಾಗಿ ಸುಖಾಸೀನನಾಗಿ ಸ್ವಚ್ಛ ಕರ್ಪೂರದ ಕಾಂತಿಯಿಂದ ಪ್ರಕಾಶಿಸುತ್ತಿರುವ ಶಂಕರನನ್ನು ಭಕ್ತಿಯಿಂದ ಪಾರ್ವತೀ ದೇವಿಯು ವಿನಂತಿಸುವಳು.

ಶ್ರೀಪಾರ್ವತೀ ದೇವಿಯು ಹೇಳುವಳು- "ಮಹಾದೇವನೇ, ದೇವರದೇವನೇ, ಶಂಭ್ವೇ, ಜಗನ್ನಾಥನೇ, ಶಂಕರನೇ, ಸಾಶ್ವತನೇ, ಶಿವನೇ, ಭೂಮಂಡಲದ ಆಪತ್ತು-ವಿಪತ್ತುಗಳ ಪರಿಹರಿಸುವ ಕರ್ತೃವೇ, ಯುದ್ಧದ ಸಮಯ, ಬಲವತ್ತರವಾದ ಸಂಕಟಗಳ ಕಾಲ, ಭೂತ ಪ್ರೇತಾದಿಗಳ ಭೀತಿ, ದುಃಖಕಾಳ್ಗಿಚ್ಚಿನ ಬೇಗೆ, ಬಂಧನದ ಸಂತಾಪ, ವ್ಯಾಧಿಗಳ ಸಮೂಹ, ಮಹತ್ತರವಾದ ದಾರಿದ್ರ್ಯ, ಕುಷ್ಠರೋಗ, ಜ್ವರ, ಮಾನಸಿಕ ಕಾಯಿಲೆ, ಚಾತುರ್ಥಿಕ ಜ್ವರ, ಸನ್ನಿಪಾತ ಜ್ವರ, ವಾತ ಪಿತ್ಥ ಕಪಾದಿ ತ್ರಿದೋಷಗಳೇ ಇತ್ಯಾದಿಗಳು ಬಂದೊದಗಿದಾಗ, ಅದೇ ರೀತಿ ಭೂಮಂಡಲದ ಜೀವಿಗಳು ಶೋಕಾಕ್ರಾಂತರಾದಾಗ ಸುರಕ್ಷಿತರಾಗುವ ಬಗೆ ಹೇಗೆ ಎಂಬುದನ್ನು ತಿಳಿಸುವಂತಹವರಾಗಬೇಕು. "ಉತ್ತರರೂಪದಲ್ಲಿ ಶಿವನು ಅನ್ನುತ್ತಾನೆ-" ದೇವಿಯೇ, ಗಮನವಿಟ್ಟು ಕೇಳುವಂತಹವಳಾಗು, ಲೋಕದ ಹಿತಾಭಿಲಾಷೆಯಿಂದ ಅಂದು ಶ್ರೀರಾಮನು ಪ್ರೀತಿಯಿಂದ ವಿಭೀಷಣನಿಗೆ ಇದನ್ನು ಹೇಳಿರುವುದಾಗಿದೆ. ಕಪಿಕುಲದೊಡೆಯ ವಿವೇಕಿಯಾಗಿರುವ ವಾಯುಪುತ್ರನ ಕವಚ ಸ್ತೋತ್ರ ಇದಾಗಿದ್ದು ಇದು ಗೋಪ್ಯವೂ ಆಗಿದು ವಿಶೇಷವಾಗಿದೆ. ಉದಯಿಸುವ ಕೋಟಿಸೂರ್ಯರನ್ನು ಹೋಲುವ ಗಂಭೀರನೂ, ಬಲಶಾಲಿಯಾದ ತೋಳುಗಳನ್ನು ಹೊಂದಿರುವವನೂ,

ಕೋಟಿ ಮನ್ಮಥರರ ಲಾವಣ್ಯದಿಂದ ಶೋಭಿಸುತ್ತಿರುವವನೂ, ಸರ್ವ ವಿದ್ಯಾವಿಶಾರದನೂ, ಶ್ರೀರಾಮನ ಹೃದಯಕ್ಕೆ ಆನಂದದಾಯಕನೂ, ಪೂರ್ವ ನಿರ್ಧರಿತವಾಗಿ ಭೂಮಂದಲದಲ್ಲಿ ಜನಿಸಿದವನೂ, ಅಭಯದಾಯಕನೂ, ವರದಾಯಕನೂ, ಮಧುರ ದ್ವನಿಯನ್ನು ಹೊಂದಿರುವವನೂ, ಮಾರುತಿಯ ಪುತ್ರನೂ, ಆಗಿದ್ದು ಸುಂದರವೂ, ಮನೋಹರವೂ, ಸಹಸ್ರನಾಮಗಳಿಗೆ ಸರಿಸಮಾನ ಫಲದಾಯಕವೂ ಅಭೀಷ್ಠ ಪ್ರದಾಯಕವೂ ಆಗಿರುವ ಶ್ರೀರಾಮನ ನಾಮವನ್ನು ಶ್ರೀರಾಮ ರಾಮ ರಾಮಾ ಎಂಬುದಾಗಿ ಜಪಿಸುತ್ತಾ ಅತ್ಯಂತ ಸುಲಭವಾಗಿ ಸಮುದ್ರವನ್ನು ಉಲ್ಲಂಘಿಸಿ ಜನಕರಾಜನ ಪುತ್ರಿ ಜಾನಕಿಯ ಶೋಕಾಗ್ನಿಯನ್ನು ಕಿತ್ತು ತೆಗೆದು ಅದೇ ಅಗ್ನಿಯಿಂದ ಲಂಕೆಯನ್ನು ದಹಿಸಿದ ಶ್ರೀ ಆಂಜನೇಯನಿಗೆ ನಾನು ಶುದ್ಧಾಂತಃಕರಣದಿಂದ ನಮಿಸುವೆ. ಮನೋವೇಗವನ್ನು ಹೊಂದಿರುವವನೂ ಜಿತೇಂದ್ರಿಯನೂ, ಬುದ್ಧಿಮತ್ತೆಯಲ್ಲಿ ಶ್ರೇಷ್ಠನೂ ವಾಯುಪುತ್ರನೂ, ಕಪಿಗಳ ಸಮೂಹದಲ್ಲಿ ಮುಖ್ಯನೂ, ಶ್ರೀರಾಮದೂತನೂ ಆಗಿರುವ ಹನುಮಂತನಿಗೆ ನಾನು ಶರಣಾಗುವೆನು.

॥ ಇತಿ ಶ್ರೀ ಶಿವಪ್ರೋಕ್ತ ಆಂಜನೇಯ ಕವಚಂ ಸಂಪೂರ್ಣಂ ॥

## 12.23 ಯಂತ್ರೋದ್ಧಾರಕ ಶ್ರೀ ಮಾರುತಿ ಸ್ತೋತ್ರಂ

**ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಂ।**
**ಶ್ರೀ ಮಾರುತಾತ್ಮ ಸಂಭೂತಂ ವಿದ್ಯುತ್ಕಾಂಚನ ಸನ್ನಿಭಂ ॥1॥**

ಭಾವಾರ್ಥ - ಶ್ರೀರಾಮನಿಗೆ ದೇವತರು ಪಾರಿಜಾತ ಪುಷ್ಪದ ಕಂಪಿನ ಸುಖನ್ನುಂಟುಮಾಡುವವನೂ, ವಾಯುವಿನ ಸುಪುತ್ರನೂ, ಬಂಗಾರದ ವರ್ಣದ ಬೆಳಕನ್ನು ಪ್ರವಹಿಸುವ ಶಕ್ತಿಯುಳ್ಳವನೂ ಆಗಿರುವ ಶ್ರೀರಾಮದೂತನಿಗೆ ನಮಿಸುವೆನು.

**ಪೀನವೃತ್ತಂ ಮಹಾಬಾಹುಂ ಸರ್ವ ಶತ್ರು ನಿವಾರಣಂ ।**
**ರಾಮಪ್ರಿಯತಮಂ ದೇವಂ ಭಕ್ತಸರ್ವೇಷ್ಟಪ್ರದಾಯಕಂ ॥2॥**

ಭಾವಾರ್ಥ - ಪರಿಪುಷ್ಟನಾಗಿ ಮತ್ತು ದುಂಡಾಗಿರುವವನಾಗಿ ಶ್ರೇಷ್ಠವಾದ ತೊಡೆಗಳನ್ನು ಹೊಂದಿರುವ ಭಕ್ತಾದಿಗಳಿಗೆ ಸಮಸ್ತ ಅಭೀಷ್ಟಿತಾರ್ಥಗಳನ್ನು ಕರುಣಿಸುವ ಸರ್ವ ಶತ್ರು ವಿನಾಶಕನಾಗಿರುವ ರಾಮಪ್ರಿಯನಿಗೆ ನಮನಗಳು.

**ನಾನಾರತ್ನ ಸಮಾಯುಕ್ತ ಕುಂಡಲಾದಿ ವಿರಾಜಿತಂ ।**
**ದ್ವಾತ್ರಿಂಶಲ್ಲಕ್ಷಣೋಪೇತಂ ಸ್ವರ್ಣ ಪೀಠ ವಿರಾಜಿತಂ ॥3॥**

ಭಾವಾರ್ಥ - ವಿವಿಧ ರತ್ನಾಭರಣಗಳಿಂದ ಕೂಡಿ ಕುಂಡಲಾದಿಗಳಿಂದ ಅಲಂಕೃತನಾಗಿ ಬೆಳಗುತ್ತಾ ಮೂವತ್ತೆರಡು ಶುಭಲಕ್ಷಣಗಳಿಂದ ಸಿಂಗರಿಸಲ್ಪಟ್ಟು, ಸುವರ್ಣ ಪೀಠದಲ್ಲಿ ಆಸೀನನಾಗಿರುವ ವಾಯು ಪುತ್ರನಿಗೆ ನಮಿಸುವೆ.

**ಚತುರ್ಭುಜಂ ಮಹಾಕಾಯಂ ಸರ್ವ ವೈಷ್ಣವ ಶೇಖರಂ ।**
**ಗದಾ ಭಯಕರೌ ಹಸ್ತೌ ಹೃದಿಸ್ತೋ ಸುಕೃತಾಂಜಲಿಂ ॥4॥**

ಭಾವಾರ್ಥ - ನಾಲ್ಕು ಭುಜಗಳಿಂದ ಕೂಡಿದವನೂ, ಧೀರ್ಘವಾಗಿರುವ ಶರೀರವನ್ನೂ ಹೊಂದಿರುವವನೂ ಶ್ರೀಹರಿಯಭಕ್ತರಲ್ಲಿ ಅಗ್ರೇಸರನೂ, ಭಯಕಾರಕವಾದಗದೆಯನ್ನು ಧರಿಸಿದವನೂ, ಹೃದಯದಲ್ಲಿ ಸತ್ಕಾರ್ಯಗಳಬೊಗಸೆಯನ್ನು ಹೊಂದಿರುವವನೂಅ ಅದ ಹನುಮನಿಗೆ ನಮಿಸುವೆ.

**ತ್ರಿಂಶತ್ಕೋಟಿ ಬೀಜ ಯುಕ್ತಂ ದ್ವಾದಶಾವರ್ತಿ ಸ್ಥಾಪಿತಂ ।**
**ಪದ್ಮಾಸನ ಸ್ಥಿತಂ ದೇವಂ ಶಾಪಾನುಗ್ರಹ ಶಕ್ತಿದಂ ॥5॥**

ಭಾವಾರ್ಥ - ಮೂವತ್ತಮೂರು ಕೋಟಿ ಮೂಲಕಾರಣಗಳನ್ನು ಹೊಂದಿರುವವನೂ ಹನ್ನೆರಡು ಬಾರಿ ಪ್ರತಿಷ್ಠೆಗೊಂಡವನೂ ಪದ್ಮಾಸನದಲ್ಲಿ ಆರೂಢನಾಗಿರುವವನೂ ಶಾಪಾದಿಗಳನ್ನು ನೀಡಬಲ್ಲ ನಿಗ್ರಹಾನುಗ್ರಹ ಶಕ್ತಿಯುಳ್ಳವನೂ, ಆಗಿರುವ ಮಾರುತಿಗೆ ನಮಿಸುವೆ.

**ಹಂಸಮಂತ್ರ ಪ್ರವಕ್ತಾರಂ ಸರ್ವಜೀವ ನಿಯಾಮಕಂ ।**
**ಪ್ರಭಂಜನ ಪ್ರವಾಚ್ಯೇಣ ಸರ್ವ ದುರ್ಮತ ಭಂಜಕಂ ॥6॥**

ಭಾವಾರ್ಥ - ಹಂಸ ಮಂತ್ರೋಚ್ಚಾರಣೆ ಮಾಡುವವನೂ, ಸಮಸ್ತ ಜೀವಿಗಳ ನಿಯಾಮಕನೂ, ಬಿರುಗಾಳಿಯ ಶಬ್ದ ಮಾತ್ರದಿಂದಲೇ ಸಮಸ್ತ ದುರ್ಬುದ್ಧಿಗಳನ್ನೂ ನಾಶಪಡಿಸುವವನೂ ಆಗಿರುವ ಹನುಮಂತನಿಗೆ ನಮಿಸುವೆ.

**ಸರ್ವದಾಭೀಷ್ಟ ದಾತಾರಂ ಸತಾಂ ವೈ ದೃಢ ಮಾಹವೇ ।**
**ಅಂಜನಾಗರ್ಭ ಸಂಭೂತಂ ಸರ್ವ ಶಾಸ್ತ್ರ ವಿಶಾರದಂ ॥7॥**

ಭಾವಾರ್ಥ - ಸಮಸ್ತ ವಾಂಛಿತಾರ್ಥಗಳನ್ನು ದಯಪಾಲಿಸುವವನೂ, ಸದ್ಗುಣ ಸಂಪನ್ನನೂ ಸರ್ವ ಶಾಸ್ತ್ರಗಳಲ್ಲಿ ಪರಿಣತನೂ ಆಗಿರುವ ಶ್ರೀರಾಮಪ್ರಿಯ ಹನುಮನಿಗೆ ನಮಿಸುವೆ.

**ಕಪೀನಾಂ ಪ್ರಾಣದಾತಾರಂ ಸೀತಾನ್ವೇಷಣ ತತ್ಪರಂ ।**
**ಅಕ್ಷಾದಿ ಪ್ರಾಣ ಹಂತಾರಂ ಲಂಕಾದಹನ ತತ್ಪರಂ ॥8॥**

ಭಾವಾರ್ಥ - ಕಪಿಸಮೂಹಕ್ಕೆ ಪ್ರಾಣದಾತಾರನೂ ಸೀತಾನ್ವೇಷಣೆಗಾಗಿ ನಿರತನಾದವನೂ ಅಕ್ಷನೇ ಮೊದಲಾದವರ ಜೀವಹರಣ ಗೈದವನೂ ಲಂಕೆಯ ದಹನದಲ್ಲಿ ನಿರತನಾದವನೂ ಆಗಿರುವ ಹನುಮನಿಗೆ ನಮಿಸುವೆ.

**ಲಕ್ಷ್ಮಣಪ್ರಾಣದಾತಾರಂ ಸರ್ವ ವಾನರ ಯೂಥಪಂ ।**
**ಕಿಂಕರಃ ಸರ್ವ ದೇವಾನಾಂ ಜಾನಕೀನಾಥ ಕಿಂಕರಂ ॥9॥**

ಭಾವಾರ್ಥ - ಸಂಜೀವಿನಿಯನ್ನೊದಗಿಸಿ ಲಕ್ಷ್ಮಣನ ಪ್ರಾಣವನ್ನು ರಕ್ಷಿಸಿದವನೂ ಸಮಸ್ತ ಕಪಿಕುಲಕ್ಕೆ ಮುಖ್ಯನೂ, ಸಮಸ್ತ ದೇವಾನುದೇವತೆಗಳ ಪ್ರೀತಿಪಾತ್ರನೂ, ಶ್ರೀರಾಮನ ಪ್ರಿಯ ಸೇವಕನೂ ಆಗಿರುವ ವೀರ ಹನುಮಗೆ ನಮಿಸುವೆನು.

**ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥ ಗಿರೌ ಸದಾ ।**
**ತುಂಗಾಂಭೋಧಿತರಂಗಸ್ಯ ವಾತೇನ ಪರಿಶೋಭಿತೇ ॥10॥**

ಭಾವಾರ್ಥ - ಚಕ್ರತೀರ್ಥದ ದಕ್ಷಿಣ ದಿಗ್ಭಾಗದ ಪರ್ವತಪ್ರದೇಶದಲ್ಲಿ ಸರ್ವಕಾಲವೂ ವಾಸಿಸುತ್ತಾ ತುಂಗಾನದಿಯ ಮೇಲಿಂದ ಹಾಯುವ ನಿರ್ಮಲ ನೀರಿನ ಸಂಪರ್ಕದ ತಂಗಾಳಿಯ ಸ್ಪರ್ಷದಿಂದ ಆನಂದಭರಿತನಾಗಿರುವ ಆಂಜನೇಯನಿಗೆ ನಮಿಸುವೆ.

**ನಾನಾದೇಶಗತೈಃ ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ ।**
**ದೂಪದೀಪಾದಿ ನೈವೇದ್ಯೈಃ ಪಂಚಖಾದ್ಯೈಶ್ಚ ಶಕ್ತಿತಃ ॥11॥**

ಭಾವಾರ್ಥ - ರಾಜಾದಿರಾಜರಿಂದ ಹಾಗೂ ಸಜ್ಜನರಿಂದ ಯಥಾಸಾಧ್ಯ ಆರಾಧನೆಯನ್ನು ಸ್ವೀಕರಿಸುತ್ತಾ ಪಂಚಭಕ್ಷ್ಯಾದಿಗಳನ್ನೂ, ಧೂಪದೀಪ ನೈವೇದ್ಯಾದಿಗಳನ್ನು ಅಂಗೀಕರಿಸಿ ಬಲಶಾಲಿಯಾಗಿರುವ ಅಂಜನಾತನಯನಿಗೆ ನಮಿಸುವೆ.

**ಭಜಾಮಿ ಶ್ರೀ ಹನೂಮಂತಂ ಹೇಮಕಾಂತಿ ಸಮಪ್ರಭಂ ।**
**ವ್ಯಾಸತೀರ್ಥಯತೀಂದ್ರೇಣ ಪೂಜಿತಂ ಚ ವಿಧಾನತಃ ॥12॥**

ಭಾವಾರ್ಥ - ಸ್ವರ್ಣಪ್ರಭಾ ಕಾಂತಿಯಿಂದ ಬೆಳಗುತ್ತಾ ಪರಿಶುದ್ಧನಾಗಿರುವ ಶ್ರೀ ವ್ಯಾಸತೀರ್ಥ ಯತಿಗಳಿಂದ ಅತ್ಯಂತ ಭಕ್ತಿ ಪುರಸ್ಸರವಾಗಿ ಪೂಜಿತನಾಗುವ ಮಾರುತಿಗೆ ನಮಿಸುವೆ.

**ತ್ರಿವಾರಂ ಯಃ ಪಠೇನಿತ್ಯಂ ಸ್ತೋತ್ರಂ ಭಕ್ತ್ಯಾ ದ್ವಿಜೋತ್ತಮಃ ।**
**ವಾಂಛಿತಂ ಲಭತೇಽಭೀಷ್ಟಂ ಷಣ್ಮಾಸಾಭ್ಯಂತರೇ ಖಲು ॥13॥**

ಭಾವಾರ್ಥ - ದಿನದ ಮೂರು ಸಂಧ್ಯಾಕಾಲಗಳಲ್ಲಿ ಭಕ್ತಿ ಶ್ರದ್ಧಾಪುರಸ್ಸರವಾಗಿ ಜ್ಞಾನಿಗಳೂ ವಿಪ್ರೋತ್ತಮರೂ ನಿರಂತರ ಈ ಸ್ತೋತ್ರಗಳನ್ನು ಆರು ಮಾಸಗಳ ಕಾಲ ಪಾರಾಯಣ ಮಾಡಿದರೆ ಮನೋಭೀಷ್ಟ ಕಾಮನೆಗಳು ಸಿದ್ಧಿಯಾಗುವವು.

**ಪುತ್ರಾರ್ಥೀ ಲಭತೇ ಪುತ್ರಂ ಯಶೋರ್ಥೀ ಲಭತೇ ಯಶಃ ।**
**ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಂ ॥14॥**

ಭಾವಾರ್ಥ - ಪುತ್ರಸಂತಾನಾಪೇಕ್ಷಿಗೆ ಪುತ್ರಸಂತಾನವೂ, ವಿಜಯಾಪೇಕ್ಷಿಗೆ ವಿಜಯವೂ, ವಿದ್ಯಾಭಿಲಾಷಿಗೆ ವಿದ್ಯೆಯೂ, ಸಂಪದವನ್ನು ಅಪೇಕ್ಷಿಸುವವಗೆ ಸಂಪತ್ತೂ ದೊರಕುವುದು.

**ಸರ್ವದಾ ಮಾಸ್ತು ಸಂದೇಹೋ ಹರಿಃ ಸಾಕ್ಷೀ ಜಗತ್ಪತಿಃ ।**
**ಯಃ ಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಂ ॥15॥**

ಭಾವಾರ್ಥ - ಜಗನ್ನಿಯಾಮಕನಾಗಿರುವ ಶ್ರೀಹರಿಯ ಪ್ರತ್ಯಕ್ಷರೂಪವಾಗಿರುವ ಈ ಸ್ತೋತ್ರಗಳ ಫಲ ಪ್ರಾಪ್ತಿಯ ವಿಚಾರವಾಗಿ ಸಂಶಯಪಟ್ಟರೆ ನರಕಭಾಜನರಾಗುವರು.

**ಶ್ರೀಯಂತ್ರೋದ್ಧಾರಕಸ್ತೋತ್ರಂ ಷೋಡಶ ಶ್ಲೋಕ ಸಂಯುತಂ ।**
**ಶ್ರವಣಂ ಕೀರ್ತನಂ ವಾ ಹಿ ಸರ್ವ ಪಾಪ ಪ್ರಮುಚ್ಯತೇ ॥16॥**

ಭಾವಾರ್ಥ - ಈ ರೀತಿಯಾಗಿ ಹದಿನಾರು ಸ್ತೋತ್ರಗಳಿಂದ ಕೂಡಿರುವ ಯಂತ್ರೋದ್ಧಾರಕ ಸ್ತೋತ್ರಗಳನ್ನು ಕೇಳಿದರೆ ಹಾಗೂ ಹೇಳಿದರೆ ಅಂತಹವರ ಸಮಸ್ತ ಪಾಪಗಳೂ ನಿವಾರಣೆಯಾಗುವವು.

॥ ಇತಿ ಶ್ರೀವ್ಯಾಸರಾಜ ವಿರಚಿತ ಶ್ರೀಮಾರುತಿ ಯಂತ್ರೋದ್ಧಾರಕ ಸ್ತೋತ್ರಂ ಸಂಪೂರ್ಣಂ ॥

## 12.24 ಕಾರ್ಯ ಸಿದ್ಧಿ ಆಂಜನೇಯ ಶ್ಲೋಕಃ

**"ತ್ವಮಸ್ಮಿನ್ ಕಾರ್ಯ ನಿರ್ಯೋಗೇ ಪ್ರಮಾಣಂ ಹರಿಸತ್ತಮ ।**
**ಹನೂಮಾನ್ ಯತ್ನಮಾಸ್ತಾಯ ದುಃಖ ಕ್ಷಯ ಕರೋಭವ. ॥**

ಭಾವಾರ್ಥ - ಹೇ! ಆಂಜನೇಯ ಸ್ವಾಮಿಯೇ, ನೀನೇ ನಮ್ಮ ಎಲ್ಲಾ ಕಾರ್ಯಗಳಿಗೂ ಸಾಕ್ಷೀ ಭೂತನಾಗಿ ಸರ್ವ ಪ್ರಯತ್ನಗಳ ಮೂಲಕ ಸಕಲ ದುಃಖಗಳನ್ನೂ ನಿವಾರಿಸು.

## 12.25 ಆಂಜನೇಯ ಸ್ತುತಿ

**ಅಸಾಧ್ಯಂ ಸಾಧಕೋ ದೇವ ಅಸಾಧ್ಯಂ ತಂ ಕಿಂ ವದಾ । ರಾಮದೂತ ಕೃಪಾಸಿಂಧು ಮಮ ಕಾರ್ಯಂ ಸಾಧಯೇತ್ ಪ್ರಭು ॥1॥**

**ತುಲಿತಬಲಧಾಮಂ ಹೇಮಶೈಲಾಭ ದೇಹಂ ದನುಜವನಕೃಶಾಂತಂ ಜ್ಞಾನಿನಾಮಾಗ್ರಗಣ್ಯಂ । ಸಕಲಗುಣ ನಿಧಾನಂ ವಾನರ ಗಣಮೀಶಂ ರಘುಪತಿ ಪ್ರಿಯಭಕ್ತಂ ವಾತಜಾತಂ ನಮಾಮಿ ॥2॥**

**ವಾಯುಪುತ್ರ ಮಹಾವೀರಂ ತುಲಸೀವಾನರಂ ಅಂಜನಾನಂದ ವರ್ಧನಂ ಸೀತಾರಾಮಪ್ರಿಯಂಭಕ್ತಂ ದೂತಂ ಹನುಮತೇ ನಮಃ ॥ ಸುಗ್ರೀವ ಸಚೀವಾಯ ಕಪಿಶ್ರೇಷ್ಠಾಯ ಮಂತ್ರಿಣೇ । ಸ್ವಾಮಿಭಕ್ತಾಯ ಶಾಂತಾಯ ಹನುಮಂತಾಯ ನಮೋ ನಮಃ ॥3॥**

**ಅಂಜನಾಗರ್ಭ ಸಂಭೂತೋ ವಾಯುಪುತ್ರೋ ಮಹಾಬಲ ।**
**ಕುಮಾರೋ ಬ್ರಹ್ಮಚಾರೀಚ ಹನುಮಂತಾಯ ನಮೋ ನಮಃ ॥4॥**

ಭಾವಾರ್ಥ - ಅಸಾಧ್ಯವಾದುದನ್ನು ಸಾಧಿಸಲು ಶಕ್ತನಾಗಿರುವ ದೇವನೇ ನಿನಗೆ ಅಸಾಧ್ಯವೆನಿಸುವುದು ಯಾವುದಿದೆ? ಹೇ! ರಾಮದೂತನೇ! ಕೃಪಾಸಿಂಧುವೇ, ನನ್ನ ಕಾರ್ಯಗಳು ಸಿದ್ಧಿಯಾಗುವಂತೆ ಕರುಣಿಸು. ಮೇರು ಪರ್ವತಕ್ಕೆ ಸಾಟಿಯಾದ ಶಕ್ತಿ, ಕಾಂತಿಯ ಶರೀರವನ್ನು ಹೊಂದಿರುವವನೇ, ರಕ್ಕಸರ ತಾಣಕ್ಕೆ ಅಗ್ನಿಸ್ವರೂಪನಾದವನೇ, ಸಮಸ್ತ ಗುಣಗಳಿಗೆ ಕಾರಣಿಭೂತನಾಗಿರುವ ವಾನರ ಸಮೂಹಾಧೀಶನೇ, ರಘುಪತಿಗೆ ಪ್ರಿಯನಾದವನೇ ವಾಯುಪುತ್ರನೇ ನಮಿಸುವೆನು. ವಾಯು ಪುತ್ರನೂ, ಮಹಾವೀರನೂ, ಅಂಜನಾದೇವಿಯ ಆನಂದವನ್ನು ಹೆಚ್ಚಿಸುವಾತನೂ, ಸೀತಾರಾಮರಿಗೆ ಪ್ರೀತಿಯ ಭಕ್ತನೂ, ದೂತನೂ ಆಗಿರುವ ಹನುಮಂತನೇ ನಿನಗೆ ನಮನಗಳು. ಸುಗ್ರೀವನ ಮಂತ್ರಿಯೂ, ಕಪಿಸಮೂಹದಲ್ಲಿ ಶ್ರೇಷ್ಠ ಸಚೀವನೂ, ಸ್ವಾಮಿ ಭಕ್ತನೂ ಶಾಂತನೂ ಆಗಿರುವ ಹನುಮಂತನೇ ನಮೋ ನಮಃ. ಅಂಜನಾದೇವಿ ಗರ್ಹದಲಿ ಜನಿಸಿದವನೂ, ವಾಯು ಪುತ್ರನೂ, ಮಹಾಬಲಶಾಲಿಯೂ, ಕುಮಾರನೂ, ಬ್ರಹ್ಮಚಾರಿಯೂ, ಆಗಿರುವ ಹನುಮಂತನೇ ನಿನಗಿದೋ ನನ್ನ ನಮನಗಳು. ಪುನರಪಿ ನಮನಗಳು.

॥ ಇತಿ ಆಂಜನೇಯ ಸ್ತುತಿ ಸಂಪೂರ್ಣಂ ॥

## 12.26 ಶ್ರೀಮತೇ ಪ್ರಸನ್ನಾಂಜನೇಯಾಯ ನಮಃ

**ಓಂ ನಮೋ ಭಗವತೇ ಶ್ರೀ ವೀರಹನುಮತೇ ಪ್ರಬಲ ಪರಾಕ್ರಮಾಯ ಅಕ್ರಾಂತ ದಿಗ್ಮಂಡಲಾಯ ಶೋಭಿತಾನನಾಯ ಧವಲೀಕೃತವಜ್ರ ದೇಹಾಯ ಜಗಚ್ಚಿಂತಿತಾಯ ರುದ್ರಾವತಾರಾಯ ಲಂಕಾಪುರೀ ದಾಹನಾಯ ಉದಧಿ ಲಂಘನಾಯ ಸೇತು ಬಂಧನಾಯ ದಶಕಂಠಶಿರಾಕ್ರಾಂತಾಯ ಸೀತಾಶ್ವಾಸನಾಯ ಅನಂತಕೋಟಿ ಬ್ರಹ್ಮಾಂಡನಾಯಕಾಯ ಮಹಾಬಲಾಯ ವಾಯುಪುತ್ರಾಯ ಅಂಜನಾದೇವಿ ಗರ್ಭಸಂಭೂತಾಯ ಶ್ರೀ ಸೀತಾರಾಮ ಲಕ್ಷ್ಮಣಾನಂದಕರಾಯ ಕಪಿಸೈನ್ಯ ಪ್ರಿಯಕರಾಯ ಸುಗ್ರೀವಸಹಾಯ ಕಾರ್ಯಕಾರಣ ಸಾಧಕಾಯ ಪರ್ವತೋತ್ಪಾಟನಾಯ ಕುಮಾರ ಬ್ರಹ್ಮಚಾರಿಣೇ ಗಂಭೀರ ಶಬ್ದೋದಯಾಯ ॥ ಶ್ರೀಮತೇ ಪ್ರಸನ್ನಾಂಜನೇಯಾಯ ನಮಃ ॥**

ಭಾವಾರ್ಥ - ಶ್ರೀವೀರ ಹನುಮನೂ, ಬಲಿಷ್ಟನೂ, ಪರಾಕ್ರಮಶಾಲಿಯೂ, ಯಾವುದೇ ದಿಕ್ಕುಗಳ ವಲಯದಿಂದ ಆಕ್ರಮಿಸಲಾಸಾಧ್ಯನೂ, ಶೋಭಿಸಲ್ಪಡುವ ಮೊಗದವನೂ, ಶುಭ್ರವಾಗಿರುವ ವಜ್ರಕಾಯನೂ, ಜಗತ್ತಿನ ಕುರಿತಾಗಿ ಚಿಂತಿಸುವವನೂ, ರುದ್ರಾವತಾರಿಯೂ, ಲಂಕಾಪಟ್ಟಣವನ್ನು ದಹಿಸಿದವನೂ, ನೀರಿನಸಮೂಹವನ್ನು ಲಂಘಿಸಿದವನೂ, ಸೇತುವನ್ನು ಬಂಧಿಸಿದವನೂ, ದಶಕಂಠನ ಶಿರವನ್ನು ಕತ್ತರಿಸಿದವನೂ, ಸೀತಾಮಾತೆಗೆ ಭರವಸೆಯನ್ನು ನೀಡಿದವನೇ, ಅನಂತಕೋಟಿ ಬ್ರಹ್ಮಾಂಡನಾಯಕನೂ, ಮಹಾಬಲಶಾಲಿಯೂ, ವಾಯು ಪುತ್ರನೂ, ಅಂಜನಾದೇವಿಯ ಗರ್ಭದಲ್ಲಿ ಜನಿಸಿದವನೂ, ಶ್ರೀಸೀತಾರಾಮಲಕ್ಷ್ಮಣರಿಗೆ ಆನಂದವನ್ನುಂಟುಮಾಡುವವನೂ, ಕಪಿಸೈನ್ಯಕ್ಕೆ ಒಳಿತನ್ನು ಮಾಡುವವನೂ, ಸುಗ್ರೀವನ ಸಹಾಯಕನೂ, ಉದ್ಯೋಗಗಳಿಗೆ ಪ್ರೇರಣೆ ನೀಡುವವನೂ, ಸಾಧಕನೂ, ಪರ್ವತವನ್ನು ಕಿತ್ತವನೂ, ಕುಮಾರನೂ, ಬ್ರಹ್ಮಚಾರಿಯೂ, ಗಂಭೀರವಾಗಿರುವ ಶಬ್ದವನ್ನು ಮೂಡಿಸುವವನೂ ಆಗಿರುವ ಶ್ರೀ ಭಗವದ್ ಸ್ವರೂಪೀ ಆಂಜನೇಯನಿಗೆ ನಮನಗಳು.

## 12.27 ಓಂ ಹರಿಮರ್ಕಟಮರ್ಕಟಾಯ ನಮಃ

**ಮರ್ಕಟೇಶ ಮಹೋತ್ಸಾಹ ಸೀತಾ ಶೋಕ ವಿನಾಶಕ ।**
**ಶತ್ರೂನ್ ಸಂಹರ ಮಾಂ ರಕ್ಷಶ್ರಿಯಂ ದಾಪಯ ದೇಹಿಮೇ॥**

**ಆಪನ್ನಾಖಿಲ ಲೋಕಾರ್ತಿಹಾರಿಣೇ ಶ್ರೀ ಹನುಮತೇ ।**
**ಅಕಸ್ಮಾದಾಗತೋತೋತ್ಪಾತ ನಾಶನಾಯ ನಮೋಸ್ತು ತೇ ॥**

**ಅಂಜನಾನಂದನಂ ವೀರಂ ಜಾನಕೀ ಶೋಕನಾಶನಂ ।**
**ಕಪೀಶಮಕ್ಷಹಂತಾರಂ ವಂದೇ ಲಂಕಾಭಯಂಕರಂ ॥**

**॥ ಶ್ರೀಮತೇ ಆಂಜನೇಯಾಯ ನಮಃ ॥**

ಭಾವಾರ್ಥ - ವಾನರಾಧೀಶನೂ, ಮಹಾಉತ್ಸಾಹಶಾಲಿಯೂ ಸೀತಾಶೋಕವನ್ನು ಪರಿಹರಿಸಿದವನೂ, ಆಗಿರುವವನೇ ಶತ್ರುಗಳನ್ನು ನಾಶಮಾಡಿ ಆಪತ್ತಿನಿಂದ ನನಗೆ ರಕ್ಷಣೆಯನ್ನು ಕರುಣಿಸು. ಸಂಕಟಕ್ಕೊಳಗಾದ ಸಕಲ ಲೋಕದ ದುಃಖವನ್ನು ಪರಿಹರಿಸುವ ಆಂಜನೇಯ ಸ್ವಾಮಿಯೇ, ಆಕಸ್ಮಿಕವಾಗಿ ಆಗಮಿಸುವ ಮಹಾ ಗಂಡಾಂತರಗಳನ್ನು ನಾಶಗೊಳಿಸುವನೇ ನಿನಗಿದೋ ನನ್ನ ನಮನಗಳು. ಅಂಜನಾದೇವಿಯ ಪುತ್ರನೂ ವೀರನೂ ಜಾನಕೀ ಶೋಕನಾಶಕನೂ ಕಪಿಸಮೂಹಮುಖ್ಯನೂ, ರಾವಣನ ಸುತ ಅಕ್ಷಕುಮಾರನ ಸಂಹಾರಕನೂ, ಲಂಕಾರಾಷ್ಟ್ರಕ್ಕೆ ಭಯಂಕರನೂ ಆಗಿರುವ ಹನುಮನಿಗಿದೋ ನನ್ನ ನಮನಗಳು.

## 12.28 ಹನುಮಾನ್ ಸ್ಫುಟ ಸ್ತೋತ್ರಂ

**ಮನೋಜವಂ ಮಾರುತತುಲ್ಯವೇಗಂ । ಜಿತೇಂದ್ರಿಯಂ ಬುಧ್ಧಿಮತಾಂ ವರಿಷ್ಠಂ ।**
**ವಾತಾತ್ಮಜಂ ವಾನರಯೂಥಮುಖ್ಯಂ । ಶ್ರೀರಾಮದೂತಂ ಶಿರಸಾ ನಮಾಮಿ ॥1॥**

**ಯತ್ರ ಯತ್ರ ರಘುನಾಥ ಕೀರ್ತನಂ । ತತ್ರ ತತ್ರ ಕೃತ ಮಸ್ತಕಾಂಜಲಿಂ ।**
**ಬಾಷ್ಪವಾರಿ ಪರಿಪೂರ್ಣ ಲೋಚನಂ । ಮಾರುತಿಂ ನಮತ ರಾಕ್ಷಸಾಂತಕಂ ॥2॥**

**ಬುಧ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋವತ್ ।**
**ಸುದಾರ್ಢ್ಯಂ ವಾಕ್ಪಟುತ್ವಂ ಚ ಹನುಮತ್ ಸ್ಮರಣಾದ್ಭವೇತ್ ॥3॥**

**ಉದ್ಯನ್ ಮಾರ್ತಾಂಡಕೋಟಿ ಪ್ರಕಟ ರುಚಿಯುತಂ ಚಾರು ವೀರಾಸನಸ್ಥಂ ।**
**ಮೌಂಜೀಯಜ್ಞೋಪವೀತಾಭರಣ ರುಚಿ ಶಿಖಂ ಶೋಭಿತಂ ಕುಂಡಲಾಂಕಂ ।**
**ಭಕ್ತಾನಾಮಿಷ್ಟದಂ ತಂ ಪ್ರಣತ ಮುನಿಜನಂ ವೇದನಾದ ಪ್ರಮೋದಂ ।**
**ಧ್ಯಾಯೇದ್ದೇವಂ ಪ್ಲವಗಕುಲಪತಿಂ ಗೋಷ್ಪರೀ ಭೂತವಾರ್ಧಿಂ ॥4॥**

ಭಾವಾರ್ಥ - ಮನೋವೇಗವುಳ್ಳವನೂ, ವಾಯುವೇಗದವನೂ, ಇಂದ್ರಿಯಗಳನ್ನು ಜಯಿಸಿದವನೂ, ಬುದ್ಧಿವಂತರಲ್ಲಿ ಶ್ರೇಷ್ಠನೂ, ವಾಯುವಿನ ಆತ್ಮಜನೂ, ಕಪಿ ಸಮೂಹದನಾಯಕನೂ, ಶ್ರೀರಾಮನ ಸೇವಕನೂ ಆಗಿರುವ ಹನುಮಂತನಿಗೆ ನಮಿಸುವೆ. ಎಲ್ಲೆಲ್ಲ ಶ್ರೀರಾಮನ ಸಂಕೀರ್ತನೆ ನಡೆಯುವುದೋ ಅಲ್ಲೆಲ್ಲಾ ಶಿರಸ್ಸಿನ ಮೇಲೆ ಅಂಜಲೀ ಬದ್ಧನಾಗಿರುವ, 18 ನಿಮೆಷ [ಕ್ಷಣ]ಗಳಲ್ಲಿ ಸಾಗರವನ್ನು ದಾಟಿ ತುಂಬಿರುವ ನೋಟವನ್ನು ಹೊಂದಿರುವವನಾದ ರಾಕ್ಷಸ ಕುಲನಾಶಕನಿಗೆ ನಮಿಸುವೆ. ಬುದ್ಧಿ, ಬಲ, ಯಶಸ್ಸು, ಧೈರ್ಯ, ನಿರ್ಭಯ, ದೇಹ ಧಾರ್ಢ್ಯ, ವಾಕ್ಸಿದ್ಧಿಗಳು ಹನುಮ ಸ್ಮರಣೆಯಿಂದ ಲಭ್ಯವಾಗುವವು. ಉದಯಿಸುವ ಕೋಟಿ ಸೂರ್ಯ ತೇಜಸ್ಸಿನಿಂದ ಕೂಡಿ ಮನೋಹರವಾಗಿ ವೀರಾಸನ ಸ್ಥಿತನಾಗಿ, ಮುಂಜಿ, ಯಜ್ಞೋಪವೀತಾದಿ ಆಭರಣಗಳಿಂದ ಕಾಂತಿಯುಕ್ತನಾಗಿ, ಜಟೆಯಿಂದ ಶೋಭಿಸಲ್ಪಡುತ್ತಿರುವವನಾಗಿ, ಕಡಗದ ಗುರುತಿನಿಂದ ಕೂಡಿ ಭಕ್ತರಿಗೆ ಇಷ್ಟಾರ್ಥದಾಯಕನಾಗಿ ಮುನಿಜನರಿಂದ ವಂದಿಸಲ್ಪಡುವವನಾಗಿ, ವೇದಗಳ ಸ್ವರಗಳಿಂದ ಮುದಗೊಳ್ಳುವವನಾಗಿರುವ ಕಪಿಕುಲವರೇಣ್ಯ ಸೂರ್ಯನಂತೆ ಎಲ್ಲೆಡೆ ಸಂಚರಿಸುವವನೂ ಸಾಗರದಂತೆ ವಿಶಾಲನೂ ಆಗಿರುವ ಆ ದೇವನನ್ನು ಸದಾ ಧ್ಯಾನಿಸಬೇಕು.

॥ ಇತಿ ಶ್ರೀ ಹನುಮಾನ್ ಸ್ಫುಟ ಸ್ತೋತ್ರಂ ಸಂಪೂರ್ಣಂ ॥

## 12.29 ಹನುಮಾನ್ ಮಂಗಳ ಶ್ಲೋಕ

**ಅಂಜನಾತನಯಾನಂದ ರೂಪಿಣೇ ವಿಶ್ವ ತೇಜಸೇ ।**

**ಜಾನಕೀಶೋಕ ಸಂಹರ್ತ್ರೇ ವಾಯುಪುತ್ರಾಯ ಮಂಗಳಂ ॥**

**ಮಂಗಳಂ ಜ್ಞಾನರೂಪಾಯ ಮಹಾವಿಶ್ವಸ್ವರೂಪಿಣೇ ।**

**ಪ್ರಣವಾರ್ಥಸ್ವರೂಪಾಯ ಪ್ರಾಣ ರೂಪಾಯ ಮಂಗಳಂ ॥**

**ದೈತ್ಯದಾನವಸಂಹರ್ತ್ರೇ ಜಗದಾನಂದಹೇತವೇ ।**

**ಪುಣ್ಯಶ್ಲೋಕಾಯ ಪೂತಾಯ ರಾಮದೂತಾಯ ಮಂಗಳಂ ॥**

**ಮಂಗಳಂ ವಜ್ರ ದೇಹಾಯ ಸತ್ಯವಾಹಾಯ ಶೌರಿಯೇ ।**

**ಮಂಗಳಂ ಶ್ರೀಶ ಕಾರ್ಯಾಯ ಬ್ರಹ್ಮಚರ್ಯಾಯ ಮಂಗಳಂ ॥**

**ಮಂಗಳಂ ಕಾಮರೂಪಾಯ ಪಾರ್ಥದ್ವಜನಿವಾಸಿನೇ ।**

**ದಿವ್ಯಗೀತಾಮೃತರಸಾಸ್ವಾದಿತಾಯಾಸ್ತು ಮಂಗಳಂ ॥**

**ಮಂಗಳಂ ವಾಯು ಪುತ್ರಾಯ ಭೂತ ಪ್ರೇತ ವಿನಾಶಿನೇ ।**

**ಸಮಸ್ತ ಶತ್ರುನಾಶಾಯ ಆಂಜನೇಯಾಯ ಮಂಗಳಂ ॥**

**ಶ್ರಿಯಃಪತಿಂ ಸದಾಚಾರ್ಯಂ ನತ್ವಾ ಸರ್ವಾರ್ಥಕಾಮದಂ ।**

**ಕಪೀಶಾರಾಧನಂ ವಕ್ಷ್ಯೇ ರಾಜ್ಯ ರಾಷ್ಟ್ರಾಭಿ ವೃಧ್ಧಿದಂ ॥**

ಭಾವಾರ್ಥ - ಅಂಜನಾದೇವಿಯಪುತ್ರನೂ ಆನಂದ ರೂಪನೂ ಭುವಿಯ ತೇಜೋರೂಪನೂ ಸೀತಾದೇವಿಯ ಶೋಕವನ್ನು ಪರಿಹರಿಸಿದವನೂ ಆಗಿರುವ ವಾಯು ಪುತ್ರನಿಗೆ ಮಂಗಲವಾಗಲಿ.

ಜ್ಞಾನರೂಪನೂ ಮಹಾಪ್ರಪಂಚದ ಸ್ವರೂಪದವನೂ ಓಂಕಾರಾರ್ಥ ಸ್ವರೂಪನೂ, ಪ್ರಾಣರೂಪನೂ ಆಗಿರುವವಗೆ ಮಂಗಲವಾಗಲಿ.

ದೈತ್ಯರಾದ ದಾನವರನ್ನು ಸಂಹರಿಸಿದವನೂ ಜಗತ್ತಿನ ಆನಂದಕ್ಕೆ ಕಾರಣನಾದವನೂ, ಪುಣ್ಯ ಕೀರ್ತಿಯೂ, ಪವಿತ್ರನೂ ಆಗಿರುವ ರಾಮದೂತನಿಗೆ ಮಂಗಲವಾಗಲಿ.

ವಜ್ರಕಾಯನೂ ಸತ್ಯದ ಸಾರಥಿಯೂ ಶೂರನೂ, ಶ್ರೀಹರಿಯ ಕಾರ್ಯವನ್ನು ನಿರ್ವಹಿಸುವವನೂ ಬ್ರಹ್ಮಚಾರಿಯೂ ಆಗಿರುವವಗೆ ಮಂಗಲವಾಗಲಿ.

ಇಷ್ಟಾರ್ಥದಾಯಕನೂ, ಅರ್ಜುನನ ಧ್ವಜದಲ್ಲಿ ವಾಸಿಸುವನೂ, ಅಮೃತಮಯವಾಗಿರುವ ಶ್ರೇಷ್ಠವಾದ ಗೀತೆಯ ರಸಾಸ್ವಾದನೆಯನ್ನು ಮಾಡಿದವನೂ ಆಗಿರುವವಗೆ ಮಂಗಲವಾಗಲಿ.

ವಾಯು ಪುತ್ರನಿಗೆ ಮಂಗಲವಾಗಲಿ. ಭೂತ ಪ್ರೇತಗಳನ್ನು ವಿನಾಶಗೈದವನೂ, ಸಮಸ್ತ ಶತ್ರುಗಳ ವಿನಾಶಕನೂ ಆಗಿರುವ ಆಂಜನೇಯನಿಗೆ ಮಂಗಲವಾಗಲಿ. ಶ್ರೀಹರಿಗೆ ಪ್ರಿಯನಾಗಿ, ಸದಾಚಾರಗಳನ್ನು ಪಾಲಿಸುವವನೂ, ಸರ್ವಾರ್ಥಗಳನ್ನು ಕರುಣಿಸುವವನೂ ಆಗಿರುವ ಕಪಿಕುಲದೊಡೆಯನನ್ನು ಹೃದಯದಲ್ಲಿರಿಸಿ ರಾಜ್ಯ, ರಾಷ್ಟ್ರಗಳ ಅಭಿವೃದ್ಧಿಗಾಗಿ ಆರಾಧಿಸುವೆನು.

॥ ಇತಿ ಹನುಮಾನ್ ಮಂಗಲ ಶ್ಲೋಕಾಃ ಸಂಪೂರ್ಣಂ ॥

----- ****** -----

# 13 ವಿಭಿನ್ನ ಸ್ತೋತ್ರಗಳು

## 13.1 ಶ್ರೀ ಭಗವತ್ ಪ್ರಾತಃಸ್ಮರಣ ಸ್ತೋತ್ರಂ

**ಪ್ರಾತರ್ನಮಾಮಿ ಫಣಿರಾಜ ತನೌ ಶಯಾನಂ ।**

**ನಾಗಾಮರಾಸುರ ನರಾದಿ ಜಗನ್ನಿದಾನಂ ॥**

**ಸಂದೃಪ್ತದಾನವ ಕದಂಬ ಮದಾಪಹಾರಂ ।**

**ಸೌಂದರ್ಯರಾಶಿ ಜಲರಾಶಿಸುತಾ ವಿಹಾರಂ ॥1॥**

ಭಾವಾರ್ಥ - ಆದಿಶೇಷನ ಮೇಲೆ ಮಲಗಿರುವವನೂ ದೇವ ದಾನವ ನಾಗ ಮನುಜರಾದಿಯಾಗಿ ವಿವಿಧ ಜೀವರಾಶಿಯನ್ನೊಳಗೊಂಡ ಲೋಕಕ್ಕೆ ಕಾರಣನಾದವನೂ ವೇದಗಳಿಂದಲೂ, ದೇವತಾ ಸಮೂಹದಿಂದಲೂ ಹೊಗಳಿಸಿಕೊಂಬವನೂ, ಕಾನನಗಳೊಳಗೆ ಆಶ್ರಮವನ್ನು ಮಾಡಿಕೊಂಡಿರುವ ಋಷಿ ಮುನಿಗಳ ಶ್ರೇಷ್ಠವಾದ ನಿಧಿಯಂತಿರುವವನೂಸಾಂಸಾರಿಕ ಸಾಗರವನ್ನು ದಾಟಿಸುವವನೂ, ದೇವತೆಗಳು, ಸಿದ್ಧರು, ಋಷಿಗಳ ಗುಂಪಿನಿಂದ ಪೂಜಿಸಲ್ಪಡುವಾತನೂ, ಕೊಬ್ಬಿದ ದಾನವರ ಸಮೂಹದ ದರ್ಪವನ್ನು ಇಳಿಸುವಾತನೂ, ಸೌಂದರ್ಯದ ಖಣಿಯಾಗಿರುವ ಸಮುದ್ರರಾಜನ ತನಯೆ ಲಕ್ಷ್ಮೀ ದೇವಿಯೊಂದಿಗೆ ವಿಹರಿಸುತ್ತಿರುವವನೂ ಆಗಿರುವ ಭಗವಂತನನ್ನು ನಾನು ಉಷಃಕಾಲದಲ್ಲಿ ಸ್ಮರಿಸುತ್ತೇನೆ.

**ಪ್ರಾತರ್ನಮಾಮಿ ಶರದಂಬರ ಕಾಂತಿಕಾಂತಂ ।**

**ಪಾದಾರವಿಂದ ಮಕರಂದಜುಷಾಂ ಭವಾಂತಂ ॥**

**ನಾನಾವತಾರ ಹೃತಭೂಮಿ ಭರಂ ಕೃತಾಂತಂ ।**

**ಪಾಥೋಜ-ಕಂಬು-ರಥಪಾದಕರಂ ಪ್ರಶಾಂತಂ ॥2॥**

ಭಾವಾರ್ಥ - ಶರತ್ ಕಾಲದ ಆಗಸದ ನೀಲ ಪ್ರಕಾಶದಿಂದ ಆಕರ್ಷಿತನಾಗುವವನೂ, ತನ್ನಡಿದಾವರೆಯ ಮಕರಂದವನ್ನು ಸವಿಯುವವರ ಸಾಂಸಾರಿಕ ದುರಿತಗಳನ್ನು ಕೊನೆಗೊಳಿಸುವವನೂ, ನಾನಾವತಾರಗಳನ್ನು ತಾಳಿ ಭೂಮಿ ಭಾರವನ್ನು

ಹಗುರಾಗಿಸಿದವನೂ, ಶಂಖ, ಪದ್ಮ, ಚಕ್ರಗಳನ್ನು ಹಸ್ತದಲ್ಲಿ ಹಿಡಿದವನೂ ಪ್ರಶಾಂತ ಸ್ವರೂಪನೂ ಆಗಿರುವ ಭಗವಂತನನ್ನು ನಾನು ಉಷಃಕಾಲದಲ್ಲಿ ಸ್ಮರಿಸುತ್ತೇನೆ.

॥ ಇತಿ ಶ್ರೀ ಭಗವತ್ಪ್ರಾತಃ ಸ್ಮರಣ ಸ್ತೋತ್ರಂ ಸಂಪೂರ್ಣಂ ॥

## 13.2 ವಂದೇ ಭೂಮಾತರಂ ಸ್ತುತಿ

**ಸಮುದ್ರವಸನೇ ದೇವಿ ಪರ್ವತ ಸ್ತನ ಮಂಡಲೇ ।**
**ವಿಷ್ಣು ಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥1॥**

ಭಾವಾರ್ಥ - ಹೇ! ಭೂಮಿ ತಾಯಿಯೇ, ಸಾಗರವನ್ನು ವಸನವನ್ನಾಗಿ ಧರಿಸಿದವಳೇ, ಗಿರಿಗಳೆಂಬ ಸ್ತನಮಂಡಲವನ್ನು ಹೊತ್ತಿರುವವಳೇ, ಶ್ರೀಹರಿಯ ಸತಿಯೇ, ನಿನಗೆ ನನ್ನ ಪ್ರಣಾಮಗಳು. ನಿನ್ನ ಮೇಲೆ ನನ್ನ ಪಾದಗಳ ಸೋಂಕುವಿಕೆಯನ್ನು ಮನ್ನಿಸು ತಾಯೀ.

**ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಾಂ ।**
**ವರ್ಷಂ ತದ್ ಭಾರತಂ ನಾಮ ಭಾರತೀ ತತ್ರ ಸಂತತಿಃ ॥2॥**

ಭಾವಾರ್ಥ - ಹಿಂದೂ ಮಾಹಾಸಾಗರದ ಉತ್ತರದಲ್ಲಿ, ಹಿಮಾಲಯದ ದಕ್ಷಿಣದಲ್ಲಿ ಇರುವ ನಾಡು ಭಾರತ. ಅಲ್ಲಿ ಜನಿದವರೆಲ್ಲರೂ ಭಾರತೀಯರು.

**ಭೂಮಾತಾ ಗೋಮಾತಾ ಚ ದೇಶಮಾತಾ ತಥೈವ ಚ ।**
**ವೇದ ಮಾತಾ ದೇಹಮಾತೇತಿ ಪಂಚೈತಾ ಮಾತರೋ ಮಮ ॥3 ॥**

ಭಾವಾರ್ಥ - ಭೂಮಾತೆ, ಗೋ ಮಾತೆ, ದೇಶಮಾತೆ, ವೇದಮಾತೆ, ದೇಹಮಾತೆ ಎಂಬುದಾಗಿ ಈ ಐವರು ನನಗೆ ಮಾತೆಯರು.

**ಏತದ್ದೇಶ ಪ್ರಸೂತಸ್ಯ ಸಕಾಶಾದಗ್ರ ಜನ್ಮನಃ ।**
**ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪ್ರಥಿವ್ಯಾಂ ಸರ್ವ ಮಾನವಾಃ ॥4॥**

ಭಾವಾರ್ಥ - ಈ ಭರತ ಭೂಮಿಯಲ್ಲಿ ಜನಿಸಿದ ಜ್ಞಾನಿಗಳಿಂದ ಜಗತ್ತಿನ ಎಲ್ಲ ಮಾನವರೂ ತಮ್ಮ ತಮ್ಮ ಸಂಸ್ಕಾರಗಳನ್ನು ಕಲಿತುಕೊಳ್ಳಬೇಕು.

**ರತ್ನಾಕರಾಂ ಧೌತಪದಾಂ ಹಿಮಾಲಯ ಕಿರೀಟಿನೀಂ ।**

**ಬ್ರಹ್ಮ ರಾಜರ್ಷಿ ರತ್ನಾಢ್ಯಾಂ ವಂದೇ ಭಾರತ ಮಾತರಂ ॥5॥**

ಭಾವಾರ್ಥ - ಹಿಂದೂ ಮಹಾ ಸಾಗರದಲ್ಲಿ ಕಾಲುಗಳನ್ನು ತೊಳೆಯುತ್ತಾ, ಹಿಮವತ್ಪರ್ವತಗಳನ್ನು ಕಿರೀಟದಂತೆ ಧರಿಸುತ್ತಾ, ರತ್ನ ಸದೃಶರಾದ ಬ್ರಹ್ಮರ್ಷಿ, ರಾಜರ್ಷಿಗಳಿಗೆ ನೆಲೆಯಾಗಿ ಶೋಭಿಸುತ್ತಲಿರುವ ತಾಯಿ ಭಾರತ ಮಾತೆಗೆ ಪ್ರಣಾಮಗಳು.

॥ ಇತಿ ವಂದೇ ಭೂಮಾತರಂ ಸ್ತುತಿ ಸಂಪೂರ್ಣಂ ॥

## 13.3 ಪ್ರಾತರ್ಪ್ರತಿಜ್ಞಾ

**ಸುಷುಪ್ತಿ ಮಾತಾ ಸುಷುವೇ ಶಿಶು ಮಾಂ । ಸಂಕಲ್ಪಮೇವಂ ಮನಸಾ ಕರೋಮಿ ॥**

**ಯದ್ಯತ್ ಕೃತಂ ಭವತು ತ್ವದರ್ಥಂ । ಹೃದಿ ಸ್ಥಿತೇ ರಾಜ್ಞಿ ಚರಾ ಚರಾಣಾಂ ॥1॥**

ಭಾವಾರ್ಥ - ಮೈ ಮರೆವ ಗಾಢ ನಿದ್ರೆ ಎಂಬ ತಾಯಿಯು ನನ್ನನ್ನು ಶಿಶುವಾಗಿ ಹಡೆದಳು. ನಾನೀಗ ಮನದಲ್ಲಿ ಹೀಗೆಂದು ಪ್ರತಿಜ್ಞೆ ಮಾಡುತ್ತಿದ್ದೇನೆ. "ಹೇ!ಚರಾಚರ ವಸ್ತುಗಳ ದೊರೆಯಾದ ಭಗವಂತನೇ, ನನ್ನ ಹೃದಯಲ್ಲಿ ನೀನು ನೆಲೆಸಿರುವಾಗ ನಾನು ಏನೆಲ್ಲಾ ಮಾಡುವೆನೋ ಅವೆಲ್ಲವೂ ನಿನಗರ್ಪಿತವಾಗಲಿ.

**ಉಕ್ತಂ ಮತಂ ದೇವ ತಥಾ ಕೃತಂ ಚ । ಹವ್ಯಂ ತತಃ ಪಾವನ ಪೂತಮಸ್ತು ॥**

**ಕುರ್ಯಾಂ ನ ಕಿಂಚಿತ್ ಪರಪೀಡನಾಯ । ಪರೋಽಪಿಮಹ್ಯಂ ನ ತಥಾ ಮನೋತು ॥2॥**

ಭಾವಾರ್ಥ - ಎಲೈ ಸ್ವಾಮಿಯೇ! ನನ್ನ ಅನಿಸಿಕೆ, ನುಡಿ, ಮತ್ತು ಕಾರ್ಯಗಳೆಲ್ಲವೂ ದೋಷರಹಿತವಾಗಿರಲಿ. ಅವೆಲ್ಲವೂ ಸ್ವಾಮಿಕಾರ್ಯ ಎಂಬ ಯಜ್ಞಕ್ಕೆ ಅರ್ಪಿಸುವ ಹವಿಸ್ಸಾಗಲಿ. ಅನ್ಯರಿಗೆ ನೋವುಂಟು ಮಾಡುವ ದ್ರೋಹ ನನ್ನಿಂದ ಸಂಭವಿಸದಿರಲಿ. ಅಂತೆಯೇ ಇತರರಿಂದಲೂ ನನಗೆ ನೋವು ಘಟಿಸದಿರಲಿ.

॥ ಇತಿ ಪ್ರಾತರ್ಪ್ರತಿಜ್ಞಾ ಸಂಪೂರ್ಣಂ ॥

## 13.4 ಸತ್ಕಾರ್ಯ ಪ್ರತಿಜ್ಞಾ

**ಸರ್ವೇಂದ್ರಿಯಾಭಿಮಾನಿ ಶ್ರೀಃ ಪ್ರಾಣಸಂಸ್ಥೇನ ವಿಷ್ಣುನಾ ।**
**ಪ್ರೇರಿತಃ ಶ್ರೀಶ ತುಷ್ಟ್ಯರ್ಥಂ ಕರಿಷ್ಯೇ ಕರ್ಮಚಾಖಿಲಂ ॥1॥**

ಭಾವಾರ್ಥ - ಸಮಸ್ತ ಇಂದ್ರಿಯಗಳ ಅಭಿಮಾನಿ ದೇವತೆಯಾದ ಲಕ್ಷ್ಮಿ ಮತ್ತು ಪ್ರಾಣಶಕ್ತಿಯಾಗಿರುವ ವಿಷ್ಣುವಿನ ಪ್ರೇರಣೆಗೆ ಒಳಗಾಗಿ ನನ್ನೆಲ್ಲಾ ಕಾರ್ಯಗಳನ್ನು ಆ ಭಗವಂತನ ಪ್ರೀತಿಗೋಸ್ಕರವಾಗಿ ಮಾಡುವೆ.

**ನಮೋವಸಾತ್ವಿಕಾ ದೇವಾ ವಿಷ್ಣು ಭಕ್ತಿಪರಾಯಣಾಃ ।**
**ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥2॥**

ಭಾವಾರ್ಥ - ಶ್ರೀಹರಿಯ ಭಕ್ತಿಯಲ್ಲಿ ತಲ್ಲೀನರಾಗಿರುವ ತತ್ವಾಭಿಮಾನಿ ದೇವಾನುದೇವತೆಗಳೇ ನಿಮಗಿದೋ ನನ್ನ ನಮಸ್ಕಾರಗಳು. ನೀವೆಲ್ಲರೂ ನಾನು ಧರ್ಮಮಾರ್ಗದಲ್ಲಿ ಮುನ್ನಡೆಯುವಂತೆ ಪ್ರೇರೇಪಿಸಿರಿ.

**ಉತ್ಪತ್ತಿಸ್ಥಿತಿ ಸಂಹಾರ ನಿಯತಿರ್ಜ್ಞಾನಮಾವೃತಿಃ ।**
**ಬಂಧಮೋಕ್ಷೌಚ ಪುರುಷಾದ್ ಯಸ್ಮಾತ್ ಸ ಹರಿರೇಕರಾಟ್ ॥3॥**

ಭಾವಾರ್ಥ - ಸೃಷ್ಟಿ, ಸ್ಥಿತಿ, ಲಯಾದಿ ಲೋಕ ನಿಯಮಗಳಿಗೆ, ಜ್ಞಾನಾಜ್ಞಾನ, ಬಂಧನ ಹಾಗೂ ಮುಕ್ತಿಗಳಿಗೆ ಯಾರು ಕಾರಣರಾಗುವರೋ ಅಂತಹಾ ಶ್ರೀಹರಿಯು ಚಕ್ರವರ್ತಿಯಂತಿರುವನು.

**ತತ್ರ ತತ್ರ ಸ್ಥಿತಃ ಸ್ವಾಮೀ ತತ್ತಚ್ಛಕ್ತೀಃಪ್ರಬೋಧಯನ್ ।**
**ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಗಲಾಂ ॥4॥**

ಭಾವಾರ್ಥ - ಎಲ್ಲೆಂದರಲ್ಲಿ ವ್ಯಾಪಿಸಿರುವ ಆ ದೊರೆಯು ಆಯಾಯ ಶಕ್ತಿಗಳನ್ನು ಉದ್ದೀಪನಗೊಳಿಸುತ್ತಾ ತಾನು ಏಕಮೇವ ಮಹಾಶಕ್ತಿಯಾಗಿ ಸಮಸ್ತ ಶುಭವನ್ನು ಮಾಡುವನು.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹಿತಃ ಸಂತಿ ನ ಸಂತಿ ಯದುಪೇಕ್ಷಯಾ ॥5॥**

ಭಾವಾರ್ಥ - ವಸ್ತು, ಕ್ರಿಯೆ, ಕಾಲ, ಸ್ವಭಾವ ಹಾಗೂ ಜೀವ ಇವೆಲ್ಲವೂ ದೈವಾನುಗ್ರಹವಿದ್ದರೆ ಮಾತ್ರಾ ಅಸ್ಥಿತ್ವದಲ್ಲಿರುತ್ತವೆ. ದೈವಾನುಗ್ರಹವಿಲ್ಲದಿದ್ದರೆ ಯಾವುದೂ ಇರುವುದಿಲ್ಲ.

**ಸ್ವಾಮಿನ್ ಭಕ್ತೋಽಸ್ಮಿ ತೇ ನಿತ್ಯಂ ಪ್ರಿಯಂತೇ ಕರವಾಣ್ಯಹಂ ।**
**ಅಪ್ರಿಯೇ ಭವತೋ ನಾಥ ಮಾಯಾನ್ಮೇ ಮನ ಆದಿಕಂ ॥6॥**

ಭಾವಾರ್ಥ - ಸ್ವಾಮಿ ಪರಮಾತ್ಮನೇ,ನಾನು ನಿನ್ನ ಭಕ್ತನಿರುವೆ. ಅನುದಿನವೂ ನಿನಗೆ ಪ್ರಿಯವಾದ ಕಾರ್ಯಗಳನ್ನು ಮಾಡಬೇಕಾಗಿದೆ. ದೊರೆಯೇ, ಆದಕಾರಣ ನನ್ನ ಮನಸ್ಸು ಹಾಗೂ ಇಂದ್ರಿಯಾದಿಗಳು ಯಾವತ್ತೂ ನಿನಗೆ ಅಪ್ರಿಯವೆನಿಸುವಂತಹಾ ಕಾರ್ಯಗಳಲ್ಲಿ ತೊಡಗದಿರಲಿ.

**ಪ್ರಾತಃಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂತತಃ ।**
**ಯತ್ ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥7॥**

ಭಾವಾರ್ಥ - ಜಗದೊಡೆಯನೇ!ಮುಂಜಾನೆಯಿಂದ ಸಂಜೆಯವರೆಗಿನ ಹಗಲು ಹೊತ್ತಿನಲ್ಲಿ ಹಾಗೂ ಸಂಜೆಯಿಂದ ಮುಂಜಾನೆ ತನಕದ ರಾತ್ರಿ ಕಾಲದಲ್ಲಿ ನನ್ನಿಂದ ಏನೇನು ಕಾರ್ಯಗಳು ಮಾಡಲ್ಪಡುತ್ತವೆಯೋ ಅವೆಲ್ಲವೂ ನಿನ್ನ ಆರಾಧನೆಯಾಗಿರಲಿ.

**ಶರೀರ ಚೇಷ್ಟಾಪಿ ಮಮ ಪ್ರಣಾಮಃ । ಸ್ತುತಿಸ್ತುವಾಗಿಂದ್ರಿಯ ವೃತ್ತಿರಸ್ತು ॥**

**ಸರ್ವಾತ್ಮನೋ ವೃತ್ತಿರನುಸ್ಮೃತಿಸ್ತೇ । ಸರ್ವಂ ತ್ವದಾರಾಧನಮೇವ ಭೂಯಾತ್ ॥8॥**

ಭಾವರ್ಥಃ- ಈ ನನ್ನ ದೇಹದ ಅಂಗಚಲನೆಗಳೆಲ್ಲವೂ ನಾನು ಮಾಡುವ ನಿನ್ನ ಸ್ತುತಿಗಳಾಗಲಿ. ನನ್ನೀ ನಾಲಿಗೆಯಿಂದಾಡುವ ನುಡಿಗಳೆಲ್ಲವೂ ನಿನ್ನ ಪ್ರಶಂಸೆಗಳಾಗಲಿ.

ನನ್ನ ಸರ್ವಾವಯವಗಳ ಕಾರ್ಯಗಳೆಲ್ಲವೂ ನಿನ್ನ ಸ್ಮರಣೆಗಳಾಗಲಿ. ಈ ರೀತಿಯಾಗಿ ನಾನು ದಿನ ಪೂರ್ತಿ ಮಾಡುವ ಸಮಸ್ತ ಕರ್ಮಗಳು ನಿನ್ನಾರಾಧನೆಯಾಗಿರಲಿ.

॥ ಇತಿ ಸತ್ಕಾರ್ಯ ಪ್ರತಿಜ್ಞಾ ಸಂಪೂರ್ಣಂ ॥

## 13.5 ಪ್ರಾರ್ಥನಾ

**ಸಾಧುವಾಸಾಧು ವಾ ಕರ್ಮಂ ಯದ್ಯದಾಚರಿತಂ ಮಯಾ ತತ್ ಸರ್ವಂ ದೇವದೇಶ ಗೃಹಾಣಾರಾಧನಂ ಪರಂ । ಸರ್ವ ಲೋಕ ಶರಣ್ಯಾಯ ಮಂಗಲಂ ಪರಮಾತ್ಮನೇ ಮಂಗಲಂ ಗುರುವರೇಭ್ಯಃ ಸರ್ವ ಲೋಕಾಯ ಮಂಗಲಂ ॥1॥**

ಭಾವಾರ್ಥ - ನಾನು ಆಚರಿಸಿದಂದಂತಹಾ ಕ್ರಿಯೆ ಅದು ಸರಿಯೇ ಆಗಿರಲಿ ತಪ್ಪೋ ಆಗಿರಲಿ ಅದೆಲ್ಲವೂ ದೇದೇವನಾಗಿರುವ ನಿನ್ನ ಆರಾಧನೆಗಾಗಿ,. ಸಮಸ್ತ ಲೋಕವೂ ಶರಣು ಬರುವಂತಹಾ ಪರಮಾತ್ಮನೇ, ನಿನಗೆ ಮಂಗಳವಾಗಲಿ. ಗುರುವರೇಣ್ಯರೇ! ಮಂಗಲವಾಗಲಿ. ಸಮಸ್ತ ಲೋಕಕ್ಕೂ ಮಂಗಲವಾಗಲಿ.

**ನತ್ವಹಂ ಕಾಮಯೇ ರಾಜ್ಯಂ ನ ಸ್ವರ್ಗಂ ನ ಪುನರ್ಭವಂ । ಆರ್ತಯೇ ದುಃಖ ತಪ್ತಾನಾಂ ಪ್ರಾಣಿನಾಮಾರ್ತಿ ನಾಶನಂ ॥2॥**

ಭಾವಾರ್ಥ - ನನಗೆ ರಾಜ್ಯ ಸುಖವಾಗಲೀ ಸ್ವರ್ಗದ ಭೋಗಸುಖವಾಗಲೀ ಬೇಡ. ನನಗೆ ಪುನರ್ಜನ್ಮವೂ ಬೇಡ. ಆದರೆ ಪರಮಾತ್ಮಾ,ನಿನ್ನಲ್ಲಿ ನಾನು ಕೇಳಿಕೊಳ್ಳುವುದು ಇಷ್ಟೇ! ಜೀವರಾಶಿಗಳ ದುಃಖವನ್ನು ನಿವಾರಿಸುವ ಶಕ್ತಿ ನನಗೆ ಕೊಡು.

**ಬೆನಕ ಬೆನಕ ಏಕ ದಂತ ಪಚ್ಚೆಕಲ್ಲು ಪಾಣಿ ಪೀಠ ಮುತ್ತಿನುಂಡೆ ಹೊನ್ನ ಗಂಟೆ ಇಂತೊಪ್ಪುವ ಶ್ರೀ ಮಹಾಗಣಪತಿ ದೇವರ ಪಾದಕ್ಕೆ ಇಪ್ಪತ್ತೊಂದು ನಮಸ್ಕಾರಗಳು. ಒಪ್ಪ ಬುದ್ಧಿ ಕೊಡು ವಿದ್ಯೆ ಕೊಡು ಆರೋಗ್ಯ ಕೊಡು ಸಂಪತ್ತು ಕೊಡು ಸಕಲ ಭಾಗ್ಯವ ಕೊಟ್ಟು ಕಾಪಾಡು ಸ್ವಾಮೀ. ॥3॥**

**ಸಂಗಚ್ಛಧ್ವಂ ಸಂವದಧ್ವಂ ಸಂವೋ ಮನಾಂಸಿ ಜಾನತಾಂ । ಸಮಾನೋಮಂತ್ರಃ ಸಮಿತಃ ಸಮಾನೀ ಸಮಾನಂ ಸಹ ಚಿತ್ತಂ ಏಷಾಂ । ಸಮಾನೀ ವ ಆಕತಿಃ ಸಮಾನಾ ಹೃದಯಾನಿವಃ । ಸಮಾನಂ ಅಸ್ತು ವೋ ಮನಃ ಯಥಾ ವಃ ಸುಸಹಾಸತಿ ॥4॥**

(ಋಗ್ವೇದ)

ಭಾವಾರ್ಥ - ನೀವು ಕೂಡಿ ನಡೆಯಿರಿ. ಕೂಡಿ ಬಾಳಿರಿ. ಮಾತಿನಲ್ಲಿ ಏಕತೆಯಿರಲಿ. ಒಬ್ಬರನ್ನೊಬ್ಬರ ಮನಸ್ಸನ್ನು ಅರಿತುಕೊಳ್ಳಿರಿ. ಪ್ರಾರ್ಥನಾ ಮಂತ್ರವು ಸಮಾನವಿರಲಿ. ಕಾರ್ಯ ನಿರ್ವಹಣದ ಸಮಿತಿ ನಿರ್ಣಯ ಸಮಾನವಿರಲಿ. ಮನಸ್ಸು ಹಾಗೂ ಸಂಕಲ್ಪ ಶಕ್ತಿಯ ಚಿತ್ತವು ಸಮಾನವಿರಲಿ. ನಿಮ್ಮ ಉದ್ದೇಶ ಸಮಾನವಿರಲಿ. ಹೃದಯ ಭಾವನೆ ಸಮಾನವಿರಲಿ. ಯಾವ ಬಗೆಯಿಂದ ನಿಮ್ಮಲ್ಲಿ ಕೂಡಿ ಇರುವ ಭಾವವು ಬೆಳೆಯುವುದೋ ಆ ಬಗೆಯಲ್ಲಿ ನಿಮ್ಮ ನಡೆ-ನುಡಿ ಇರಲಿ.

**ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।**
**ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ ಸೋಽಯಂ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥5॥**

ಭಾವಾರ್ಥ - ಶೈವರು ಶಿವನೆಂದು ಯಾರನ್ನು ಉಪಾಸಿಸುತ್ತಾರೋ, ವೇದಾಂತಿಗಳು ಬ್ರಹ್ಮವೆಂದು ಯಾರನ್ನು ನಂಬುವರೋ, ವೈಚಾರಿಕ ಶ್ರೇಷ್ಠರಾದ ನೈಯಾಯಿಕರು ಯಾರನ್ನು ಕರ್ತೃವೆನ್ನುವರೋ, ಬೌದ್ಧರು ಯಾರನ್ನು ಬುದ್ಧನೆಂದು ಆರಾಧಿಸುವರೋ, ಜೈನಶಾಸನದ ಅನುಯಾಯಿಗಳು ಅರ್ಹತ್ ಎಂದು ನಿತ್ಯವೂ ಯಾರನ್ನು ನಂಬುವರೋ, ಮೀಮಾಂಸಕರು ಕರ್ಮವೆಂದು ಯಾರನ್ನು ಉಪಾಸನೆಗೈಯುವರೋ ಅಂತಹಾ ಮೂರುಲೋಕದ ಒಡೆಯನಾಗಿರುವ ಶ್ರೀಹರಿಯು ನಿಮ್ಮ ಇಷ್ಟಫಲಗಳನ್ನು ಕರುಣಿಸಲಿ.

**ರೂಪಂ ರೂಪವಿವರ್ಜಿತಸ್ಯ ಭವತೋ ಧ್ಯಾನೇನ ಯತ್ಕಲ್ಪಿತಂ ।**
**ಸ್ತುತ್ಯಾ ನಿರ್ವಚನೀಯತಾಖಿಲಗುರೋ ದೂರೀಕೃತಾ ಯನ್ಮಯಾ ॥**

**ವ್ಯಾಪಿತ್ವಂ ಚ ನಿರಾಕೃತಂ ಭಗವತೋ ಯತ್ತೀರ್ಥಯಾತ್ರಾದಿನಾ ।**
**ಕ್ಷಂತವ್ಯಂ ಜಗದೀಶ ತದ್ವಿಕಲತಾ ದೋಷತ್ರಯಂ ಮತ್ಕೃತಂ ॥6॥**

ಭಾವಾರ್ಥ - ಎಲೈ ಭಗವಂತನೇ! ನಿರಾಕಾರನಾಗಿರುವ ನೀನು ಚಿಂತನೆಯ ಮೂಲಕ ನಿನಗೆ ಒಂದು ಆಕಾರವನ್ನು ಕಲ್ಪಿಸಿಕೊಂಡಿರುವೆ. ಸ್ತುತಿಗಳ ಮೂಲಕವಾಗಿ ನೀನು ಇದಮಿತ್ಥಂ ಎಂದು ನಿರ್ಣೈಸಿ ಹೇಳಲಶಕ್ಯವಾಗಿರುವವಸ್ತುಗಳ ತೋರಿಕೆಯ ಭಾವವನ್ನು ದೂರೀಕರಿಸಿದೆ. ತೀರ್ಥಯಾತ್ರೆಗಳ ಮೂಲಕವಾಗಿ ನಿನ್ನ ಸಮಗ್ರ ವ್ಯಾಪಕತ್ವವನ್ನು ನಿರಾಕರಿಸಿರುವೆ. ಹೇ!ಜಗದ್ಗುರುವೇ, ನನ್ನಿಂದಾಗಿರುವ ಈ ಮೂರು ಅವಗುಣಗಳನ್ನು ಮನ್ನಿಸುವಂತಹವನಾಗು.

## 13.6 ಲಘು ವಾಯು ಸ್ತುತಿ

**ವಾಸುದೇವಂ ಸದಾನಂದತೀರ್ಥಾನಂದ ಸಂದೋಹ ಸಂದಾನಾಶೀಲಂ ।**
**ಸ್ವಾಮಿನಂ ಸಚ್ಚಿದಾನಂದಮೂರ್ತಿ ನಂದಯಾಮೋ ವಯಂ ನಂದಸೂನುಂ ॥1॥**

ಭಾವಾರ್ಥ - ವಸುದೇವನ ಮಗನೂ, ಯಾವಾಗಲೂ ಸಂತೋಷ ಸಾಗರದಲ್ಲಿಯೇ ಮುಳುಗಿರುವವನೂ, ಅತ್ಯಧಿಕ ಸಂತೋಷವನ್ನು ದಯಪಾಲಿಸುವ ಗುಣ ಇರುವವನೂ, ಎಲ್ಲರ ಸ್ವಾಮಿಯೂ, ಹಾಗೆಯೇ ಸಚ್ಚಿದಾನಂದ ಸ್ವರೂಪನೂ, ಆಗಿರುವ ಆನಂದ ತೀರ್ಥರನ್ನು ಪ್ರಸನ್ನಗೊಳಿಸುವಾ.

**ಶ್ರೀ ಹನೂಮಂತಮೇಕಾಂತಭಾಜಂ ರಾಘವಶ್ರೀ ಪದಾಂಭೋಜ ಭೃಂಗಂ ।**
**ಮಾರುತಿಂ ಪ್ರಾಣಿನಾಂ ಪ್ರಾಣ ಭೂತಂ ನಂದಯಾಮೋ ವಯಂ ನಂದಿತೀರ್ಥಂ ॥2॥**

ಭಾವಾರ್ಥ - ಶ್ರೀರಾಮಚಂದ್ರನ ಮಂಗಲಮಯ ಪಾದಾರವಿಂದಗಳಲ್ಲಿ ವಿಹರಿಸುವ ದುಂಬಿಯ ಹಾಗಿರುವ, ಎಲ್ಲ ಜೀವಿಗಳ ಜೀವದಾತಾರನೂ, ವಾಯುವಿನ ಸುಪುತ್ರನೂ, ಶ್ರೀಮುಖ್ಯಪ್ರಾಣನ ಅಂತರಂಗ ಭಕ್ತನೂ ಆಗಿರುವ ಆನಂದ ತೀರ್ಥರನ್ನು ಸಂತೋಷಗೊಳಿಸುವಾ,

**ಭೀಮರೂಪಂ ಪರಂಪ್ರಿಯವಾಸಂ ಭಾರತಂ ಭಾರತ ಶ್ರೀಲಲಾಮಂ ।**
**ಭೂಮಿ ಭೂಭಾರಧ್ವಂಸಿನಂ ಭಾರತೀಶಂ ನಂದಯಾಮೋ ವಯಂ ನಂದಿತೀರ್ಥಂ ॥3॥**

ಭಾವಾರ್ಥ - ಪೀತಾಂಬರವನ್ನು ಧರಿಸಿದವನೂ, ಮಹಾಭಾರತಕ್ಕೆ ತಿಲಕಪ್ರಾಯನೂ, ಅಲ್ಲದೆ ಭರತ ವಂಶದಲ್ಲಿ ಹುಟ್ಟಿರುವ ಭೀಮಸೇನನ ಸ್ವರೂಪವನ್ನು ಹೊಂದಿದವನೂ, ಭೂಮಿಯ ಭಾರವ ಹರಣ ಮಾಡಿದವನೂ, ಮಾತಿನ ಮಲ್ಲನೂ, ಅತ್ಯಂತ ಶ್ರೇಷ್ಠನೂ, ಆಗಿರುವ ಆನಂದ ತೀರ್ಥರನ್ನು ಸಂತೋಷಗೊಳಿಸೋಣಾ.

**ದೇವ ಚೂಡಾಮಣಿಂ ಪೂರ್ಣ ಭೋಧಂ ಕೃಷ್ಣಪಾದಾರವಿಂದೈಕದಾಸಂ ।**
**ಚಿತ್ತಚಿಂತಾಮಣಿಂ ಪುಣ್ಯರೂಪಾಂ ನಂದಯಾಮೋ ವಯಂ ನಂದಿತೀರ್ಥಂ ॥4॥**

ಭಾವಾರ್ಥ - ದೇವತಾ ಸಮೂಹಕ್ಕೆ ಕಿರೀಟಪ್ರಾಯದವನೂ, ಸಜ್ಜನಮೂರ್ತಿಯೂ, ಶ್ರೀಕೃಷ್ಣನ ಚರಣ ದಾಸನೂ, ಅಲೌಕಿಕವಾದಂತಾ ಪರಿಪೂರ್ಣತೆಯನ್ನು ಹೊಂದಿದವರಿಗೆ ಚಿಂತಾಮಣಿ ಸ್ವರೂಪನೂ, ಆಗಿರುವ ಆನಂದ ತೀರ್ಥರನ್ನು ಸಂತೋಷಪಡಿಸೋಣಾ.

**ಮಾಯಿಗೋಮಾಯುಮಾಯಾಂಧಕಾರಧ್ವಂಸಮಾರ್ತಾಂಡ ಮೂರ್ತೀಯಮಾನಂ ।**
**ಸಜ್ಜನಾಂದಸಂದೋಹಸಿಂಹಂ ನಂದಯಾಮೋ ವಯಂ ನಂದಿತೀರ್ಥಂ ॥5॥**

ಭಾವಾರ್ಥ - ಜಗತ್ತು ಅನ್ನುವುದು ಮಿಥ್ಯೆ ಅನ್ನುವ ಮಾಯಾವಾದವನ್ನು ಪ್ರತಿಪಾದಿಸುವ ಕುತರ್ಕಿಗಳ ಮಾಯಾಂಧಕಾರವನ್ನು ನಾಶಮಾಡುವುದರಲ್ಲಿ ಸೂರ್ಯ ಸಮಾನನೂ ಮತ್ತು ಸಜ್ಜನರುಗಳಿಗೆ ಸಂತೋಷವನ್ನು ದಯಪಾಲಿಸುವವ ಕಾಮಧೇನುವೂ ಆಗಿರುವ ಆನಂದ ತೀರ್ಥರನ್ನು ಸಂತೋಷಪಡಿಸೋಣಾ.

**ಇಂದಿರಾಕಾಂತಮಾನಂದಮೂರ್ತಿಂ ಸುಂದರೀಮಿಂದಿರಾನಂದ ರೂಪಂ ।**
**ನಂದಿ ತೀರ್ಥಂ ತಥಾ ತತ್ವರೂಪಂ ನಂದಯಾಮೋ ವಯಂ ನಂದಿತೀರ್ಥಂ ॥6॥**

ಭಾವಾರ್ಥ - ಲಕ್ಷ್ಮೀಕಾಂತನೂ, ಆನಂದ ಸ್ವರೂಪಿಯೂ,ಸುಂದರಿಯೂ ಆಗಿ ಚಂದ್ರನ ಹಾಗೆ ಕಾಂತಿಯುತಳೂ ಆಗಿರುವ ಲಕ್ಷ್ಮೀದೇವಿಯ ದಾಸನೂ ಅದರಂತೆಯೇ ಯಥಾರ್ಥವಾದ ಭಗವದಾಜ್ಞಾನವನ್ನು ಭೋಧಿಸುವ ಆನಂದ ತೀರ್ಥರನ್ನು ಸಂತೋಷಪಡಿಸೋಣಾ.

॥ ಇತಿ ಶ್ರೀ ಕಲ್ಯಾಣೀದೇವಿ ವಿರಚಿತ ಲಘುವಾಯು ಸ್ತುತಿಃ ಸಂಪೂರ್ಣಂ ॥

## 13.7 ಶ್ರೀ ಶಂಕರನಾರಾಯಣ ಸ್ತೋತ್ರಂ

**ಧ್ಯಾಯೇನ್ಮಾಣಿಕ್ಯ ಪೀಠೇ ಸಕಲ ಸುರಗಣೈಃ ಸೇವ್ಯಮಾನಂ ಸಮಂತಾತ್ ಬಿಭ್ರಾಣಂ**
**ಪಾಣಿಪದ್ಮೈಃ ಪರಶುದರವರಂ ಮಧ್ಯರಾಜತ್ ಕರಾಬ್ಜಂ ।**
**ವ್ಯಾಘ್ರ ಶ್ರೀ ಕೃತ್ತಿ ಪೀತಾಂಬರಧರ ಮಹಿರಾಟ್ ಕೌಸ್ತುಭಾ ಕಲ್ಪಮೀಶಂ ಗೌರೀ ಲಕ್ಷ್ಮೀ**
**ಸಮೇತಂ ಸ್ಫಟಿಕ ಮರಕತೋದ್ಭಾಸಿತಾಂಗಂ ಶುಭಾಂಗಂ ॥1॥**

ಭಾವಾರ್ಥ - ಸುತ್ತಲೂ ನೆರೆದಿರುವ ಸಮಸ್ತ ದೇವತಾ ಸಮೂಹದಿಂದ ಮಾಣಿಕ್ಯಪೀಠಾರೂಢಳಾಗಿ ಸೇವೆಯನ್ನು ಸ್ವೀಕರಿಸುತ್ತಾ, ಕೈಗಳಲ್ಲಿ ಪರಶುವನ್ನು ಮತ್ತು ಶಂಖವನ್ನು ಹಿಡಿದುಕೊಂಡು, ವ್ಯಾಘ್ರಚರ್ಮ ಹಾಗೂ ಹಳದಿ ವಸನಧಾರಿಯಾಗಿ, ನಾಗರಾಜನೊಡನೆ ಕೌಸ್ತುಭಮಣಿಯನ್ನು ಧರಿಸಿಕೊಂಡು ಒಂದೆಡೆ ಗೌರಿಯನ್ನೂ ಮಗದೊಂದೆಡೆ ಲಕ್ಷ್ಮಿಯನ್ನೂ ಒಡಗೂಡಿ ಸ್ಪಟಿಕದಂತೆ ಸ್ವಚ್ಛವಾಗಿಯೂ, ಪಚ್ಚೆಮಣಿಯ ತೆರದಲ್ಲಿಯೂ ಬೆಳಗುವ ಶರೀರವನ್ನು ಹೊಂದಿರುವ ಶಂಕರನಾರಾಯಣ ಸ್ವಾಮಿಯನ್ನು ಧ್ಯಾನಿಸುತ್ತೇನೆ.

**ಶೀರ್ಷಸ್ಯಾರ್ಧ ಜಟಂ ತದರ್ಧ ಕಬರಿ ಶ್ರೀಮತ್ಕಿರೀಟಾನ್ವಿತಂ ರಾಕಾ ಬಿಂಬಯುತಂ**
**ಕುಠಾರಮಮಲಂ ಶಂಖಂ ದಧಾನಂ ಕರೇ ।**
**ಬಾಹ್ವೋರ್ದಕ್ಷಿಣ ವಾಮಯೋರಧರಯೋರಿಷ್ಟ ಪ್ರದಾನಂಕಟಿ ನ್ಯಸ್ತಾಭೀಂ**
**ಗಜಚರ್ಮ ಹೇಮವಸನಂ ಶಂಭ್ವಚ್ಯುತಾಂಗಂ ಭಜೇ ॥2॥**

ಭಾವಾರ್ಥ - ತಲೆಯ ಅರ್ಧಭಾಗದಲ್ಲಿ ಜಟೆ, ಉಳಿದರ್ಧ ಭಾಗದಲ್ಲಿ ತುರುಬುನಿಂದ ಕೂಡಿದವನಾಗಿ, ಚಂದ್ರನ ಕಲೆಯಿಂದ ಹೊಳೆವ ಕಿರೀಟವನ್ನು ಧರಿಸಿ, ಹಸ್ತಗಳಲ್ಲಿ ಕೊಡಲಿ ಹಾಗೂ ನಿರ್ಮಲವಾಗಿರುವ ಶಂಖವನ್ನು ಹಿಡಿದುಕೊಂಡು, ಕೆಳಬದಿಯ ಬಲಗೈಯಲ್ಲಿ ವರದ ಮುದ್ರೆಯನ್ನೂ, ಸೊಂಟದ ಮೇಲಿರಿಸಿರುವ ಕೈಯಲ್ಲಿ ಅಭಯಮುದ್ರೆಯನ್ನೂ ಧರಿಸಿದವನಾಗಿ ಗಜಚರ್ಮಧಾರಿಯಾಗಿ

ಪೀತಾಂಬರಾಲಂಕೃತನಾಗಿರುವ ಶಂಕರನಾರಾಯಣ ಸ್ವಾಮಿಯನ್ನು ನಾನು ಭಜಿಸುತ್ತೇನೆ.

**ಯೌ ತೌ ಶಂಖ ಕಪಾಲ ಭೂಷಣಧರೌ ಹಾರಾಸ್ಥಿ ಮಾಲಾಧರೌ ದೇವೌ ದ್ವಾರವತೀ ಸ್ಮಶಾನ ನಿಲಯೌ ನಾಗಾರಿ ಗೋವಾಹನೌ ।**
**ದ್ವಿತ್ರ್ಯಕ್ಷೌ ಬಲಿ ದಕ್ಷಯಜ್ಞಮಥನೌ ಶ್ರೀಪಾರ್ವತೀ ವಲ್ಲಭೌ ಪಾಪಂ ಮೇ ಹರತಾಂ ಜನಾರ್ಧನ ಹರೌ ಶ್ರೀವತ್ಸ ಗಂಗಾಧರೌ ॥3॥**

ಭಾವಾರ್ಥ - ಶಂಖ ಹಾಗೂ ಕಪಾಲವನ್ನು ಅಲಂಕಾರವಾಗಿ ಧರಿಸಿಕೊಂಡು, ಪುಷ್ಪ ಮಾಲೆ ಮತ್ತು ಎಲುಬಿನ ಮಾಲೆಗಳನ್ನು ಧರಿಸಿಕೊಂಡು, ದ್ವಾರಕೆ ಮತ್ತು ಸ್ಮಶಾನದಲ್ಲಿ ನೆಲೆಯಾಗಿರುವ, ದ್ವಿನೇತ್ರನೂ ತ್ರಿನೇತ್ರನೂ ಆಗಿ, ಗರುಢ ಮತ್ತು ನಂದಿಯನ್ನು ವಾಹನವನ್ನಾಗಿಸಿ, ಬಲಿಯ ಯಜ್ಞ ಅಂತೆಯೇ ದಕ್ಷನ ಯಜ್ಞವನ್ನೂ ಭಂಗಗೊಳಿಸಿದ, ಶ್ರೀವತ್ಸ ಲಾಂಛನನೂ ಮತ್ತು ಭಾಗೀರಥಿಯನ್ನು ಧರಿಸಿದವರಾಗಿ ಲಕ್ಷ್ಮೀ ಪತಿಯೂ ಪಾರ್ವತೀಪತಿಯೂ ಆಗಿರುವ ದೇವರುಗಳಾದ ಶಂಕರ-ನಾರಾಯಣರು ನನ್ನ ಪಾಪಗಳನ್ನೆಲ್ಲಾ ಪರಿಹರಿಸಲಿ.

## 13.8 ಸಪ್ತ ಶ್ಲೋಕೀ ಗೀತಾ

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಂ ॥1॥**

ಭಾವಾರ್ಥ - ಓಂ ಎಂಬ ಏಕಾಕ್ಷರ ರೂಪದ ಬ್ರಹ್ಮನ ಹೆಸರನ್ನು ಉಚ್ಚರಿಸುತ್ತಾ ಹಾಗೂ ಓಂಕಾರಕ್ಕೆ ಅರ್ಥ ಸ್ವರೂಪನೂ ಆಗಿರುವ ನನ್ನನ್ನು ಸ್ಮರಿಸುತ್ತಾ ಯಾವಾತನು ದೇಹವನ್ನು ತ್ಯಜಿಸುವನೋ ಅವನು ಅತ್ಯುನ್ನತ ಶ್ರೇಷ್ಠ ಪದವಿಯೆನಿಸಿದ ಮೋಕ್ಷವನ್ನು ಪಡೆಯುವನು.

**ಸ್ಥಾನೇ ಹೃಷಿಕೇಶ ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತ್ಯನುರಾಜತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ಧವಂತಿ ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥2॥**

ಭಾವಾರ್ಥ - ಎಲೈ ಹೃಷಿಕೇಶ! ನಿನ್ನ ಗುಣಗಳ ಸಂಕೀರ್ತನೆಯಿಂದ ಬ್ರಹ್ಮಾಂಡವು ಸ್ವಚ್ಛವಾಗಿದೆ ಮತ್ತು ಸ್ನೇಹಪೂರಿತವಾಗಿದೆ. ಹಾಗೂ ಅದು ಸರಿಯಾದುದೂ ಆಗಿದೆ. ಈ ರಕ್ಕಸರು ಭಯಭೀತರಾಗಿ ಸಮಸ್ತ ದಿಸೆಗಳತ್ತ ಓಡುತ್ತಲಿರುವರು. ಹೀಗಿರುತ್ತಾ ಸಮಸ್ತ ಸಿದ್ಧಗಣ ಸೇನೆಯು ನಿನಗೆ ನಮಸ್ಕರಿಸುತ್ತಲಿವೆ.

**ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿ ಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥3॥**

ಭಾವಾರ್ಥ - ಅವನು ಸಮಸ್ತ ಕಡೆಗೂ ಹಸ್ತ ಪಾದಗಳುಳ್ಳವನು,ಹಾಗೆಯೇ ಎಲ್ಲ ಕಡೆಗೂ ಕಣ್ಣು. ತಲೆ, ಮುಖಗಳುಳ್ಳವನು. ಅವನು ಸರ್ವತ್ರ ವ್ಯಾಪಕಸ್ವರೂಪನಾಗಿ ಶ್ರವಣೇಂದ್ರಿಯಗಳುಳ್ಳವನೂ ಆಗಿರುವನು. ಅವನು ಸಮಸ್ತ ಬ್ರಹ್ಮಾಂಡವನ್ನು ವ್ಯಾಪಿಸಿಕೊಂಡವನು.

**ಕವಿಂ ಪುರಾಣಮನುಶಾಸಿತಾರಮಣೋರಣೀಯಾಂ ಸಮನುಸ್ಮರೇದ್ಯಃ ।**
**ಸರ್ವಸ್ಯ ದಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃಪರಸ್ತಾತ್ ॥4॥**

ಭಾವಾರ್ಥ - ಅವನು ಎಲ್ಲವನ್ನು ಬಲ್ಲವನು. ಎಲ್ಲದಕ್ಕೂ ಆದಿಯಾದವನು. ಪ್ರಪಂಚದ ನಿಯಾಮಕನು. ಸೂಕ್ಷ್ಮಾತಿಸೂಕ್ಷ್ಮನಾಗಿರುವವನು. ಎಲ್ಲರಿಗೂ ಅವರವರ ಕರ್ಮಗಳಿಗನುಸಾರವಾಗಿ ಉಚಿತವಾದ [ತಕ್ಕುದಾದ] ಫಲವನ್ನು ನೀಡುವವನು. ಅವನ ಸ್ವರೂಪವನ್ನು ಚಿಂತಿಸಲು ಅಶಕ್ಯ. ಅವನು ಸೂರ್ಯ ಸಮಾನ ತೇಜೋಮಯಿ. ಆತನು ಅಜ್ಞಾನಗಳಿಗೆ ಹೊರತಾದವನು. ಸ್ಮರಣೀಯನು.

**ಊರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಂ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥5॥**

ಭಾವಾರ್ಥ - ಮೇಲ್ಬದಿಯಲ್ಲಿ ಬೇರುಳ್ಳವನು ಬ್ರಹ್ಮನು. ಕವಲುಗಳು ಕೆಳಬದಿಯಲ್ಲಿ ಹರಡಿವೆ. ಈ ರೀತಿಯಾದ ಸಂಸಾರ ಸ್ವರೂಪೀ ಅಶ್ವತ್ಥ ವೃಕ್ಷವನ್ನು ಅವಿನಾಶಿ ಎಂಬರು. ಋಗ್, ಯಜ್, ಸಾಮಾದಿ ವೇದಗಳು ಆ ವೃಕ್ಷದ ಎಲೆಗಳು. ಈ ತೆರನಾದ

ಸಂಸಾರರೂಪೀ ವೃಕ್ಷವನ್ನು ಈ ಅರ್ಥದಲ್ಲಿ ಅರಿತುಕೊಳ್ಳಲು ಶಕ್ಯನಾದವನು ವೇದಗಳ ಯಥಾರ್ಥವನ್ನು ಅರಿಯಬಲ್ಲನು.

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಂ ॥6॥**

ಭಾವಾರ್ಥ - ನಾನು ಸಮಸ್ತ ಜೀವಿಗಳ ಆತ್ಮನಾಗಿದ್ದು ಅವರ ಹೃದಯದಲ್ಲಿ ನೆಲೆಸಿರುವೆ. ಅವರ ಪ್ರಜ್ಞೆ, ಮತ್ತು ಜ್ಞಾನಗಳು ನಾನು. ಅವುಗಳ ಲೋಪಕ್ಕೂ ನಾನೇ ಕಾರಣನು. ಸಮಸ್ತ ವೇದಗಳ ಮೂಲಕ ತಿಳಿದುಕೊಳ್ಳಲು ತಕ್ಕವನು ನಾನು. ವೇದಾಂತದ ಸೃಷ್ಟಿಕರ್ತನೂ ವೇದಗಳ ಅರ್ಥವನ್ನು ಬಲ್ಲವನೂ ನಾನೇ ಆಗಿರುವೆ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥7॥**

ಭಾವಾರ್ಥ - ನೀನು ನನ್ನಲ್ಲಿ ಮನವನ್ನು ನೆಲೆಗೊಳಿಸು. ನನ್ನ ಭಕ್ತ ನೀನಾಗು. ನನಗೆ ನಮಸ್ಕರಿಸುತ್ತಾ ನಿನ್ನ ಚಿತ್ತವನ್ನು ನನ್ನಲ್ಲಿ ಲೀನಗೊಳಿಸು. ನನ್ನಲ್ಲಿ ಅತ್ಯಂತ ಆಸಕ್ತನಾಗು. ಹೀಗೆ ಮಾಡಿದರೆ ನೀನು ನನ್ನನ್ನು ಹೊಂದಲು ಶಕ್ತನಾಗುವೆ.

॥ ಇತಿ ಸಪ್ತಶ್ಲೋಕೀ ಗೀತಾ ಸಂಪೂರ್ಣಂ ॥

## 13.9 ಶ್ರೀ ನಾಗದೇವತಾ ಸ್ತೋತ್ರಂ

**ವಂದೇ ಸರ್ಪ ಕುಲಾಧಿಪಂ ತ್ರಿನಯನಂ ಪೀತಾಂಬರಾಲಂಕೃತಂ ।**
**ಹೇಮಾಂಗಂ ಯುಗಲಾಘನಂ ಸುಫಲಕಂ ಖಡ್ಗಂ ದಧಾನಂ ವಿಭುಂ ॥**

**ನಾನಾರತ್ನ ಸಮನ್ವಿತಂ ಭಯಹರಂ ಶ್ವೇತಾಬ್ಜ ಮಧ್ಯಸ್ಥಿತಂ ।**
**ಶ್ರೀಗಂಧಾದಿ ಸುಪುಷ್ಪಧಾರಿಣಮಥ ಕ್ಷೀರಾಜ್ಯ ಹವ್ಯ ಪ್ರಿಯಂ ॥1॥**

ಭಾವಾರ್ಥ - ಮೂರು ಕಣ್ಣುಗಳನ್ನು ಹೊಂದಿದ, ಹಳದಿಯ ವಸ್ತ್ರಗಳಿಂದ ಅಲಂಕರಿಸಲ್ಪಟ್ಟ, ಹೊಂಬಣ್ಣದ ದೇಹವನ್ನು ಹೊಂದಿರುವ, ನೊಗವನ್ನು ತನ್ನ ಗುರುತನ್ನಾಗಿ ಹೊಂದಿದ, ಖಡ್ಗ ಗುರಾಣಿಗಳನ್ನು ಹಿಡಿದಿರುವ, ಸರ್ವ ವ್ಯಾಪಕನಾದ,

ವಿಧ ವಿಧವಾದ ರತ್ನಮಣಿಗಳನ್ನು ಧರಿಸಿರುವ, ಭಯನಾಶಕನಾದ, ಬಿಳಿಯಕಮಲಗಳ ನಡುವೆ ನಿಂತಿರುವ, ಶ್ರೀಗಂಧಹಾಗೂ ನಾನಾ ವಿಧದ ಪರಿಮಳ ಪುಷ್ಪಗಳನ್ನು ಧರಿಸಿರುವ ಹಾಲು ಮತ್ತು ತುಪ್ಪಗಳನ್ನು ಮೆಚ್ಚಿಕೊಳ್ಳುವ ಸರ್ಪಕುಲಾಧಿಪತಿಗೆ ನನ್ನ ಪ್ರಣಾಮಗಳು.

**ನಾಗೇಂದ್ರಂ ಶಂಖಪಾಲಂ ಕಪಿಲಮಜಗರಂ ವಾಸುಕಿಂ ಪದ್ಮನಾಗಂ ।**
**ಕಾಳಿಂಗಂ ಕದ್ರುಪುತ್ರಂ ಸುವಿಷಧರಂ ಮಹಾಕಾಲೀಯಂ ಧಾರ್ತರಾಷ್ಟ್ರಂ ॥**

**ಸೌರಾಷ್ಟ್ರಂ ಬ್ರಹ್ಮಪುತ್ರಂ ಸುತಲಗತಮಧಃಸ್ವರ್ಗಗಂ ವ್ಯೋಮಸಂಸ್ಥಂ ।**
**ಭೂಮಿಸ್ಥಂ ತಕ್ಷಕಾಖ್ಯಂ ಹರಿವರಶಯನಂ ಶೇಷರಾಜಂ ನಮಾಮಿ ॥2॥**

ಭಾವಾರ್ಥ - ನಾಗಗಳ ಒಡೆಯನಿಗೂ, ಶಂಖಪಾಲನಿಗೂ, ಕಪಿಲನಿಗೂ, ಅಜಗರನಿಗೂ, ವಾಸುಕಿಗೂ, ಪದ್ಮವೆಂಬ ಹೆಸರಿನ ನಾಗನಿಗೂ, ಕದ್ರುತನಯನಾದ ಕಾಳಿಂಗನಿಗೂ, ವಿಷವನ್ನು ಧರಿಸಿರುವ ಕಾಲಿಯನಿಗೂ, ಧಾರ್ತರಾಷ್ಟ್ರನಿಗೂ, ಬ್ರಹ್ಮಪುತ್ರನಾದ ಸೌರಾಷ್ಟ್ರನಿಗೂ, ಪಾತಾಳ, ಸ್ವರ್ಗ, ಅಂತರಿಕ್ಷ ಮತ್ತು ಭೂಮಿಯಲ್ಲಿರುವ ನಾಗಾದಿಗಳಿಗೂ, ತಕ್ಷಕನಿಗೂ, ಹಾಗೆಯೇ ಹರಿಯ ಹಾಸಿಗೆಯಾಗಿರುವ ಶೇಷನನಿಗೂ ನನ್ನ ಪ್ರಣಾಮಗಳು.

**ಧ್ಯಾಯೇಭ್ರೀ ನಾಗರಾಜಂ ನತದುರಿತ ಹರಂ ಮೃತ್ಯುದಾರಿದ್ರ್ಯನಾಶಂ ।**
**ಸಂಪೂರ್ಣಾನಂದರೂಪಂ ಸುಮಧುರ ವಚನಂ ಸರ್ವ ಸೌಭಾಗ್ಯದಂ ತಂ ॥**

**ಭಕ್ತೈಃ ಸಂಸೇವ್ಯಮಾನಂ ಸಕಲ ಸುಖಕರಂ ಆಯುರಾರೋಗ್ಯಭಾಗ್ಯಂ ।**
**ದತ್ವಾ ಸಂಪತ್ಸಮೃದ್ಧಿಮಮಿತ ಫಲಮಿಹಾನಂತ ರೂಪಂ ನಮಾಮಿ ॥3॥**

ಭಾವಾರ್ಥ - ಧ್ಯಾನಿಸಿದವರ ದುರಿತಗಳನ್ನು ಪರಿಹರಿಸುವ, ದಾರಿದ್ರ್ಯ ಹಾಗೂ ಮೃತ್ಯುವನ್ನು ನಿವಾರಿಸುವ, ಪರಿಪೂರ್ಣಾನಂದದಾಯಕನಾಗಿರುವ, ಮಧುರ ಮಾತುಗಳುಳ್ಳ, ಸರ್ವಸೌಭಾಗ್ಯದಾಯಕನಾಗಿರುವ, ಭಕ್ತರ ಸೇವೆಯನ್ನು ಸ್ವೀಕರಿಸುವ, ಸಮಸ್ತ ಸುಖದಾಯಕನಾದ, ಆಯುರಾರೋಗ್ಯಾದಿಭಾಗ್ಯದಾಯಕನಾಗಿ

ಸಂಪತ್ಸಮೃದ್ಧಿಯನ್ನು ಕರುಣಿಸುವ, ಅಪರಿಮಿತ ಫಲದಾಯಕನಾದ ಅನಂತ ಸ್ವರೂಪನಾದ ಶ್ರೀನಾಗರಾಜನಿಗೆ ನನ್ನ ಪ್ರಣಾಮಗಳು.

**ಫಣಾಷ್ಟಶತ ಶೇಖರಂ ಧೃತಸುವರ್ಣ ಪುಂಜಪ್ರಭಂ ।**
**ಸವಜ್ರ ವರಭೂಷಣಂ ನವಸರೋಜ ರಕ್ತೇಕ್ಷಣಂ ॥**

**ಸುವರ್ಣ ಮುಕುಟೋಜ್ವಲಂ ವಾಂಛಿತಾರ್ಥಪ್ರದಂ ।**
**ನಮಾಮಿ ಶಿರಸಾ ಸುರಾಸುರ ನಮಸ್ಕೃತಂ ವಾಸುಕಿಂ ॥4॥**

ಭಾವಾರ್ಥ - ಎಂಟುನೂರು ಹೆಡೆಗಳನ್ನು ಹೊಂದಿರುವ, ಬಂಗಾರದ ತುಂಡಿನಂತೆ ಶೋಭಿಸುತ್ತಿರುವ, ವಜ್ರಾಭರಣಗಳಿಂದ ಭೂಷಿತನಾಗಿರುವ, ಅರಳಿದ ತಾವರೆಯಂತೆ ವಿಶಾಲವಾದ ಕೆಂಗಣ್ಣುಗಳನ್ನು ಹೊಂದಿರುವ, ಹೊನ್ನಿನ ಕಿರೀಟದಿಂದ ಬೆಳಗುತ್ತಿರುವ, ಸಮಸ್ತ ವಾಂಛಿತಾರ್ಥಗಳನ್ನು ಕರುಣಿಸುವ, ದೇವತೆಗಳಿಂದಲೂ ದಾನವರಿಂದಲೂ ವಂದಿಸಲ್ಪಡುವ ವಾಸುಕಿಗೆ ನನ್ನ ಪ್ರಣಾಮಗಳು.

**ಅನಂತ ಶೀರ್ಷಂ ಜಗದೇಕ ಕುಂಡಲಂ ।**
**ಪೀತಾಂಬರಂ ಧೂಮ್ರ ಸಹಸ್ರ ಲೋಚನಂ ॥**

**ಉದಾರವೀರ್ಯಂ ವಿಷದಂಷ್ಟ್ರ ಕಾನನಂ ।**
**ನಮಾಮ್ಯನಂತಂ ಭುವನೈಕ ನಾಥಂ ॥5॥**

ಭಾವಾರ್ಥ - ನಾಶವಿಲ್ಲಂತಹಾ ಶಿರಸ್ಸುಗಳನ್ನು ಹೊಂದಿರುವ, ಬ್ರಹ್ಮಾಂದವನ್ನು ಕುಂಡಲವನ್ನಾಗಿ ಧರಿಸಿರುವ, ಹಳದಿ ವಸನವನ್ನು ಧರಿಸಿದ, ಕಂದುಬಣ್ಣದ ಸಾವಿರಾರು ಕಣ್ಣುಗಳನ್ನು ಹೊಂದಿದ, ಬಹು ಶಕ್ತಿಯುತನಾಗಿರುವ, ಲೋಕದೊಡೆಯನಾದ ಅನಂತನಿಗೆ ನನ್ನ ಪ್ರಣಾಮಗಳು.

**ಸಹಸ್ರ ವಕ್ತ್ರಂ ದ್ವಿ ಸಹಸ್ರ ಜಿಹ್ವಂ ।**
**ಪಿಶಂಗನೇತ್ರಂ ಕಪಿಲಾಂಶುಕಾಢ್ಯಂ ॥**

**ವಿಷಾಯುಧಂ ಪ್ರೋಜ್ವಲ ದಂಷ್ಟ್ರಬಾಹುಂ ।**
**ತಂ ನಾಗರಾಜಂ ಪ್ರಣತೋಽಸ್ಮಿ ನಿತ್ಯಂ ॥6॥**

ಭಾವಾರ್ಥ - ಸಾವಿರ ಮೊಗಗಳಿಂದ ಕೂಡಿ, ಎರಡು ಸಾವಿರ ನಾಲಿಗೆಗಳನ್ನು ಹೊಂದಿ, ಕಂದುಗೆಂಪು ವರ್ಣದ ಕಣ್ಣುಗಳುಳ್ಳವನಾದ, ಕೆಂಪು ಹಾಗೂ ಹೊಂಬಣ್ಣ ವಸನವಧಾರಿಯಾದ, ಹೊಳೆಯುವ ದಂತಗಳನ್ನೇ ತನ್ನ ಬಾಹುಗಳನ್ನಾಗಿಸಿಕೊಂಡ ಆ ನಾಗರಾಜನಿಗೆ ನನ್ನ ಪ್ರಣಾಮಗಳು.

**ಅನಂತಂ ವಾಸುಕಿಂ ಶೇಷಂ ಪದ್ಮನಾಭಂ ಚ ಕಂಬಲಂ ।**
**ಶಂಖಪಾಲಂ ಧಾರ್ತರಾಷ್ಟ್ರಂ ತಕ್ಷಕಂ ಕಾಲಿಯಂ ತಥಾ ॥**

**ಏತಾನಿ ನವ ನಾಗಾನಿ ನಾಗಾನಾಂ ಚ ಮಹಾತ್ಮನಾಂ ।**
**ಸಾಯಂಕಾಲೇ ಪಠೇನ್ನಿತ್ಯಂ ಪ್ರಾತಃಕಾಲೇ ವಿಶೇಷತಃ।**
**ತಸ್ಮೈ ವಿಷಭಯಂ ನಾಸ್ತಿ ಸರ್ವತ್ರ ವಿಜಯೀ ಭವೇತ್ ॥7॥**

ಭಾವಾರ್ಥ - ಅನಂತ, ವಾಸುಕಿ, ಶೇಷ, ಪದ್ಮ, ಕಂಬಲ, ಶಂಖಪಾಲ, ದೃತರಾಷ್ಟ್ರ, ತಕ್ಷಕ, ಹಾಗೂ ಕಾಲಿಯ ಎಂಬೀ ಒಂಭತ್ತು ಹೆಸರುಗಳು ಮಹಾತ್ಮೆಯುಳ್ಳವುಗಳಾಗಿದ್ದು ಇವುಗಳನ್ನು ಸಂಜೆ ಮತ್ತು ಬೆಳಿಗ್ಗೆ ಅನುದಿನವೂ ವಿಶೇಷವಾಗಿ ಪಠನೆ ಮಾಡುವವರಿಗೆ ಯಾವುದೇ ವಿಷಭಯವಿರುವುದಿಲ್ಲ. ಅಲ್ಲದೆ ಅಂತಹವರು ಎಲ್ಲೆಡೆಗಳಲ್ಲೂ ಜಯಶಾಲಿಗಳಾಗುವರು.

**ಶೇಷೋ ನಿಃಶೇಷಕರ್ತಾ ಸ್ಯಾಜ್ಜಾಡ್ಯ ದಾರಿದ್ರ್ಯ ಹೃದ್ರುಜಾಂ ।**
**ತಕ್ಷಕೋ ವಿಘ್ನಹರ್ತಾಸ್ಯಾದನಂತೋಽಭೀಷ್ಟದಾಯಕಃ ॥**

**ವಾಸುಕಿರ್ವಸುದಾಯೀ ಸ್ಯಾಚ್ಛಂಖಪಾಲಃ ಸುಕೀರ್ತಿದಃ ।**
**ಮಹಾಪದ್ಮಃ ಶಾಂತಿ ಕಾಂತಿ ತುಷ್ಟಿ ಪುಷ್ಟಿ ದೃತಿಪ್ರದಃ ॥8॥**

ಭಾವಾರ್ಥ - ಮಹಾಶೇಷನು ಜಡತ್ವವನ್ನೂ, ಬಡತನವನ್ನೂ, ಹೃದ್ರೋಗವನ್ನೂ ಸಂಪೂರ್ಣವಾಗಿ ಪರಿಹರಿಸುತ್ತಾನೆ. ತಕ್ಷಕನು ಅಡ್ಡಿ ಆತಂಕಗಳನ್ನು

ದೂರೀಕರಿಸುವನು. ಅನಂತನು ಅಭೀಷ್ಟಗಳನ್ನು ನೆರವೇರಿಸುವನು. ವಾಸುಕಿಯು ಸಂಪತ್ತನ್ನು ಕರುಣಿಸುವನು. ಶಂಖಪಾಲನು ಸತ್ಕೀರ್ತಿಯನ್ನು ಒದಗಿಸುವನು. ಮಹಾಪದ್ಮನೆಂಬ ನಾಗನು ಮನಸ್ಸಿಗೆ ಶಾಂತಿಯನ್ನೂ ಸಂತೋಷವನ್ನೂ ದೈರ್ಯವನ್ನೂ ಕರುಣಿಸುವನು.

**ಕಂಬಲಂ ಕಷ್ಟಹಾರೀಸ್ಯಾತ್ ಕರ್ಕೋಟಂ ಕ್ಷುದ್ರರೋಗ ಹೃತ್ ।**
**ಆರೋಗ್ಯಂ ಚ ಚಿರಾಯುಶ್ಚ ಚಿತ್ತ ಶುದ್ಧಿಂ ಗುರುಷ್ವಪಿ ॥**

**ದೈವೇ ಧರ್ಮೇ ಸದಾಚಾರೇ ಸತ್ಯೇ ವೈ ಪುಣ್ಯಕರ್ಮಣಿ ।**
**ಪ್ರಯಚ್ಛ ನಿರ್ಮಲಾಂ ಶ್ರದ್ಧಾಂ ದಯಯಾ ಪನ್ನಗಾಧಿಪ ॥9॥**

ಭಾವಾರ್ಥ - ಕಂಬಲನೆಂಬ ಸರ್ಪನು ಕಷ್ಟವನ್ನು ಪಹರಿಸುವನು. ಕರ್ಕೋಟಕನು ಕೆಟ್ಟ ಕಾಯಿಲೆಗಳನ್ನು ಗುಣಪಡಿಸಿ ಆರೋಗ್ಯವನ್ನು ಕರುಣಿಸುವನು. ಹೇ ನಾಗರಾಜನೇ,ನನ್ನಲ್ಲಿ ಕರುಣೆಯುಳ್ಳವನಾಗಿ ಆರೋಗ್ಯವನ್ನೂ, ಅಧಿಕ ಆಯುಸ್ಸನ್ನೂ, ಪರಿಶುದ್ಧವಾದ ಮನವನ್ನೂ ದೇವರಲ್ಲಿ ಧರ್ಮದಲ್ಲಿ ಸದಾಚಾರದಲ್ಲಿ ಗುರುಹಿರಿಯರಲ್ಲಿ, ಸತ್ಯದಲ್ಲಿ ಮತ್ತು ಪುಣ್ಯಕರವೆನಿಸುವ ಸತ್ಕರ್ಮಗಳ ಆಚರಣೆಯಲ್ಲಿ ಸ್ವಚ್ಚವಾಗಿರುವಂತಹಾ ಶ್ರದ್ಧೆಯನ್ನು ನನಗೆ ದಯಪಾಲಿಸು ಸ್ವಾಮಿಯೇ.

॥ ಇತಿ ಶ್ರೀ ನಾಗದೇವತಾ ಸ್ತುತಿ ಸ್ತೋತ್ರಂ ಸಂಪೂರ್ಣಂ ॥

## 13.10 ಮಹಾಭಾರತ ಸಾರ ಸರ್ವಸ್ವ

**ಮಹರ್ಷಿರ್ಭಗವಾನ್ ವ್ಯಾಸಃಕೃತ್ವೇಮಾಂ ಸಂಹಿತಾಂ ಪುರಾ ।**
**ಶ್ಲೋಕೈಶ್ಚತುರ್ಭಿರ್ಧರ್ಮಾತ್ಮಾಪುತ್ರಮಧ್ಯಾಪಯಚ್ಛುಕಂ ॥1॥**

ಭಾವಾರ್ಥ - ಮಹರ್ಷಿಗಳೂ ಧರ್ಮಾತ್ಮರೂ ಆದ ಪೂಜ್ಯ ಬಾದರಾಯಣರು [=ವೇದವ್ಯಾಸರು] ಒಂದು ಲಕ್ಷಶ್ಲೋಕಗಳುಳ್ಳ ಮಹಾಭಾರತವನ್ನು ರಚಿಸಿ ಅದರ ಸಾರ ಸರ್ವಸ್ವವನ್ನು ತನ್ನ ಪುತ್ರನಾದ ಶುಕ ಮುನಿಗೆ ಕೇವಲ ನಾಲ್ಕು ಶ್ಲೋಕಗಳ ಮುಖೇನ ಉಪದೇಶಿಸಿದರು.

**ಮಾತಾಪಿತೃ ಸಹಸ್ರಾಣಿ ಪುತ್ರದಾರ ಶತಾನಿ ಚ ।**
**ಸಂಸಾರೇಷ್ವನುಭೂತಾನಿ ಯಾಂತಿ ಯಾಸ್ಯಂತಿ ಚಾಪರೇ ॥2॥**

ಭಾವಾರ್ಥ - ಹುಟ್ಟುಸಾವುಗಳುಳ್ಳ ಈ ಸಂಸಾರ ಚಕ್ರದಲ್ಲಿ ಒಬ್ಬ ಜೀವಿಗೆ ಸಹಸ್ರಾರು ತಂದೆ ತಾಯಂದಿರು, ನೂರಾರು ಪತ್ನಿಯರು, ಮಕ್ಕಳು, ಈಗಾಗಲೇ ಆಗಿ ಹೋಗಿದ್ದಾರೆ. ಈಗಲೂ ಇದ್ದಾರೆ. ಮುಂದೆಯೂ ಆಗಲಿದ್ದಾರೆ.

**ಹರ್ಷಸ್ಥಾನ ಸಹಸ್ರಾಣಿ ಭಯಸ್ಥಾನ ಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಂ ॥3॥**

ಭಾವಾರ್ಥ - ಸಂತಸಕ್ಕೆ ಕಾರಣೀಭೂತವಾಗುವ ಸಾವಿರಾರು ಕ್ಷಣಗಳೂ ಭೀತಿಗೆ ಒಳಗಾಗಬೇಕಾದ ನೂರಾರು ಸಂದರ್ಭಗಳೂ ಅನುದಿನವೂ ಮೂಢನಿಗೆ ಎದುರಾಗುವವು. ಆದರೆ ಜ್ಞಾನಿಗಳು ಸುಖಕ್ಕೆ ಹಿಗ್ಗುವುದಿಲ್ಲ,ದುಃಖಕ್ಕೆ ಕುಗ್ಗುವುದೂ ಇಲ್ಲ.

**ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।**
**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥4॥**

ಭಾವಾರ್ಥ - [ಬಾದರಾಯಣರು ಶುಕ ಮುನಿಗೆ ಹೇಳುತ್ತಿದ್ದಾರೆ] ನನ್ನೆರಡೂ ಹಸ್ತಗಳನ್ನು ಮೇಲಕ್ಕೆತ್ತಿ ಆರ್ಭಟಿಸಿ ಹೇಳುತ್ತಿರುವೆನಾದರೂ ಯಾವಾತನೂ ನನ್ನ ಮಾತನ್ನು ಕೇಳುತ್ತಿಲ್ಲವಲ್ಲಾ! ಧರ್ಮ ಅಂದರೆ ಸದಾಚಾರದಿಂದಲೇ ಅರ್ಥ ಅಂದರೆ ವಸ್ತುಗಳು, ಸಂಪತ್ತು ಇತ್ಯಾದಿಗಳೂ ಕಾಮ ಅಂದರೆ ಬಯಕೆಗಳೂ ಫಲಿಸುತ್ತವೆ. ಹೀಗಿರುವಾಗ ಅಂತಹಾ ಒಳ್ಳೆಯ ಸದಾಚಾರ[ಧರ್ಮ]ವನ್ನು ಯಾಕೆ ಯಾರೂ ಅನುಸರಿಸುತ್ತಿಲ್ಲ?

**ನ ಜಾತು ಕಾಮಾನ್ನಭಯಾನ್ನ ಲೋಭಾದ್ ।**
**ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ ॥**

**ಧರ್ಮೋ ನಿತ್ಯಃ ಸುಖದುಃಖೇತ್ವ ನಿತ್ಯೇ ।**
**ಜೀವೋ ನಿತ್ಯೋ ಹೇತುರಸ್ಯತ್ವ ನಿತ್ಯಃ ॥5॥**

ಭಾವಾರ್ಥ - ಯಾವತ್ತೂ ನಮ್ಮ ಆಕಾಂಕ್ಷೆಗಳ ಕಾರಣದಿಂದಾಗಿ ಸಂಕಷ್ಟಗಳು ಎದುರಾಗಬಹುದೆಂಬ ಭೀತಿಯಿಂದ, ದುಡಿಯದೆ ಲಾಭ ಪಡೆಯಬೇಕೆಂಬ ಹುಚ್ಚು ಹಂಬಲದ ಕಾರಣದಿಂದ ಅಥವಾ ಜೀವವನ್ನು ತ್ಯಾಗ ಮಾಡಬೇಕಾದ ಕ್ಷಣಗಳು ಬಂದೊದಗಿದರೂ ಧರ್ಮವನ್ನೆಂದೂ ಬಿಡಲೇ ಬಾರದು. ಧರ್ಮವು ಅವಿನಾಶಿ. ಸುಖ-ದುಃಖಗಳು ತಾತ್ಕಾಲಿಕವಾದುದು. ಆತ್ಮವು ಶಾಶ್ವತವಾದುದು. ಹುಟ್ಟು ಸಾವುಗಳು ಅಶಾಶ್ವತವಾದವು.

**ಇಮಾಂ ಭಾರತ ಸಾವಿತ್ರೀಂ ಪ್ರತಃರುತ್ಥಾಯ ಯಃ ಪಠೇತ್ ।**
**ಸ ಭಾರತ ಫಲಂ ಪ್ರಾಪ್ಯ ಪರಂ ಬ್ರಹ್ಮಾಭಿ ಗಚ್ಛತಿ ॥6॥**

ಭಾವಾರ್ಥ - ಗಾಯತ್ರೀ ಮಂತ್ರ ಸಮಾನವಾದ ಈ ಭಾರತ ಸಾರ ಸರ್ವಸ್ವವನ್ನು ಅರ್ಥವನ್ನು ಅರಿತುಕೊಂಡು ಅನುದಿನವೂ ಪ್ರಾತಃಕಾಲದಲ್ಲಿ ಎದ್ದು ಅಂತರ್ಬಹಿರ್ಶುದ್ಧನಾಗಿಪಠಿಸುವವನು ಸಮಗ್ರ ಭಾರತವನ್ನು ಪಾರಾಯಣ ಮಾಡಿದ ಫಲವನ್ನು ಪಡೆದು ಬ್ರಹ್ಮಲೋಕವನ್ನು ಸೇರಿಕೊಳ್ಳುವನು.

**ಯೋ ಗೋ ಶತಂ ಕನಕ ಶೃಂಗಮಯಂ ದದಾತಿ ।**
**ವಿಪ್ರಾಯ ವೇದ ವಿದುಷೇ ಚ ಬಹು ಶ್ರುತಾಯ ॥**

**ಪುಣ್ಯಾಂ ಚ ಭಾರತ ಕಥಾಂ ಶೃಣುಯಚ್ಚ ನಿತ್ಯಂ ।**
**ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯಚೈವ ॥7॥**

ಭಾವಾರ್ಥ - ಬಂಗಾರದ ಕವಚಗಳಿಂದ ಕೋಡುಗಳನ್ನು ಅಲಂಕರಿಸಿದ ನೂರು ಗೋವುಗಳನ್ನು ವೇದಾಧ್ಯಯನ ಸಂಪನ್ನರಾದ ವಿಪ್ರೋತ್ತಮರಿಗೆ ದಾನ ಮಾಡುವವ ಹಾಗೂ ಅನುದಿನವೂ ಪುಣ್ಯದಾಯಕವಾದ ಮಹಾಭಾರತದ ಕಥೆಯನ್ನು ಕೇಳುವವ ಸಮಾನವಾದ ಫಲವನ್ನು ಪಡೆಯುವರು.

॥ ಇತಿ ಮಹಾಭಾರತ ಸಾರ ಸರ್ವಸ್ವಂ ಸಂಪೂರ್ಣಂ ॥

## 13.11 ಶ್ರೀ ಪರಾಪೂಜಾ ಸ್ತೋತ್ರಂ

**ಪೂರ್ಣಸ್ಯಾವಾಹನಂ ಕುತ್ರ ಸರ್ವಾಧಾರಸ್ಯ ಚಾಸನಂ ।**
**ಸ್ವಚ್ಛಸ್ಯ ಪಾದ್ಯಮರ್ಘ್ಯಂ ಚ ಶುದ್ಧಸ್ಯಾಚಮನಂ ಕುತಃ ॥1॥**

ಭಾವಾರ್ಥ - ಸಮಗ್ರವೂ ಆಗಿರುವಾತಂಗೆ ಆವಾಹನೆ ಮಾಡಲು ಎಲ್ಲಿದೆ ನೆಲೆ? ಸಮಸ್ತಾಧಾರನಾಗಿರುವಾತಂಗೆ ಆಸನವನ್ನೆಲ್ಲಿ ಕಲ್ಪಿಸಲಿ? ನಿರ್ಮಲನಾಗಿರುವಾತಂಗೆ ಪಾದ್ಯ ಹಾಗೂ ಅರ್ಘ್ಯವನ್ನೆಂತು ಕೊಡಲಿ? ಪರಿಶುದ್ಧನಾಗಿರುವಾತಂಗೆ ಆಚಮನವನ್ನೆಂತು ನೀಡಲಿ?

**ನಿರ್ಮಲಸ್ಯ ಕುತಃ ಸ್ನಾನಂ ವಸ್ತ್ರಂ ವಿಶ್ವೋದರಸ್ಯ ಚ ।**
**ನಿರಾಲಂಬಸ್ಯೋಪವೀತಂ ಪುಷ್ಪಂ ನಿರ್ವಾಸನಸ್ಯ ಚ ॥2॥**

ಭಾವಾರ್ಥ - ಹೊಲಸಿಲ್ಲದೆ ಸ್ವಚ್ಛವಾಗಿರುವಾತಂಗೆ ಸ್ನಾನದ ಅಗತ್ಯವಾದರೂ ಏನಿದೆ?ಬ್ರಹ್ಮಾಂಡವನ್ನೇ ಧರಿಸಿರುವಾತಂಗೆ ವಸನದ ಅವಶ್ಯಕತೆಯಾದರೂ ಏನಿದೆ?ಆಧಾರವೇ ಇಲ್ಲದವನಿಗೆ ಜನಿವಾರದಿಂದೇನು ಪ್ರಯೋಜನ? ವಾಸನಾರಹಿತನಿಗೆ ಪುಷ್ಪಗಳಿಂದೇನು ಪ್ರಯೋಜನ?

**ನಿರ್ಲೇಪಸ್ಯ ಕುತೋ ಗಂಧೋ ರಮ್ಯಸ್ಯಾಭರಣಂ ಕುತಃ ।**
**ನಿತ್ಯ ತೃಪ್ತಸ್ಯ ನೈವೇದ್ಯಸ್ತಾಂಬೂಲಂ ಚ ಕುತೋ ವಿಭೋಃ ॥3॥**

ಭಾವಾರ್ಥ - ಲೇಪರಹಿತನಾಗಿರುವಾತಂಗೆ ಗಂಧವನ್ನು ಲೇಪಿಸುವುದೆಂತು? ಯಾವಾತನು ಮನೋಹರನಾಗಿರುವನೋ ಅವನಿಗೆ ಆಭರಣಗಳಿಂದೇನು ಲಾಭ?ಅನುದಿನವೂ ತೃಪ್ತನಾಗಿರುವ ಪರಮಾತ್ಮಂಗೆ ನೈವೇದ್ಯ-ತಾಂಬೂಲಾದಿಗಳನ್ನು ಕೊಡುವುದಾದರೂ ಹೇಗೆ?

**ಪ್ರದಕ್ಷಿಣಾಹ್ಯನಂತಸ್ಯ ಹ್ಯದ್ವಯಸ್ಯ ಕುತೋ ನತಿಃ ।**
**ವೇದವಾಕ್ಯೈರವೇದ್ಯಸ್ಯ ಕುತಃ ಸ್ತೋತ್ರಂ ವಿಧೀಯತೇ ॥4॥**

ಭಾವಾರ್ಥ - ಅಂತ್ಯವೇ ಇಲ್ಲದಾಗಿರುವಾತಂಗೆ ಪ್ರದಕ್ಷಿಣೆಯನ್ನು ಮಾಡುವುದಾರೂ ಎಂತು?ಎರಡಿಲ್ಲದ ಅಭೇಧನಿಗೆ ವಂದಿಸುವುದಾದರೂ ಹೇಗೆ?ವೇದ ಶಾಸ್ತ್ರಗಳಿಂದ ಹೊಂದಲಸಾಧ್ಯನಾಗಿರುವಾತನನ್ನು ಸ್ತುತಿಸುವುದಾದರೂ ಎಂತು?

**ಸ್ವಯಂಪ್ರಕಾಶಮಾನಸ್ಯ ಕುತೋ ನಿರಾಜನಂ ವಿಭೋಃ ।**
**ಅಂತರ್ಬಹಿಶ್ಚ ಪೂರ್ಣಸ್ಯ ಕಥಂ ಉದ್ವಾಸನಂ ಭವೇತ್ ॥5॥**

ಭಾವಾರ್ಥ - ಸ್ವಯಂಪ್ರಭೆಯುಳ್ಳಾತಂಗೆ ಮಂಗಳಾರತಿ ಎತ್ತುವುದಾದರೂ ಹೇಗೆ?ಒಳಗೂ ಹೊರಗೂ ಸಮಗ್ರವೇ ಆಗಿರುವಾತನನ್ನು ಬೀಳ್ಕೊಡುವುದಾರೂ ಎಂತು?

**ಏವಮೇವ ಪರಾಪೂಜಾ ಸರ್ವಾವಸ್ಥಾಸು ಸರ್ವದಾ ।**
**ಏಕಬುದ್ಧ್ಯಾತು ದೇವೇಶೇ ವಿಧೇಯಾ ಬ್ರಹ್ಮವಿತ್ತಮೈಃ ॥6॥**

ಭಾವಾರ್ಥ - ಈ ಪ್ರಕಾರವಾಗಿ ಅನುದಿನವೂ ಸಮಸ್ತ ಅವಸ್ಥೆಗಳಲ್ಲೂ ಉತ್ಕೃಷ್ಟರಾಗಿರುವ ಬ್ರಹ್ಮಜ್ಞಾನಿಗಳು ಒಂದೇ ಮನಸ್ಸಿನಿಂದ ದೇವಾಧಿದೇವನ ಪರಾಪೂಜೆಯನ್ನು ಮಾಡಬೇಕು.

॥ ಇತಿ ಶ್ರೀ ಪರಾಪೂಜಾ ಸ್ತೋತ್ರಂ ಸಂಪೂರ್ಣಂ ॥

## 13.12 ಬ್ರಹ್ಮ ಸ್ತೋತ್ರಂ

**ಓಂ ನಮಸ್ತೇ ಸತೇ ಸರ್ವಲೋಕಾಶ್ರಯಾಯ ನಮಸ್ತೇ ಚಿತೇ ವಿಶ್ವರೂಪಾತ್ಮಕಾಯ ।**
**ನಮೋಽದ್ವೈತತತ್ವಾಯ ಮುಕ್ತಿಪ್ರದಾಯ ನಮೋ ಬ್ರಹ್ಮಣೇ ವ್ಯಾಪಿನೇ ನಿರ್ಗುಣಾಯ ॥1॥**

ಭವಾರ್ಥಃ- ಓಂ!ಸಮಸ್ತ ಲೋಕಗಳಿಗೂ ಆಶ್ರಯವಾಗಿರುವ ನೈಜ ಜ್ಞಾನಕ್ಕೆ ಪ್ರಣಾಮಗಳು. ಬ್ರಹ್ಮಾಂಡಸ್ವರೂಪವಾಗಿರುವ ಚೇತನಾರೂಪಕ್ಕೆ ಪ್ರಣಾಮಗಳು. ಮುಕ್ತಿದಾಯಕವಾಗಿರುವ ಅದ್ವೈತ ತತ್ವಕ್ಕಿದೋ ಪ್ರಣಾಮಗಳು. ಸರ್ವತ್ರ ವ್ಯಾಪಿಯಾಗಿರುವ ನಿರಾಕಾರ ಬ್ರಹ್ಮನಿಗೆ ಪ್ರಣಾಮಗಳು.

**ತ್ವಮೇಕಂ ಶರಣ್ಯಂ ತ್ವಮೇಕಂ ವರೇಣ್ಯಂ ತ್ವಮೇಕಂ ಜಗತ್ಕಾರಣಂ ವಿಶ್ವರೂಪಂ ।**
**ತ್ವಮೇಕಂ ಜಗತ್ಕರ್ತೃಪಾತೃಪ್ರಹರ್ತೃ ತ್ವಮೇಕಂ ಪರಂ ನಿಷ್ಕಲಂ ನಿರ್ವಿಕಲ್ಪಂ ॥2॥**

ಭಾವಾರ್ಥ - ನೀನೊರ್ವನೇ ಭಕ್ತರಿಗೆ ಏಕಮಾತ್ರ ಆಶ್ರಯ ತಾಣವಾಗಿರುವವನು. ನೀನೊರ್ವನೇ ಅವರು ಬಯಸುವಂತಹಾ ಒಡವೆ. ನೀನೊರ್ವನೇ ಪ್ರಪಂಚಕ್ಕೆ ಏಕಮಾತ್ರ ನಿಮಿತ್ತನು ಮತ್ತು ಬ್ರಹ್ಮಾಂಡಸ್ವರೂಪವು.

**ಭಯಾನಾಂ ಭಯಂ ಭೀಷಣಂ ಭೀಷಣಾನಾಂ ಗತಿಃ ಪ್ರಾಣಿನಾಂ ಪಾವನಂ ಪಾವನಾನಾಂ । ಮಹೋಚ್ಚೈಃ ಪದಾನಾಂ ನಿಯಂತೃ ತ್ವಮೇಕಂ ಪರೇಷಾಂ ಪರಂ ರಕ್ಷಕಂ ರಕ್ಷಕಾಣಾಂ ॥3॥**

ಭಾವಾರ್ಥ - ಜೀವಿಗಳಿಗೆ ನೀನೇ ದಿಕ್ಕು. ಶುದ್ಧೀಕರಿಸುವ ಪದಾರ್ಥಗಳನ್ನು ದೋಷ ರಹಿತಗೊಳಿಸುವಾತನೂ ನೀನೇ. ಅಗ್ರಗಣ್ಯರನ್ನು ವಶದಲ್ಲಿರಿಸಿಕೊಳ್ಳುವವನೂ ನೀನೇ. ಅಗ್ರಗಣ್ಯರಲ್ಲಿ ಅಗ್ರಗಣ್ಯನು ನೀನು. ಪಾಲಕರನ್ನು ಪಾಲಿಸುವಾತನೂ ನೀನೇ.

**ಪರೇಶ ಪ್ರಭೋ ಸರ್ವರೂಪಾವಿನಾಶಿನ್ ಅನಿರ್ದೇಶ್ಯ ಸರ್ವೇಂದ್ರಿಯಾಗಮ್ಯ ಸತ್ಯ ।**
**ಅಚಿಂತ್ಯಾಕ್ಷರ ವ್ಯಾಪಕವ್ಯಕ್ತ ತತ್ವ ಜಗದ್ಭಾಸಕಾಧೀಶ ಪಾಯಾದಪಾಯಾತ್ ॥4॥**

ಭಾವಾರ್ಥ - ಹೇ!ಪರಮಾಧೀಶನೇ, ಒಡೆಯನೇ, ಬ್ರಹ್ಮಾಂಡಸ್ವರೂಪನೇ, ನಾಶರಹಿತನೇ ಅಸ್ಪಷ್ಟನೇ, ಇಂದ್ರಿಯಗಳ ಮೂಲಕ ತಲಪಲು ಅಸಾಧ್ಯವಾದವನೇ, ಸತ್ಯರೂಪಿಯೇ, ಮನಸ್ಸಿಗೆ ನಿಲುಕದವನೇ, ನಾಶವಿಲ್ಲದವನೇ, ವಿಶಾಲವಾಗಿರುವವನೇ, ಅನುಭವ ವೇದ್ಯನೇ, ತತ್ವರೂಪಿಯೇ, ಜಗತ್ತಿಗೆ ಪ್ರಕಟವಾಗುವನೇ, ದೊರೆಯೂ ಆಗಿರುವ ಸ್ವಾಮಿಯೇ, ನಮ್ಮನ್ನು ಅಪಾಯಗಳಿಂದ ರಕ್ಷಿಸುವವನಾಗು.

**ತದೇಕಂ ಸ್ಮರಾಮಸ್ತದೇಕಂ ಭಜಾಮ- ಸ್ತದೇಕಂ ಜಗತ್ಸಾಕ್ಷಿರೂಪಂ ನಮಾಮ ।**
**ಸದೇಕಂ ನಿಧಾನಂ ನಿರಾಲಂಬಮೀಶಂ ಭವಾಂಭೋಧಿಪೋತಂ ಶರಣ್ಯಂ ವ್ರಜಾಮಃ ॥5॥**

ಭಾವಾರ್ಥ - ಆ ಏಕಾಕಿಯನ್ನು ಸ್ಮರಿಸುವೆ. ಅದನ್ನು ಸ್ತುತಿಸುವೆ. ಆ ಏಕಾಕಿಯಾಗಿರುವ ಜಗತ್ತಿನ ಸಾಕ್ಷಿರೂಪಕ್ಕೆ ನಮಿಸುತ್ತೇನೆ. ಸತ್ಯ ಸ್ವರೂಪಿಯೂ, ಏಕಾಕಿಯೂ, ಆಶ್ರಯನೂ, ಆಧಾರರಹಿತನೂ, ಸಾಂಸಾರಿಕ ಸಾಗರವನ್ನು ದಾಟಲು ಹರಿಗೋಲಿನಂತಿರುವಾತನೂ, ಸಂರಕ್ಷಿಸಲು ತಕ್ಕವನೂ ಆಗಿರುವ ಆ ಪರಬ್ರಹ್ಮನಲ್ಲಿ ನಾನು ಶರಣಾಗುವೆನು.

॥ ಇತಿ ಬ್ರಹ್ಮ ಸ್ತೋತ್ರಂ ಸಂಪೂರ್ಣಂ ॥

## 13.13 ಗೋ ಮಾತಾ ಸ್ತೋತ್ರಂ

**ಪೃಷ್ಠೇ ಬ್ರಹ್ಮಾ ಕಂಠೇ ವಿಷ್ಣುಃ ಮುಖೇ ರುದ್ರಃ ಪ್ರತಿಷ್ಠಿತಃ ।**
**ಮಧ್ಯೇ ದೇವಗಣಾಃ ಸರ್ವೇ ರೋಮಕೂಪೇ ಮಹರ್ಷಯಃ ॥1॥**

ಭಾವಾರ್ಥ - ಗೋವುಗಳ ಬೆನ್ನಿನಲ್ಲಿ ಬ್ರಹ್ಮನೂ, ಕುತ್ತಿಗೆಯಲ್ಲಿ ವಿಷ್ಣುವೂ, ಮೊಗದಲ್ಲಿ ಮಹೇಶ್ವರನೂ ಪ್ರತಿಷ್ಠಾಪನೆಯಾಗಿದ್ದಾರೆ. ಮಧ್ಯದಲ್ಲಿ ಸಮಸ್ತ ದೇವಾನು ದೇವತೆಗಳೂ, ರೋಮಕೂಪದಲ್ಲಿ ಮಹರ್ಷಿಗಳೂ ನೆಲೆಯಾಗಿದ್ದಾರೆ.

**ನಾಗಾಃ ಪುಚ್ಛೇ ಖರಾಗ್ರೇಷು ಯೇಚಾಷ್ಟೌ ಕುಲಪರ್ವತಾಃ ।**

**ಮೂತ್ರೇ ಗಂಗಾದಯೋ ನದ್ಯಃ ನೇತ್ರಯೋಃ ಶಶಿಭಾಸ್ಕರೌ ॥2॥**

ಭಾವಾರ್ಥ - ಗೋವುಗಳ ಬಾಲದಲ್ಲಿ ನಾಗದೇವತೆಗಳೂ, ಗೊರಸುಗಳ ತುದಿಯಲ್ಲಿ ಅಷ್ಟ ಕುಲಪರ್ವತಗಳೂ, ಮೂತ್ರದಲ್ಲಿ ಗಂಗಾದಿ ಪವಿತ್ರ ನದಿಗಳೂ, ಕಣ್ಣುಗಳಲ್ಲಿ ರವಿಚಂದ್ರರೂ ನೆಲೆಸಿರುತ್ತಾರೆ.

**ಕರ್ಣಯೋರಶ್ವಿನೌ ವಾಯುಃ ಘ್ರಾಣೇ ಲಕ್ಷ್ಮೀಶ್ಚ ಗೋಮಯೇ ।**
**ಯಸ್ಯಾ ಸ್ತನೇಷು ವೇದಾಃ ಸ್ಯುಃ ಸಾ ಧೇನುರ್ವರದಾಸ್ತುಮೇ ॥3॥**

ಭಾವಾರ್ಥ - ಹಸುಗಳ ಕಿವಿಗಳಲ್ಲಿ ಅಶ್ವಿನಿ ದೇವತೆಗಳೂ, ಮೂಗಿನಲ್ಲಿ ವಾಯು ದೇವತೆಯೂ, ಸೆಗಣಿಯಲ್ಲಿ ಲಕ್ಷ್ಮಿಯೂ, ಕೆಚ್ಚಲಿನಲ್ಲಿ ಚತುರ್ವೇದಗಳೂ ವಾಸವಾಗಿದ್ದು ಅಂತಹಾ ಕಾಮಧೇನುವು ನನಗೆ ವರವನ್ನು ಕರುಣಿಸಲಿ.

**ಸರ್ವದೇವ ಮಯೇ ದೇವಿ ಸರ್ವದೇವೈರಲಂಕೃತೇ ।**
**ಮತರ್ಮಮಾಭಿಲಷಿತಂ ಸಫಲಂ ಕುರು ನಂದಿನಿ ॥4॥**

ಭಾವಾರ್ಥ - ಈ ರೀತಿಯಾಗಿ ಸರ್ವದೇವಮಯಿಯಾಗಿರುವ ದೇವಿಯೇ, ಎಲ್ಲಾ ದೇವತೆಗಳಿಂದ ನೀನು ಅಲಂಕರಿಸಲ್ಪಟ್ಟವಳಾಗಿರುವೆ. ಗೋಮಾತೆಯೇ! ನನ್ನ ಅಭಿಲಾಷೆಗಳನ್ನು ಈಡೇರಿಸು.

**ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪಾರ್ಶ್ವತಃ ।**
**ಗಾವೋ ಮೇ ಪೃಷ್ಠತಃ ಸಂತು ಗವಾಂ ಮಧ್ಯೇ ವಸಾಮ್ಯಹಂ ॥3॥**

ಭಾವಾರ್ಥ - ಹಸುಗಳು ನನ್ನ ಮುಂದೆ ಹಾಗೂ ಪಕ್ಕದಲ್ಲಿ ಮತ್ತು ಹಿಂಬದಿಯಲ್ಲಿ ಇರಲಿ. ಆರೀತಿಯಾಗಿರುವ ಹಸುಗಳ ಮಧ್ಯೆ ನನ್ನ ವಾಸವಾಗಿರಲಿ.

**ಗಾಂ ದೃಷ್ಟ್ವಾ ಚ ನಮಸ್ಕೃತ್ವಾ ಚೈವ ಪ್ರದಕ್ಷಿಣಾಂ ।**
**ಪ್ರದಕ್ಷಣೀಕೃತಾ ತೇನ ಸಪ್ತ ದ್ವೀಪಾ ವಸುಂಧರಾ ॥6॥**

ಭಾವಾರ್ಥ - ಹಸುಗಳನ್ನು ಕಾಣುತ್ತಾ ನಮಸ್ಕರಿಸುತ್ತಾ ಪ್ರದಕ್ಷಿಣೆ ಮಾಡಿದರೆ ಸಮಸ್ತ ಬ್ರಹ್ಮಾಂಡವನ್ನು ಸುತ್ತಿದ ಫಲವು ಲಭಿಸುತ್ತದೆ.

**ಸರ್ವ ಕಾಮದುಘೇ ದೇವಿ ಸರ್ವ ತೀರ್ಥಾಭಿಷೇಚನೀ ।**
**ಪಾವನೀ ಸುರಭಿಃ ಶ್ರೇಷ್ಠೇ ದೇವಿ ತುಭ್ಯಂ ನಮೋಸ್ತುತೇ ॥7॥**

ಭಾವಾರ್ಥ - ಸಮಸ್ತ ಇಷ್ಟಾರ್ಥಗಳನ್ನು ಕರುಣಿಸುವ, ಸರ್ವತೀರ್ಥಸ್ನಾನದ ಫಲದೊರಕಿಸುವ, ಪಾವನೆಯಾಗಿರುವ ಸುರಭಿ ದೇವಿಯೇ ನಿನಗೆ ನನ್ನ ನಮಸ್ಕಾರಗಳು.

**ಸುರಭಿರ್ವೈಷ್ಣವೀ ಮಾತಾ ಸುರಲೋಕೇ ಪ್ರತಿಷ್ಠಿತಾ ।**
**ಗ್ರಾಸಮುಷ್ಟಿರ್ಮಯಾ ದತ್ತಾ ಸುರಭೇ ಪ್ರತಿಗ್ರಹ್ಯತಾಂ ॥8॥**

ಭಾವಾರ್ಥ - ತಾಯಿ ವೈಷ್ಣವಿಯಾಗಿರುವ ಕಾಮಧೇನುವು ಸುರಲೋಕದಲ್ಲಿ ವಾಸವಾಗಿರುವಳು. ಗೋಮಾತೆ ಕಾಮಧೇನುವೇ! ನಾನು ಕೊಡುತ್ತಿರುವ ಒಂದು ಹಿಡಿ ಆಹಾರವನ್ನು ಸ್ವೀಕರಿಸು ತಾಯೇ.

॥ ಇತಿ ಗೋ ಮಾತಾ ಸ್ತೋತ್ರಂ ಸಂಪೂರ್ಣಂ ॥

----- ****** -----

# 14 ವೇದಾಂತ ಸ್ತೋತ್ರಗಳು

## 14.1 ಚರ್ಪಟ ಪಂಜರಿಕಾ ಸ್ತೋತ್ರಂ (ಭಜ ಗೋವಿಂದಂ)

**ದಿನಮಪಿ ರಜನೀ ಸಾಯಂ ಪ್ರಾತಃ ಶಿಶಿರ ವಸಂತೌ ಪುನರಾಯಾತಃ ।**
**ಕಾಲಃಕ್ರೀಡತಿಗಚ್ಛತ್ಯಾಯಸ್ತದಪಿನ ಮುಂಚತ್ಯಾಶಾವಾಯುಃ ॥**

**ಭಜ ಗೋವಿಂದಂ ಭಜ ಗೋವಿಂದಂ ಗೋವಿಂದಂ ಭಜ ಮೂಢಮತೇ ।**
**ಸಂಪ್ರಾಪ್ತೇ ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ ಡುಕೃಞ್ಕರಣೇ ॥**

ಭಾವಾರ್ಥ - ಇರುಳು-ಹಗಲು, ಸೂರ್ಯೋದಯ, ಸೂರ್ಯಾಸ್ತಗಳು ಹಾಗೆಯೇ ಶಿಶಿರ-ವಸಂತ ಋತುಗಳು ಪುನಃ ಪುನಃ ಬಂದು ಹೋಗುತ್ತವೆ. ಕಾಲ ಅನ್ನೋದು ಆಟ ಆಡುತ್ತಾ ಇರುತ್ತದೆ, ಆಯುಸ್ಸು ನಶಿಸಿ ಹೋಗುತ್ತಾ ಇದೆ. ಆದರೂ ವ್ಯರ್ಥವಾಗಿರುವಂತಹಾ ಆಶೆ ಹೇಳುವಂತಹದು ಬಿಟ್ಟು ಹೋಗುವುದಿಲ್ಲ, ಹೇ! ಮಂದಮತಿಯೇ! ಅಚ್ಯುತ ಸ್ವರೂಪೀ ಗೋವಿಂದನ ಭಜನೆ ಮಾಡು. ಅವಸಾನ ಕಾಲ ಬರುವಾಗ ನಿನ್ನ ವ್ಯಾಕರಣವನ್ನು ರಕ್ಷಣೆ ಮಾಡಲಾರ. ಖಂಡಿತವಾಗಿಯೂ ರಕ್ಷಣೆ ಮಾಡಲಾರ.

**ಅಗ್ರೇ ವಹ್ನಿ ಪೃಷ್ಟೇ ಭಾನೂ ರಾತ್ರೌ ಚಿಬುಕಸಮರ್ಪಿತಜಾನುಃ ।**
**ಕರತಲಭಿಕ್ಷಾ ತರುತಲವಾಸಸ್ತದಪಿ ನ ಮುಂಚತ್ಯಾಪಾಷಃ ॥**

ಭಾವಾರ್ಥ - ಎದುರಿಗೆ ಬೆಂಕಿ, ಹಿಂಬದಿಗೆ ಸೂರ್ಯ, ರಾತ್ರೆ ಮೊಣಕಾಲುಗಳ ನಡುವೆ ಕೊರಳನ್ನು ಇಟ್ಟುಕೊಳ್ಳುವುದು, ಕೈಗಳಲ್ಲಿ ಭಿಕ್ಷೆ ಸ್ವೀಕರಿಸುವುದು, ಮರದ ಅಡಿಯಲ್ಲಿ ವಾಸ - ಹೀಗಿರುವ ಸ್ಥಿತಿಯಲ್ಲಿದ್ದರು ಕೂಡಾ ನಾಶಕ್ಕೆ ಕಾರಣವಾಗಿರುವಂತಹಾ ಆಶಾಪಾಶ [ಆಶೆ ಎನ್ನುವ ಹಗ್ಗ] ಯಾರನ್ನೂ ಬಿಡುವುದಿಲ್ಲ.

**ಯಾವದ್ವಿತ್ತೋಪಾರ್ಜನಸಕ್ತಸ್ತಾವನ್ನಿಜಪರಿವಾರೋ ರಕ್ತಃ ।**
**ಪಶ್ಚಾದ್ಧಾವತಿ ಜರ್ಜರದೇಹೇ ವಾರ್ತಾಂ ಪೃಚ್ಛತಿ ಕೋಪಿ ನ ಗೇಹೇ ॥**

ಭಾವಾರ್ಥ - ಸಂಪತ್ತಿನ ಶೇಖರಣೆ ಆಗುತ್ತಾ ಇರುವಲ್ಲಿಯವರೆಗೆ ನೆಂಟರಿಷ್ಟರುಗಳು ಅವನ ಬಗ್ಗೆ ಆಸಕ್ತಿ ಹೊಂದಿರುತ್ತಾರೆ, ಆಮೇಲೆ ಅವನು ಮುದುಕ ಆದನಾದರೆ ಅವನ ಮನೆಯಲ್ಲಿಯೇ ಅವನನ್ನು ವಿಚಾರಿಸುವವರು ಯಾರೂ ಇರುವುದಿಲ್ಲ.

**ಜಟಿಲೋ ಮುಂಡೀ ಲುಂಚಿತಕೇಶಃ ಕಾಷಾಯಾಂಬರಬಹುಕೃತ ವೇಷಃ ।**
**ಪಶ್ಯನ್ನಪಿ ಚ ನ ಪಶ್ಯತಿ ಮೂಢೋ ಉದರನಿಮಿತ್ತಂ ಬಹುಕೃತ ವೇಷಃ ॥**

ಭಾವಾರ್ಥ - ಜಟೆಯನ್ನು ಧರಿಸುವುದು, ತಲೆ ಬೋಳಿಸುವುದು, ರೋಮಗಳನ್ನು ಕಿತ್ತು ತಗೆಯುವುದು, ಕಾವಿ ವಸ್ತ್ರಗಳನ್ನು ಉಪಯೋಗಿಸುವುದರ ಮೂಲಕ ನಾನಾರೀತಿಯ ವೇಷ ಧರಿಸುವುದು, ಹೀಗೆ ಹೊಟ್ಟೆತುಂಬಿಸಲು ಬೇಕಾಗಿ ಬೇರೆ ಬೇರೆ ವೇಷಂಗಳನ್ನು ಧರಿಸುವ ಅಥವಾ ಧರಿಸಿದ ಬುದ್ಧಿಹೀನ ಸತ್ಯವನ್ನು ಕಂಡರೂ ಕಾಣದ ಹಾಗೆ ಇರುತ್ತಾನೆ.

**ಭಗವದ್ಗೀತಾ ಕಿಂಚಿದಧೀತಾ ಗಂಗಾಜಲಲವಕಣಿಕಾ ಪೀತಾ ।**
**ಸಕೃದಪಿ ಯಸ್ಯ ಮುರಾರಿಸಮರ್ಚಾ ತಸ್ಯ ಯಮಃ ಕಿಂ ಕುರುತೇ ಚರ್ಚಾಂ ॥**

ಭಾವಾರ್ಥ - ಯಾವ ಮನುಷ್ಯ ಭಗವದ್ಗೀತೆಯನ್ನು ಇನಿತಾದರೂ ಓದಿದ್ದಾನೋ, ಗಂಗಾಜಲದ ಒಂದು ಬಿಂದುವಿವನ್ನಾದರೂ ಸೇವನೆ ಮಾಡಿದ್ದಾನೋ, ಆ ಮುರಾರಿಯನ್ನು ಒಂದು ಸಾರಿಯಾದರೂ ಅರ್ಚನೆ ಮಾಡಿದ್ದಾನೋ, ಅಂತಹಾ ಮನುಷ್ಯನನು ಮೃತ್ಯುವಿಗೆ ಏನು ಮಾಡಲು ಸಾಧ್ಯ?

**ಅಂಗಂ ಗಲಿತಂ ಪಲಿತಂ ಮುಂಡಂ ದಶನವಿಹೀನಂ ಜಾತಂ ತುಂಡಂ ।**
**ವೃದ್ಧೋಯಾತಿ ಗೃಹೀತ್ವಾ ದಂಡಂ ತದಪಿ ನ ಮುಂಚತ್ಯಾಶಾಪಿಂಡಂ ॥**

ಭಾವಾರ್ಥ - ಅಂಗಾಂಗಗಳು ಶಕ್ತಿ ಕಳೆದುಕೊಂಡಿದೆ, ತಲೆ ಹಣ್ಣಾಗಿದೆ, ಬಾಯಿಯಲ್ಲಿದ್ದ ಹಲ್ಲುಗಳು ಎಲ್ಲಾ ಉದುರಿಹೋಗಿದೆ, ಹೀಗಿರುವ ಮುದುಕ ತಾನು ಊರುಗೋಲು ಹಿಡಿದು ನಡುಗುತ್ತಾ ಇದ್ದಾನೆ, ಆದರೂ ಆಶೆ ಅವನ ಬಿಡಲೇ ಇಲ್ಲ.

**ಬಾಲಸ್ತಾವತ್ಕ್ರೀಡಾಸಕ್ತಸ್ತರುಣಸ್ತಾವತ್ ತರುಣೀ ರಕ್ತಃ ।**
**ವೃದ್ಧಸ್ತಾವಚ್ಚಿಂತಾಮಗ್ನಃ ಪರಮೇ ಬ್ರಹ್ಮಣೀ ಕೋಽಪಿ ನ ಲಗ್ನಃ ॥**

ಭಾವಾರ್ಥ - ಮಕ್ಕಳು ಯಾವಾಗಲೂ ಆಟೋಟಂಗಳಲ್ಲಿ ಆಸಕ್ತರಾಗಿರುತ್ತಾರೆ, ಯುವಕರು ಯಾವಾಗಲೂ ಯುವತಿಯರ ಬಗ್ಗೆ ಆಸಕ್ತಿ ಹೊಂದಿರುತ್ತಾರೆ, ಮುದುಕರು ಯಾವಾಗಲೂ ಚಿಂತಾಮಗ್ನರಾಗಿರುತ್ತಾರೆ, ಆದರೆ ಆ ಪರಬ್ರಹ್ಮನ ಬಗ್ಗೆ ಯಾರಿಗೂ ಆಸಕ್ತಿ ಇರುವುದಿಲ್ಲ.

**ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀಜಠರೇ ಶಯನಂ ।**
**ಇಹ ಸಂಸಾರೇ ಖಲು ದುಸ್ತಾರೇ ಕೃಪಯಾಪಾರೇ ಪಾಹಿ ಮುರಾರೇ ॥**

ಭಾವಾರ್ಥ - ಹುಟ್ಟು-ಸಾವು, ತಾಯಿಯ ಗರ್ಭಲ್ಲಿ ವಾಸ - ಇವೆಲ್ಲವೂ ಪುನಃಪುನಃ ಬರುತ್ತಾ ಇದೆ. ಆದ ಕಾರಣ ಹೇ! ಮುರಾರಿ! ಕೃಪೆಮಾಡಿ ನನ್ನ ಈ ದುಸ್ತರ ಆಗಿರುವ ಮತ್ತು ಪಾರಾಗುವ ದಾರಿಯೇ ಕಾಣದ ಸಂಸಾರಸಾಗರದಿಂದ ರಕ್ಷಣೆ ಮಾಡಿ ಕಾಪಾಡು.

**ಪುನರಪಿ ರಜನೀ ಪುನರಪಿ ದಿವಸಃಪುನರಪಿ ಪಕ್ಷಃ ಪುನರಪಿ ಮಾಸಃ ।**
**ಪುನರಪ್ಯಯನಂ ಪುನರಪಿ ವರ್ಷಂ ತದಪಿ ನ ಮುಂಚತ್ಯಾಶಾಮರ್ಷಂ ॥**

ಭಾವಾರ್ಥ - ಹಗಲು-ರಾತ್ರೆ, ಪಕ್ಷ-ಮಾಸಗಳು, ಅಯನ-ವರ್ಷಗಳು ಪುನಃಪುನಃ ಬಂದು ಹೋಗುತ್ತಾ ಇರುತ್ತವೆ. ಆದರೂ ಆಶೆಯನ್ನು ಪೂರೈಸಿಗೊಳ್ಳಲು ಬೇಕಾದ ಪ್ರೋತ್ಸಾಹ ಮಾತ್ರಾ ಮನುಷ್ಯನನ್ನು ಬಿಟ್ಟು ಹೋಗುವುದಿಲ್ಲ.

**ವಯಸಿ ಗತೇ ಕಃ ಕಾಮವಿಕಾರಃ ಶುಷ್ಕೇ ನೀರೇ ಕಃ ಕಾಸಾರಃ।**
**ನಷ್ಟೇ ದ್ರವ್ಯೇ ಕಃ ಪರಿವಾರೋ ಜ್ಞಾತೇ ತತ್ವೇಕಃ ಸಂಸಾರಃ ॥**

ಭಾವಾರ್ಥ - ಮುದುಕನಾದ ಮೇಲೆ ಕಾಮವಿಕಾರಗಳು ಎಲ್ಲಿರುತ್ತವೆ? ನೀರು ಬತ್ತಿ ಹೋದ ಮೇಲೆ ಸರೋವರ ಎಲ್ಲಿರುತ್ತದೆ? ಸಂಪತ್ತು ನಷ್ಟ ಆಗಿ ಹೋದಲ್ಲಿ ನೆಂಟರಿಷ್ಟರೆಲ್ಲಿರುತ್ತಾರೆ? ಈ ತತ್ವಂಗಳು ಮನುಷ್ಯನಿಗೆ ಅರ್ಥ ಆದರೆ ಮತ್ತೆ ಸಂಸಾರ ಎಲ್ಲಿರುತ್ತದೆ?

ಭಾವಾರ್ಥ - **ನಾರೀಸ್ತನಭರಣಾಭಿನಿವೇಶಂ ಮಿಥ್ಯಾಮಾಯಾಮೋಹಾವೇಶಂ ।**
**ಏತನ್ಮಾಂಸವಸಾದಿವಿಕಾರಂ ಮನಸಿ ವಿಚಾರಯ ವಾರಂವಾರಂ॥**

ಭಾವಾರ್ಥ - ಹೆಣ್ಣು ಮಕ್ಕಳ ಸ್ಥನಗಳ ಮೇಲಿರುವ ನಿನ್ನ ಕಾಮ ದೃಷ್ಟಿ ಮಿಥ್ಯಾಮೋಹದ ಆವೇಶದಿಂದ ಉತ್ಪತ್ತಿ ಆಗುತ್ತದೆ. ಆ ಸ್ಥನಗಳು ಮಾಂಸ ಮೇದಸ್ಸುಗಳ ಒಂದು ವಿಕಾರ ಸ್ವರೂಪವೇ ಆಗಿದ್ದು. ಹೇ! ಮೂಡನೇ! ಇದನ್ನು ಮನಸ್ಸಿನಲ್ಲಿ ಪುನಃಪುನಃ ವಿಮರ್ಷೆ ಮಾಡು.

**ಕಸ್ತ್ವಂಕೋಹಂ ಕುತಃ ಆಯಾತಃ ಕಾ ಮೇ ಜನನೀ ಕೋ ಮೇ ತಾತಃ ।**
**ಇಹ ಪರಿಭಾವಯ ಸರ್ವಮಸಾರಂ ವಿಶ್ವಂ ತ್ಯಕ್ತ್ವಾ ಸ್ವಪ್ನವಿಕಾರಂ ॥**

ಭಾವಾರ್ಥ - ನೀನಾರು? ಅವನಾರು? ನಾನು ಎಲ್ಲಿಂದ ಬಂದೆ? ನನ್ನ ಅಪ್ಪ ಯಾರು? ನನ್ನ ಅಮ್ಮ ಯಾರು? ಈ ರೀತಿಯಲ್ಲಿ ವಿಮರ್ಷೆ ಮಾಡಿ ಕನಸ್ಸಿನ ಹಾಗಿರುವ, ವಿಕಾರ ಸ್ವರೂಪದಿಂದ ಕೂಡಿರುವ ಈ ಜಗತ್ತನ್ನು ದೂರಮಾಡಿ ಇವೆಲ್ಲವುಗಳೆಲ್ಲವೂ ಸಾರ ರಹಿತವಾಗಿದೆ ಎಂದು ಅರಿತುಕೋ.

**ಗೇಯಂ ಗೀತಾನಾಮಸಹಸ್ರಂ ಧ್ಯೇಯಂ ಶ್ರೀಪತಿರೂಪಮಜಸ್ರಂ ।**
**ನೇಯಂ ಸಜ್ಜನಸಂಗೇ ಚಿತ್ತಂ ದೇಯಂ ದೀನಜನಾಯ ಚ ವಿತ್ತಂ ॥**

ಭಾವಾರ್ಥ - ಭಗವದ್ಗೀತೆ ಮತ್ತು ಸಹಸ್ರನಾಮಂಗಳನ್ನು ಅನುದಿನವೂ ಹಾಡಬೇಕು. ಅಚ್ಯುತ ಸ್ವರೂಪೀ ಶ್ರೀಪತಿಯ ರೂಪವನ್ನು ಎಡೆಬಿಡದೆ ಧ್ಯಾನ ಮಾಡಬೇಕು. ಸಜ್ಜನರ ಸಂಗದಲ್ಲಿ ಮನಸ್ಸನ್ನು ತೊಡಗಿಸಿಕೊಳ್ಳಬೇಕು. ಮತ್ತು ದೀನನಾದವನಿಗೆ ಸಂಪತ್ತಿನ ಸಹಕಾರ ಕೊಡಬೇಕು.

**ಯಾವಜ್ಜೀವೋ ನಿವಸತಿ ದೇಹೇ ಕುಶಲಂ ತಾವತ್ಪೃಚ್ಛತಿ ಗೇಹೇ ।**
**ಗತವತಿ ವಾಯೌ ದೇಹಾಪಾಯೇ ಭಾರ್ಯಾ ಭಿಭ್ಯತಿ ತಸ್ಮಿನ್ಕಾಯೇ ॥**

ಭಾವಾರ್ಥ - ಎಲ್ಲಿಯವರೆಗೆ ಜೀವ ದೇಹದಲ್ಲಿ ವಾಸ ಮಾಡುತ್ತಾ ಇರುತ್ತೋ, ಅಲ್ಲಿಯವರೆಗೂ ಅವನ ಕುಶಲವನ್ನು ಮನೆಯವೆಲ್ಲರೂ ವಿಚಾರಿಸುತ್ತಾರೆ. ಆದರೆ ಯಾವಾಗ ಅವನ ಪ್ರಾಣವಾಯು ಹೊರಬಂದು ದೇಹವನು ತೊರೆದು ಹೋಯಿತೋ ಆಮೇಲೆ ಅವನ ಹೆಂಡತಿ ಕೂಡಾ ಆ ಶರೀರವನ್ನು ನೋಡಿ ಹೆದರಿಗೊಳ್ಳುತ್ತಾಳೆ. ಇದು ವಾಸ್ತವ, ತಿಳಿದುಕೊ.

**ಸುಖತಃ ಕ್ರಿಯತೆ ರಾಮಾಭೋಗಃ ಪಶ್ಚಾದ್ಧಂತ ಶರೀರೇ ರೋಗಃ ।**
**ಯದ್ಯಪಿ ಲೋಕೇ ಮರಣಂ ಶರಣಂ ತದಪಿ ನ ಮುಂಚತಿ ಪಾಪಾಚರಣಂ ॥**

ಭಾವಾರ್ಥ - ಸುಖಪಡೆಯಲು ಬೇಕಾಗಿ ಪುರುಷ ಸ್ತ್ರೀಯರೊಟ್ಟಿಗೆ ಭೋವವನ್ನು ಆಚರಿಸುತ್ತಾನೆ, ತದನಂತರ, ಅಯ್ಯೋ! ಆ ಶರೀರದಲ್ಲಿ ರೋಗಗಳ ಉತ್ಪತ್ತಿ ಆಗುತ್ತದೆ. ಈ ಜಗತ್ತಿನಲ್ಲಿ ಎಲ್ಲರಿಗೂ ಸಾವೇ ಅಂತಿಮ ಗತಿ ಆಗಿದ್ದರೂ ಪಾಪ ಕಾರ್ಯಗಳನ್ನು ಈ ಮನುಷ್ಯರು ಬಿಡುವುದೇ ಇಲ್ಲ. ಇದು ಸೂರ್ಯನ ಬೆಳಕಿನಷ್ಟೇ ವಾಸ್ತವ.

**ರಥ್ಯಾ ಚರ್ಪಟವಿರಚಿತಕಂಥಃ ಪುಣ್ಯಾ ಪುಣ್ಯ ವಿವರ್ಜಿತಪಂಥಃ।**
**ನಾಹಂ ನ ತ್ವಂ ನಾಯಂ ಲೋಕಸ್ತದಪಿ ಕಿಮರ್ಥಂ ಕ್ರಿಯತೇ ಶೋಕಃ ॥**

ಭಾವಾರ್ಥ - ದಾರಿಯಲ್ಲಿ ಸಿಕ್ಕಿದ ಚೂರು ವಸ್ತ್ರವನ್ನೇ ನೀನು ಉಡುಪಾಗಿ ಮಾಡಿಗೊಂಡಿರುವೆ. ನೀನು ಪುಣ್ಯಾಪುಣ್ಯಗಳನ್ನು ದೂರಮಾಡಿರುವೆ. ನಾನಿಲ್ಲ, ನೀನಿಲ್ಲ, ಈ ಪ್ರಪಂಚವೂ ಇಲ್ಲ ಅಂತ ದುಃಖಿಸುತ್ತಾ ಇರುವೆ. ಹೀಗಿದ್ದರೂ ಯಾವುದಕ್ಕೆ ಬೇಕಾಗಿ ಶೋಕಪಡುವೆ? ಹೇಳು.

**ಕುರುತೇ ಗಂಗಾಸಾಗರಗಮನಂ ವ್ರತಪರಿಪಾಲನಮಥವಾ ದಾನಂ ।**
**ಜ್ಞಾನವಿಹೀನಃ ಸರ್ವಮತೇನ ಮುಕ್ತಿರ್ನ ಭವತಿ ಜನ್ಮ ಶತೇನ ॥**

ಭಾವಾರ್ಥ - ಗಂಗಾ ಸಾಗರಕ್ಕೆ ಯಾತ್ರೆ ಮಾಡಲಿ, ಎಷ್ಟೇ ವ್ರತಂಗಳನ್ನು ಆಚರಣೆ ಮಾಡುತ್ತಿರಲಿ, ಬೇಕಾದಷ್ಟು ದಾನ ಧರ್ಮಂಗಳನ್ನು ಮಾಡಲಿ ಇವಾವುದರಿಂದಲೇ ಆಗಲಿ ಜ್ಞಾನ ಇಲ್ಲದ್ದವಗೆ ನೂರು ಜನ್ಮ ಕಳೆದರೂ ಮುಕ್ತಿ ಇಲ್ಲ ಅನ್ನೋದು ವಾಸ್ತವ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಚರ್ಪಟ ಪಂಜರಿಕಾ ಸ್ತೋತ್ರಂ ಸಂಪೂರ್ಣಂ ॥

## 14.2 ದ್ವಾದಶ ಪಂಜರಿಕಾ ಸ್ತೋತ್ರಂ

**ಮೂಢ ಜಹೀಹಿ ಧನಾಗಮ ತೃಷ್ಣಾಂ ಕುರು ಸದ್ಬುಧ್ಧಿಂ ಮನಸಿ ವಿತೃಷ್ಣಾಂ ।**
**ಯಲ್ಲಭಸೇ ನಿಜಕರ್ಮೋಪಾತ್ತಂ ವಿತ್ತಂತೇನ ವಿನೋದಯ ಚಿತ್ತಂ ॥**

ಭಾವಾರ್ಥ - ಹೇ! ಬುಧ್ಧಿಗೇಡಿಯೇ, ಸಂಪತ್ತಿನ ಶೇಖರಣೆಯ ಆಶೆಯನ್ನು ಬಿಡು, ಮನಸ್ಸಿನಲ್ಲಿ ಸದ್ಬುಧ್ಧಿಯನ್ನೂ, ವೈರಾಗ್ಯವನ್ನೂ ಬೆಳೆಸಿಕೊ, ನಿನ್ನ ಕರ್ಮದಿಂದ ಬರುವ ದ್ರವ್ಯದಿಂದ ಮನಸ್ಸಿಗೆ ತೃಪ್ತಿ ತಂದುಕೊ.

**ಅರ್ಥಮನರ್ಥಂ ಭಾವಯ ನಿತ್ಯಂ ನಾಸ್ತಿ ತತಃಸುಖಲೇಶಃ ಸತ್ಯಂ ।**
**ಪುತ್ರಾದಪಿ ಧನಭಾಜಾಂ ಭೀತಿಃ ಸರ್ವತ್ರೈಷಾ ವಿಹಿತಾ ನೀತಿಃ ॥**

ಭಾವಾರ್ಥ - ಯಾವಾಗಲೂ ಸಂಪತ್ತಿನಿಂದ ಅನರ್ಥ/ಅಪಾಯ ತಪ್ಪಿದ್ದಲ್ಲ, ಸತ್ಯವಾಗಿಯೂ ಹೇಳುವೆನು, ಅದರಲ್ಲಿ ಸಾಸಿವೆಯಷ್ಟೂ ಸುಖ ಅನ್ನೋದು ಇಲ್ಲ.

ಸಂಪತ್ತು ತುಂಬಿಕೊಂಡು ಇರುವಂತಹಾ ಶ್ರೀಮಂತರಿಗೆ ಅವರ ಮಕ್ಕಳಿಂದಲೇ ಅಪಾಯದ ಭೀತಿ ತಪ್ಪಿದ್ದಲ್ಲ, ಸರ್ವತ್ರ ನಾವು ಕಾಣಬಹುದಾದ ಸತ್ಯ ಸ್ಥಿತಿಯೇ ಇದಾಗಿದೆ.

**ಕಾ ತೇ ಕಾಂತಾ ಕಸ್ತೇ ಪುತ್ರಃ ಸಂಸಾರೋಯಮತೀವ ವಿಚಿತ್ರಃ ।**
**ಕಸ್ಯ ತ್ವಂ ಕಃ ಕುತ ಆಯಾತ- ಸ್ತತ್ತ್ವಂ ಚಿಂತಯ ಯದಿದಂ ಭ್ರಾತಃ ॥**

ಭಾವಾರ್ಥ - ನಿನ್ನ ಹೆಂಡತಿ ಯಾರು? ಮಗನಾರು? ಈ ಸಂಸಾರ ಅನ್ನೋದು ಅತಿ ವಿಚಿತ್ರವಾಗಿದೆ ನೋಡು, ನೀನು ಸ್ವಲ್ಪ ಆಲೋಚನೆ ಮಾಡಿ ನೋಡು, ನೀನಾರು? ಅವ ಯಾರು? ಎಲ್ಲಿಂದ ಬಂದಿರುವಿ? ಹೇ ಸಹೋದರನೇ ! ಇದರ ಬಗ್ಗೆ ಸರಿಯಾಗಿ, ಸಾವಧಾನವಾಗಿ ಆಲೋಚಿಸಿ ನೋಡು.

**ಮಾ ಕುರು ಧನಜನ ಯೌವನಗರ್ವಂ ಹರತಿ ನಿಮೇಷಾತ್ ಕಾಲಃ ಸರ್ವಂ ।**
**ಮಾಯಾಮದಮಿದಮಖಿಲಂ ಹಿತ್ವಾ ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ ॥**

ಭಾವಾರ್ಥ - ಸಂಪತ್ತು, ಯೌವನ, ಜನಬಲ ಇದೆ ಅಂತ ಗರ್ವ ಪಡಬೇಡಾ. ಕಾಲ ಅನ್ನೋದು ಅವೆಲ್ಲವನ್ನೂ ಕ್ಷಣ ಮಾತ್ರದಲ್ಲಿ ನಾಶ ಮಾಡುತ್ತದೆ. ಆದ ಕಾರಣ ಮಾಯೆ ತುಂಬಿಕೊಂಡು ಇರುವ ಈ ಅಖಿಲ ಜಗತ್ತಿನ ಮೋಹವನ್ನು ಬಿಟ್ಟು ಪರಬ್ರಹ್ಮ ಸ್ವರೂಪವನ್ನು ತಿಳಿದುಕೊಂಡು ಅದರಲ್ಲಿ ನಿನ್ನನ್ನು ನೀನು ತಲ್ಲೀನಗೊಳಿಸಿಕೊ.

**ಕಾಮಂ ಕ್ರೋಧಂ ಮೋಹಂ ಲೋಭಂ ತ್ಯಕ್ತ್ವಾತ್ಮಾನಂ ಭಾವಯ ಕೋಹಂ ।**
**ಆತ್ಮಜ್ಞಾನವಿಹೀನಾ ಮೂಢಾ- ಸ್ತೇ ಪಚ್ಯಂತೇ ನರಕ ನಿಗೂಢಾಃ ॥**

ಭಾವಾರ್ಥ - ಕಾಮ[ಆಶೆ], ಕ್ರೋಧ, ಲೋಭ[ದುರಾಶೆ], ಮೋಹ ಇವೆಲ್ಲವನ್ನೂ ತ್ಯಜಿಸಿ, "ನಾನಾರು" ಎಂದು ನಿನ್ನ ಆತ್ಮದ ಬಗ್ಗೆ ವಿಚಾರ ವಿಮರ್ಷೆ ಮಾಡು, ಆತ್ಮ ಜ್ಞಾನವೇ ಇಲ್ಲದಿರುವ ಬುಧ್ಧಿಗೇಡಿಗಳು ನರಕಯಾತನೆಯನ್ನು ಅನುಭವಿಸುತ್ತಾರೆ.

**ಸುರಮಂದಿರಮೂಲನಿವಾಸಃ ಶಯ್ಯಾ ಭೂತಲಮಜಿನಂ ವಾಸಃ ।**
**ಸರ್ವಪರಿಗ್ರಹಭೋಗತ್ಯಾಗಃ ಕಸ್ಯ ಸುಖಂ ನ ಕರೋತಿ ವಿರಾಗಃ ॥**

ಭಾವಾರ್ಥ - ದೇವಸ್ಥಾನದಲ್ಲೋ, ಮರದ ಅಡಿಯಲ್ಲಿಯೋ ಉಳಿದಿಕೊಂಡು ಭೂಮಿಯ ಮೇಲೆ ಮಲಗುವುದು, ಕೃಷ್ಣಾಜಿನವನ್ನು ವಸ್ತ್ರದ ಬದಲಾಗಿ ಉಪಯೋಗಿಸಿಕೊಂಡು ಯಾವ ದಾನಗಳನ್ನೂ ಸ್ವೀಕರಿಸದೆ ಭೋಗವನ್ನು ತ್ಯಜಿಸುವಂತಹಾ ವೈರಾಗ್ಯವು ಯಾರಿಗೆ ಸುಖವನ್ನು ಕೊಡಲಾರದು? ಯೋಚನೆ ಮಾಡಿ.

**ಶತ್ರೌ ಮಿತ್ರೇ ಪುತ್ರೇ ಬಂಧೌ ಮಾ ಕುರು ಯತ್ನಂ ವಿಗ್ರಹ ಸಂಧೌ ।**
**ಭವ ಸಮಚಿತ್ತಃ ಸರ್ವತ್ರ ತ್ವಂ ವಂಛಸ್ಯಚಿರಾದ್ ಯದಿ ವಿಷ್ಣುತ್ವಂ ॥**

ಭಾವಾರ್ಥ - ಶತ್ರು, ಮಿತ್ರ, ಮಗ, ಬಂಧುವರ್ಗ, ಯುದ್ಧ, ಸಂಧಿ ಇಂತಹ ಯಾವುದರಲ್ಲಿಯೂ ನೀನು ಆಸಕ್ತಿ ಹೊಂದಬೇಡಾ. ವಿಷ್ಣುತ್ವವನ್ನು ಅತಿ ಶೀಘ್ರವಾಗಿ ನೀನು ಹೊಂದಬೇಕಾದರೆ ನಿನ್ನಲ್ಲಿ ಸರ್ವತ್ರ ಸಮ ಚಿತ್ತವಿರಲಿ.

**ತ್ವಯಿ ಮಯಿ ಚಾನ್ಯತ್ರೈಕೋ ವಿಷ್ಣು- ರ್ವ್ಯರ್ಥಂ ಕುಪ್ಯಸಿ ಮಯ್ಯಸಹಿಷ್ಣುಃ ।**
**ಸರ್ವಸ್ಮಿನ್ನಪಿ ಪಶ್ಯಾತ್ಮಾನಂ ಸರ್ವತ್ರೋತ್ಸೃಜ ಭೇಧಜ್ಞಾನಂ ॥**

ಭಾವಾರ್ಥ - ವಿಷ್ಣು ಒಬ್ಬನೇ, ಅವನು ನಿನ್ನಲ್ಲಿ, ನನ್ನಲ್ಲಿ ಹಾಗೇನೇ ಬೇರೆಯವರಲ್ಲಿಯೂ ಇರುವಂತಹವನೇ. ನನ್ನ ಬಗ್ಗೆ ನಿನಗೆ ಸಹನಾ ಶಕ್ತಿ ಇಲ್ಲದಿರುವ ಕಾರಣ ನೀನು ಕೋಪಗೊಳ್ಳುತ್ತಾ ಇರುವಿ. ಇನ್ನಾದರೂ ತಿಳಿದುಕೋ, ಎಲ್ಲರಲ್ಲಿಯೂ ಆತ್ಮಶಕ್ತಿಯನ್ನು ಕಾಣು,ನಾನು ಹೇಳ್ತಾ ಇದ್ದೇನೆ, ಭೇಧ ಬುದ್ಧಿಯನ್ನು ಬಿಟ್ಟು ಬಿಡು.

**ಪ್ರಾಣಾಯಾಮಂ ಪ್ರತ್ಯಾಹಾರಂ ನಿತ್ಯಾನಿತ್ಯವಿವೇಕ ವಿಚಾರಂ ।**
**ಜಾಪ್ಯಸಮೇತಸಮಾಧಿವಿಧಾನಂ ಕುರ್ವವಧಾನಂ ಮಹದವಧಾನಂ ॥**

ಭಾವಾರ್ಥ - ಪ್ರಾಣಾಯಾಮ, ಪ್ರತ್ಯಾಹಾರ, ನಿತ್ಯಾನಿತ್ಯ ವಸ್ತು ವಿಷಯ ವಿಮರ್ಶೆ, ಮಂತ್ರ, ಜಪ, ಅದರ ಜೊತೆಗೆ ಸಮಾಧಿಯೋಗಗಳನ್ನು ನೀನು ಅಭ್ಯಾಸ ಮಾಡು, ಈ ವಿಚಾರಗಳ ಬಗ್ಗೆ ಹೆಚ್ಚು ಆಸಕ್ತಿ ಹೊಂದಿದವನಾಗಿ ನೀನು ಗಮನ ಕೊಡಬೇಕು.

**ನಲಿನೀದಲಗತಸಲಿಲಂ ತರಲಂ ತದ್ವಜ್ಜೀವಿತಮತಿಶಯಚಪಲಂ ।**
**ವಿದ್ಧಿ ವ್ಯಾಧ್ಯಭಿಮಾನಗ್ರಸ್ತಂ ಲೋಕಂ ಶೋಕಹತಂ ಚ ಸಮಸ್ತಂ ॥**

ಭಾವಾರ್ಥ - ಕಮಲದ ಎಲೆ ಮೇಲೆ ಇಪ್ಪಂತಹಾ ನೀರಿನಬಿಂದು ಹೇಂಗೆ ಚಂಚಲವಾಗಿದ್ದೋ ಹಾಂಗ್ಯೇ ಈ ಜೀವನವೂ ಅತ್ಯಂತ ಚಂಚಲವಾಗಿಪ್ಪದು. ರೋಗ ವ್ಯಾಧಿ-ಅಭಿಮಾನಗಳಂದ ಜನಂಗೊ ಎಲಾ ದುಃಖಂದ ಹತರಾಯಿದವು ಹೇಳೋದರ ಅರ್ಥ ಮಾಡಿಗೋ.

**ಕಾ ತೇಷ್ಟಾದಶ ದೇಶೇ ಚಿಂತಾ ವಾತುಲ ತವ ಕಿಂ ನಾಸ್ತಿ ನಿಯಂತಾ ।**
**ಯಸ್ತ್ವಾಂ ಹಸ್ತೇ ಸುದೃಢನಿಬದ್ಧಂ ಭೋಧಯತಿ ಪ್ರಭವಾದಿವಿರುದ್ಧಂ ॥**

ಭಾವಾರ್ಥ - ಹೇ! ಚಂಚಲ ಮನಸ್ಸಿನವನೇ! ನಿನ್ನ ಮನಸ್ಸೇತಕ್ಕೆ ಹತ್ತು ಹದಿನೆಂಟು ದಿಕ್ಕಿಂಗೆ ಓಡ್ತಾ ಇದೆ? ನಿನ್ನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ಉತ್ಪತ್ತಿ, ಸ್ಥಿತಿ, ಲಯಾದಿಗಳಲ್ಲಿ ಇರುವ ಪರಸ್ಪರ ವಿರೋಧಂಗಳನ್ನು ನಿನಗೆ ಅರ್ಥ ಆಗುವ ಹಾಗೆ ವಿವರಿಸುವಂತಹಾ ಜ್ಞಾನಿಗಳು ಯಾರೂ ಇಲ್ಲವೇ?

**ಗುರುಚರಣಾಂಬುಜನಿರ್ಭರಭಕ್ತಃ ಸಂಸಾರಾದಚಿರಾದ್ಭವ ಮುಕ್ತಃ ।**
**ಸೇಂದ್ರಿಯಮಾನಸನಿಯಮಾದೇವಂ ದ್ರಕ್ಷ್ಯಸಿ ನಿಜ ಹೃದಯಸ್ಥಂ ದೇವಂ ॥**

ಭಾವಾರ್ಥ - ನೀನು ಆ ಗುರುಚರಣಾಂಬುದಿಯಲ್ಲಿ ಪೂರ್ಣ ಭಕ್ತಿ ಹೊಂದಿದವನಾಗಿ ಸಂಸಾರ ಸಾಗರದಿಂದ ಬೇಗ ಮುಕ್ತನಾಗು. ಇಂದ್ರಿಯಗಳ ಜೊತೆಯಲ್ಲಿ ಮನಸ್ಸನ್ನೂ ನಿಗ್ರಹಿಸಲು ನಿನ್ನಿಂದ ಸಾಧ್ಯವಾದರೆ ನಿನ್ನ ಹೃದಯದಲ್ಲಿ ವಾಸವಾಗಿರುವಂತಹಾ ಆ ಈಶ್ವರನನ್ನು ನೀನು ಕಾಣಲು ಶಕ್ತನಾಗುವಿ. ಆ ಗುರಿ ನಿನ್ನದಾಗಿರಲಿ.

॥ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ದ್ವಾದಶಪಂಜರಿಕಾ ಸ್ತೋತ್ರಂ ಸಂಪೂರ್ಣಂ ॥

## 14.3 ಪ್ರಶ್ನೋತ್ತರ ರೂಪೇ ಆತ್ಮ ಸ್ವರೂಪ ಕಥನ

**ಕಿಂ ಜ್ಯೋತಿಸ್ತವ ಭಾನುಮಾನಹನಿ ಮೇ ರಾತ್ರೌ ಪ್ರದೀಪಾಧಿಕಂ ।**
**ಸ್ಯಾ ದೇವಂ ರವಿ ದೀಪ ದರ್ಶನ ವಿಧೌ ಕಿಂ ಜ್ಯೋತಿರಾಖ್ಯಾಹಿ ಮೇ ॥**

**ಚಕ್ಷುಸ್ತಸ್ಯ ನಿಮೀಲನಾದಿಸಮಯೇ ಕಿಂ ಧೀರ್ಧಿಯೋ ದರ್ಶನೇ ।**
**ಕಿಂ ತತ್ರಾಹಮನೋ ಭವಾನ್ಪರಮಕಂ ಜ್ಯೋತಿಸ್ತದಸ್ಮಿ ಪ್ರಭೋ ॥**

ಸಂವಾದರೂಪದಲ್ಲಿ ಭಾವಾರ್ಥ - ಗುರು-> ಜಗತ್ತಿನ ಸೃಷ್ಟಿಯಲ್ಲಿರುವ ವಸ್ತುಗಳನ್ನು ಯಾವ ಬೆಳಕಿನ ಮೂಲಕ ನೀನು ಅರಿತುಕೊಳ್ಳುವೆ?

ಶಿಷ್ಯ-> ಗುರುವರ್ಯಾ, ಹಗಲಿನ ಸಮಯ ಸೂರ್ಯನ ಬೆಳಕಿನ ಮೂಲಕವೂ, ರಾತ್ರಿಯ ಕಾಲದಲ್ಲಿ ದೀಪವೇ ಮೊದಲಾದ ಬೆಳಕಿನ ಮೂಲಗಳಿಂದಲೂ ಜಗತ್ತಿನ ಸೃಷ್ಟಿಯಲ್ಲಿರುವ ವಸ್ತುಗಳ ಬಗ್ಗೆ ಅರಿತುಕೊಳ್ಳುವೆ.

ಗುರು-> ಹಾಗಾದರೆ ಇವನು ರವಿ, ಇದು ದೀಪ, ಎಂಬುದಾಗಿ ಅರಿತುಕೊಳ್ಳಲು ಯಾವ ಪ್ರಕಾಶ ನಿನಗೆ ಸಾಧನವಾಯಿತು?

ಶಿಷ್ಯ-> ಗುರು ದೇವಾ, ಕಣ್ಣುಗಳ ದೃಷ್ಟಿಯ ಮೂಲಕ ಅವುಗಳ ವಿಚಾರವಾಗಿ ಅರಿತುಕೊಳ್ಳುವೆನು.

ಗುರು->ನೀನು ಕಣ್ಣುಗಳನ್ನು ಮುಚ್ಚಿಕೊಂಡಿರುವಾಗ ಅವುಗಳನ್ನು ಯಾವ ಜ್ಯೋತಿಯ ಮೂಲಕ, ಹೇಗೆ ಅರಿತುಕೊಳ್ಳುವಿ?

ಶಿಷ್ಯ-> ವಿಮರ್ಶೆಯ ಮೂಲಕ ಅರಿತುಕೊಳ್ಳುವೆ ಗುರುವರ್ಯಾ.

ಗುರು-> ವಿಮರ್ಶೆ ಮಾಡಲು ಆ ದರ್ಶನ [ಜ್ಞಾನ] ನಿನಗೆ ಎಲ್ಲಿಂದ ದೊರಕಿತು?

ಶಿಷ್ಯ-> ನನ್ನ ತಿಳುವಳಿಕೆಯ ಮೂಲಕವಾಗಿ ಅವುಗಳ ಕುರಿತಾಗಿ ಅರಿತುಕೊಳ್ಳಲು ನಾನೇ ಕಾರಣೀಭೂತನಾಗಿರುವೆ ಗುರುದೇವಾ.

ಗುರು-> ಓ! ಹಾಗಾದರೆ ಸೂರ್ಯ, ದೀಪ, ಕಣ್ಣುಗಳು, ಬುದ್ಧಿ, ಇವೆಲ್ಲವುಗಳನ್ನು ಬೆಳಗಿಸುವ ಪರಂಜ್ಯೋತಿ ಪ್ರಕಾಶವೇ ನೀನಾಗಿರುವೆಯಲ್ಲವೇ?

ಶಿಷ್ಯ-> ಹೌದು ಗುರುದೇವಾ, ಆ ಪರಂಜ್ಯೋತಿಯಾಗಿರುವ ಆತ್ಮನೇ ನಾನಾಗಿರುವೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಪ್ರಶ್ನೋತ್ತರ ರೂಪೇ ಆತ್ಮ ಸ್ವರೂಪ ಕಥನಃ ಸಂಪೂರ್ಣಂ ॥

## 14.4 ಆತ್ಮ ಪಂಚಕಂ

**ನಾಹಂ ದೇಹಂ ನೇಂದ್ರಿಯಾಣ್ಯಂ ತರಂಗಂ । ನಾಹಂಕಾರಃ ಪ್ರಾಣವರ್ಗೋ ನ ಬುದ್ಧಿಃ**
**॥ ದಾರಾಪತ್ಯ ಕ್ಷೇತ್ರವಿತ್ತಾದಿ ದೂರಃ । ಸಾಕ್ಷೀ ನಿತ್ಯಃ ಪ್ರತ್ಯಗಾತ್ಮಾ ಶಿವೋಽಹಂ ॥1॥**

ಭಾವಾರ್ಥ - ಈ ಶರೀರವು ನಾನಲ್ಲ. ಇಂದ್ರಿಯಗಳೂ ನಾನಲ್ಲ. ಮನಸ್ಸು, ಅಹಂಕಾರಹಾಗೂ ಪ್ರಾಣಾಪಾನಾದಿ ಪ್ರಾಣವರ್ಗಗಳೂ ನಾನಲ್ಲ. ಬುದ್ಧಿಯು ನಾನಲ್ಲ. ಪತ್ನಿ, ಭೂಮಿ, ಮಕ್ಕಳು, ಮನೆಮಾರು, ದ್ರವ್ಯಾದಿಗಳಿಂದಲೂ ನಾನು ದೂರವಾಗಿರುವವನು. ಆದರೂ ಅವೆಲ್ಲವುಗಳಿಗೆ ಸಾಕ್ಷೀ ರೂಪನಾಗಿ ಶಾಶ್ವತನೂ ಪರಮಾತ್ಮನೂ ಆದ ಶಿವನೇ ನಾನಾಗಿದ್ದೇನೆ.

**ರಜ್ಜ್ವಜ್ಞಾನಾದ್ಭಾತಿ ರಜ್ಜುರ್ಯಥಾಹಿಃ । ಸ್ವಾತ್ಮಾಜ್ಞಾನಾದಾತ್ಮನೋ ಜೀವಭಾವಃ ॥**
**ಆಪ್ತೋಕ್ತ್ಯಾಽಹಿ ಭ್ರಾಂತಿ ನಾಶೇ ಸರಜ್ಜು ರ್ಜೀವೋ ನಾಹಂ ದೇಶಿಕೋಕ್ತ್ಯಾ**
**ಶಿವೋಽಹಂ ॥2॥**

ಭಾವಾರ್ಥ - ಇದು ಹಗ್ಗ ಎಂಬ ತಿಳುವಳಿಕೆ ಇರದೆ ಇದ್ದುದರಿಂದ ಹಗ್ಗವು ಹಾವಿನಂತೆ ಭಾಸವಾಗುವಂತೆ, ತನ್ನ ರೂಪದ ಬಗ್ಗೆ ಆತ್ಮನಿಗೆ ಅರಿವಿಲ್ಲದುದರಿಂದ ಜೀವತ್ವದ ಭಾವವುಳ್ಳದ್ದಾಗಿದೆ. ಆಪ್ತರ ಹಿತನುಡಿಯಂತೆ ಭ್ರಾಂತಿಯು ನಾಶವಾಗಿ

ಹಾವಿನ ಭಾವವು ಅಳಿದು ಹಗ್ಗವೇ ಆಗಿ ಕಾಣುವಂತೆ ಸದ್ಗುರುಗಳ ಉಪದೇಶದ ಪ್ರಭಾವದಿಂದಾಗಿ ಜೀವವು ನಾನಲ್ಲ. ಶಿವನೇ ನಾನಾಗಿದ್ದೇನೆ.

**ಆಭಾತೀದಂ ವಿಶ್ವಮಾತ್ಮನ್ಯ ಸತ್ಯಂ । ಸತ್ಯ ಜ್ಞಾನಾನಂದರೂಪೇ ವಿಮೋಹಾತ್ ॥ ನಿದ್ರಾಮೋಹಾತ್ಸ್ವಪ್ನವತ್ತನ್ನ ಸತ್ಯಂ ಶುದ್ಧಃಪೂರ್ಣೋ ನಿತ್ಯಏಕಃ ಶಿವೋಽಹಂ ॥3॥**

ಭಾವಾರ್ಥ - ನಿದ್ರಾವಸ್ಥೆಯ ಭ್ರಾಂತಿಯಲ್ಲಿ ಕಾಣುವ ಕನಸಿನಂತೆ ಸಚ್ಚಿದಾನಂದ ಸ್ವರೂಪಿಯಾಗಿರುವ ಆತ್ಮನಲ್ಲಿ ಭ್ರಮೆಗೊಳಗಾಗಿ ಈ ಪ್ರಪಂಚವು ಸುಳ್ಳಾಗಿ ಭಾಸವಾಗುವುದು. ಆ ತೆರನಾಗಿ ಕಾಣುವ ಜಗತ್ತು ಸತ್ಯವಲ್ಲ. ಇಂಥ ಪ್ರಪಂಚದಲ್ಲಿ ಪರಿಶುದ್ಧನೂ ಪರಿಪೂರ್ಣನೂ, ನಿತ್ಯನೂ, ಸರಿಸಾಟಿಯಿಲ್ಲದವನೂ ಆಗಿರುವ ಶಿವನೇ ನಾನಾಗಿರುವೆ.

**ಮತ್ತೋ ನಾನ್ಯತ್ಕಿಂಚಿದತ್ರಾಸ್ತಿ ವಿಶ್ವಂ । ಸತ್ಯಂ ಬಾಹ್ಯಂ ವಸ್ತು ಮಾಯೋಪಕ್ಲುಪ್ತಂ ॥ ಆದರ್ಶಾಂತರ್ಭಾಸಮಾನಸ್ಯ ತುಲ್ಯಂ । ಮಯ್ಯದ್ವೈತೇ ಭಾತಿ ತಸ್ಮಾಚ್ಛಿವೋಽಹಂ ॥4॥**

ಭಾವಾರ್ಥ - ಇಲ್ಲಿ ನನಗಿಂತ ಅನ್ಯ ಜಗತ್ತು ಕಿಂಚಿತ್ತಾದರೂ ಮಗದೊಂದಿಲ್ಲ. ಹೊರಗೆ ಕಾಣುವ ಈ ವಸ್ತುಗಳು ಮಾಯೆಯಿಂದ ವ್ಯವಸ್ಥೆಗೊಳಿಸಲ್ಪಟ್ಟಿದೆಯೆಂಬುದು ಖಚಿತ. ದರ್ಪಣದೊಳಗೆ ಕಂಡುಬರುವ ವಸ್ತುವಿನ ಪ್ರತಿಬಿಂಬದಂತೆ ಅವು ಅದ್ವೈತ ಸ್ವರೂಪಿಯಾಗಿರುವ ನನ್ನಲ್ಲಿ ಒಳಗೊಂಡಿರುತ್ತವೆ. ಹಾಗಿರುವುದರಿಂದ ನಾನು ಶಿವನೇ ಆಗಿದ್ದೇನೆ.

**ನಾಹಂ ಜಾತೋ ನ ಪ್ರವೃದ್ಧೋ ನ ನಷ್ಟೋ । ದೇಹಸ್ಯೋಕ್ತಾಃ ಪ್ರಾಕೃತಾಃ ಸರ್ವಧರ್ಮಾಃ ॥ ಕರ್ತೃತ್ವಾದಿಶ್ಚಿನ್ಮಯಸ್ಯಾಸ್ತಿ ನಾಹಂ- । ಕಾರಸ್ಯೈವ ಹ್ಯಾತ್ಮನೋ ಮೇ ಶಿವೋಽಹಂ ॥5॥**

ಭಾವಾರ್ಥ - ನಾನು ಹುಟ್ಟಿಲ್ಲ. ಬೆಳೆಯುವುದಿಲ್ಲ. ಸಾವು ನನಗಿಲ್ಲ. ಇವೆಲ್ಲವೂ ದೇಹಕ್ಕೆ ಸಂಬಂಧಿಸಿದವುಗಳಾಗಿದ್ದು ಪ್ರಕೃತಿಕಾರ್ಯಗಳಾಗಿವೆ. ಅವು ನನಗೆ ಸಂಬಂಧಪಟ್ಟವುಗಳಾಗಿರುವುದಿಲ್ಲ. ಆ ಸೃಷ್ಟಿಸುವ-ಅನುಭವಿಸುವ ಕಾರ್ಯಗಳು

ಕೂಡಾ "ನಾನು" ಎನ್ನುವ ಭಾವ ಸಿದ್ಧಾಂತಕ್ಕೆ ಹೊಂದಿರುವುದಾಗಿದೆ. ಅವುಗಳಿಗೆ ಹೊಂದಿಕೆಯಿಲ್ಲದ ಚಿದಾನಂದ ರೂಪನಾದ ಶಿವನೇ ನಾನಾಗಿರುವೆ.

**ನಾಹಂ ಜಾತೋ ಜನ್ಮಮೃತ್ಯೂ ಕುತೋ ಮೇ ।**
**ನಾಹಂ ಪ್ರಾಣಃ ಕ್ಷುತ್ಪಿಪಾಸೇ ಕುತೋಮೇ ॥**

**ನಾಹಂಚಿತ್ತಂ ಶೋಕಮೋಹೌ ಕುತೋ ಮೇ ।**
**ನಾಹಂ ಕರ್ತಾ ಬಂಧಮೋಕ್ಷೌ ಕುತೋ ಮೇ ॥6॥**

ಭಾವಾರ್ಥ - ಹುಟ್ಟು ಎಂಬುದೇ ಇಲ್ಲದ ನನಗೆ ಜನ್ಮ ಮೃತ್ಯುಗಳೆಂಬ ಗುಣ ಧರ್ಮಗಳು ಎಲ್ಲಿಂದ ಬರಬೇಕು? ಜೀವವೇ ಅಲ್ಲದಿರುವ ನನಗೆ ಹಸಿವು ನೀರಡಿಕೆಗಳಾದರೂ ಎಲ್ಲಿಯವು? ಮನಸ್ಸೇ ಅಲ್ಲದಿರುವ ನನಗೆ ಶೋಕ ಮೋಹಗಳಾದರೂ ಎಲ್ಲಿಯವು? ನಾನು ಮಾಡುವವನೇ ಅಲ್ಲದಿರುವಾಗ ನನಗೆ ಬಂಧಮೋಕ್ಷಗಳಾದರೂ ಎಲ್ಲಿಯವು?

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಆತ್ಮಪಂಚಕಂ ಸಂಪೂರ್ಣಂ ॥

## 14.5 ಮಾಯಾ ಪಂಚಕಂ

**ನಿರುಪಮನಿತ್ಯನಿರಂಶಕೇಽಪ್ಯಖಂಡೇ । ಮಯಿಚಿತಿ ಸರ್ವ ವಿಕಲ್ಪನಾದಿಶೂನ್ಯೇ ॥**
**ಘಟಯತಿ ಜಗದೀಶಜೀವಭೇದಂ । ತ್ವಘಟಿತಘಟನಾಪಟೀಯಸೀ ಮಾಯಾ ॥1॥**

ಭಾವಾರ್ಥ - ಸರಿಸಾಟಿಯಿಲ್ಲದ, ನಾಶರಹಿತವಾದ, ಅಗಾಂಗವಿರಹಿತವಾಗಿ, ಪೂರ್ಣವೂಮತ್ತು ಸಮಸ್ತವಿಕಲ್ಪಾದಿಗಳಿಂದ ಹೊರತಾಗಿರುವ ಪರಮಾತ್ಮನರೂಪವುಳ್ಳ ನನ್ನಲ್ಲಿ ಬ್ರಹ್ಮಾಂಡ-ಈಶ್ವರ-ಜೀವಗಳೆಂಬ ಭೇದಭಾವವನ್ನು ಕಲ್ಪಿಸುವ ಮಾಯೆಯು ಸಾಧಿಸಲಶಕ್ಯವಾದುದನ್ನು ಸಾಧನೆ ಮಾಡಲು ನಾನು ಸಮರ್ಥಳಾಗಿರುವೆ.

**ಶ್ರುತಿಶತನಿಗಮಾಂತ ಶೋಧಕಾನ- । ಪ್ಯಹಹ ಧನಾದಿ ನಿದರ್ಶನೇನ ಸದ್ಯಃ ॥**
**ಕಲುಷಯತಿ ಚತುಷ್ಪದಾದ್ಯ ಭಿನ್ನಾ- । ನಘಟಿತಘಟನಾಪಟೀಯಸೀ ಮಾಯಾ ॥2॥**

ಭಾವಾರ್ಥ - ನೂರಾರು ವೇದೋಪನಿಷದ್ಗ್ರಂಥಗಳನ್ನು ವಿಮರ್ಶಿಸುವ ವಿದ್ವಜ್ಜನರಿಗೂ ಧನ ಸಂಪದಗಳಾದಿಯಲ್ಲಿ ಮೋಹ ಹುಟ್ಟಿಸುವ ಮೂಲಕವಾಗಿ ಚತುಷ್ಪಾದಾದಿಗಳಿಗೂ ವಿದ್ವಜ್ಜನರಿಗೂ ಭೇದವಿಲ್ಲದಂತೆ ಅವರುಗಳ ಬುದ್ಧಿಯನ್ನು ಹಾಳುಗೆಡಹುವ ಮಾಯೆಯು ಸಾಧಿಸಲಶಕ್ಯವಾದುದನ್ನು ಸಾಧನೆ ಮಾಡಲು ನಾನು ಸಮರ್ಥಳಾಗಿರುವೆ.

**ಸುಖಚಿದಖಂಡವಿಬೋಧಮದ್ವಿತೀಯಂ । ವಿಯದನಲಾದಿ ವಿನಿರ್ಮಿತೇ ನಿಯೋಜ್ಯ ॥ ಭ್ರಮಯತಿ ಭವಸಾಗರೇ ನಿತಾಂತಂ । ತ್ವಘಟಿತಘಟನಾಪಟೀಯಸೀ ಮಾಯಾ ॥3॥**

ಭಾವಾರ್ಥ - ಅದೃಷ್ಟವಂತನೂ, ಪೂರ್ಣನೂ, ಜ್ಞಾನವಂತನೂ, ಸರಿಸಾಟಿಯಿಲ್ಲದಾತನೂ, ಆಗಿರುವ ಆತ್ಮನಿಗೆ ಪೃಥ್ವೀ, ಅಪ್, ತೇಜೋವಾಯು, ಆಕಾಶಗಳೆಂಬ ಪಂಚ ಭೂತಗಳಿಂದ ರಚಿತವಾದ ಈ ಜಡಶರೀರದ ಸಂಬಂಧವನ್ನು ಕಲ್ಪಿಸಿ ಸಂಸಾರಸಾಗರದಲ್ಲಿ ನಿರಂತರ ಮೇಲ್ಮೆಯಿಂದ ಸುತ್ತಾಡಿಸುವ ಮಾಯೆಯು ಸಾಧಿಸಲಶಕ್ಯವಾದುದನ್ನು ಸಾಧನೆ ಮಾಡಲು ನಾನು ಸಮರ್ಥಳಾಗಿರುವೆ.

**ಅಪಗತಗುಣವರ್ಣಜಾತಿಭೇದೇ । ಸುಖಚಿತಿ ವಿಪ್ರವಿಡಾದ್ಯಹಂಕೃತಿಂ ಚ ॥**
**ಸ್ಫುಟಯತಿ ಸುತದಾರಗೇಹಮೋಹಂ । ತ್ವಘಟಿತಘಟನಾಪಟೀಯಸೀ ಮಾಯಾ ॥4॥**

ಭಾವಾರ್ಥ - ಸಗುಣ-ನಿರ್ಗುಣತ್ವವೂ, ಚತುರ್ವರ್ಣಗಳೂ, ದೇವ-ಮಾನುಷ-ಪ್ರಾಣಿಗಳಾದಿ ಗುಣ ವರ್ಣಜಾತಿಗಳ ಯಾವ ಭೇದಗಳೂ ಇಲ್ಲದ ಸಚ್ಚಿದಾನಂದ ಪರಬ್ರಹ್ಮನಲ್ಲಿ ಇವನು ಬ್ರಾಹ್ಮಣ, ಇವನು ಕ್ಷತ್ರಿಯ, ಇವನು ವೈಶ್ಯ, ಇವನು ಶೂದ್ರ ಎಂಬಿತ್ಯಾದಿ ಜಾತ್ಯಭಿಮಾನವನ್ನೂ, ಪತ್ನೀಮಕ್ಕಳು, ಮನೆ-ಮಾರುಗಳ ಮೋಹವನ್ನೂ ಉಂಟುಮಾಡುವ ಮಾಯೆಯು ಸಾಧಿಸಲಶಕ್ಯವಾದುದನ್ನು ಸಾಧನೆ ಮಾಡಲು ನಾನು ಸಮರ್ಥಳಾಗಿರುವೆ.

**ವಿಧಿಹರಿಹರಭೇಧಮಪ್ಯ ಖಂಡೇ । ಬತ ವಿರಚಯ್ಯ ಬುಧಾನಪಿ ಪ್ರಕಾಮಂ ।**
**ಭ್ರಮಯತಿ ಹರಿಹರವಿಭೇದಭಾವಾ- ನಘಟಿತಘಟನಾಪಟೀಯಸೀ ಮಾಯಾ ॥5॥**

ಭಾವಾರ್ಥ - ಪೂರ್ಣತ್ವನಾದ ಪರಬ್ರಹ್ಮನಲ್ಲಿ ಬ್ರಹ್ಮ-ವಿಷ್ಣು-ಶಿವರೆಂಬ ಮೂರು ದೇವತಾಶಕ್ತಿ ಭಾವವನ್ನು ಕಲ್ಪಿಸಿ, ವಿದ್ವಜ್ಜನರಲ್ಲಿಯೂ ಹರಿಯು ಶ್ರೇಷ್ಠ, ಹರನೇ ಶ್ರೇಷ್ಠ ಎಂಬ ಭೇದತ್ವದ ಭ್ರಾಂತಿಯನ್ನು ಉಂಟುಮಾಡುವ ಮಾಯೆಯು ಸಾಧಿಸಲಶಕ್ಯವಾದುದನ್ನು ಸಾಧನೆ ಮಾಡಲು ನಾನು ಸಮರ್ಥಳಾಗಿರುವೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಮಾಯಾ ಪಂಚಕಂ ಸಂಪೂರ್ಣಂ ॥

## 14.6 ನಿರ್ವಾಣಷಟ್ಕಂ

**ಮನೋಬುದ್ಧ್ಯಹಂಕಾರಚಿತ್ತಾನಿ ನಾಹಂ । ನ ಕರ್ಣಂ ನ ಜಿಹ್ವಾ ನ ಚ ಘ್ರಾಣನೇತ್ರೇ ॥**
**ನ ಚ ವ್ಯೋಮ ಭೂಮಿರ್ನ ತೇಜೋ ನ ವಾಯು- ।**
**ಶ್ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥1॥**

ಭಾವಾರ್ಥ - ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆನ್ನುವ ನಾಲ್ಕು ಬಿರುದುಗಳೂ, ಕಿವಿ, ನಾಲಿಗೆ, ಕಣ್ಣು, ಮೂಗು, ಚರ್ಮಗಳೆಂಬ ಪಂಚೇಂದ್ರಿಯಗಳೂ, ಭುವಿ, ಆಗಸ, ಜಲ, ವಾಯು, ತೇಜಸ್ಸುಗಳೆನ್ನುವ ಪಂಚಭೂತಗಳೂ ನಾನಲ್ಲ. ಸಚ್ಚಿದಾನಂದ ರೂಪೀ ಶಿವನೇ ನಾನು, ನಾನೇ ಶಿವನು.

**ನ ಚ ಪ್ರಾಣಸಂಜ್ಞೋ ನ ವೈ ಪಂಚವಾಯು- । ರ್ನ ವಾ ಸಪ್ತಧಾತುರ್ನ ವಾ ಪಂಚಕೋಶಃ ॥ ನ ವಾಕ್ ಪಾಣಿಪಾದೌ ನ ಚೋಪಸ್ಥಪಾಯೂ ।**
**ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥2॥**

ಭಾವಾರ್ಥ - ಪ್ರಾಣ ವಾಯುವು ನಾನಲ್ಲ. ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚ ಪ್ರಾಣವಾಯುಗಳಲ್ಲಿಯಾವುದೂನಾನಲ್ಲ. ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜ, ಅಸ್ಥಿ, ಶುಕ್ಲಗಳೆನ್ನುವ ಸಪ್ತ ಧಾತುಗಳೂ ನಾನಲ್ಲ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ

ಪಂಚಕೋಶಗಳೂ ನಾನಲ್ಲ. ಹಸ್ತ, ಪಾದ, ನಾಲಿಗೆ, ಗುದದ್ವಾರ, ಗುಪ್ತಾಂಗಗಳೆಂಬ ಪಂಚಕರ್ಮೇಂದ್ರಿಯಂಗಳೂ ನಾನಲ್ಲ. ಸಚ್ಚಿದಾನಂದ ರೂಪೀ ಶಿವನೇ ನಾನು, ನಾನೇ ಶಿವನು.

**ನ ಮೇ ದ್ವೇಷರಾಗೌ ನ ಮೇ ಲೋಭಮೋಹೌ । ಮದೋ ನೈವ ಮೇ ನೈವ ಮಾತ್ಸರ್ಯಭಾವಃ ॥ ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷ- । ಶ್ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥3॥**

ಭಾವಾರ್ಥ - ಇಂದ್ರಿಯಸುಖಂಗಳಲ್ಲಿ ನನಗೆ ದ್ವೇಷವಾಗಲೀ ಆಸಕ್ತಿಯಾಗಲೀ ಇಲ್ಲ. ಜಿಪುಣತ್ವವಾಗಲೀ, ಪರವಶತೆಯಾಗಲೀ ಎನಗಿಲ್ಲ. ಧರ್ಮಾರ್ಥ ಕಾಮಮೋಕ್ಷಗಳೆನ್ನುವ ಚತುರ್ವಿಧ ಪುರುಷಾರ್ಥಗಳೂ ನಾನಲ್ಲ. ಇವು ಯಾವುದರ ಅಂಟುವಿಕೆಯೂ ನನಗಿಲ್ಲ. ಇವಾವುದಕ್ಕೂ ಸಿಲುಕದ ಸಚ್ಚಿದಾನಂದ ರೂಪೀ ಶಿವನೇ ನಾನು, ನಾನೇ ಶಿವನು.

**ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ । ನ ಮಂತ್ರೋ ನ ತೀರ್ಥಂ ನ ವೇದಾ ನ ಯಜ್ಞಾ ॥ ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ । ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥4॥**

ಭಾವಾರ್ಥ - ಪಾಪಪುಣ್ಯಗಳಾಗಲೀ, ಸುಖದುಃಖಗಳಾಗಲೀ ಎನಗಿಲ್ಲ. ವೇದ, ಯಜ್ಞ, ತೀರ್ಥ, ಮಂತ್ರಗಳಾವುದರ ಸಂಬಂಧವೂ ನನಗಿರುವುದಿಲ್ಲ. ಭೋಜ್ಯ, ಭೋಜನ, ಭೋಕ್ತಗಳೆಂಬುದರ ಪ್ರತ್ಯಕ್ಷ ಜ್ಞಾನವೂ ನನಗಿಲ್ಲ. ಇವಾವುದರ ಲೇಪವೂ ಇಲ್ಲದ ಸಚ್ಚಿದಾನಂದ ರೂಪೀ ಶಿವನೇ ನಾನು, ನಾನೇ ಶಿವನು.

**ನ ಮೃತ್ಯುರ್ನಶಂಕಾ ನ ಮೇ ಜಾತಿ ಭೇದಃ । ಪಿತಾ ನೈವ ಮೇ ನೈವ ಮಾತಾ ಚ ಜನ್ಮ ॥ ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯ- ಶ್ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥5॥**

ಭಾವಾರ್ಥ - ಜಾತಿಭೇಧಗಳೆನಗಿಲ್ಲ. ಮರಣ ಭೀತಿಯೂ ಇಲ್ಲ. ಇವುಗಳ ಬಗೆಗಿನ ಶಂಕೆಯೆನಗಿಲ್ಲ. ಹುಟ್ಟುಸಾವುಗಳಿಲ್ಲ. ಅಪ್ಪ ಅಮ್ಮ, ಬಂಧು ಬಳಗ, ಗುರು

ಶಿಷ್ಯರೆಂಬವರಾರೂ ನನಗಿಲ್ಲ. ಇವೆಲ್ಲವನ್ನೂ ಮೀರೀದ ಸಚ್ಚಿದಾನಂದ ರೂಪೀ ಶಿವನೇ ನಾನು, ನಾನೇ ಶಿವನು.

**ಅಹಂ ನಿರ್ವಿಕಲ್ಪೋ ನಿರಾಕಾರರೂಪೋ । ವಿಭುತ್ವಾಚ್ಚ ಸರ್ವತ್ರ ಸರ್ವೇಂದ್ರಿಯಾಣಾಂ ॥ ನ ಚಾಸಂಗತಂ ನೈವ ಮುಕ್ತಿರ್ನ ಬಂಧ- ಶ್ಚಿದಾನಂದರೂಪಃ ಶಿವೋऽಹಂ ಶಿವೋऽಹಂ ॥6॥**

ಭಾವಾರ್ಥ - ನಾನು ಭ್ರಾಂತಿ ರಹಿತನೂ ಆಕಾರ ವಿರಹಿತನೂ ಆಗಿರುವವನು. ಸರ್ವ ಇಂದ್ರಿಯಂಗಳಿಗೆ ನಿಲುಕದೆ ಸರ್ವವ್ಯಾಪಿಯಾಗಿರುವವನು. ಮತ್ತು ನಾನು ಅವಿನಾಶಿಯಾಗಿರುವವನು. ಹಾಗೆಯೇ ಸೀಮಾರಹಿತನಾಗಿರುವವನು. ಯಾವುದೇ ಬಂಧ ಮೋಕ್ಷಗಳ ಲೇಪವಿರದ ಪರಮಾತ್ಮನು ನಾನು. ಕೇವಲ ಸಚ್ಚಿದಾನಂದ ರೂಪೀ ಶಿವನೇ ನಾನು, ನಾನೇ ಶಿವನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ನಿರ್ವಾಣಷಟ್ಕಂ ಸಂಪೂರ್ಣಂ ॥

## 14.7 ಕಾಶೀಪಂಚಕಂ

**ಮನೋನಿವೃತ್ತಿಃ ಪರಮೋಪಶಾಂತಿಃ । ಸಾ ತೀರ್ಥವರ್ಯಾ ಮಣಿಕರ್ಣಿಕಾ ಚ ॥ ಜ್ಞಾನಪ್ರವಾಹ ವಿಮಲಾದಿಗಂಗಾ । ಸಾ ಕಾಶಿಕಾऽಹಂ ನಿಜಭೋಧರೂಪಾ ॥1॥**

ಭಾವಾರ್ಥ - ಚೇತಾನಾರೂಪದ ಸಾಮರ್ಥ್ಯದ ಬಿಡುಗಡೆಯೇ ಶ್ರೇಷ್ಠವಾಗಿರುವ ಸ್ವಸ್ಥಿತಿ. ಅದುವೇ ಮಣಿಕರ್ಣಿಕೆಯೆಂಬ ಅಗ್ರಗಣ್ಯ ತೀರ್ಥ. ನನ್ನಲ್ಲಿ ಅಡಕವಾಗಿರುವ ಸತ್ಯದ ಅರಿವಿನ ಹರಿಯುವಿಕೆಯೇ ದೋಷರಹಿತವಾಗಿರುವ ಗಂಗೆ. ಅಂತಹಾ ನೈಜ ಪ್ರಜ್ಞಾರೂಪಿಯಾಗಿರುವ ಕಾಶೀಕ್ಷೇತ್ರವೇ ನಾನಾಗಿರುವೆ.

**ಯಸ್ಯಾಮಿದಂ ಕಲ್ಪಿತಮಿಂದ್ರಜಾಲಂ । ಚರಾಚರಂ ಭಾತಿ ಮನೋವಿಲಾಸಂ ॥ ಸಚ್ಚಿತ್ಸುಖೈಕಾ ಪರಮಾತ್ಮ ರೂಪಾ । ಸಾ ಕಾಶಿಕಾऽಹಂ ನಿಜಭೋಧರೂಪಾ ॥2॥**

ಭಾವಾರ್ಥ - ಯಾವುದೊರಳಗೆ ಈ ಸೃಷ್ಟಿಯ ಜಾದೂಆಟವು ವ್ಯವಸ್ಥೆಗೊಳಿಸಲ್ಪಟ್ಟಿದೆಯೋ ಮತ್ತು ಎಲ್ಲಿ ಈ ಚರಾಚರ ವಿಶ್ವವು ಮನದ ಚೆಲ್ಲಾಟದಂತೆ ಭಾಸವಾಗುವುದೋ ಆ ಸಚ್ಚಿದಾನಂದವೂ ಪರಮಾತ್ಮ ಪ್ರತೀಕವಾಗಿರುವ ನೈಜ ಪ್ರಜ್ಞಾರೂಪಿಯಾಗಿರುವ ಕಾಶೀಕ್ಷೇತ್ರವೇ ನಾನಾಗಿರುವೆ.

**ಕೋಶೇಷು ಪಂಚಸ್ವಧಿರಾಜಮಾನಾ । ಬುದ್ಧಿರ್ಭವಾನೀ ಪ್ರತಿದೇಹಗೇಹಂ ॥ ಸಾಕ್ಷೀ ಶಿವಃ ಸರ್ವಗತೋಽಂತರಾತ್ಮಾ । ಸಾ ಕಾಶಿಕಾಽಹಂ ನಿಜಭೋಧರೂಪಾ ॥3॥**

ಭಾವಾರ್ಥ - ಯಾವುದರ ಒಡೆತನವು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯಗಳೆಂಬ ಪಂಚಕೋಶಗಳಲ್ಲಿ ಜರಗುತ್ತಿದೆಯೋ, ಎಲ್ಲಿ ಜ್ಞಾನವೇ ಪ್ರತಿಯೊಂದೂ ಶರೀರದಲ್ಲಿರುವ ತಾಯಿ ಭವಾನಿಯೋ, ಎಲ್ಲಿ ಪ್ರತ್ಯಕ್ಷತೆಯೂ, ಸರ್ವವ್ಯಾಪಿಯಾಗಿರುವ ಪ್ರತ್ಯಗಾತ್ಮನು ಶಿವನಿರುವನೋ ಅಂತಹಾ ನೈಜ ಪ್ರಜ್ಞಾರೂಪಿಯಾಗಿರುವ ಕಾಶೀಕ್ಷೇತ್ರವೇ ನಾನಾಗಿರುವೆ.

**ಕಾಶ್ಯಾಂ ಹಿ ಕಾಶ್ಯತೇ ಕಾಶೀ ಕಾಶೀ ಸರ್ವ ಪ್ರಕಾಶಿಕಾ ।**
**ಸಾ ಕಾಶೀ ವಿದಿತಾ ಯೇನ ತೇನ ಪ್ರಾಪ್ತಾ ಹಿ ಕಾಶಿಕಾ ॥4॥**

ಭಾವಾರ್ಥ - ಕಾಶಿಯಲ್ಲಿಯೇ ನೈಜವಾದ ದಿವ್ಯ ತೇಜಸ್ಸಿರುವುದಾಗಿದೆ. ಕಾಶಿಯೇ [=ಬೆಳಕು] ವಿಶ್ವದಲ್ಲಿ ಸಮಸ್ತವನ್ನೂ ಪ್ರಕಾಶಿಸುವಂತೆ ಮಾಡುವುದು. ಯಾರು ಬೆಳಕನ್ನು [ಕಾಶಿಯನ್ನು] ಅರಿಯಬಲ್ಲರೋ ಅವರು ಕಾಶಿಯನ್ನು [=ಮುಕ್ತಿಯನ್ನು] ನಿಜವಾಗಿಯೂ ಹೊಂದಬಲ್ಲರು.

**ಕಾಶೀಕ್ಷೇತ್ರಂ ಶರೀರಂ ತ್ರಿಭುವನಜನನೀ ವ್ಯಾಪಿನೀ ಜ್ಞಾನಗಂಗಾ ।**
**ಭಕ್ತಿಃಶ್ರದ್ಧಾ ಗಯೇಯಂ ನಿಜಗುರುಚರಣಧ್ಯಾನಯೋಗಃಪ್ರಯಾಗಃ ॥**

**ವಿಶ್ವೇಶೋಽಯಂ ತುರೀಯಂ ಸಕಲಜನಮನಸ್ಸಾಕ್ಷಿಭೂತೋಽಂತರಾತ್ಮಾ ।**
**ದೇಹೇ ಸರ್ವಂ ಮದೀಯೇ ಯದಿ ವಸತಿ ಪುನಸ್ತೀರ್ಥಮನ್ಯತ್ಕಿಮಸ್ತಿ ॥5॥**

ಭಾವಾರ್ಥ - ಈ ದೇಹವೇ ಕಾಶೀ ಕ್ಷೇತ್ರವಾಗಿದೆ. ಇಲ್ಲಿ ತ್ರಿಲೋಕಮಾತೆಯಾಗಿರುವ ಜ್ಞಾನಗಂಗಾ ಪ್ರವಹಿಸುತ್ತಿರುವಳು. ಭಕ್ತಿಶ್ರದ್ಧೆಗಳೇ ಗಯಾ ಕ್ಷೇತ್ರ. ಸದ್ಗುರುವಿನ ಪಾದಾರವಿಂದಗಳ ಧ್ಯಾನವೇ ಪ್ರಯಾಗ. ಸಮಸ್ತ ಜನರ ಮನಸುಗಳಲ್ಲಿ ಪ್ರತ್ಯಕ್ಷನೂ ಜೀವಾತ್ಮನೂ ಆಗಿರುವ ವೇದನಾದಾತೀತನೇ ವಿಶ್ವೇಶ್ವರನು. ಈ ರೀತಿಯಾಗಿ ಸಮಸ್ತವೂ ನನ್ನ ದೇಹದಲ್ಲಿಯೇ ನೆಲೆಸಿರುವಾಗ ಯಾವುದಾದರೂ ಅನ್ಯ ತೀರ್ಥಗಳಿರುವುದುಂಟೇ?

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಕಾಶೀಪಂಚಕಂ ಸಂಪೂರ್ಣಂ ॥

## 14.8 ಮನೀಷಾಪಂಚಕಂ

**ಜಾಗ್ರತ್ಸ್ವಪ್ನ ಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಬತೇ ।**
**ಯಾ ಬ್ರಹ್ಮಾದಿಪಿಪೀಲಿಕಾಂತತನುಷು ಪ್ರೋತಾ ಜಗತ್ಸಾಕ್ಷಿಣೀ ॥**

**ಸೈವಾಹಂ ನ ಚ ದೃಶ್ಯವಸ್ತ್ವಿತಿ ಧೃಢಪ್ರಜ್ಞಾಽಪಿಯಸ್ಯಾಸ್ತಿಚೇತ್ ।**
**ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ ॥1॥**

ಭಾವರ್ಥಃ- ಯಾವ ಶಕ್ತಿಯು ಎಚ್ಚರ, ಕನಸು, ಗಾಢನಿದ್ರೆಗಳೆನ್ನುವ ಮೂರು ಅವಸ್ಥೆಗಳಲ್ಲಿಯೂ ಬಹಳ ಎದ್ದು ಕಾಣುವುದೋ, ಯಾವುದು ಚತುರ್ಮುಖ ಬ್ರಹ್ಮನಾರಭ್ಯ ಇರುವೆಯ ವರೆಗಿರುವ ಸಮಸ್ತ ಶರೀರಗಳಲ್ಲಿಯೂ ವಿಶ್ವದಪ್ರಾತ್ಯಕ್ಷಿಕರೂಪದಲ್ಲಿ ವ್ಯಾಪಿಸಿಕೊಂಡಿದೆಯೋ ಅದುವೇ ಪರಬ್ರಹ್ಮಸ್ವರೂಪನಾದ ನಾನು. ಕಣ್ಣಿಗೆ ಹೊರಗೆ ಕಾಣುತ್ತಿರುವುದೆಲ್ಲವೂ ಈ ದೇಹವಲ್ಲವೆಂಬ ಖಚಿತ ತಿಳುವಳಿಕೆಯಿಂದ ಯಾರು ಕೂಡಿರುವರೋ ಅಂತಹವರು ಚಂಡಾಲನಾಗಿರಲಿ ಅಥವಾ ಬ್ರಾಹ್ಮಣನಾಗಿರಲಿ ಅವರೇ ಸದ್ಗುರುವು ಎಂಬುದು ನನ್ನ ಭಾವನೆಯು.

**ಬ್ರಹ್ಮೈವಾಹಮಿದಂ ಜಗಚ್ಚ ಸಕಲಂ ಚಿನ್ಮಾತ್ರ ವಿಸ್ತಾರಿತಂ ।**
**ಸರ್ವಂ ಚೈತದವಿದ್ಯಯಾ ತ್ರಿಗುಣಯಾಽಶೇಷಂ ಮಯಾ ಕಲ್ಪಿತಂ ॥**

**ಇತ್ಥಂ ಯಸ್ಯ ದೃಢಾ ಮತಿಃ ಸುಖತರೇ ನಿತ್ಯೇ ಪರೇ ನಿರ್ಮಲೇ ।**
**ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನೀಷಾ ಮಮ ॥2॥**

ಭಾವಾರ್ಥ - ನಾನು ಬ್ರಹ್ಮನೇ ಆಗಿರುವೆ. ಈ ಸಮಸ್ತ ಬ್ರಹ್ಮಾಂಡವು ಬ್ರಹ್ಮವೇ ಅಗಿದೆ. ಮತ್ತು ಕೇವಲ ಚೈತನ್ಯದಿಂದ ವಿಸ್ತಾರವಾಗಿದೆ. ಸತ್ವ-ರಜ-ತಮೋ ಗುಣಾತ್ಮಕವಾಗಿರುವ ಭ್ರಾಂತಿಯಿಂದ ಇವೆಲ್ಲವುಗಳನ್ನು ನಾನೇ ಕಲ್ಪಿಸಿರುವುದಾಗಿದೆ ಎಂಬುದಾಗಿ ತಿಳುವಳಿಕೆ ಯಾರಿಗಿದೆಯೋ, ನಿತ್ಯವೂ, ಸತ್ಯವೂ ಸುಖದಾಯಕವೂ ಸ್ವಚ್ಚವೂ ಆಗಿರುವ ಪರಬ್ರಹ್ಮನಲ್ಲಿ ಧೃಢವಾಗಿರುವ ಪ್ರಜ್ಞೆಯು ಯಾರಿಗಿದೆಯೋ ಅಂತಹವರು ಚಂಡಾಲನಾಗಿರಲಿ ಅಥವಾ ಬ್ರಾಹ್ಮಣನಾಗಿರಲಿ ಅವರೇ ಸದ್ಗುರುವು ಎಂಬುದು ನನ್ನ ಭಾವನೆಯು.

**ಶಶ್ವನ್ನಶ್ವರಮೇವ ವಿಶ್ವಮಖಿಲಂ ನಿಶ್ಚಿತ್ಯ ವಾಚಾ ಗುರೋಃ ।**
**ನಿತ್ಯಂ ಬ್ರಹ್ಮ ನಿರಂತರಂ ವಿಮೃಶತಾ ನಿರ್ವ್ಯಾಜಶಾಂತಾತ್ಮನಾ ॥**

**ಭೂತಂ ಭಾವಿ ಚ ದುಷ್ಕೃತಂ ಪ್ರದಹತಾ ಸಂವಿನ್ಮಯೇ ಪಾವಕೇ ।**
**ಪ್ರಾರಬ್ಧಾಯ ಸಮರ್ಪಿತಂ ಸ್ವವಪುರಿತ್ಯೇಷಾ ಮನೀಷಾ ಮಮ ॥3॥**

ಭಾವಾರ್ಥ - ಈ ಜಗತ್ತೆಲ್ಲವೂ ಕ್ಷಣಿಕವೆನ್ನುವ ಗುರುವಾಕ್ಯವನ್ನು ಅರ್ಥವಿಸಿಕೊಂಡು, ಗುರೂಪದೇಶಾನುಸಾರ ಹಿನ್ನೆಲೆಯಿಲ್ಲದ ನಿರ್ವಿಕಾರವೂ, ಪ್ರಶಾಂತವೂ ಆಗಿರುವ ಶುದ್ಧಾಂತಃಕರಣದಿಂದ ಆದಿ ಅಂತ್ಯ ವಿರಹಿತವಾಗಿರುವ ಪರಬ್ರಹ್ಮವಸ್ತುವಿನ ಬಗೆಗೆ ನಿರಂತರ ತರ್ಕಿಸುತ್ತಾ ಗತ ಹಾಗೂ ಭವಿಷ್ಯತ್ತಿನ ಪುಣ್ಯಪಾಪಗಳನ್ನು ತಿಳುವಳಿಕೆಯೆನ್ನುವ ಬೆಂಕಿಯಲ್ಲಿ ದಹಿಸಿ, ಪ್ರಾರಬ್ಧಕರ್ಮಕ್ಕೆ ತನ್ನ ದೇಹವನ್ನು ಗುರಿಮಾಡಿರುವ ಅವನು ಯಾರೇ ಆಗಿರಲಿ ಅವನೇ ನನ್ನ ಸದ್ಗುರು ಎಂಬುದು ನನ್ನ ತತ್ವವಾಗಿದೆ.

**ಯಾ ತಿರ್ಯಙ್ನರದೇವತಾಭಿರಹಮಿತ್ಯಂತಃ ಸ್ಫುಟಾ ಗೃಹ್ಯತೇ ।**
**ಯದ್ಭಾಸಾ ಹೃದಯಾಕ್ಷದೇಹವಿಷಯಾಭಾಂತಿ ಸ್ವತೋಽಚೇತನಾಃ ॥**

**ತಾ ಭಾಸ್ಯೈಃ ಪಿಹಿತಾರ್ಕಮಂಡಲನಿಭಾಂ ಸ್ಫೂರ್ತಿಂ ಸದಾಭಾವಯನ್ ।**
**ಯೋಗೀ ನಿರ್ವೃತಮಾನಸೋ ಹಿ ಗುರುರಿತ್ಯೇಷಾ ಮನೀಷಾ ಮಮ ॥4॥**

ಭಾವಾರ್ಥ - ಯಾವ ಚೇತನಾಶಕ್ತಿಯನ್ನು ಮನುಜರು, ದೇವತೆಗಳು, ಪಶುಪಕ್ಷಿಗಳೂ ದೇವರು ಎಂದು ಖಚಿತವಾಗಿ ಸ್ವೀಕರಿಸುತ್ತಾರೋ, ಯಾವುದರ ಬೆಳಕಿನಿಂದ ದೇಹ, ಮನಸ್ಸು, ಕಣ್ಣು, ಕಿವಿ, ಇಂದ್ರಿಯವಸ್ತುಗಳೆನ್ನುವ ನಿರ್ಜೀವ ವಸ್ತುಗಳು ತಾವು ಸ್ವತಃ ಚೇತನಾರಹಿತವಾಗಿದ್ದೂ ಪ್ರಕಾಶಭರಿತವಾಗಿ ಬೆಳಗುವವೋ, ಮೇಘಾವೃತವಾಗಿರುವ ಸೂರ್ಯಮಂಡಲದ ಹಾಗೆ ಭ್ರಮಾವೃತವಾದ ಆ ಚೈತನ್ಯಪ್ರಕಾಶವನ್ನು ಪ್ರಶಾಂತ ಮನದಿಂದ ನಿರಂತರ ಯಾವ ಯೋಗಿಯು ಚಿಂತಿಸುತ್ತಿರುವನೋ ಅವನು ಯಾರೇ ಆಗಿರಲಿ ಅವನೇ ನನ್ನ ಸದ್ಗುರು ಎಂಬುದು ನನ್ನ ತತ್ವವಾಗಿದೆ.

**ಯತ್ಸೌಖ್ಯಾಂಬುಧಿಲೇಶಲೇಶತ ಇಮೇ ಶಕ್ರಾದಯೋ ನಿರ್ವೃತಾಃ ।**
**ಯಚ್ಚಿತ್ತೇನಿತರಾಂ ಪ್ರಶಾಂತಕಲನೇ ಲಬ್ಧ್ವಾಮುನಿರ್ನಿರ್ವೃತಃ ॥**

**ಯಸ್ಮಿನ್ನಿತ್ಯಸುಖಾಂಬುಧೌ ಗಲಿತಧೀರ್ಬ್ರಹ್ಮೈವ ನ ಬ್ರಹ್ಮವಿದ್ ।**
**ಯಃ ಕಶ್ಚಿತ್ಸ ಸುರೇಂದ್ರವಂದಿತಪದೋ ನೂನಂ ಮನೀಷಾ ಮಮ ॥5॥**

ಭಾವಾರ್ಥ - ಯಾವ ಸುಖಾನುಭವದ ಸಂತಸದ ಅತ್ಯಲ್ಪಾಂಶದಿಂದ ಇಂದ್ರಾದಿ ದೇವತೆಗಳು ಆನಂದಭರಿತರಾಗಿರುವರೋ, ತಮ್ಮ ಮನದ ಸಮಸ್ತ ಬಾವನೆಗಳೆಲ್ಲವೂ ಅಳಿತುಹೋಗಿ ಸ್ತಬ್ಧವಾದ ಮನಸ್ಸಿನಲ್ಲಿ ಯೋಗಿಗಳು ಯಾವುದನ್ನು ಪಡೆದು ತೃಪ್ತನಾಗುವರೋ, ಶಾಶ್ವತವಾದ ಆನಂದಸಾಗರದಲ್ಲಿ ಮನಸ್ಸನ್ನು ಲೀನಗೊಳಿಸಿದ ಕಾರಣವಾಗಿ ಯಾವನು ಮಂದಮತಿಯಾದರೂ ಸ್ವಯಂ ಪರಬ್ರಹ್ಮ ಸ್ವರೂಪಿಯೇ ಆಗುವನೋ, ಸುರಾದಿ ದೇವತೆಗಳಿಂದ ವಂದಿಸಲ್ಪಡುವ ಪಾದಗಳ್ಳಾತನು ಯಾರೇ ಆಗಿರಲಿ ಅವನೇ ನನ್ನ ಸದ್ಗುರು ಎಂಬುದು ನನ್ನ ತತ್ವವಾಗಿದೆ.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಮನೀಷಾಪಂಚಕಂ ಸಂಪೂರ್ಣಂ ॥

## 14.9 ಉಪದೇಶಪಂಚಕಂ

**ವೇದೋನಿತ್ಯಮದೀಯತಾಂ ತದುದಿತಂ ಕರ್ಮಸ್ವನುಷ್ಠೀಯತಾಂ ।**
**ಧೀರೇಶಸ್ಯ ವಿಧೀಯತಾಮಪಚಿತಿಃ ಕಾಮ್ಯೇಮತಿಸ್ತ್ಯಜ್ಯತಾಂ ॥**

**ಪಾಪೌಘಃ ಪರಿಧೂಯತಾಂ ಭವಸುಖೇ ದೋಷೋಽನುಸಂಧೀಯತಾಂ ।**
**ಆತ್ಮೇಚ್ಛಾ ವ್ಯವಸೀಯತಾಂ ನಿಜಗೃಹಾತ್ತೂರ್ಣಂ ವಿದಿರ್ಗಮ್ಯತಾಂ ॥1॥**

ಭಾವಾರ್ಥ - ತಮತಮಗೆ ಅನ್ವಯಿಸುವ ಸ್ವಶಾಖೆಯ ವೇದವನ್ನು ಸಂಪೂರ್ಣವಾಗಿ ಯಾವಾಗಲೂ ಅಧ್ಯಯನ ಮಾಡಿರಿ. ಅದರಲ್ಲಿ ಹೇಳಿರುವಂತಹಾ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಒಳ್ಳೆಯ ರೀತಿಯಲ್ಲಿ ಆಚರಣೆ ಮಾಡಿರಿ. ಸಂಧ್ಯಾವಂದನಾದಿ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನದ ಮೂಲಕ ಭಗವಂತನಾದ ಪರಮೇಶ್ವರನನ್ನು ಆರಾಧಿಸಿರಿ. ಕಾಮ್ಯ ಕರ್ಮಗಳಲ್ಲಿ ಮನವನ್ನಿರಿಸದೆ ಅವುಗಳನ್ನು ತ್ಯಜಿಸಿ ಪಾಪಕರ್ಮಗಳ ದೋಷಗಳನ್ನು ಹೋಗಲಾಡಿಸಿಕೊಳ್ಳಿರಿ. ತನ್ಮೂಲಕ ಮನಶುದ್ಧರಾಗಿ ಸಾಂಸಾರಿಕ ದೋಷಗಳನ್ನು ಕಂಡುಕೊಳ್ಳಿರಿ. ಆತ್ಮಜ್ಞಾನವನ್ನು ಹೊಂದಲು ಇಚ್ಛಿಸಿರಿ. ಅದಕ್ಕಾಗಿ ಪ್ರಯತ್ನವನ್ನು ಮಾಡುವುದರಲ್ಲಿ ತಲ್ಲೀನತೆಯಿರಲಿ. ಮನೆಯೊಳಗೆ ಇದ್ದುಕೊಂಡು ಕರ್ಮಾದಿಗಳನ್ನು ಮಾಡುವುದು ಒಳಿತೆಂದು ತಿಳಿದು ಅದುವೇ ಆದ್ಯಕರ್ತವ್ಯವೆಂದು ಭಾವಿಸದೆ ಆತ್ಮೋದ್ಧಾರಕ್ಕಾಗಿ ತಮ್ಮ ನೆಲೆಯನ್ನು ತೊರೆದು ಹೊರಗೆ ಬನ್ನಿರಿ.

**ಸಂಗಃ ಸತ್ಸು ವಿಧೀಯತಾಂ ಭಗವತೋ ಭಕ್ತಿರ್ದೃಢಾಧೀಯತಾಂ ।**
**ಶಾಂತ್ಯಾದಿಃ ಪರಿಚೀಯತಾಂ ದೃಢತರಂ ಕರ್ಮಾಶು ಸಂತ್ಯಜ್ಯತಾಂ ॥**

**ಸದ್ವಿದ್ವಾನುಪಸರ್ಪ್ಯತಾಂ ಪ್ರತಿದಿನಂ ತತ್ಪಾದುಕೇ ಸೇವ್ಯತಾಂ ।**
**ಬ್ರಹ್ಮೈಕಾಕ್ಷರಮರ್ಥ್ಯತಾಂ ಶ್ರುತಿಶಿರೋವಾಕ್ಯಂ ಸಮಾಕರ್ಣ್ಯತಾಂ ॥2॥**

ಭಾವಾರ್ಥ - ಸಜ್ಜನರ ಸಹವಾಸವನ್ನು ಸದಾ ಮಾಡುತ್ತಾ ಇರುವವರಾಗಿ. ಭಗವಂತನ ಮೇಲೆ ಖಚಿತವಾದ ಭಕ್ತಿಯನ್ನು ಹೊಂದಿದವರಾಗಿರಿ. ಅಜ್ಞಾನ, ಮನೋನಿಗ್ರಹ, ಶಾಂತಿ-ವಿನಯಾದಿ ಸದ್ಗುಣಗಳನ್ನು ಚೆನ್ನಾಗಿ ರೂಢಿಸಿಕೊಳ್ಳಿರಿ. ಆದಷ್ಟು ಬೇಗನೆ

ಪ್ರಾಪಂಚಿಕ ಕರ್ಮಗಳಿಂದ ದೂರವಿರಲು ಅಭ್ಯಾಸವನ್ನು ಮಾಡಿರಿ. ಶ್ರೇಷ್ಠ ಜ್ಞಾನಿಗಳ ಬಳಿಗೆ ತೆರಳಿ ಅವರುಗಳ ಪಾದಸೇವೆಯನ್ನು ಮಾಡಿ ಅವರಿಂದ ಜ್ಞಾನವನ್ನು ನಿತ್ಯವೂ ಪಡೆಯುವವರಾಗಿರಿ. "ಓಂ"ಎನ್ನುವ ಪ್ರಣವಮಂತ್ರ ಸ್ವರೂಪೀ ಏಕಾಕ್ಷರ ಬ್ರಹ್ಮನ ಬಗ್ಗೆ ತಿಳಿಯಬೇಕೆಂಬ ಹಂಬಲವುಳ್ಳವರಾಗಿ ಆ ಮಾರ್ಗವನ್ನು ಅರುಹಲು ಬಿನ್ನವಿಸಿಕೊಳ್ಳುವವರಾಗಿ. ಆ ಜ್ಞಾನಿಗಳು ಭೋಧಿಸುವ ವೇದೋಪನಿಷತ್ತುಗಳ ಮಹಾ ವಾಕ್ಯಗಳ ಅರ್ಥವನ್ನು ಮನಗೊಟ್ಟು ಕೇಳಿ ಮನನ ಮಾಡಿಕೊಳ್ಳಿರಿ.

**ವಾಕ್ಯಾರ್ಥಶ್ಚ ವಿಚಾರ್ಯತಾಂ ಶ್ರುತಿಶಿರಃ ಪಕ್ಷಃ ಸಮಾಶ್ರೀಯತಾಂ ।**
**ದುಸ್ತರ್ಕಾತ್ಸುವಿರಮ್ಯತಾಂ ಶ್ರುತಿಮತಸ್ತರ್ಕೋಽನು ಸಂಧೀಯತಾಂ ॥**

**ಬ್ರಹ್ಮೈವಾಸ್ಮಿ ವಿಭಾವ್ಯತಾಮಹರಹರ್ಗರ್ವಃ ಪರಿತ್ಯಜ್ಯತಾಂ ।**
**ದೇಹೇಽಹಂಮತಿರುಝ್ಝ್ಯತಾಂ ಬುಧಜನೈರ್ವಾದಃ ಪರಿತ್ಯಜ್ಯತಾಂ ॥3॥**

ಭಾವಾರ್ಥ - ಅದ್ವೈತ ವೇದಾಂತದ ಪಾರಮಾರ್ಥ ವಾಕ್ಯವಾಗಿರುವ "ನೀನು ಆ ಪರಮಾತ್ಮ ಸ್ವರೂಪನಿರುವೆ [ತತ್ ತ್ವಂ ಅಸಿ] ಮೊದಲಾದ ಮಹಾವಾಕ್ಯಗಳ ಅರ್ಥವನ್ನು ವಿಮರ್ಶಾಪೂರ್ವಕವಾಗಿ ಅರಿತುಕೊಳ್ಳುವವರಾಗಿ. ವೇದಾಂತದ ಸಾರಸರ್ವಸ್ವವಾಗಿರುವ ಅದ್ವೈತಸಿದ್ಧಾಂತವನ್ನು ಸದಾ ಆಶ್ರಯಿಸುವವರಾಗಿ. ಕುತರ್ಕಗಳಿಂದ ದೂರವಾಗಿ ವೇದಗಳು ಒಪ್ಪುವ ವಿಚಾರಗಳನ್ನೇ ಶೋಧಿಸುತ್ತಲಿರಿ. "ಅಹಂ ಬ್ರಹ್ಮಾಸ್ಮಿ" "ನಾನು ಬ್ರಹ್ಮನೇ ಆಗಿರುವೆ" ಎಂಬುದಾಗಿ ಭಾವಿಸುತ್ತಾ ನಾನು-ನನ್ನದು ಎಂಬ ಮಮಕಾರವನ್ನು ದಿನದಿಂದ ದಿನಕ್ಕೆ ತೊರೆಯುವವರಾಗಿ. ದೇಹಾಭಿಮಾನವನ್ನು ಬಿಟ್ಟು ಬಿಡಿರಿ. ವಿದ್ವದ್ಜ್ಜನರೊಡನೆ ಅನಗತ್ಯ ವ್ಯರ್ಥವಾಗಿ ವಾದವಿವಾದಗಳನ್ನು ಮಾಡದಿರಿ.

**ಕ್ಷುದ್ವ್ಯಾಧಿಶ್ಚ ಚಿಕಿತ್ಸ್ಯತಾಂ ಪ್ರತಿದಿನಂ ಭಿಕ್ಷೌಷಧಂ ಭುಂಜ್ಯತಾಂ ।**
**ಸ್ವಾದ್ವನ್ನಂ ನ ತು ಯಾಚ್ಯತಾಂ ವಿಧಿವಶಾತ್ಪ್ರಾಪ್ತೇನ ಸಂತುಷ್ಯತಾಂ ॥**

**ಶೀತೋಷ್ಣಾದಿ ವಿಷಹ್ಯತಾಂ ನ ತು ವೃಥಾವಾಕ್ಯಂ ಸಮುಚ್ಚಾರ್ಯತಾಂ ।**
**ಔದಾಸೀನ್ಯಮಭೀಪ್ಸ್ಯತಾಂ ಜನಕೃಪಾನೈಷ್ಠುರ್ಯಮುತ್ಸೃಜ್ಯತಾಂ ॥4॥**

ಭಾವಾರ್ಥ - ಹಸಿವೆಂಬ ಮಹಾ ವ್ಯಾಧಿಗೆ ಭಿಕ್ಷಾನ್ನವೆಂಬ ಮಹಾ ಔಷಧಿಯಿಂದ ಚಿಕಿತ್ಸೆ ಮಾಡಿ ರೋಗೋಪಶಮನವನ್ನು ಮಾಡಿಕೊಳ್ಳಿರಿ. ರುಚಿಗಟ್ಟಾದ ಶಾಕಪಾಕಾದಿಗಳಿಗೆ ಹಾತೊರೆಯದೆ ಭಗವಂತ ಅನುಗ್ರಹಿಸಿದ ಅನ್ನದಿಂದಲೇ ತೃಪ್ತರಾಗಿರಿ. ಶೀತೋಷ್ಣ, ಸುಖದುಃಖ ಇತ್ಯಾದಿ ದ್ವಂದ್ವಗಳನ್ನು ಚೆನ್ನಾಗಿ ಸಹಿಸಿಕೊಳ್ಳುವವರಾಗಿ. ನಿರರ್ಥಕವಾದ ಸಂಭಾಷಣೆಯನ್ನು ಯಾರಲ್ಲೂ ಮಾಡದಿರಿ. ಜನರಲ್ಲಿ ಅತಿಯಾಗಿರುವ ನಯ-ನಿಷ್ಠುರತೆಗಳೆರಡರಿಂದಲೂ ದೂರವಿರುವವರಾಗಿ.

**ಏಕಾಂತೇ ಸುಖಮಾಸ್ಯತಾಂ ಪರತರೇಚೇತಃ ಸಮಾಧೀಯತಾಂ ।**
**ಪೂರ್ಣಾತ್ಮಾ ಸುಸಮೀಕ್ಷ್ಯತಾಂ ಜಗದಿದಂ ತದ್ಬಾಧಿತಂ ದೃಷ್ಯತಾಂ ॥**

**ಪ್ರಾಕ್ಕರ್ಮ ಪ್ರವಿಲಾಪ್ಯತಾಂ ಚಿತಿಬಲಾನ್ನಾಪ್ಯುತ್ತರೈಃ ಶ್ಲಿಷ್ಯತಾಂ ।**
**ಪ್ರಾರಬ್ಧಂ ತ್ವಿಹ ಭುಜ್ಯತಾಮಥ ಪರಬ್ರಹ್ಮಾತ್ಮನಾ ಸ್ಥೀಯತಾನ್ ॥5॥**

ಭಾವಾರ್ಥ - ಏಕಾಂತ ಜಾಗದಲ್ಲಿ ಸುಖಾಸೀನನಾಗಿ ಕುಳಿತು ಪರಮಾತ್ಮನಲ್ಲಿಯೇ ಮನಸ್ಸನ್ನು ಸ್ಥಿರವಾಗಿರಿಸಿರಿ. ಸರ್ವ ವ್ಯಾಪಿಯಾಗಿರುವ ಪರಿಪೂರ್ಣ ಪರಬ್ರಹ್ಮನನ್ನು ಅರಿತುಕೊಂಡು ಈ ಜಗತ್ತು ಆತನಿಂದ ನಿರೋಧಿಸಲ್ಪಡುತ್ತಿದೆಯೆಂಬುದನ್ನರಿತು ಇದು ಮಿಥ್ಯಾ ಪ್ರಪಂಪಂಚವಾಗಿದೆಯೆಂಬುದನ್ನು ಮನಗಾಣುವವರಾಗಿರಿ. ಪೂರ್ವಾರ್ಜಿತವಾದಂತಹಾ ಸಂಚಿತ ಕರ್ಮಗಳಿಂದ ಮುಕ್ತರಾಗಿರಿ. ಭವಿಷ್ಯತ್ತಿನ ಕರ್ಮಗಳನ್ನು ಆಲಂಗಿಸಿಕೊಳ್ಳದಿರಿ. ಪ್ರಾರಬ್ಧ ಕರ್ಮ ಫಲಗಳನ್ನು ಇಲ್ಲಿಯೇ ಅನುಭವಿಸಲು ಸಿದ್ಧರಿರಿ. ತದನಂತರ ಏಕೀಭಾವದಿಂದ ಕೂಡಿ ಪರಬ್ರಹ್ಮನ ಸಾಕ್ಷಾತ್ಕಾರದ ದಿವ್ಯಾನಂದವನ್ನು ಅನುಭವಿಸುವವರಾಗಿರಿ.

**ಯಃಶ್ಲೋಕಪಂಚಕಮಿದಂ ಪಠತೇ ಮನುಷ್ಯಃ ।**
**ಸಂಚಿಂತಯತ್ಯನುದಿನಂ ಸ್ಥಿರತಾಮುಪೇತ್ಯ ॥**

**ತಸ್ಯಾಶು ಸಂಸೃತಿದವಾನಲತೀವ್ರಘೋರಃ ।**
**ತಾಪಃ ಪ್ರಶಾಂತಿಮುಪಯಾತಿ ಚಿತಿ ಪ್ರಸಾದಾತ್ ॥6॥**

ಭಾವಾರ್ಥ - ಈ ರೀತಿಯಾಗಿರುವ ಐದು ಸ್ತುತಿಗಳನ್ನು ಅನುದಿನವೂ ಪಾರಾಯಣ ಮಾಡುತ್ತಾ ಅವುಗಳ ನೈಜಾರ್ಥವನ್ನು ಕದಲದ ಮನಸ್ಸಿನಿಂದ ಚಿಂತನೆಯನ್ನು ಮಾಡುತ್ತಾ ಇರುವಾತಂಗೆ ಭೀಕರವೂ, ಹಿಂಸಾತ್ಮಕವೂ ಆಗಿರುವ ಸಾಂಸಾರಿಕ ಬೇಗೆಯು ಶಾಂತವಾಗಿ ಸುಖಾನಂದವು ಲಭಿಸುವುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಉಪದೇಶಪಂಚಕಂ ಸಂಪೂರ್ಣಂ ॥

## 14.10 ಧನ್ಯಾಷ್ಟಕಂ

**ತದ್ ಜ್ಞಾನಂ ಪ್ರಶಮಕರಂ ಯದಿಂದ್ರಿಯಾಣಾಂ ।**
**ತದ್ ಜ್ಞೇಯಂ ಯದುಪನಿಷತ್ಸು ನಿಶ್ಚಿತಾರ್ಥಂ ॥**

**ತೇ ಧನ್ಯಾ ಭುವಿ ಪರಮಾರ್ಥನಿಶ್ಚಿತೇಹಾಃ ।**
**ಶೇಷಾಸ್ತು ಭ್ರಮನಿಲಯೇ ಪರಿಭ್ರಮಂತಿ ॥1॥**

ಭಾವಾರ್ಥ - ಯಾವ ವಿಚಾರವನ್ನು ತಿಳಿದುಕೊಳ್ಳುವುದರಿಂದ ಇಂದ್ರಿಯಗಳೆಲ್ಲವೂ ಶಾಂತಗೊಳ್ಳುವವೋ ಅದುವೇ ನೈಜವಾದ ಜ್ಞಾನವಾಗಿದೆ. ಉಪನಿಷತ್ತುಗಳ ಮೂಲಕ ಯಾವುದರ ರೂಪವನ್ನು ಗೊತ್ತುಪಡಿಸಲಾಗಿದೆಯೋ ಅದುವೇ ಅರಿತುಕೊಳ್ಳತಕ್ಕದ್ದಾಗಿರುವುದು. ಯಾವಾತನ ಆಚರಣೆಗಳೆಲ್ಲವೂ ದೈವಿಕ ದೃಷ್ಟಿಯಿಂದ ಜರಗುವವೋ ಅಂತಹವನು ಈ ಜಗತ್ತಿನಲ್ಲಿ ಕೃತಾರ್ಥನು. ಉಳಿದವರೆಲ್ಲರೂ ಮಾಯಾಪ್ರಪಂಚದಲ್ಲಿ ಸುತ್ತಾಡುವವರೇ ಆಗಿರುವರು.

**ಆದೌ ವಿಜಿತ್ಯ ವಿಷಯಾನ್ಮದಮೋಹರಾಗ- ।**
**ದ್ವೇಷಾದಿಶತ್ರುಗಣಮಾಹೃತಯೋಗರಾಜ್ಯಾಃ ॥**

**ಜ್ಞಾತ್ವಾಮೃತಂ ಸಮನುಭೂತ ಪರಾತ್ಮ ವಿದ್ಯಾ- ।**
**ಕಾಂತಾಸುಖಂ ವನಗೃಹೇ ವಿಚರಂತಿ ಧನ್ಯಾಃ ॥2॥**

ಭಾವಾರ್ಥ - ಪ್ರಥಮತಃ ಶಬ್ದ ಸ್ಪರ್ಷ ರೂಪ ರಸ ಗಂಧಾದಿ ಇಂದ್ರಿಯಸುಖ ಸಮೂಹವನ್ನೂ, ಮದ, ಮೋಹ, ಮಾತ್ಸರ್ಯ, ರಾಗ, ದ್ವೇಷಾದಿ ಅರಿಷಡ್ವರ್ಗಗಳನ್ನೂ ಗೆದ್ದು ಯೋಗಸಾಮ್ರಾಜ್ಯವನ್ನು ಹೊಂದಿ ಅಮೃತಸಮಾನವಾದ ಜ್ಞಾನವನ್ನು ಗಳಿಸಿ ಮೋಕ್ಷದ ದಾರಿಯಲ್ಲಿ ಕ್ರಮಿಸಿ ಪಾರಮಾರ್ಥಿಕವಿದ್ಯೆಯೆನ್ನುವ ಪತ್ನಿಯೊಡನೆ ಸುಖವನ್ನು ಅನುಭವಿಸುತ್ತಾ ಮನುಷ್ಯರಹಿತವಾದ ಕಾನನದಲ್ಲಿ ವಿಹರಿಸುತ್ತಿರುವ ಯೋಗಿವರೇಣ್ಯರೇ ನಿಜವಾಗಿಯೂ ಭಾಗ್ಯಶಾಲಿಗಳು.

**ತ್ಯಕ್ತ್ವಾ ಗೃಹೇ ರತಿಮಧೋಗತಿ ಹೇತುಭೂತಾ- ।**
**ಮಾತ್ಮೇಚ್ಛಯೋಪನಿಷದರ್ಥರಸಂ ಪಿಬಂತಃ ॥**

**ವೀತಸ್ಪೃಹಾ ವಿಷಯಭೋಗಪದೇ ವಿರಕ್ತಾ ।**
**ಧನ್ಯಾಶ್ಚರಂತಿ ವಿಜನೇಷು ವಿಮುಕ್ತಸಂಗಾಃ ॥3॥**

ಭಾವಾರ್ಥ - ನಮ್ಮನ್ನು ಅವನತಿಯತ್ತ ಕರೆದೊಯ್ಯಲು ಕಾರಣೀಭೂತವಾಗುವ ಮನೆ, ಮಠ, ಮಡದಿ, ಮಕ್ಕಳು, ಸಂಸಾರ ಇತ್ಯಾದಿಗಳ ಬಗೆಗಿನ ಭ್ರಾಂತಿಯನ್ನು ತೊರೆದು. ಆತ್ಮಾನಂದದ ಬಗೆಗಿನ ಇಚ್ಛೆಯುಳ್ಳವರಾಗಿ ಉಪನಿಷತ್ತುಗಳನ್ನು ತಿಳಿಯಬೇಕೆಂಬ ಹಂಬಲವುಳ್ಳವರಾಗಿ ಆ ಅಮೃತರಸಾಸ್ವಾದನೆ ಮಾಡುತ್ತಲಿರುವವರೂ, ಸಮಸ್ತ ವಿಷಯೋಪಭೋಗಾಸಕ್ತಿಗಳನ್ನು ತೊರೆದು, ವಿಷಯ ಸುಖಾದಿಗಳನ್ನು ಅನುಭವಿಸಲು ಯೋಗ್ಯವಾದ ರಾಜಭೋಗಾದಿಗಳಿಂದ ವಿರಕ್ತರಾಗಿ, ಸರ್ವಸಂಗಗಳನ್ನು ಪರಿತ್ಯಜಿಸಿ ನಿರ್ಜನವಾಗಿರುವ ವನಪ್ರದೇಶದಲ್ಲಿ ಸಂಚರಿಸುತ್ತಿರುವ ಜ್ಞಾನಿಗಳಾದ ಮಹಾಯೋಗಿವರೇಣ್ಯರೇ ಕೃತಕೃತ್ಯರು.

**ತ್ಯಕ್ತ್ವಾ ಮಮಾಹಮಿತಿ ಬಂಧಕರೇ ಪದೇ ದ್ವೇ ।**
**ಮಾನಾವಮಾನಸದೃಶಾಃ ಸಮದರ್ಶಿಶ್ಚ ॥**

**ಕರ್ತಾರಮನ್ಯಮವಗಮ್ಯ ತದರ್ಪಿತಾನಿ ।**
**ಕುರ್ವಂತಿ ಕರ್ಮ ಪರಿಪಾಕಫಲಾನಿ ಧನ್ಯಾಃ ॥4॥**

ಭಾವಾರ್ಥ - "ನಾನು"ಹಾಗೂ"ನನ್ನದು"ಎನ್ನುವ ಭಾವನಾತ್ಮಕ ಸಂಬಂಧಗಳನ್ನು ತ್ಯಜಿಸಿ, ಮಾನಾಪಮಾನಗಳನ್ನು ಸರಿಸಮಾನವೆಂದು ಸಮದರ್ಶಿತ್ವದಿಂದ ಸ್ವೀಕರಿಸುತ್ತಾ ಹಾಗೆಯೇ ತನಗಿಂತ ಸಮರ್ಥನಾಗಿರುವ ಈಶ್ವರನು ಎಲ್ಲಾ ವಿಚಾರಗಳಿಗೂ ಯಜಮಾನನೆಂದು ತಿಳಿದು ತಮ್ಮ ಸಮಸ್ತ ಕರ್ಮಗಳ ಫಲವನ್ನು ಶಿವಾರ್ಪಣಾ ಭಾವದಿಂದ ಅರ್ಪಿಸಿ ಸತ್ಕರ್ಮಗಳನ್ನಾಚರಿಸುವ ಮಹಾತ್ಮರುಗಳಾದ ಯೋಗಿವರ್ಯರೇ ಭಾಗ್ಯಶಾಲಿಗಳು.

**ತ್ಯಕ್ತ್ವೈಷಣಾತ್ರಯಮವೇಕ್ಷಿತಮೋಕ್ಷಮಾರ್ಗಾಃ ।**
**ಭೈಕ್ಷಾಮೃತೇನ ಪರಿಕಲ್ಪಿತದೇಹಯಾತ್ರಾಃ ॥**

**ಜ್ಯೋತಿಃ ಪರಾತ್ಪರತರಂ ಪರಮಾತ್ಮಸಂಜ್ಞಂ ।**
**ಧನ್ಯಾ ದ್ವಿಜಾ ರಹಸಿ ಹೃದ್ಯವಲೋಕಯಂತಿ ॥5॥**

ಭಾವಾರ್ಥ - ಸತಿ, ಸುತ, ಸಂಪದಗಳ ಬಯಕೆಗಳಿಂದ ದೂರವಾಗಿ ಮುಕ್ತಿಯಹಾದಿಯನ್ನು ಚಿಂತಿಸುತ್ತಾ. ಭಿಕ್ಷಾನ್ನವೆನ್ನುವ ಅಮೃತವನ್ನು ಸ್ವೀಕರಿಸುವುದರ ಮೂಲಕ ದೇಹವನ್ನು ರಕ್ಷಿಸುತ್ತಾ ಪರಮಾತ್ಮನೆಂದು ಗುರುತಿಸಲ್ಪಡುವ ಸರ್ವಶ್ರೇಷ್ಠನಾಗಿರುವ ಪರಾತ್ಪರ ಪರಂಜ್ಯೋತಿಯನ್ನು ಏಕಾಂತ ಪ್ರದೇಶವಾಗಿರುವ ತಮ್ಮ ಹೃದಯದಲ್ಲಿ ಕಾಣುತ್ತಲಿರುವ ಮಹಾ ಜ್ಞಾನಿಗಳೇ ಅದೃಷ್ಟವಂತರು.

**ನಾಸನ್ನ ಸನ್ನ ಸದಸನ್ನ ಮಹನ್ನ ಚಾಣು ।**
**ನ ಸ್ತ್ರೀ ಪುಮಾನ್ನ ಚ ನಪುಂಸಕಮೇಕಬೀಜಂ ॥**

**ಯೈರ್ಬ್ರಹ್ಮ ತತ್ಸಮಮುಪಾಸಿತಮೇಕಚಿತ್ತೈ- ।**
**ಧನ್ಯಾ ವಿರೇಜುರಿತರೇ ಭವಪಾಶಬದ್ಧಾಃ ॥6॥**

ಭಾವಾರ್ಥ - ಆ ಪರಮಾತ್ಮನು ವ್ಯಕ್ತನೂ ಅಲ್ಲ, ಅವ್ಯಕ್ತನೂ ಅಲ್ಲ. ಒಳ್ಳೆಯವ ಹಾಗೂ ಕೆಟ್ಟವ ಎರೂಡ ಅಲ್ಲ. ಸ್ಥೂಲನೂ ಅಲ್ಲ. ಸೂಕ್ಷ್ಮನೂ ಅಲ್ಲ. ಸ್ತ್ರೀಯಲ್ಲ, ಪುರುಷನಲ್ಲ, ನಪುಂಸಕನಲ್ಲ. ಆದಾಗ್ಯೂ ಇವೆಲ್ಲವುಗಳಿಗೆ ಮೂಲನಿಮಿತ್ತನು

ಅವನೇ ಆಗಿರುವನು. ಇಂತಹಾ ಪರಬ್ರಹ್ಮನನ್ನು ಏಕೋಭಾವದಿಂದ ಉಪಾಸನೆಗೈಯುತ್ತಲಿರುವ ಪುರುಷರೇ ಧನ್ಯರು. ಅನ್ಯರೆಲ್ಲರೂ ಭವಪಾಶವೆಂಬ ಸಾಂಸಾರಿಕ ಬಂಧನದಲ್ಲಿ ಸಿಲುಕಿ ನರಕಯಾತನೆಯನ್ನು ಅನುಭವಿಸುವವರೇ ಆಗಿದ್ದಾರೆ.

**ಆಜ್ಞಾನಪಂಕಪರಿಮಗ್ನಮಪೇತಸಾರಂ ।**
**ದುಃಖಾಲಯಂ ಮರಣಜನ್ಮಜರಾವಸಕ್ತಂ ॥**

**ಸಂಸಾರಬಂಧನಮನಿತ್ಯಮವೇಕ್ಷ್ಯ ಧನ್ಯಾ ।**
**ಜ್ಞಾನಾಸಿನಾ ತದವಶೀರ್ಯ ವಿನಿಶ್ಚಯಂತ್ ॥7॥**

ಭಾವಾರ್ಥ - ಅಜ್ಞಾನವೆನ್ನುವ ಕೆಸರನ್ನು ಹಚ್ಚಿಕೊಂಡು ಕೊಳಕಾಗಿರುವುದೂ, ಸಾರರಹಿತವೂ, ದುಃಖದ ಆವಾಸತಾಣವೂ, ಹುಟ್ಟು ಮುಪ್ಪು ಸಾವುಗಳಿಂದ ಕೂಡಿರುವ ನಶ್ವರವಾಗಿರುವಂತಹಾ ಸಂಸಾರದ ನಿಜರೂಪವನ್ನು ಚೆನ್ನಾಗಿ ಮನಗಂಡು ಸಾಂಸಾರಿಕ ಬಂಧವನ್ನು ಜ್ಞಾನಮಯ ಖಡ್ಗದಿಂದ ತುಂಡರಿಸಿ ಆತ್ಮನ ನೈಜ ಸ್ವರೂಪದ ತತ್ವದ ಖಚಿತ ಅರಿವನ್ನು ಪಡೆದಿರುವ ವಿದ್ವಜ್ಜನರೇ ಶ್ರೀಮಂತರು.

**ಶಾಂತೈರನನ್ಯಮತಿಭಿರ್ಮಧುರಸ್ವಭಾವೈ- ।**
**ರೇಕತ್ವನಿಶ್ಚಿತಮನೋಭಿರಪೇತಮೋಹೈಃ ॥**

**ಸಾಕಂ ವನೇಷುವಿಜಿತಾತ್ಮಪದ ಸ್ವರೂಪಂ ।**
**ಶಾಸ್ತ್ರೇಷುಸಮ್ಯಗನಿಶಂ ವಿಮೃಶಂತಿ ಧನ್ಯಾಃ ॥8॥**

ಭಾವಾರ್ಥ - ಶಾಂತಾತ್ಮರೂಪರೂ, ಸ್ಥಿತಪ್ರಜ್ಞಾವಂತರೂ, ಸ್ವಾರಸ್ಯಭರಿತ ಸ್ವಭಾವದವರೂ, ಏಕಮೇವಾದ್ವಿತೀಯವಾದಂತಹಾ ಚೇತನಾಸ್ವರೂಪದ ಸಾಮರ್ಥ್ಯದಲ್ಲಿ ನೈಜಶ್ರದ್ಧೆಯುಳ್ಳವರೂ, ಮೋಹವಿರಹಿತರೂ, ಆತ್ಮತತ್ವದ ನೈಜಾರ್ಥವನ್ನು ಅರಿತವರೂ ಆಗಿರುವ ಮಹಾಯೋಗಿಗಳೊಡನೆ ಕಾನನದೊಳಗೆ ಸಂಚರಿಸುತ್ತಾ ಶಾಸ್ತ್ರಗಳನ್ನು ವಿಮರ್ಷಿಸುತ್ತಾ ಆತ್ಮತತ್ವವನ್ನು ಮನನ ಮಾಡುತ್ತಲಿರುವ ಮಹಾಪುರುಷರುಗಳೇ ಧನ್ಯರು.

**ಅಹಿಮಿವ ಜನಯೋಗಂ ಸರ್ವದಾ ವರ್ಜಯೇದ್ಯಃ ।**
**ಕುಣಪ ಮಿವ ಸುನಾರೀಂ ತ್ಯಕ್ತ ಕಾಮೋವಿರಾಗೀ ॥**

**ವಿಷಮಿವ ವಿಷಯಾನೊ ಮಾನ್ಯಮಾನೊ ದುರಂತಾನ್ ।**
**ಜಯತಿ ಪರಮಹಂಸೋ ಮುಕ್ತಿಭಾವಂ ಸಮೇತಿ ॥9॥**

ಭಾವಾರ್ಥ - ಯಾವಾತನು ಜನರ ಗುಂಪನ್ನು ಹಾವುಗಳ ಸಹವಾಸವಿದೆಂದು ತಿಳಿದು ತ್ಯಜಿಸಿ ದೂರವಿರುವಿರುವನೋ ಮನಮೋಹಕ ಸೌಂದರ್ಯವುಳ್ಳ ಸ್ತ್ರೀಯನ್ನು ಶವದಂತೆ ತಿಳಿದು ಉಪೇಕ್ಷೆ ಮಾಡುವನೋ, ದುರ್ವಿಷಯಗಳನ್ನು ವಿಷ ಸಮಾನವೆಂದು ಬಗೆದು ತ್ಯಜಿಸುವನೋ, ಅಂತಹಾ ಪರಮಹಂಸನಿಗೆ ಜಯವು ದೊರಕುವುದರೊಂದಿಗೆ ಆತನು ಮುಕ್ತಿಯನ್ನು ಹೊಂದುವನು.

**ಸಂಪೂರ್ಣಂ ಜಗದೇವ ನಂದನವನಂ ಸರ್ವೇಽಪಿ ಕಲ್ಪದ್ರುಮಾ ।**
**ಗಾಂಗಂ ವಾರಿ ಸಮಸ್ತವಾರಿ ನಿವಹಃ ಪುಣ್ಯಾಃ ಸಮಾಪ್ತಾಃ ಕ್ರಿಯಾಃ ॥**

**ವಾಚಃ ಪ್ರಾಕೃತ ಸಂಸ್ಕೃತಾಃ ಶ್ರುತಿ ಶಿರೋವಾರಣಾಸೀ ಮೇದಿನೀ ।**
**ಸರ್ವಾವಸ್ಥಿತಿರಸ್ಯ ವಸ್ತು ವಿಷಯಾದೃಷ್ಟೇಪರಬ್ರಹ್ಮಣಿ ॥9॥**

ಭಾವಾರ್ಥ - ಯಾವಾತನು ಪರಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವನೋ, ಅವನಿಗೆ ಸಂಸಾರವೆಲ್ಲವೂ ನಂದನವನದಂತೆ ಭಾಸವಾಗುವುದು. ಸಮಸ್ತಕಾರ್ಯಗಳೆಲ್ಲವೂ ಕಲ್ಪವೃಕ್ಷಗಳಂತೆ ಫಲವನ್ನು ಒದಗಿಸುವವು. ಜಲವೆಲ್ಲವೂ ಗಂಗಾಜಲದಂತೆ ಪಾವನಮಯವಾಗುವವು. ಅವನು ಮಾಡುವ ಸಮಸ್ತ ಕರ್ಮಗಳೂ ಪವಿತ್ರವಾಗುವವು. ಅವನ ಮಾತೆಲ್ಲವೂ ಅಸಂಸ್ಕೃತವಾಗಿರಲಿ ಅಥವಾ ಸಂಸ್ಕೃತವಾಗಿರಲಿ ಅವುಗಳು ವೇದ ಸಮಾನ ಸಾರವುಳ್ಳದ್ದಾಗುವುದು. ಆತನಿಗೆ ಸಮಸ್ತ ಭೂಮಂಡಲವು ಕಾಶೀ ಕ್ಷೇತ್ರಸಮಾನವಾದ ಮುಕ್ತಿಕ್ಷೇತ್ರವಾಗುವುದು. ಆತನ ಆಚರಣೆಗಳೇನಿವೆಯೋ ಅವೆಲ್ಲವೂ ಪಾರಮಾರ್ಥಿಕತೆಯುಳ್ಳದ್ದಾಗಿರುವುದು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಧನ್ಯಾಷ್ಟಕಂ ಸಂಪೂರ್ಣಂ ॥

## 14.11 ಪರಾಪೂಜಾ

**ಅಖಂಡೇ ಸಚ್ಚಿದಾನಂದೇ ನಿರ್ವಿಕಲ್ಪೈಕರೂಪಿಣಿ ।**

**ಸ್ಥಿತೇಽದ್ವಿತೀಯ ಭಾವೇಸ್ಮಿನ್ಕಥಂ ಪೂಜಾವಿಧೀಯತೆ ॥1॥**

ಭಾವಾರ್ಥ - ಪೂರ್ಣನೂ, ಬ್ರಹ್ಮಾನಂದನೂ, ಮತ್ತು ಶೋಧನೆಗೆ ನಿಲುಕದ ರೂಪಿಯೂ, ಏಕೈಕ ಭಾವದಲ್ಲಿ ನೆಲೆಸಿರುವಾತನೂ ಆಗಿರುವವನನ್ನು ಅದೆಂತು ಆರಾಧಿಸುವುದು?

**ಪೂರ್ಣಸ್ಯಾವಾಹನಂ ಕುತ್ರ ಸರ್ವಾಧಾರಸ್ಯ ಚಾಸನಂ ।**

**ಸ್ವಚ್ಛಸ್ಯ ಪಾದ್ಯಮರ್ಘ್ಯಂಚ ಶುದ್ಧಸ್ಯಾಚಮನಂ ಕುತಃ ॥2॥**

ಭಾವಾರ್ಥ - ಅಖಂಡವಾಗಿರುವಾತನನ್ನು ಎಲ್ಲಿಗೆ ಆವಾಹನೆ ಮಾಡಲಿ? ಸಮಸ್ತಕ್ಕೂ ಆಧಾರನಾಗಿರುವಾತನಿಗೆ ಆಸನವನ್ನು ಎಂತು ಕೊಡಲಿ? ನಿರ್ಮಲವಾಗಿರುವಾತನಿಗೆ ಪಾದ್ಯ ಹಾಗೂ ಅರ್ಘ್ಯಗಳನ್ನೆಂತು ನೀಡಲಿ? ಶುದ್ಧನಾಗಿರುವಾತನಿಗೆ ಆಚಮನವಾದರೂ ಏಕೆ?

**ನಿರ್ಮಲಸ್ಯ ಕುತಃಸ್ನಾನಂ ವಿಶ್ವೋದರಸ್ಯ ಚ ।**

**ಅಗೋತ್ರಸ್ಯ ವರ್ಣಸ್ಯ ಕುತಸ್ತಸ್ಯೋಪವೀತಕಂ ॥3॥**

ಭಾವಾರ್ಥ - ಹೊಳೆಯುವ ಶರೀರಗೆ ಸ್ನಾನದ ಅಗತ್ಯವಾದರೂ ಏಕೆ? ಸಮಸ್ತ ವಿಶ್ವವನ್ನೇ ಉದರದೊಳಗಿರಿಸಿದಾತನಿಗೆ ವಸ್ತ್ರವನ್ನು ಉಡಿಸುವುದಾದರೂ ಎಂತು? ಜಾತಿ ಮತ್ತು ಗೋತ್ರ ವಿರಹಿತನಾಗಿರುವವಗೆ ಯಜ್ಞೋಪವೀತವಾದರೂ ಯಾತಕ್ಕೆ?

**ನಿರ್ಲೇಪಸ್ಯ ಕುತೋಗಂಧಃ ಪುಷ್ಪಂ ನಿರ್ವಾಸನಸ್ಯ ಚ ।**

**ನಿರ್ವಿಶೇಷಸ್ಯ ಕಾ ಭೂಷಾ ಕೋಽಲಂಕಾರೋ ನಿರಾಕೃತೇಃ ॥4॥**

ಭಾವಾರ್ಥ - ಯಾವುದೇ ಲೇಪವಿಲ್ಲವನಿಗೆ ಗಂಧವನ್ನು ಲೇಪಿಸುವುದಾದರೂ ಹೇಗೆ? ವಾಸನಾರಹಿತನಾದವನಿಗೆ ಪುಷ್ಪಗಳ ಅವಶ್ಯಕತೆಯಾದರೂ ಏನು?

ಏಕಪ್ರಕಾರವಾಗಿರುವಾತಂಗೆ ಅಲಂಕಾರವಾದರೂ ಯಾವುದು? ಅಕಾರ ವಿರಹಿತಗೆ ಭೂಷಣವಾವುದು?

**ನಿರಂಜನಸ್ಯ ಕಿಂ ಧೂಪೈರ್ದೀಪೈರ್ವಾ ಸರ್ವಸಾಕ್ಷಿಣಃ ।**
**ನಿಜಾನಂದೈಕ ತೃಪ್ತಸ್ಯ ನೈವೇದ್ಯಂ ಕಿಂ ಭವೇದಿಹ ॥5॥**

ಭಾವಾರ್ಥ - ದೋಷವಿರಹಿತನಾಗಿರುವಾತಗೆ ಧೂಪವಾದರೂ ಏತಕ್ಕೆ? ಪ್ರತ್ಯಕ್ಷವಿರುವಾತಂಗೆ ದೀಪವಾದರೂ ಯಾತಕ್ಕೆ? ಸಹಜಾನಂದಸ್ವರೂಪನಾಗಿ ಅಮೃತಪಾನದಿಂದ ತೃಪ್ತಿ ಹೊಂದಿರುವವಗೆ ನೈವೇದ್ಯ ನೀಡಿದರೆ ಪ್ರಯೋಜನವೇನು?

**ವಿಶ್ವಾನಂದಯಿತುಸ್ತಸ್ಯ ಕಿಂ ತಾಂಬೂಲಂ ಪ್ರಕಲ್ಪ್ಯತೆ ।**
**ಸ್ವಯಂಪ್ರಕಾಶ ಚಿದ್ರೂಪೋ ಯೋಽಸಾವರ್ಕಾದಿ ಭಾಸಕಃ ॥6॥**

ಭಾವಾರ್ಥ - ಸ್ವತಃ ಪ್ರಕಾಶಮಯಿಯಾಗಿ ಚೇತನಾರೂಪನಾಗಿ ಸೂರ್ಯಚಂದ್ರಾದಿಗಳಿಗೂ ಬೆಳಕನ್ನು ನೀಡುವ ಮತ್ತು ಬ್ರಹ್ಮಾಂಡವನ್ನೇ ಆನಂದಗೊಳಿಸುವಾತನಿಗೆ ತಾಂಬೂಲವನ್ನು ರೂಪಿಸುವುದಾದರೂ ಎಂತು?

**ಪ್ರದಕ್ಷಿಣಾಹ್ಯನಂತಸ್ಯ ಹ್ಯದ್ವಯಸ್ಯ ಕುತೋ ನತಿಃ ।**
**ವೇದವಾಕ್ಯೈರವೇದ್ಯಸ್ಯ ಕುತಃ ಸ್ತೋತ್ರಂ ವಿಧೀಯತೇ ॥7॥**

ಭಾವಾರ್ಥ - ಅಂತ್ಯವೇ ಇಲ್ಲದಿರುವಾತನಿಗೆ ಪ್ರದಕ್ಷಿಣೆ ಬರುವುದಾರೂ ಹೇಗೆ? ಸರಿಸಾಟಿಯಿಲ್ಲದಾತಂಗೆ ನಮಸ್ಕಾರವೇಕೆ? ವೇದವಾಕ್ಯಗಳ ಮೂಲಕವೂ ತಿಳಿಯಲಶಕ್ಯನಾದವನನ್ನು ಹೇಗೆ ಸ್ತುತಿಸಲಿ?

**ಸ್ವಯಂಪ್ರಕಾಶಮಾನಸ್ಯ ಕುತೋ ನೀರಾಜನಂ ವಿಭೋಃ ।**
**ಅಂತರ್ಬಹಿಶ್ಚ ಪೂರ್ಣಸ್ಯ ಕಥಮುದ್ವಾಸಸನಂ ಭವೇತ್ ॥8॥**

ಭಾವಾರ್ಥ - ಪರಮಾತ್ಮಸ್ವರೂಪನಾಗಿ ತಾನೇತಾನಾಗಿ ಪ್ರಕಾಶಮಯಿಯಾಗಿರುವವಗೆ ಆರತಿಯಾದರೂ ಯಾತಕ್ಕೆ? ಒಳಗೂ ಹೊರಗೂ ಎಲ್ಲೆಡೆಯೂ ಆವರಿಸಿ ಪರಿಪೂರ್ಣನಾದಾತಾನನ್ನು ಹೊರಗೆ ಹಾಕುವುದಾದರೂ ಎಲ್ಲಿಗೆ?

**ಏವಮೇವ ಪರಾಪೂಜಾ ಸರ್ವಾವಸ್ಥಾಸು ಸರ್ವದಾ ।**

**ಏಕಬುದ್ಧ್ಯಾತು ದೇವೇಶೇ ವಿಧೇಯೊ ಬ್ರಹ್ಮ ವಿತ್ತಮೈಃ ॥9॥**

ಭಾವಾರ್ಥ - ತತ್ವಜ್ಞಾನವನ್ನರಿತವರು ಸರ್ವಕಾಲಗಳಲ್ಲಿಯೂ ಎಲ್ಲಾ ಸ್ಥಿತಿಗಳಲ್ಲಿಯೂ, ಈ ರೀತಿಯಾಗಿ ಏಕಮನಸ್ಸಿನಿಂದ ಭಗವಂತನ ಅಲೌಕಿಕ ಆರಾಧನೆಯನ್ನು ಮಾಡಬೇಕು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಪರಾಪೂಜಾ ಸಂಪೂರ್ಣಂ ॥

## 14.12 ವಿಜ್ಞಾನ ನೌಕಾ

**ತಪೋಯಜ್ಞದಾನಾದಿಭಿಃ ಶುದ್ಧಬುದ್ಧಿ- ರ್ವಿರಕ್ತೋ ನೃಪಾದೌ ಪದೇ ತುಚ್ಛಬುದ್ಧ್ಯಾ । ಪರಿತ್ಯಜ್ಯ ಸರ್ವಂ ಯದಾಪ್ನೋತಿ ತತ್ವಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥1॥**

ಭಾವಾರ್ಥ - ದಾನ, ಯಜ್ಞ, ತಪಸ್ಸು ಇತ್ಯಾದಿಗಳಿಂದ ಪರಿಶುದ್ಧಜ್ಞಾನವುಳ್ಳವರಾದ ವಿದ್ವಜ್ಜನರು ಅರಸೊತ್ತಿಗೆ, ರಾಜ್ಯ, ಸಂಪತ್ತು ಮೊದಲಾದವುಗಳನ್ನು ಕೀಳೆಂದು ಪರಿಗಣಿಸಿ, ಅನಾಸಕ್ತರಾಗಿ, ಸರ್ವಸ್ವವನ್ನೂ ತ್ಯಜಿಸಿ ಯಾವ ಸ್ವರೂಪವನ್ನು ಹೊಂದುವರೋ ಆ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ದಯಾಲುಂ ಗುರುಂ ಬ್ರಹ್ಮನಿಷ್ಟಂ ಪ್ರಶಾಂತಂ ಸಮಾರಾಧ್ಯ ಮತ್ಯಾ ವಿಚಾರ್ಯ ಸ್ವರೂಪಂ । ಯದಾಪ್ನೋತಿ ತತ್ವಂ ನಿದಿಧ್ಯಾಸ್ಯ ವಿದ್ವಾನ್ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥2॥**

ಭಾವಾರ್ಥ - ಬಲ್ಲಿದರು ದಯಾನಿಧಿಯಾದ ಜ್ಞಾನನಿಷ್ಟನಾಗಿರುವ ಪ್ರಶಾಂತನಾಗಿರುವ ಗುರುವಿನ ಚರಣಾರವಿಂದಗಳನ್ನು ಪೂಜಿಸಿ, ತಮ್ಮ ನೈಜ ರೂಪದ ವಿಚಾರ ಹಾಗೂ ಧ್ಯಾನಗಳಿಂದ ಯಾವ ಸ್ವರೂಪವನ್ನು ಹೊಂದುವರೋ ಆ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ಯದಾನಂದರೂಪಂ ಪ್ರಕಾಶರೂಪಂ ನಿರಸ್ತ ಪ್ರಪಂಚಂ ಪರಿಚ್ಛೇದಶೂನ್ಯಂ । ಅಹಂ ಬ್ರಹ್ಮ ವೃತ್ತ್ಯೈಕಗಮ್ಯಂ ತುರೀಯಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥3॥**

ಭಾವಾರ್ಥ - ಯಾವುದು ಆನಂದರೂಪಿಯೋ, ಚೇತನಾಸ್ವರೂಪವೋ, ಪ್ರಪಂಚಕ್ಕೆ ನಿಲುಕದ ಎಲ್ಲಾ ಪ್ರಕರಣಗಳಿಂದ ಮುಕ್ತವಾಗಿ "ನಾನೇ ಬ್ರಹ್ಮ" ಎಂಬ ಒಂದೇ ಒಂದಾದ ಕರ್ಮದಿಂದ ಯಾವುದನ್ನು ಪಡೆಯಬಹುದೋ, ಯಾವುದು ಚತುರ್ಥಾವಸ್ಥೆಯೋ ಆ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ಯದಜ್ಞಾನತೋ ಭಾತಿ ವಿಶ್ವಂ ಸಮಸ್ತಂ ವಿನಷ್ಟಂ ಚ ಸದ್ಯೋ ಯದಾತ್ಮ ಪ್ರಭೋಧೇ । ಮನೋವಾಗತೀತಂ ವಿಶುದ್ಧಂ ವಿಮುಕ್ತಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥4॥**

ಭಾವಾರ್ಥ - ಯಾವುದರ ಕುರಿತಾದ ಅರಿವಿನ ಕೊರತೆಯಿಂದ ಈ ವಿವಿಧತೆಗಳಿಂದ ಕೂಡಿದ ಬ್ರಹ್ಮಾಂಡವೆಲ್ಲವೂ ಕಾಣುವುದೋ, ಆದರೆ ಯಾವ ಆತ್ಮಜ್ಞಾನದ ಅನುಭವವಾದೊಡನೆ ಸಮಸ್ತವೂ ಮಾಯವಾಗುವುದೋ, ಯಾವುದು ಮಾತು ಮನಸ್ಸುಗಳಿಗೆ ನಿಲುಕದಿರುವುದೋ ಆ ಸ್ವಚ್ಛ ವಿರಕ್ತ ಸ್ವಭಾವದ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ನಿಷೇಧೇ ಕೃತೇ ನೇತಿ ನೇತೀತಿ ವಾಕ್ಯೈಃ ಸಮಾಧಿಸ್ಥಿತಾನಾಂ ಯದಾಭಾತಿಪೂರ್ನಾಂ ಅವಸ್ಥಾತ್ರಯಾತೀತಮೇಕಂ ತುರೀಯಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥5॥**

ಭಾವಾರ್ಥ - "ಹೀಗಲ್ಲ-ಹೀಗಲ್ಲ" ಎನ್ನುವ ಉಪನಿಷದ್ವಾಕ್ಯಗಳಿಂದ ಸಮಸ್ತವನ್ನೂ ನಿರಾಕರಿಸಿ ಸಮಾಧಿಸ್ಥಿತಿಯಲ್ಲಿರುವವರಿಗೆ ಯಾವುದು ಪರಿಪೂರ್ಣವಾಗಿ ಪ್ರಕಾಶಿಸುವುದೋ, ಯಾವುದು ಏಕಮಾತ್ರವೋ, ಯಾವುದು ಮೋಕ್ಷಾವಸ್ಥೆಯೋ, ಹಾಗೆಯೇ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಸ್ಥಿತಿತ್ವಗಳಿಗೆ ನಿಲುಕದಿರುವುದೋ ಆ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ಯದಾನಂದಲೇಶೈಃ ಸಮಾನಂದಿ ವಿಶ್ವಂ ಯದಾಭಾತಿ ಸತ್ತ್ವೇ ತದಾಭಾತಿ ಸರ್ವಂ ।**
**ಯದಾಲೋಚನೇ ರೂಪಮನ್ಯತ್ಸಮಸ್ತಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥6॥**

ಭಾವಾರ್ಥ - ಯಾವ ಆನಂದದ ತುಣುಕಿನಿಂದ ಜಗತ್ತೆಲ್ಲವೂ ಸಂತಸಮಯವಾಗಿರುವುದೋ, ಯಾವ ತೇಜಸ್ಸಿನಿಂದ ಜಗತ್ತೆಲ್ಲವೂ ತೇಜೋಮಯವಾಗಿರುವುದೋ, ಯಾವ ನೋಟದಿಂದ ಮಿಕ್ಕಿರುವುದೆಲ್ಲವೂ ಅಮೃತರೂಪಿಯಾಗಿರುವುದೋ ಅಂತಹಾ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ಅನಂತಂ ವಿಭುಂ ಸರ್ವಯೋನಿಂ ನಿರೀಹಂ ಶಿವಂ ಸಂಗಹೀನಂ ಯದೋಂಕಾರಗಮ್ಯಂ ।**
**ನಿರಾಕಾರಮತ್ಯುಜ್ಜ್ವಲಂ ಮೃತ್ಯುಹೀನಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥7॥**

ಭಾವಾರ್ಥ - ಯಾವುದು ಅಂತ್ಯರಹಿತವಾಗಿದೆಯೋ, ದೊರೆಯಾಗಿರುವುದೋ, ಸಮಸ್ತಕ್ಕೂ ಆದಿಯಾಗಿರುವುದೋ, ಬಯಕೆಗಳರಹಿತವಾಗಿರುವುದೋ, ಶುಭದಾಯಕವಾಗಿರುವುದೋ, ಕೂಟವಿರಹಿತವಾಗಿರುವುದೋ, ಓಂಕಾರಕ್ಕೆ ಮನ್ನಣೆಯಾಗಿದೆಯಾಗಿದೆಯೋ, ಯಾವುದು ಆಕಾರ ರಹಿತವಾಗಿದೆಯೋ, ಕಾಂತಿಯುತವಾಗಿದೆಯೋ, ಅಮೃತಮಯವಾಗಿದೆಯೋ, ಅಂತಹ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ಯದಾನಂದಸಿಂಧೌ ನಿಮಗ್ನಃ ಪುಮಾನ್ಸ್ಯಾ- ದವಿದ್ಯಾವಿಲಾಸಃಸಮಸ್ತ ಪ್ರಪಂಚಃ ।**
**ಯದಾ ನ ಸ್ಫುರತ್ಯದ್ಭುತಂ ಯನ್ನಿಮಿತ್ತಂ ಪರಂಬ್ರಹ್ಮ ನಿತ್ಯಂ ತದೇವಾಹಮಸ್ಮಿ ॥8॥**

ಭಾವಾರ್ಥ - ಯಾವ ಸಂತಸಸಾಗರದಲ್ಲಿ ಒಂದು ಬಾರಿ ಮುಳುಗಿದರೆ ಈ ಮಾಯಾವಿಲಾಸವಾಗಿರುವ ಜಗತ್ತು ಪುನಃ ಕಾಣಲಾರದೋ, ಹಾಗಾಗಿರುವುದರಿಂದ ಯಾವುದು ಅಚ್ಚರಿಯಾಗಿರುವುದೋ ಅಂತಹಾ ಶಾಶ್ವತನಾಗಿರುವ ದೇವಾಧಿದೇವನೇ ನಾನಾಗಿರುವೆ.

**ವಿಜ್ಞಾನನಾವಂ ಪರಿಗೃಹ್ಯ ಕಶ್ಚಿತ್ ತರೇದ್ ಯದಜ್ಞಾನಮಯಂ ಭವಾಬ್ಧಿಂ । ಜ್ಞಾನಾಸಿನಾ ಯೋ ಹಿ ವಿಚ್ಛಿದ್ಯ ತೃಷ್ಣಾಂ ವಿಷ್ಣೋಃ ಪದಂ ಯಾತಿ ಸ ಏವ ಧನ್ಯಃ ॥9॥**

ಭಾವಾರ್ಥ - ಯಾವಾತನು ತಿಳುವಳಿಕೆಯೆಂಬ ಕತ್ತಿಯಿಂದ ಆಶಾಪಾಶಗಳನ್ನು ತುಂಡರಿಸಿ ವಿಶಿಷ್ಟವಾದ ಅರಿವು ಎನ್ನುವ ಹರಿಗೋಲಿನ ಸಹಾಯದಿಂದ ಅಜ್ಞಾನವೆನ್ನುವ ಸಂಸಾರಸಾಗರವನ್ನು ದಾಟುವನೋ ಅವನು ಮಹಾವಿಷ್ಣುವಿನ ಸ್ಥಾನವನ್ನು ಸೇರುವನು. ಅವನೇ ಧನ್ಯನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ವಿಜ್ಞಾನನೌಕಾ ಸಂಪೂರ್ಣಂ ॥

## 14.13 ದಶ ಶ್ಲೋಕಿ

**ನ ಭೂಮಿರ್ನ ತೋಯಂ ನ ತೇಜೋ ನ ವಾಯುಃ ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ । ಅನೇಕಾಂತಿಕತ್ವಾತ್ ಸುಷುಪ್ತ್ಯೇಕಸಿದ್ಧಃ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥1॥**

ಭಾವಾರ್ಥ - ನಾನು ಭುವಿಯಲ್ಲ. ಜಲವಲ್ಲ. ಅಗ್ನಿ, ವಾಯು, ಆಕಾಶಗಳೂ ಅಲ್ಲ. ಅಥವಾ ಅವುಗಳ ಗುಂಪೂ ಅಲ್ಲ. ಯಾಕೆಂದರೆ ಇವೆಲ್ಲವೂ ಅಶಾಶ್ವತವಾದವುಗಳು. ಗಾಢವಾದ ನಿದ್ರಾ ಸಮಯದಲ್ಲಿ ಯೋಗಿಯೂ, ಉಳಿದ ಕುರುಹುಗಳೂ ಆಗಿರುವ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ವರ್ಣಾ ನ ವರ್ಣಾಶ್ರಮಾಚಾರ ಧರ್ಮಾಃ ನ ಮೇ ಧಾರಣಾಧ್ಯಾನಯೋಗಾದಯೋಽಪಿ । ಅನಾತ್ಮಾಶ್ರಯಾಹಂ ಮಮಾಧ್ಯಾಸಹಾನಾತ್ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥2॥**

ಭಾವಾರ್ಥ - ನನಗೆ ಬ್ರಾಹ್ಮಣಾದಿ ಚತುರ್ವರ್ಣಗಳಿಲ್ಲ. ವರ್ಣಾಶ್ರಮಗಳಿಗೆ ವಿಧಿಸಲಾಗಿರುವ ಆಚಾರಗಳಾಗಲೀ ಧರ್ಮಗಳ ಕಟ್ಟುಪಾಡುಗಳಾಗಲೀ ಇಲ್ಲ. ಯೋಗಿವರ್ಯರಿಗೆ ತಕ್ಕುದಾದ ಧ್ಯಾನ ಧಾರಣಾದಿ ಅಷ್ಟಾಂಗ ಸಹಿತವಾದ ಯೋಗವೂ

ಇಲ್ಲ. ಶರೀರದಲ್ಲಿ "ನಾನು" ಎನ್ನುವ ಸ್ಥಾನ, ಪ್ರಾಪಂಚಿಕ ಒಡವೆಗಳಲ್ಲಿ "ನನ್ನದು" ಎನ್ನುವ ಭಾವ ದೂರವಾಗಿರುವುದರಿಂದ ಆತ್ಮವಿಲ್ಲದವನೂ ಆಶ್ರಯರಹಿತನೂ ಉಳಿದ ಕುರುಹುಗಳೂ ಆಗಿರುವ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಮಾತಾ ನ ಪಿತಾ ನ ದೇವಾ ನ ಲೋಕಾಃ ನ ವೇದಾ ನ ಯಜ್ಞಾ ನ ತೀರ್ಥಂ ಬ್ರುವಂತಿ । ಸುಷುಪ್ತೌ ನಿರಪಾಸ್ತತಿಶೂನ್ಯಾತ್ಮಕತ್ವಾತ್ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥3॥**

ಭಾವಾರ್ಥ - ಅಪ್ಪ, ಅಮ್ಮ, ದೇವತೆಯರು, ಲೋಕಂಗಳು, ವೇದಗಳು, ಯಜ್ಞಾದಿಗಳು, ತೀರ್ಥಾದಿಗಳಾವುದೂ ನನಗಿಲ್ಲವೆಂದು ವಿದ್ವಾಂಸರು ಹೇಳುತ್ತಾರೆ. ನಿದ್ರಾ ಸಮಯದಲ್ಲಿ ಅನ್ಯ ವಸ್ತುಗಳ ಅರಿವಿಲ್ಲದೆ ಅತ್ಯಂತ ಪೊಳ್ಳು ಸ್ವರೂಪದವನಾಗಿ ಉಳಿದ ಕುರುಹುಗಳೂ ಆಗಿರುವ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಸಾಂಖ್ಯಂ ನ ಶೈವಂ ನ ತತ್ಪಾಂಚರಾತ್ರಂ ನ ಜೈನಂ ನ ಮೀಮಾಂಸಕಾದೇರ್ಮತಂ ವಾ । ವಿಶಿಷ್ಟಾನುಭೂತ್ಯಾ ವಿಶಿದ್ಧಾತ್ಮಕತ್ವಾತ್ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥4॥**

ಭಾವಾರ್ಥ - ನನಗೆ ಕಪಿಲ ಮಹರ್ಷಿ ಬರೆದ ಸಾಂಖ್ಯ ಶಾಸ್ತ್ರವಾಗಲೀ, ಶೈವ ಪಂಥವಾಗಲೀ, ಪಾಂಚರಾತ್ರಾದಿ ಆಗಮಸಿದ್ಧಾಂತವಾಗಲೀ, ಜೈನ ಮತವಾಗಲೀ, ಷಡ್ದರ್ಶನ ಶಾಸ್ತ್ರಗಳಾಗಲೀ ಯಾವುವೂ ಇಲ್ಲ. ಮಹತ್ತರವಾದ ಅನುಭವದಿಂದ ಪವಿತ್ರಾತ್ಮ ಪುನೀತನಾಗಿರುವುದಲ್ಲದೆ ಉಳಿದ ಕುರುಹುಗಳೂ ಆಗಿರುವ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಚೋರ್ಧ್ವಂ ನ ಚಾಧೋ, ನ ಚಾಂತರ್ನ ಬಾಹ್ಯಂ ನ ಮಧ್ಯಂ ನ ತಿರ್ಯಙ್ ನ ಪೂರ್ವಾ ಪರಾದಿಕ್ । ವಿಯದ್ವ್ಯಾಪಕತ್ವಾದಖಂಡೈಕ ರೂಪಃ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥5॥**

ಭಾವಾರ್ಥ - ಮೇಲೆ, ಕೆಳಗೆ, ಒಳಹೊರಗೆ, ಮಧ್ಯ, ಅಡ್ಡ, ಮುಂದೆ, ಹಿಂದೆ ಈ ವಿಧವಾದ ಅಷ್ಟ ದಿಸೆಗಳ ವಿಭಾಗ ನನಗಿಲ್ಲ. ನಾನು ಅಕಾಶದಂತೆ ವಿಶಾಲ

ವ್ಯಾಪಕನೂ, ತುಂಡಾಗದ ಏಕೈಕರೂಪಿಯಾಗಿ ಉಳಿದ ಕುರುಹುಗಳೂ ಆಗಿರುವ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಶುಕ್ಲಂ ನ ಕೃಷ್ಣಂ ನ ರಕ್ತಂ ನ ಪೀತಂ ನ ಕುಬ್ಜಂ ನ ಪೀನಂ ನ ಹ್ರಸ್ವಂ ನ ಧೀರ್ಘಂ । ಅರೂಪಂ ತಥಾ ಜ್ಯೋತಿರಾಕಾರಕತ್ವಾತ್ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥6॥**

ಭಾವಾರ್ಥ - ನಾನು ಶ್ವೇತ ವರ್ಣೀಯನಲ್ಲ. ಅಂತೆಯೇ ಕರಿ ವರ್ಣದವನೂ ಅಲ್ಲ. ರಕ್ತ ವರ್ಣನೂ ಅಲ್ಲ. ಅರಸಿನ ಬಣ್ಣವೂ ನನಗಿಲ್ಲ. ನಾನು ಕುಳ್ಳನೂ ಅಲ್ಲ. ಸ್ಥೂಲದೇಹನೂ ಅಲ್ಲ. ಗಿಡ್ಡಗಿರುವವನೂ ಅಲ್ಲ. ಎತ್ತರಕ್ಕೆ ಬೆಳೆದ ಶರೀರಿಯೂ ಅಲ್ಲ. ಪವಿತ್ರವಾಗಿರುವ ಶುದ್ಧಾತ್ಮವೇ ನನ್ನ ಗುರುತಾಗಿರುವುದರಿಂದ ನಾನು ಆಕಾರರಹಿತನಾಗಿದ್ದು ಉಳಿದ ಕುರುಹುಗಳೂ ಆಗಿರುವ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಶಾಸ್ತಾ ನ ಶಾಸ್ತ್ರಂ ನ ಶಿಷ್ಯೋ ನ ಶಿಕ್ಷಾ ನ ಚ ತ್ವಂ ನ ಚಾಹಂ ನ ಚಾಯಂ ಪ್ರಪಂಚಃ । ಸ್ವರೂಪವಾಭೋಧೋ ವಿಕಲ್ಪಾಸಹಿಷ್ಣುಃ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥7॥**

ಭಾವಾರ್ಥ - ನನಗೆ ಕಲಿಸುವ ಗುರುವಿಲ್ಲ. ನಾನು ಶಾಸ್ತ್ರವಲ್ಲ. ನನಗೆ ಶಿಷ್ಯನೂ ಇಲ್ಲ. ನಾನು ಗುರುವೂ ಅಲ್ಲ. ನನಗೆ "ನೀನು-ನಾನು" ಎಂಬುದಿಲ್ಲ. ಮಾಯಾಮಯವಾಗಿರುವ ಈ ಬ್ರಹ್ಮಾಂಡವು ನನಗಿರುವುದಿಲ್ಲ. ಆಕಾರ, ತಿಳುವಳಿಕೆ, ಹೆಸರುಬಣ್ಣಾದಿ ವಿಕಲ್ಪಗಳನ್ನು ನಾನು ಅನುಭವಿಸುವವನಲ್ಲ. ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಜಾಗ್ರನ್ನ ಮೇ ಸ್ವಪ್ನಕೋ ವಾ ಸುಷುಪ್ತಿಃ ನ ವಿಶ್ವೋ ನ ವಾ ತೈಜಸಃಪ್ರಾಜ್ಞಕೋ ವಾ । ಅವಿದ್ಯಾತ್ಮಕತ್ವಾತ್ ತ್ರಯಾಣಾಂ ತುರೀಯಃ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥8॥**

ಭಾವಾರ್ಥ - ನನಗೆ ಜಾಗ್ರತ್, ಸ್ವಪ್ನ, ಸುಷುಪ್ತಿಗಳ ಲೇಪವಿಲ್ಲ. ಜೀವ, ಪರಾಕ್ರಮ, ಬುದ್ಧಿಗಳೆನ್ನುವ ನಾಮಗಳಿಂದ ಗುರುತಿಸಲ್ಪಡುವ ಮಾಯಾಮಯಾತ್ಮಕನಾದ ಆತ್ಮನೂ ನಾನಲ್ಲ. ನಾನು ಈ ಮೂರೂ ಅವಸ್ಥೆಗಳನ್ನು ಮೀರಿ ಇರುವ ಶಿವಜೀವೈಕ್ಯನು. ಆದುದರಿಂದ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ಅಪಿ ವ್ಯಾಪಕತ್ವಾದಿತತ್ವಾತ್ಪ್ರಯೋಗಾತ್ ಸ್ವತಃ ಸಿದ್ಧಭಾವಾದನನ್ಯಾಶ್ರಯತ್ವಾತ್ ।**
**ಜಗತ್ತುಚ್ಛಮೇತತ್ಸಮಸ್ತಂ ತದನ್ಯತ್ ತದೇಕೋಽವಶಿಷ್ಟಃ ಶಿವಃ ಕೇವಲೋಽಹಂ ॥9॥**

ಭಾವಾರ್ಥ - ಬ್ರಹ್ಮಾಂಡದಲ್ಲಿ ಪರಮಾತ್ಮನಲ್ಲಿರುವ ವ್ಯಾಪಕತೆಯೇ ಆದಿಯಾದ ಧರ್ಮ ಸಂಬಂಧವು ಇರದಿರುವುದರಿಂದಲೂ ದೇವಾಧಿದೇವತ್ವವು ಸ್ವತಃಸಿದ್ಧವಾಗಿರುವುದರಿಂದಲೂ, ಹಾಗೂ ಬೇರೆಯಲ್ಲದ ಶರಣಾಗತಿ ಸ್ಥಾನವಾದುದರಿಂದಲೂ ಈ ಪೂರ್ಣ ಬ್ರಹ್ಮಾಂಡವು ಹೀನವಾದುದಾಗಿದೆ. ಆದುದರಿಂದ ಕೈವಲ್ಯದಾಯಕನಾಗಿರುವ ಶಿವನೇ ನಾನಾಗಿರುವೆ.

**ನ ಚೈಕಂ ತದನ್ಯದ್ದ್ವಿತೀಯಂ ಕುತಃ ಸ್ಯಾತ್ ನ ಕೇವಲತ್ವಂ ನ ಚಾ ಕೇವಲತ್ವಂ ।**
**ನ ಶೂನ್ಯಂ ಚ ಶೂನ್ಯಮದ್ವೈತಕತ್ವಾತ್ ಕಥ ಸರ್ವವೇದಾಂತಸಿದ್ಧಂ ಬ್ರವೀಮಿ ॥10॥**

ಭಾವಾರ್ಥ - ಶ್ರೇಷ್ಠವಾಗಿರುವ ಬ್ರಹ್ಮಜ್ಞಾನವನ್ನು "ಏಕಮಾತ್ರಾ" ಎಂದು ಹೇಳಲಾಗದು. ಏಕೆಂದರೆ ಅದಲ್ಲದ ಮತ್ತೊಂದು ಎರಡನೆಯದಿಲ್ಲ. ಇದಕ್ಕೆ ಪವಿತ್ರತೆಯಾಗಲೀ ಅಪವಿತ್ರತೆಯಾಗಲೀ ಇಲ್ಲ. ಇದು ಜೊಳ್ಳೂ ಅಲ್ಲ. ಜೀವಾತ್ಮ-ಪರಮಾತ್ಮ ಬೇರೆ ಬೇರೆಯಲ್ಲ ಎಂಬ ಅದ್ವೈತವಾದುದಾಗಿದೆ. ಹೀಗಿರುವಾಗ ಸಮಸ್ತ ವೇದೋಪನಿಷತ್ತುಗಳಿಂದ ಪ್ರತಿಪಾದಿಸಲ್ಪಟ್ಟಿರುವ ಬ್ರಹ್ಮವನ್ನು ಯಾವ ರೀತಿಯಾಗಿ ವರ್ಣಿಸಲು ಸಾಧ್ಯ?

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ದಶಶ್ಲೋಕೀ ಸಂಪೂರ್ಣಂ ॥

## 14.14 ಜೀವನ್ಮುಕ್ತಾನಂದ ಲಹರಿ

**ಪುರೇ ಪೌರಾನ್ ಪಶ್ಯನ್ನರಯುವತಿನಾಮಾಕೃತಿಮಯಾನ್ ಸುವೇಷಾನ್ ಸ್ವರ್ಣಾಲಂಕರಣಕಲಿತಾಂಶ್ಚಿತ್ರಸದೃಶಾನ್ । ಸ್ವಯಂ ಸಾಕ್ಷೀ ದ್ರಷ್ಟೇತ್ಯಪಿ ಚ ಕಲಯಂಸ್ತೈಃ ಸಹ ರಮನ್ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥1॥**

ಭಾವಾರ್ಥ - ಪುರದಲ್ಲಿ ಸ್ತ್ರೀಪುರುಷರೆಂಬ ನಾಮರೂಪಗಳಿಂದೊಡಗೂಡಿ ಉತ್ತಮ ವೇಷಗಳಿಂದಲೂ ಚಿನ್ನದ ಭೂಷಣಗಳಿಂದಲೂ ಕೂಡಿರುವ ಚಿತ್ರದಂತೆ ಕಾಣುತ್ತಿರುವ ಪುರಜನರನ್ನು ಕಾಣುತ್ತಾ, ತಾನು ಸಾಕ್ಷಿಯಾದ ದ್ರಷ್ಟೃವೆಂದು ತಿಳಿದುಕೊಂಡು ಅವರೊಡನೆ ಆಡುತ್ತಿರುವ, ಗುರುರೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ವನೇ ವೃಕ್ಷಾನ್ ಪಶ್ಯನ್ ದಲಫಲಭರಾನ್ನಮ್ರಸುಶಿಖಾನ್ ಘನಚ್ಛಾಯಾಚ್ಛನ್ನಾನ್ ಬಹುಲಕಲಕೂಜದ್ದ್ವಿಜಗಣಾನ್ । ಭಜನ್ ಘಸ್ರೇ ರಾತ್ರಾವವನಿತಲತಲ್ಪೈಕಶಯನೋ ಮುನಿರ್ವ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥2॥**

ಭಾವಾರ್ಥ - ಅರಣ್ಯದಲ್ಲಿ ಎಲೆ, ಹಣ್ಣು - ಇವುಗಳಿಂದ ತುಂಬಿ, ಬಾಗಿರುವ ಕೊಂಬೆಗಳುಳ್ಳವಾಗಿ, ದಟ್ಟವಾದ ನೆರಳಿನಿಂದ ಮರೆಯಾಗಿರುವ, ಮರಗಳನ್ನು ಕಾಣುತ್ತಾ ಬಹಳ ಇಂಪಾಗಿ ದನಿಗೈಯುತ್ತಿರುವ ಪಕ್ಷಿಗಳ ಗುಂಪುಗಳನ್ನು ಸೇವಿಸುತ್ತಾ, ಹಗಲಲ್ಲೂ ರಾತ್ರೆಯಲ್ಲಿಯೂ ಭೂತಲವೆಂಬ ಒಂದೇ ಹಾಸಿಗೆಯಲ್ಲಿ ಮಲಗುತ್ತಿರುವನಾಗಿದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾಚಿತ್ ಪ್ರಾಸಾದೇ ಕ್ವಚಿದಪಿ ಚ ಸೌಧೇಷು ಧನಿನಾಂ ಕದಾ ಕಾಲೇ ಶೈಲೇ ಕ್ವಚಿದಪಿ ಚ ಕೂಲೇಷು ಸರಿತಾಂ ಕುಟೀರೇ ದಾಂತಾನಾಂ ಮುನಿಜನವರಾಣಾಮಪಿ ವಸನ್ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥3॥**

ಭಾವಾರ್ಥ - ಒಂದೊಂದು ವೇಳೆ ಅರಮನೆಯಲ್ಲಿಯೂ ಒಂದೊಂದು ವೇಳೆ ಧನವಂತರ ಮಹಡಿಯಮನೆಗಳಲ್ಲಿಯೂ ಒಂದೊಂದು ವೇಳೆ ಬೆಟ್ಟದಮೇಲೂ ಒಂದೊಂದು ವೇಳೆ ನದಿಗಳ ದಂಡೆಗಳ ಮೇಲೂ (ಒಂದೊಂದು ವೇಳೆ) ದಾಂತರಾದ ಮುನಿಜನಶ್ರೇಷ್ಠರುಗಳ ಗುಡಿಸಲಲ್ಲಿಯೂ ವಾಸಮಾಡುತ್ತಿದ್ದೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕ್ವಚಿದ್ಬಾಲೈಃ ಸಾರ್ಧಂ ಕೃತಲಗತಾಲೈಃ ಸಹಸಿತೈಃ ಕ್ವಚಿತ್ತಾರುಣ್ಯಾಲಂಕೃತನರವಧೂಭಿಃ ಸಹ ರಮನ್ । ಕ್ವಚಿದ್ವೃದ್ಧೈಶ್ಚಿಂತಾ ಕುಲಿತಹೃದಯೈಶ್ಚಾಪಿ ವಿಲಪನ್ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥4॥**

ಭಾವಾರ್ಥ - ಒಂದೊಂದು ವೇಳೆ ಕೈಚಪ್ಪಾಳೆ ಹಾಕಿಕೊಂಡು ನಗುತ್ತಿರುವ ಹುಡುಗರೊಡನೆ, ಒಂದೊಂದು ವೇಳೆ ಯೌವನದಿಂದ ಅಲಂಕೃತರಾಗಿರುವ ಸ್ತ್ರೀಪುರುಷರೊಡನೆ ಆಡುತ್ತಲೂ ಒಂದೊಂದು ವೇಳೆ ಚಿಂತಾಕ್ರಾಂತವಾದ ಹೃದಯವುಳ್ಳ ಮುದುಕರೊಡನೆ ಅಳುತ್ತಲೂ ಇದ್ದೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಚಿದ್ ವಿದ್ವದ್ಭಿರ್ವಿವಿದಿಷುಭಿರತ್ಯಂತವಿರತೈ ಕದಾಚಿತ್ಕಾವ್ಯಾಲಂಕೃತಿರಸರಸಾಲೈಃ ಕವಿವರೈಃ । ಕದಾಚಿತ್ಸತ್ತರ್ಕೈರನುಮಿತಿಪರೈಸ್ತಾರ್ಕಿಕವರೈ ರ್ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥5॥**

ಭಾವಾರ್ಥ - ಒಂದೊಂದು ವೇಳೆ ಜ್ಞಾನಿಗಳೊಡನೆ, (ಒಂದೊಂದು ವೇಳೆ) ಅತ್ಯಂತ ವಿರಕ್ತರಾದ ಜಿಜ್ಞಾಸುಗಳೊಡನೆ ಒಂದೊಂದು ವೇಳೆ ಕಾವ್ಯ, ಅಲಂಕಾರ, ರಸ ಇವುಗಳಲ್ಲಿ ರಸಿಕರಾದ ಕವಿವರರೊಡನೆ, ಒಂದೊಂದು ವೇಳೆ ಸತ್ತರ್ಕಗಳಿಂದ ಅನುಮಾನಮಾಡುತ್ತಿರುವ ತಾರ್ಕಿಕಶ್ರೇಷ್ಠರೊಡನೆ - ಹೀಗೆಲ್ಲ ಇರುತ್ತಿದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾ ಧ್ಯಾನಾಭ್ಯಾಸೈಃ ಕ್ವಚಿದಪಿ ಸಪರ್ಯಾಂ ವಿಕಸಿತೈಃ ಸುಗಂಧೈಃ ಸತ್ಪುಷ್ಪೈಃ ಕ್ವಚಿದಪಿ ದಲೈರೇವ ವಿಮಲೈಃ । ಪ್ರಕುರ್ವನ್ ದೇವಸ್ಯ ಪ್ರಮುದಿತಮನಾಃ ಸಂಸ್ತುತಿಪರೋ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥6॥**

ಭಾವಾರ್ಥ - ಒಂದು ವೇಳೆ ಧ್ಯಾನಾಭ್ಯಾಸಗಳಿಂದಲೂ ಒಂದೊಂದು ವೇಳೆ ಅರಳಿದ ಸುವಾಸನೆಯ ಒಳ್ಳೆಯ ಹೂಗಳಿಂದಲೂ ಒಂದೊಂದು ವೇಳೆ ನಿರ್ಮಲವಾದ ಬರಿಯ ಪತ್ರೆಗಳಿಂದಲೂ ದೇವನ ಅರ್ಚನೆಯನ್ನು ಮಾಡುತ್ತಾ ಸ್ತೋತ್ರ ಪರನಾಗಿ ಸಂತುಷ್ಟಮನಸ್ಕನಾಗಿದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿ ಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಶಿವಾಯಾಃ ಶಂಭೋರ್ವಾ ಕ್ವಚಿದಪಿ ಚ ವಿಷ್ಣೋರಪಿ ಕದಾ ಗಣಾಧ್ಯಕ್ಷಸ್ಯಾಪಿ ಪ್ರಕಟತಪನಸ್ಯಾಪಿ ಚ ಕದಾ ಪಠನ್ ವೈ ನಾಮಾಲಿಂ ನಯನರಚಿತಾನಂದಸಲಿಲೋ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥7॥**

ಭಾವಾರ್ಥ - ಒಮ್ಮೆ ಶಕ್ತಿಯ, ಒಮ್ಮೆ ಶಂಭುವಿನ, ಇನ್ನೊಮ್ಮೆ ವಿಷ್ಣುವಿನ, ಮತ್ತೊಮ್ಮೆ ಗಣಪತಿಯ ಇನ್ನೂ ಒಂದು ಸಲ ಉದಯವಾದ ಸೂರ್ಯನ ನಾಮಾವಳಿಯನ್ನು ಪಠಿಸುತ್ತಾ ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತಿದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾ ಗಂಗಾಂಭೋಭಿಃ ಕ್ವಚಿದಪಿ ಚ ಕೂಪೋತ್ಥಸಲಿಲೈಃ ಕ್ವಚಿತ್ಕಾಸಾರೋತ್ಥೈಃ ಕ್ವಚಿದಪಿ ಸದುಷ್ಣೈಶ್ಚ ಶಿಶಿರೈಃ ಭಜನ್ ಸ್ನಾನಂ ಭೂತ್ಯಾ ಕ್ವಚಿದಪಿ ಚ ಕರ್ಪೂರನಿಭಯಾ ಮೂರ್ತಿ ವ್ಯಾಮೋಹಂ ಭಜತಿ ರುರುದೀಕ್ಷಾಕ್ವತತಮಾಃ ॥8॥**

ಭಾವಾರ್ಥ - ಒಮ್ಮೆ ಗಂಗೆಯ ನೀರಿನಲ್ಲಿ, ಇನ್ನೊಮ್ಮೆ ಭಾವಿಯ ನೀರಿನಲ್ಲಿ, ಮತ್ತೊಮ್ಮೆ ಕೆರೆಯ ನೀರಿನಲ್ಲಿ ಒಮ್ಮೆ ಬಿಸಿನೀರಿನಲ್ಲಿ ಮತ್ತೊಮ್ಮೆ ತಣ್ಣೀರಿನಲ್ಲಿ, ಕೆಲವು ವೇಳೆ ಕರ್ಪೂರದಂತೆ ಬೆಳ್ಳಗಿರುವ ವಿಭೂತಿಯಿಂದ, ಸ್ನಾನವನ್ನು

ಮಾಡುತ್ತಿದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾಚಿಜ್ಜಾಗರ್ತ್ಯಾಂ ವಿಷಯಕರಣೈಃ ಸಂವ್ಯವಹರನ್ ಕದಾಚಿತ್ಸ್ವಪ್ನಸ್ಥಾನಪಿ ಚ ವಿಷಯಾನೇವ ಚ ಭಜನ್ । ಕದಾಚಿತ್ಸೌಷುಪ್ತಂ ಸುಖಮನುಭವನ್ನೇವ ಸತತಂ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥9॥**

ಭಾವಾರ್ಥ - ಒಮ್ಮೆ ಎಚ್ಚರದಲ್ಲಿ ಇಂದ್ರಿಯವಿಷಯಗಳಿಂದ ವ್ಯವಹರಿಸುತ್ತಲೂ ಇನ್ನೊಮ್ಮೆ ಸ್ವಪ್ನದಲ್ಲಿರುವ ವಿಷಯಗಳನ್ನೇ ಸೇವಿಸುತ್ತಲೂ ಮತ್ತೊಮ್ಮೆ ಸುಷುಪ್ತಿಯ ಸುಖವನ್ನೇ ಅನುಭವಿಸುತ್ತಲೂ ಇದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾಪ್ಯಾಶಾವಾಸಾಃ ಕ್ವಚಿದಪಿ ಚ ದಿವ್ಯಾಂಬರಧರಃ ಕ್ವಚಿತ್ಪಂಚಾಸ್ಯೋತ್ಥಾಂ ತ್ವಚಮಪಿ ದಧಾನಃ ಕಟತಟೇ ಮನಸ್ವೀ ನಿಃಸಂಗಃ ಸುಜನಹೃದಯಾನಂದಜನಕೋ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥10॥**

ಭಾವಾರ್ಥ - ಒಂದುಬಾರಿ ದಿಗಂಬರನಾಗಿ ಮತ್ತೊಂದು ಬಾರಿ ದಿವ್ಯವಸ್ತ್ರವನ್ನು ಧರಿಸಿದವನಾಗಿ, ಇನ್ನೊಂದು ಬಾರಿ ಸಿಂಹದಿಂದ ತೆಗೆದ ಚರ್ಮವನ್ನು ಸೊಂಟಕ್ಕೆ ಸುತ್ತಿಕೊಂಡವನಾಗಿ - ಹೀಗಿದ್ದರೂ ಸ್ವತಂತ್ರೇಚ್ಛನಾಗಿ ನಿಃಸಂಗನಾಗಿ ಸಜ್ಜನರ ಹೃದಯಕ್ಕೆ ಆನಂದವನ್ನುಂಟುಮಾಡುತ್ತಾ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾಚಿತ್ಸತ್ತ್ವಸ್ಥಃ ಕ್ವಚಿದಪಿ ರಜೋವೃತ್ತಿಷು ಗತ- ಸ್ತಮೋವೃತ್ತಿಃ ಕ್ವಾಪಿ ತ್ರಿತಯರಹಿತಃ ಕ್ವಾಪಿ ಚ ಪುನಃ । ಕದಾಚಿತ್ಸಂಸಾರೀ ಶ್ರುತಿಪಥವಿಹಾರೀ ಕ್ವಚಿದಹೋ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥11॥**

ಭಾವಾರ್ಥ - ಒಂದುವೇಳೆ ಸತ್ತ್ವಗುಣದಲ್ಲಿದ್ದು ಕೊಂಡವನಾಗಿ, ಇನ್ನೊಂದು ವೇಳೆ ರಜೋಗುಣದ ವೃತ್ತಿಗಳಲದಲಿರುತ್ತಾ, ಯಾವಾಗಲೋ ಒಮ್ಮೆ ತಮೋವೃತ್ತಿಯಲ್ಲಿಯೂ ಇರುತ್ತಾ ಮತ್ತೂ ಕೆಲವು ವೇಳೆಗಳಲ್ಲಿ ಈ ಮೂರು

ಗುಣಗಳೂ ಇಲ್ಲದವನಾಗಿ ಕೆಲವು ವೇಳೆ ಸಂಸಾರಿಯಾಗಿದ್ದುಕೊಂಡು, ಕೆಲವು ವೇಳೆ ವೇದಾಂತಮಾರ್ಗದಲ್ಲಿ ವಿಹರಿಸುತ್ತಿರುವವನಾಗಿ, ಆಹಾ! ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾಚಿನ್ಮೌನಸ್ಥಃ ಕ್ವಚಿದಪಿ ಚ ವಾಗ್ವಾದನಿರತಃ ಕದಾಚಿತ್ಸಾನಂದಂ ಹಸಿತರಭಸಸ್ತ್ಯಕ್ತವಚನಃ । ಕದಾಚಿಲ್ಲೋಕಾನಾಂ ವ್ಯವಹೃತಿಸಮಾಲೋಕನಪರೋ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥12॥**

ಭಾವಾರ್ಥ - ಒಂದೊಂದು ವೇಳೆ ಮೌನಿಯಾಗಿರುತ್ತಾ ಒಂದೊಂದು ವೇಳೆ ವಾಗ್ವಾದದಲ್ಲಿ ನಿರತನಾಗಿದ್ದುಕೊಂಡು ಒಂದೊಂದು ವೇಳೆ ಮಾತನ್ನು ಬಿಟ್ಟು, ಆನಂದದಿಂದ ಗಟ್ಟಿಯಾಗಿ ನಗುತ್ತಾ, ಒಂದೊಂದು ವೇಳೆ ಜನರ ವ್ಯವಹಾರವನ್ನು ನೋಡುತ್ತಾ ಹೀಗೆಲ್ಲ ಇದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾಚಿಚ್ಚ ಸ್ತ್ರೀಣಾಂ ವಿಕಚಮುಖಪದ್ಮೇಷು ಕಮಲಂ ಕ್ಷಿಪಂಸ್ತಾಸಾಂ ಕ್ವಾಪಿ ಸ್ವಯಮಪಿ ಚ ಗೃಹ್ಣನ್ ಸ್ವಮುಖತಃ । ತದದ್ವೈತಂ ರೂಪಂ ನಿಜಪ್ರವಿಹೀನಂ ಪ್ರಕಟಯನ್ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥13॥**

ಭಾವಾರ್ಥ - ಒಂದೊಂದು ವೇಳೆ ಸ್ತ್ರೀಯರ ಅರಳಿದ ಮುಖಕಮಲಗಳಲ್ಲಿ ಅನ್ನದ ತುತ್ತನ್ನಿಡುತ್ತಾ, ಒಂದೊಂದು ವೇಳೆ ಅವರು ಕೊಟ್ಟ ತುತ್ತನ್ನು ತನ್ನ ಬಾಯಿಯಿಂದಲೇ ಗ್ರಹಿಸುತ್ತಾ ತಾನು, ಮತ್ತೊಬ್ಬರು - ಎಂಬ ಭೇದವಿಲ್ಲದ ಆ ಅದ್ವೈತ ರೂಪವನ್ನು ಪ್ರಕಟಿಸುತ್ತಾ ಇದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕ್ವಚಿಚ್ಛೈವೈಃ ಸಾರ್ಧಂ ಕ್ವಚಿದಪಿ ಚ ಶಾಕ್ತೈಃ ಸಹ ರಮನ್ ಕದಾ ವಿಷ್ಣೋರ್ಭಕ್ತೈಃ ಕ್ವಚಿದಪಿ ಚ ಸೌರ್ಯೈಃ ಸಹ ವಸನ್ । ಕದಾಚಿದ್ಗಾಣೇಶೈರ್ಗತ ಸಕಲಭೇದೋಽದ್ವಯತಯಾ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥14॥**

ಭಾವಾರ್ಥ - ಕೆಲವು ವೇಳೆಗಳಲ್ಲಿ ಶೈವರೊಡನೆ, ಕೆಲವು ವೇಳೆಗಳಲ್ಲಿ ಶಾಕ್ತರೊಡನೆ ಇದ್ದು ಸಂತಸಪಡುತ್ತಾ, ಕೆಲವು ವೇಳೆಗಳಲ್ಲಿ ವಿಷ್ಣುವಿನ ಭಕ್ತರೊಡನೆಯೂ ಕೆಲವು ವೇಳೆಗಳಲ್ಲಿ ಸೂರ್ಯೋಪಾಸಕರೊಡನೆಯೂ ವಾಸಮಾಡುತ್ತಾ, ಕೆಲವು ವೇಳೆಗಳಲ್ಲಿ ಗಾಣಾಪತ್ಯರೊಡನೆಯೂ ಇರುತ್ತ ಅದ್ವಯನಾಗಿರುವದರಿಂದ ಯಾವದೊಂದು ಭೇದವೂ ಇಲ್ಲದವನಾಗಿ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ನಿರಾಕಾರಂ ಕ್ವಾಪಿ ಕ್ವಚಿದಪಿ ಚ ಸಾಕಾರಮಮಲಂ ನಿಜಂ ಶೈವಂ ರೂಪಂ ವಿವಿಧಗುಣಭೇದೇನ ಬಹುಧಾ । ಕದಾಶ್ಚರ್ಯಂ ಪಶ್ಯನ್ ಕಿಮಿದಮಿತಿ ಹೃಷ್ಯನ್ನಪಿ ಕದಾ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥15॥**

ಭಾವಾರ್ಥ - ಒಮ್ಮೆ ನಿರಾಕಾರವಾದ, ಮತ್ತೊಮ್ಮೆ ನಿರ್ಮಲವಾದ ಸಾಕಾರವಾದ ತನ್ನ ಶಿವರೂಪವನ್ನು ಬಗೆಬಗೆಯ ಗುಣಭೇದಗಳಿಂದ ಬಲುಬಗೆಯಾಗಿರುವದನ್ನು ಕಾಣುತ್ತಾ ಒಮ್ಮೆ ಇದೇನು? ಎಂದು ಆಶ್ಚರ್ಯವನ್ನು ಕಾಣುತ್ತಾ ಒಮ್ಮೊಮ್ಮೆ ಆನಂದವನ್ನು ಪಡೆಯುತ್ತಾ ಇದ್ದರೂ ಗುರುದೀಕ್ಷೆಯಿಂದ ಅಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಕದಾದ್ವೈತಂ ಪಶ್ಯನ್ನಖಿಲಮಪಿ ಸತ್ಯಂ ಶಿವಮಯಂ ಮಹಾವಾಕ್ಯಾರ್ಥಾನಾಮವಗತಿಸಮಭ್ಯಾಸವಶತಃ । ಗತದ್ವೈತಾಭಾಸಃ ಶಿವ ಶಿವ ಶಿವೇತ್ಯೇವ ವಿಲಪನ್ ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥16॥**

ಭಾವಾರ್ಥ - ಕೆಲವು ವೇಳೆಗಳಲ್ಲಿ (ಈ ಪ್ರಪಂಚ)ವೆಲ್ಲವನ್ನು ಸತ್ಯವೂ ಶಿವಮಯವೂ ಆದ ಅದ್ವೈತವೇ ಎಂಬುದನ್ನು ಮಹಾವಾಕ್ಯಗಳ ಅರ್ಥದ ಜ್ಞಾನದ ಅಭ್ಯಾಸದ ವಶದಿಂದ ಕಂಡುಕೊಂಡು ದ್ವೈತಾಭಾಸವನ್ನು ತೊಲಗಿಸಿಕೊಂಡು ಶಿವ, ಶಿವ, ಶಿವ, ಎಂದೇ ಹೇಳಿಕೊಳ್ಳುತ್ತಿರುವವನಾಗಿ ಗುರುದೀಕ್ಷೆಯಿಂದ ಆ ಜ್ಞಾನವನ್ನು ನೀಗಿಕೊಂಡಿರುವ ಮುನಿಯು ಭ್ರಾಂತಿಯನ್ನು ಹೊಂದುವದಿಲ್ಲ.

**ಇಮಾಂ ಮುಕ್ತಾವಸ್ಥಾಂ ಪರಮಶಿವಸಂಸ್ಥಾಂ ಗುರುಕೃಪಾ ಸುಧಾಪಾಂಗವಾಪ್ಯಾಂ ಸಹಜಸುಖವಾಪ್ಯಾಮನುದಿನಂ । ಮುಹುರ್ಮಜ್ಜನ್ ಮಜ್ಜನ್ಭಜತಿ ಸುಕೃತೀ ಚೇನ್ನರವರ ಸ್ತದಾ ಯೋಗೀ ತ್ಯಾಗೀ ಕವಿರಿತ ವದಂತೀಹ ಕವಯಃ ॥17॥**

ಭಾವಾರ್ಥ - ಗುರುಕೃಪೆಯ ಅಮೃತಕಟಾಕ್ಷದಿಂದ ಪಡೆದುಕೊಳ್ಳಬೇಕಾಗಿರುವ ಈ ಮುಕ್ತಾವಸ್ಥೆಯಾದ ಪರಮಶಿವನಿಷ್ಠೆಯನ್ನು ಸಹಜಾನಂದವಾಪಿಯಲ್ಲಿ ದಿನದಿನವೂ ಮುಳುಮುಳುಗಿ ಸುಕೃತಿಯಾದ ಮನುಷ್ಯಶ್ರೇಷ್ಠನು ಪಡೆದುಕೊಳ್ಳುತ್ತಾನಾದರೆ, ಆಗ ಅವನೇ ಯೋಗಿಯು, ತ್ಯಾಗಿಯೂ, ಕವಿಯೂ ಎಂದು ಬಲ್ಲವ್ರು ಹೇಳುವರು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಜೀವನ್ಮುಕ್ತಾನಂದ ಲಹರಿ ಸಂಪೂರ್ಣಂ ॥

## 14.15 ಮಾತೃ ಪಂಚಕಂ

**ಆಸ್ತಾಂ ತಾವದ್ ಇಯಂ ಪ್ರಸೂತಿಸಮಯೇ ದುರ್ವಾರಶೂಲವ್ಯಥಾ ನೈರುಚ್ಯಂ ತನುಶೋಷಣಂ ಮಲಮಯೀ ಶಯ್ಯಾ ಚ ಸಂವತ್ಸರೀ । ಏಕಸ್ಯಾಪಿ ನ ಗರ್ಭಭಾರ ಭರಣ ಕ್ಲೇಶಸ್ಯ ಯಸ್ಯ ಅಕ್ಷಮಃ ದಾತುಂ ನಿಷ್ಕೃತಿಂ ಉನ್ನತೋಽಪಿ ತನಯಃ ತಸ್ಯೈ ಜನನ್ಯೈ ನಮಃ ॥ 1॥**

ಭಾವಾರ್ಥ - ಪ್ರಸೂತಿ(ಹೆರಿಗೆ) ಕಾಲದಲ್ಲಿ ಸಹಿಸಲಸಾಧ್ಯವಾದ ಹೊಟ್ಟೆನೋವಿನ ಬಾಧೆ ಹಾಗಿರಲಿ, ವರ್ಷವೆಲ್ಲ ಬಾಯಿಸಪ್ಪೆ, ಶರೀರಶ್ರಮ, ಕೊಳಕಾದ ಹಾಸಿಗೆಯಲ್ಲಿ ಮಲಗುವಿಕೆ, ಇತ್ಯಾದಿಗಳನ್ನು ಸಹಿಸಿಕೊಂಡು ಜನ್ಮವನ್ನು ನೀಡುವ ತಾಯಿಗೆ, ಹಾಗೂ ಗರ್ಭಿಣಿಯಾಗಿ ಗರ್ಭದ ಭಾರವನ್ನು ಹೊತ್ತು ಕಷ್ಟವನ್ನು ಸಹಿಸಿಕೊಳ್ಳುವ (ತಾಯಿಗೆ) ಯಾವನೊಬ್ಬನೂ ಪುಷ್ಟನಾದವನು ಕೂಡ ತನ್ನ ಪಾಲಿನ ಸಾಲವನ್ನು ತೀರಿಸಲು ಸಮರ್ಥನಾಗಲಿಲ್ಲವೋ ಅಂಥ ತಾಯಿಗೆ ನಮಸ್ಕಾರಗಳು.

**ಗುರುಕುಲಮುಪಸೃತ್ಯ ಸ್ವಪ್ನಕಾಲೇ ತು ದೃಷ್ಟ್ವಾ ಯತಿಸಮುಚಿತವೇಶಂ ಪ್ರಾರುದೋ ಮಾಂ ತ್ವಮುಚ್ಚೈಃ । ಗುರುಕುಲಮಥ ಸರ್ವಂ ಪ್ರಾರುದತ್ ತೇ ಸಮಕ್ಷಂ ಸಪದಿ ಚರಣಯೋಸ್ತೇ ಮಾತರಸ್ತು ಪ್ರಣಾಮಃ ॥ 2॥**

ಭಾವಾರ್ಥ - (ನೀನು) ಕನಸಿನಲ್ಲಿ - ನಾನು ಗುರುಕುಲವನ್ನು ಸೇರಿ ಸಂನ್ಯಾಸಿಗೆ ತಕ್ಕ ವೇಷವನ್ನು ಧರಿಸಿರುವದನ್ನು ನೋಡಿ ಗಟ್ಟಿಯಾಗಿ ಅತ್ತುಬಿಟ್ಟೆ ಅದನ್ನು ಕಂಡು ಗುರುಕುಲದವರೆಲ್ಲರೂ ನಿನ್ನ ಎದುರಿಗೆ ಅಳಲಾರಂಭಿಸಿದರು. ಎಲ್ಲಾ ತಾಯಿಗೂ ಇದೊ, ನಿನ್ನ ಪಾದಗಳಿಗೆ ವಂದನೆಗಳು.

**ನ ದತ್ತಂ ಮಾತಸ್ತೇ ಮರಣಸಮಯೇ ತೋಯಮಪಿವಾ ಸ್ವಧಾ ವಾ ನೋ ದತ್ತಾ ಮರಣದಿವಸೇ ಶ್ರಾದ್ಧವಿಧಿನಾ । ನ ಜಪ್ತ್ವಾ ಮಾತಸ್ತೇ ಮರಣಸಮಯೇ ತಾರಕಮನುಃ ಅಕಾಲೇ ಸಂಪ್ರಾಪ್ತೇ ಮಯಿ ಕುರು ದಯಾಂ ಮಾತುರತುಲಾಂ ॥ 3 ॥**

ಭಾವಾರ್ಥ - ನಿನ್ನ ಮರಣಕಾಲದಲ್ಲಿ ನೀರನ್ನು ಕೂಡ (ನಿನ್ನ ಬಾಯಿಗೆ ಹಾಕಲು) ನನಗೆ ಆಗಲಿಲ್ಲ. ಇನ್ನು ಮೃತತಿಥಿಯ ದಿನ ಶ್ರಾದ್ಧವಿಧಿಯಂತೆ ನಿನಗೆ (ಪಿಂಡವನ್ನೂ) ಕೊಡಲಾರದೆ ಹೋದೆನು। ಇನ್ನು ಮರಣಕಾಲಕ್ಕೆ ನಿನ್ನ ಕಿವಿಯಲ್ಲಿ ತಾರಕ(ರಾಮ)ಮಂತ್ರವನ್ನೂ ನಾನು ಜಪಿಸಲಿಲ್ಲ ಹೀಗಾಗಿ ಕಾಲಮೀರಿ ಬಂದ ನನ್ನ ಮೇಲೆ ಅಪಾರವಾದ ಕೃಪೆಮಾಡು.

**ಮುಕ್ತಾಮಣಿ ತ್ವಂ ನಯನಂ ಮಮ ಇತಿ ರಾಜ ಇತಿ ಜೀವ ಇತಿ ಚಿರ ಸುತ ತ್ವಂ । ಇತ್ಯುಕ್ತವತ್ಯಾಃ ತವ ವಾಚಿ ಮಾತಃ ದದಾಮಿ ಅಹಂ ತಂಡುಲಂ ಏವ ಶುಷ್ಕಂ ॥ 4॥**

ಭಾವಾರ್ಥ - "ಮಗುವೆ, ನೀನು ನನ್ನ ಮುತ್ತಿನ ಮಣಿ, ನನ್ನ ಕಣ್ಣು; ನನ್ನ ರಾಜ; ನನ್ನ ಜೀವ(ಆತ್ಮ); ನೀನು ಚಿರಕಾಲ ಬಾಳು" ಹೀಗೆಂದು ನುಡಿಯುತ್ತಿದ್ದ ನಿನ್ನ ಪ್ರೀತಿಯ ಮಾತುಗಳಿಗೆ ಪ್ರತಿಯಾಗಿ ಈಗ ನಾನು ಅಕ್ಕಿಯ ಕಾಳನ್ನು ಮಾತ್ರವೇ ನಿನಗೆ ಕೊಡುತ್ತಿರುವೆನು.

**ಅಂಬಾ ಇತಿ ತಾತ ಇತಿ ಶಿವ ಇತಿ ತಸ್ಮಿನ್ ಪ್ರಸೂತಿಕಾಲೇ ಯದವೋಚ ಉಚ್ಚೈಃ । ಕೃಷ್ಣೇತಿ ಗೋವಿಂದ ಹರೇ ಮುಕುಂದ ಇತಿ ಜನನ್ಯೈ ಅಹೋ ರಚಿತೋಽಯಂ ಅಂಜಲಿಃ ॥ 5॥**

ಭಾವಾರ್ಥ - ನೀನು ನನ್ನ ಜನ್ಮಕಾಲದಲ್ಲಿ ಅಮ್ಮ, ತಾತ, (ಅಪ್ಪ) ಶಿವ - ಇತ್ಯಾದಿ ಮಾತುಗಳನ್ನು ಗಟ್ಟಿಯಾಗಿ ಹೇಳುತ್ತಿದ್ದೆಯಲ್ಲವೆ? ಈಗ ನಾನು ಕೃಷ್ಣ, ಗೋವಿಂದ,

ಹರೇ ಮುಕುಂದ - ಎಂದು ಹೇಳುತ್ತಾ ನನ್ನ ಈ ಪ್ರಾರ್ಥನೆಯನ್ನು ಪೂರ್ಣಗೊಳಿಸುವೆನು.

॥ ಇತಿ ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ ವಿರಚಿತ ಮಾತೃ ಪಂಚಕಂ ಸಂಪೂರ್ಣಂ ॥

----- ****** -----

# 15 ಮಂತ್ರ / ಸೂಕ್ತಗಳು

## 15.1 ಶ್ರೀಗಣೇಶಾಥರ್ವಶೀರ್ಷಂ

**ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ॥ ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ ॥ ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥1॥**

ಭಾವಾರ್ಥ - ಹೇ! ದೇವಾನುದೇವತೆಗಳೇ, ನಾವೆಲ್ಲರೂ ಯಾವಾಗಲೂ ಉತ್ತಮವಾದ ವಿಚಾರಗಳನ್ನು ಕೇಳುವಂತಾಗಲಿ. ಪವಿತ್ರವಾದವುಗಳನ್ನು ಕಾಣುವಂತಾಗಲಿ. ನಮ್ಮ ಆರೋಗ್ಯಭರಿತ ಶರೀರದಿಂದ ನಿಮ್ಮನ್ನು ಆರಾಧಿಸುತ್ತಾ ಪೂರ್ಣಾಯುಷ್ಯವುಳ್ಳವರಾಗಿ ಜೀವಿಸುವಂತಾಗಲಿ. ದೇವತೆಗಳ ದೊರೆಯಾಗಿರುವ ಇಂದ್ರ. ಸಕಲಾರಿಷ್ಟ ನಾಶಕರಾಗಿರುವ ರವಿ, ಗರುಡದೇವ, ಶಿವ, ಹಾಗೂ ಸಕಲವಿದ್ಯಾ ಸಂಪನ್ನನಾಗಿರುವ ಗುರು ಬೃಹಸ್ಪತಿ ಮೊದಲಾದ ದೇವಾನುದೇವತೆಗಳು ನಮಗೆ ಅನುಗ್ರಹಿಸಿ ಶುಭವನ್ನು ಕರುಣಿಸಲಿ.

**ಓಂ ನಮಸ್ತೇ ಗಣಪತಯೇ । ತ್ವಮೇವ ಪ್ರತ್ಯಕ್ಷಂ ತತ್ತ್ವಮಸಿ । ತ್ವಮೇವ ಕೇವಲಂ ಕರ್ತಾಽಸಿ । ತ್ವಮೇವ ಕೇವಲಂ ಧರ್ತಾಽಸಿ । ತ್ವಮೇವ ಕೇವಲಂ ಹರ್ತಾಽಸಿ । ತ್ವಮೇವ ಸರ್ವಂ ಖಲ್ವಿದಂ ಬ್ರಹ್ಮಾಸಿ । ತ್ವಂ ಸಾಕ್ಷಾದಾತ್ಮಾಽಸಿ ನಿತ್ಯಂ ॥2॥**

ಭಾವಾರ್ಥ - ಹೇ! ಗಣಪತಿಯೇ, ನಿನಗೆ ನಮ್ಮ ಭಕ್ತಿ ಪೂರ್ವಕ ಪ್ರಣಾಮಗಳು. ಸ್ವಾಮಿಯೇ ಪ್ರತೇಕವಾಗಿ ನಮಗೆ ತೋರುವ ತತ್ವವು ನೀನೇ ಆಗಿರುತ್ತಿ. ನೀನು ಸೃಷ್ಟಿಕರ್ತನೂ ಲಯಕರ್ತನೂ ಆಗಿರುವೆ. ಸಮಸ್ತ ಬ್ರಹ್ಮಾಂಡವನ್ನು ನೀನು ಪರಿಪಾಲಿಸುತ್ತಿರುವೆ. ಸರ್ವ ವ್ಯಾಪಕನಾಗಿ ಪರಬ್ರಹ್ಮ ಸ್ವರೂಪಿಯಾಗಿ ನೀನೇ ಸಾಕ್ಷಾತ್ ಪರಮಾತ್ಮನಾಗಿರುವೆ.

**ಋತಂ ವಚ್ಮಿ । ಸತ್ಯಂ ವಚ್ಮಿ ॥2॥**

ಭಾವಾರ್ಥ - ಹೇ! ಸ್ವಾಮಿಯೇ, ಕಾಲ, ದೇಶ, ವರ್ತಮಾನ, ಪ್ರಕೃತಿ, ನಿಯಮಗಳಿಗನುಸಾರವಾಗಿ ನಾವು ಪ್ರಿಯವಾದ ಮಾತುಗಳನ್ನೂ ಸತ್ಯವನ್ನೂ ಹೇಳುತ್ತಿದ್ದೇವೆ.

**ಅವ ತ್ವಂ ಮಾಂ । ಅವ ವಕ್ತಾರಂ । ಅವ ಶ್ರೋತಾರಂ । ಅವ ದಾತಾರಂ । ಅವ ಧಾತಾರಂ । ಅವಾನೂಚಾನಮವ ಶಿಷ್ಯಂ । ಅವ ಪಶ್ಚಾತ್ತಾತ್ । ಅವ ಪುರಸ್ತಾತ್ । ಅವೋತ್ತರಾತ್ತಾತ್ । ಅವ ದಕ್ಷಿಣಾತ್ತಾತ್ । ಅವ ಚೋರ್ಧ್ವಾತ್ತಾತ್ । ಅವಾಧರಾತ್ತಾತ್ । ಸರ್ವತೋ ಮಾಂ ಪಾಹಿ ಪಾಹಿ ಸಮಂತಾತ್ ॥3॥**

ಭಾವಾರ್ಥ - ಓ! ಸ್ವಾಮಿಯೇ, ನಮ್ಮನು ರಕ್ಷಿಸು. ನಿನ್ನನ್ನು ಸ್ತುತಿಸುವವರನ್ನು ರಕ್ಷಿಸು, ಶ್ರದ್ಧಾ ಭಕ್ತಿಯಿಂದ ನಿನ್ನ ನಾಮಾವಳಿಗಳನ್ನು ಕೇಳುವವರನ್ನು ಪಾಲಿಸು, ನಿನ್ನ ಹೆಸರಲ್ಲಿ ದಾನಾದಿಗಳನ್ನು ನೀಡುವವರನ್ನು ಕಾಪಾಡು, ನಿನ್ನ ಮಂತ್ರೋಚ್ಚಾರಣೆ ಮಾಡುವವರನ್ನು ಪೊರೆ, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಹಿಂದೆ, ಮುಂದೆ, ಮೇಲೆ, ಕೆಳಗೆ, ಈ ತೆರನಾಗಿ ದಶ ದಿಕ್ಕುಗಳಿಂದಲೂ ಬರುವ ಎಲ್ಲಾ ಬಗೆಯ ಆಪತ್ತು ವಿಪತ್ತುಗಳಿಂದ ನಮ್ಮನ್ನು ಕಾಪಾಡು.

**ತ್ವಂ ವಾಙ್ಮಯಸ್ತ್ವಂ ಚಿನ್ಮಯಃ । ತ್ವಮಾನಂದಮಯಸ್ತ್ವಂ ಬ್ರಹ್ಮಮಯಃ । ತ್ವಂ ಸಚ್ಚಿದಾನಂದಾಽದ್ವಿತೀಯೋಽಸಿ । ತ್ವಂ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಂ ಜ್ಞಾನಮಯೋ ವಿಜ್ಞಾನಮಯೋಽಸಿ ॥4॥**

ಭಾವಾರ್ಥ - ವೇದೋಪನಿಷತ್ತುಗಳೇ ಆದಿಯಾಗಿ ಸಮಸ್ತ ಗ್ರಂಥಗಳಿಂದ ಸ್ತುತಿಸಲ್ಪಡುವಂತಹ ನೀನು ಚಿನ್ಮಯ ರೂಪನೇ ಆಗಿರುವೆ. ನೀನು ಆನಂದ ಪೂರ್ಣನಾಗಿ, ಬ್ರಹ್ಮ ಸ್ವರೂಪಿಯಾಗಿ, ಸಚ್ಚಿದಾಂದ ಸ್ವರೂಪನೇ ಆಗಿರುವೆ. ನೀನು ಸಾಕ್ಷಾತ್ ಬ್ರಹ್ಮ ಸ್ವರೂಪಿ, ನೀನು ಸಮಸ್ತವನ್ನೂ ಬಲ್ಲಂತಹಾ ಪರಮ ಜ್ಞಾನಿಯೇ ಆಗಿ ವಿಜ್ಞಾನಿಯೂ ಆಗಿರುವೆ.

**ಸರ್ವಂ ಜಗದಿದಂ ತ್ವತ್ತೋ ಜಾಯತೇ । ಸರ್ವಂ ಜಗದಿದಂ ತ್ವತ್ತಸ್ತಿಷ್ಠತಿ । ಸರ್ವಂ ಜಗದಿದಂ ತ್ವಯಿ ಲಯಮೇಷ್ಯತಿ । ಸರ್ವಂ ಜಗದಿದಂ ತ್ವಯಿ ಪ್ರತ್ಯೇತಿ । ತ್ವಂ ಭೂಮಿರಾಪೋಽನಲೋಽನಿಲೋ ನಭಃ । ತ್ವಂ ಚತ್ವಾರಿ ವಾಕ್ಪದಾನಿ ॥5॥**

ಭಾವಾರ್ಥ - ಸಮಸ್ತ ಜಗತ್ತೆಲ್ಲವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟು ನಿನ್ನಿಂದಲೇ ನಡೆಸಲ್ಪಡುತ್ತದೆ. ಕೊನೆಗೆ ನಿನ್ನಲ್ಲೇ ಲಯವಾಗುತ್ತದೆ. ಪುನರಪಿ ನಿನ್ನ ಮೂಲಕವೇ ಹೊರಬರುತ್ತದೆ. ಬೆಂಕಿ, ನೀರು, ಆಕಾಶ, ಭೂಮಿ ಎಲ್ಲವೂ ನೀನೇ ಆಗಿರುವೆ. ಪರಾ, ಪಶ್ಯಂತಿ, ಮಧ್ಯಮಾ, ವೈಖರಿ ಗಳೆಂಬ ನಾಲ್ಕು ಅವಸ್ಥೆಗಳ ನುಡಿಗಳು ಕೂಡಾ ನೀನೇ ಆಗಿರುವೆ.

**ತ್ವಂ ಗುಣತ್ರಯಾತೀತಃ । ತ್ವಂ ಅವಸ್ಥಾತ್ರಯಾತೀತಃ । ತ್ವಂ ದೇಹತ್ರಯಾತೀತಃ । ತ್ವಂ ಕಾಲತ್ರಯಾತೀತಃ । ತ್ವಂ ಮೂಲಾಧಾರಸ್ಥಿತೋಽಸಿ ನಿತ್ಯಂ । ತ್ವಂ ಶಕ್ತಿತ್ರಯಾತ್ಮಕಃ । ತ್ವಾಂ ಯೋಗಿನೋ ಧ್ಯಾಯಂತಿ ನಿತ್ಯಂ । ತ್ವಂ ಬ್ರಹ್ಮಾ ತ್ವಂ ವಿಷ್ಣುಸ್ತ್ವಂ ರುದ್ರಸ್ತ್ವಮಿಂದ್ರಸ್ತ್ವಮಗ್ನಿಸ್ತ್ವಂ ವಾಯುಸ್ತ್ವಂ ಸೂರ್ಯಸ್ತ್ವಂ ಚಂದ್ರಮಾಸ್ತ್ವಂ ಬ್ರಹ್ಮ ಭೂರ್ಭುವಃ ಸ್ವರೋಂ ॥6॥**

ಭಾವಾರ್ಥ - ಸತ್ವ, ರಜ, ತಮಗಳೆನ್ನುವ ಮೂರು ಪ್ರಕೃತಿ ಗುಣಗಳ ಮೂಲ ಸ್ವರೂಪನು ನೀನೇ ಆಗಿರುವೆ. ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಗಳಿಗೆ ನೀನೇ ಕಾರಣನಿರುವೆ. ಸ್ಥೂಲ ಸೂಕ್ಷ್ಮಾದಿ ಶರೀರಾವಸ್ಥೆಗಳೂ ನೀನೇ ಆಗಿರುವೆ. ಪ್ರಾತಃಕಾಲ, ಮಧ್ಯಾಹ್ನ, ಸಾಯಂ ಸಂಧ್ಯೆಗಳೂ, ಭೂತ, ವರ್ತಮಾನ, ಭವಿಷ್ಯತ್ ಕಾಲಗಳೂ ನೀನೇ ಆಗಿರುವೆ. ದೇಹದಲ್ಲಿನ ಮೂಲಾಧಾರ ಶಕ್ತಿಯೇ ನೀನು. ಇಚ್ಛಾ, ಜ್ಞಾನ, ಕ್ರಿಯೆಗಳೆಂಬ ಮೂರು ಶಕ್ತಿಗಳೂ ನೀನೇ. ಪ್ರತಿದಿನವೂ ಯೋಗಿಗಳು. ಮುನಿಗಳು, ಜ್ಞಾನಿಗಳು ನಿನ್ನನ್ನೇ ಧ್ಯಾನಿಸುತ್ತಿದ್ದಾರೆ. ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಅಗ್ನಿ, ವಾಯು, ಸೂರ್ಯ-ಚಂದ್ರರ ಸ್ವರೂಪನೇ ನೀನಾಗಿದ್ದಿ. ಓಂ ಭೂರ್ಭುವಃ ಸ್ವಃ ಎಂಬ ಮಂತ್ರ ಶಕ್ತಿಯ ಸಾರ ರೂಪನೂ, ಅಕಾರ, ಮಕಾರ, ಉಕಾರಗಳು ಸೇರಿರುವ ಪ್ರಣವ ನಾದವೂ ನೀನೇ ಆಗಿರುವೆ.

**ಗಣಾದಿಂ ಪೂರ್ವಮುಚ್ಚಾರ್ಯ ವರ್ಣಾದೀಂ ಸ್ತದನಂತರಂ । ಅನುಸ್ವಾರಃ ಪರತರಃ । ಅರ್ಧೇಂದುಲಸಿತಂ । ತಾರೇಣ ಋದ್ಧಂ । ಏತತ್ತವ ಮನುಸ್ವರೂಪಂ । ಗಕಾರಃ ಪೂರ್ವರೂಪಂ । ಅಕಾರೋ ಮಧ್ಯಮರೂಪಂ । ಅನುಸ್ವಾರಶ್ಚಾಂತ್ಯರೂಪಂ । ಬಿಂದುರುತ್ತರರೂಪಂ । ನಾದಃ ಸಂಧಾನಂ । ಸಗ್ಂಹಿತಾ ಸಂಧಿಃ । ಸೈಷಾ ಗಣೇಶವಿದ್ಯಾ । ಗಣಕ ಋಷಿಃ । ನಿಚೃದ್ಗಾಯತ್ರೀಚ್ಛಂದಃ । ಶ್ರೀ ಮಹಾಗಣಪತಿರ್ದೇವತಾ । ಓಂ ಗಂ ಗಣಪತಯೇ ನಮಃ ॥7॥**

ಭಾವಾರ್ಥ - ಪ್ರಥಮದಲ್ಲಿ "ಗ" ಕಾರವೂ, ನಂತರ "ಅ"ಕಾರವೂ, ಕೊನೆಗೆ ಅನುಸ್ವಾರ ತದನಂತರ ಬಿಂದು =[ಗ್+ಅ+ಮ್ ] ಇವೆಲ್ಲವೂ ಸೇರಿದ ನಾದ ಸಂಧಾನ ಸಂಹಿತೆಯೇ ಸಂಧಿಯಾಗಿ "ಗಂ" ಎಂದೆನಿಸಿದೆ. ಇದುವೇ ಗಣಪತಿಯ ಏಕಾಕ್ಷರ ಮಂತ್ರ. ಇದರ ಋಷಿಗಳ ಹೆಸರು ಗಣಕ, ನಿಚೃದ್ಗಾಯತ್ರಿಯು ಇದರ ಛಂದಸ್ಸು, ಗಣಪತಿಯೇ ಮಂತ್ರ ದೇವತೆ, ಓಂಕಾರನಾದಗಳು ಸೇರಿ ಗಣಪತಿಯ ಮೂಲ ಮಂತ್ರವಾಗಿ "ಓಂ ಗಂ ಗಣಪತಯೇ ನಮಃ ಎಂದು ಆಗಿರುತ್ತದೆ.

**ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ । ತನ್ನೋ ದಂತಿಃ ಪ್ರಚೋದಯಾತ್ ॥8॥**

ಭಾವಾರ್ಥ - ಇದು ಗಣಪತಿಯ ಗಾಯತ್ರಿಮಂತ್ರ ವಾಗಿರುತ್ತದೆ. ಏಕದಂತನಾಗಿ ಸುತ್ತುವರಿದ ಸೊಂಡಿಲಿನಿಂದ ಕೂಡಿದವನಾಗಿ ಆನೆಯ ಮುಖದವನಾಗಿರುವ ಗಣಪತಿಯು ನಮ್ಮ ಬುದ್ಧಿ ಜ್ಞಾನಗಳನ್ನು ಪ್ರಚೋದಿಸಲಿ.

**ಏಕದಂತಂ ಚತುರ್ಹಸ್ತಂ ಪಾಶಮಂಕುಶಧಾರಿಣಂ । ರದಂ ಚ ವರದಂ ಹಸ್ತೈರ್ಬಿಭ್ರಾಣಂ ಮೂಷಕಧ್ವಜಂ । ರಕ್ತಂ ಲಂಬೋದರಂ ಶೂರ್ಪಕರ್ಣಕಂ ರಕ್ತವಾಸಸಂ । ರಕ್ತಗಂಧಾನುಲಿಪ್ತಾಂಗಂ ರಕ್ತಪುಷ್ಪೈಃ ಸುಪೂಜಿತಂ । ಭಕ್ತಾನುಕಂಪಿನಂ ದೇವಂ ಜಗತ್ಕಾರಣಮಚ್ಯುತಂ । ಆವಿರ್ಭೂತಂ ಚ ಸೃಷ್ಟ್ಯಾದೌ ಪ್ರಕೃತೇಃ ಪುರುಷಾತ್ಪರಂ । ಏವಂ ಧ್ಯಾಯತಿ ಯೋ ನಿತ್ಯಂ ಸ ಯೋಗೀ ಯೋಗಿನಾಂ ವರಃ ॥9॥**

ಭಾವಾರ್ಥ - ಹೇ! ಸ್ವಾಮಿಯೇ, ನೀನು ಏಕದಂತನಾಗಿ ನಾಲ್ಕು ಕೈಗಳಲ್ಲಿ ಪಾಶ, ಅಂಕುಶಗಳನ್ನು ಹಿಡಿದಿರುವೆಯಲ್ಲದೆ ಅಭಯ ಹಾಗೂ ವರದ ಮುದ್ರೆಯವನಾಗಿ ಕಾಣಿಸಿಗೊಂಡಿರುವೆ. ಮೂಷಕ ಧ್ವಜನಾಗಿ ಕಡುಗೆಂಪುವರ್ಣವನಾಂತು, ಆಕರ್ಷಕವಾಗಿ ಹೊಳೆಯುವ ಶರೀರವನ್ನು ಹೊಂದಿ, ದೊಡ್ಡ ಉದರ,ಮೊರದಗಲದ ಕಿವಿಗಳು, ಕೆಂಪು ಗಂಧವನ್ನು ಶರೀರಕ್ಕೆ ಲೇಪಿಸಿಕೊಂಡು ಕೆಂಪು ಪುಷ್ಪಗಳಿಂದ ಪೂಜಿಸಲ್ಪಡುವವನಾಗಿರುವೆ. ನಿನ್ನನ್ನು ಅನವರತ ಭಜಿಸುವ ಭಕ್ತರ ಬಗ್ಗೆ ಅಪಾರವಾದ ಕರುಣೆಯನ್ನು ಹರಿಸುತ್ತಾ ಚ್ಯುತಿರಹಿತನಾಗಿರುವ ದೇವಾದಿದೇವ ನೀನಾಗಿರುವೆ. ಪ್ರಕೃತಿ ಮತ್ತು ಪುರುಷರಿಂತಲೂ ಮೊದಲು ಪ್ರಕಟಗೊಂಡವನು ನೀನಾಗಿರುವೆ. ನಿನ್ನನ್ನು ಧ್ಯಾನಿಸುವವನು ಯೋಗಿಯಾಗಿದ್ದು ಇತರ ಯೋಗಿಗಳಿಗಿಂತ ಶ್ರೇಷ್ಟನಾಗಿರುತ್ತಾನೆ.

**ನಮೋ ವ್ರಾತಪತಯೇ ನಮೋ ಗಣಪತಯೇ ನಮಃ ಪ್ರಮಥಪತಯೇ ನಮಸ್ತೇಽಸ್ತು ಲಂಬೋದರಾಯೈಕದಂತಾಯ ವಿಘ್ನವಿನಾಶಿನೇ ಶಿವಸುತಾಯ ಶ್ರೀವರದಮೂರ್ತಯೇ ನಮಃ ॥10॥**

ಭಾವಾರ್ಥ - ಶಿವಗಣಗಳಿಗೆ ಅಧಿಪತಿಯೂ, ಏಕದಂತವುಳ್ಳವನೂ, ದೊಡ್ಡ ಹೊಟ್ಟೆಯವನೂ, ಸಕಲ ವಿಘ್ನ ನಿವಾರಕನೂ, ಶಿವಸುತನೂ, ಬೇಡಿದ ವರಗಳನ್ನು ಕರುಣಿಸುವವನೂ ಆಗಿರುವ ಸದಾ ವರದ ಮೂರ್ತಿಯಾಗಿರುವ ಮಹಾಗಣಪತಿಗೆ ಅನಂತಾನಂತ ನಮಸ್ಕಾರಗಳು.

**ಏತದಥರ್ವಶೀರ್ಷಂ ಯೋಽಧೀತೇ । ಸ ಬ್ರಹ್ಮಭೂಯಾಯ ಕಲ್ಪತೇ । ಸ ಸರ್ವವಿಘ್ನೈರ್ನ ಬಾಧ್ಯತೇ । ಸ ಸರ್ವತಃ ಸುಖಮೇಧತೇ । ಸ ಪಂಚಮಹಾಪಾಪಾತ್ ಪ್ರಮುಚ್ಯತೇ । ಸಾಯಮಧೀಯಾನೋ ದಿವಸಕೃತಂ ಪಾಪಂ ನಾಶಯತಿ । ಪ್ರಾತರಧೀಯಾನೋ ರಾತ್ರಿಕೃತಂ ಪಾಪಂ ನಾಶಯತಿ । ಸಾಯಂ ಪ್ರಾತಃ ಪ್ರಯುಂಜಾನೋ ಪಾಪೋಽಪಾಪೋ ಭವತಿ । ಧರ್ಮಾರ್ಥಕಾಮಮೋಕ್ಷಂ ಚ ವಿಂದತಿ । ಇದಮಥರ್ವಶೀರ್ಷಮಶಿಷ್ಯಾಯ ನ ದೇಯಂ । ಯೋ ಯದಿ ಮೋಹಾದ್ ದಾಸ್ಯತಿ**

**ಸ ಪಾಪೀಯಾನ್ ಭವತಿ । ಸಹಸ್ರಾವರ್ತನಾದ್ಯಂ ಯಂ ಕಾಮಮಧೀತೇ । ತಂ ತಮನೇನ ಸಾಧಯೇತ್ ॥11॥**

ಭಾವಾರ್ಥ - ಈ ಗಣೇಶಾರ್ಥರ್ವಶೀರ್ಷ ಮಂತ್ರವನ್ನು ಯಾರು ಅನವರತ ಪಠಿಸುತ್ತಾರೋ ಅವರಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಅವರನ್ನು ವಿಘ್ನಗಳು ಎಂದಿಗೂ ಭಾಧಿಸುವುದಿಲ್ಲ. ಅವರು ಸದಾಕಾಲ ಸುಖದಿಂದ ಇರುತ್ತಾರೆ. ಅಂತಹವರು ತಾವು ಮಾಡಿರಬಹುದಾದ ಪಂಚ ಮಹಾಪಾತಕಗಳಿಂದ ಮುಕ್ತರಾಗುತ್ತಾರೆ. ಸಾಯಂಕಾಲದ ಸಮಯದಲ್ಲಿ ಮಾಡುವ ಜಪದಿಂದ ಹಗಲು ಮಾಡಿದ ಪಾಪಕರ್ಮಗಳು ಮತ್ತು ಉಷಃಕಾಲದಲ್ಲಿ ಮಾಡಿದ ಜಪದಿಂದ ಗತರಾತ್ರಿ ಮಾಡಿದ ಪಾಪಗಳೆಲ್ಲವೂ ನಾಶವಾಗುತ್ತವೆ. ಬೆಳಿಗ್ಗೆ ಮತು ಸಾಯಂಕಾಲಗಳ ಸಮಯದಲ್ಲಿ ಈ ಮಂತ್ರವನ್ನು ಜಪಿಸುತ್ತಿದ್ದರೆ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಸಿದ್ಧಿಯಾಗಿ ಮಹಾಪುಣ್ಯವು ಲಭಿಸುತ್ತದೆ. ಈ ಮಂತ್ರವನ್ನು ಯೋಗ್ಯನಾಗಿರುವ ಶಿಷ್ಯನಿಗೆ ಮಾತ್ರಾ ಉಪದೇಶ ಮಾಡಬೇಕು. ಅಯೋಗ್ಯರಿಗೆ ಉಪದೇಶ ಮಾಡಿದರೆ ಅಂಥಹವರು ಪಾಪಿಷ್ಠರಾಗುವರು. ಗಣೇಶಾಥರ್ವಶೀರ್ಷ ಮಂತ್ರವನ್ನು ಸಹಸ್ರ ಬಾರಿ ಜಪಿಸಿದಲ್ಲಿ ಮನಸ್ಸಿನ ಎಲ್ಲಾ ಇಷ್ಟಾರ್ಥಗಳು ಈಡೇರುತ್ತವೆ.

**ಅನೇನ ಗಣಪತಿಮಭಿಷಿಂಚತಿ । ಸ ವಾಗ್ಮೀ ಭವತಿ । ಚತುರ್ಥ್ಯಾಮನಶ್ನನ್ ಜಪತಿ ಸ ವಿದ್ಯಾವಾನ್ ಭವತಿ । ಇತ್ಯಥರ್ವಣವಾಕ್ಯಂ । ಬ್ರಹ್ಮಾದ್ಯಾಚರಣಂ ವಿದ್ಯಾನ್ನ ಬಿಭೇತಿ ಕದಾಚನೇತಿ ॥12॥**

ಭಾವಾರ್ಥ - ಈ ಗಣೇಶಾಥರ್ವಶೀರ್ಷ ಮಂತ್ರವನ್ನು ಹೇಳಿಕೊಂಡು ಅಭಿಷೇಕಗಳನ್ನು ಮಾಡಿದವರು ವಾಗ್ಮಿಗಳಾಗುವರು. ಮತ್ತು ಜ್ಞಾನಿಗಳಾಗುವರು. ಚೌತಿಯ ದಿನದಂದು ಈ ಮಂತ್ರವನ್ನು ನಿರಂತರವಾಗಿ ಜಪಿಸಿದಲ್ಲಿ ವಿದ್ಯಾವಂತರಾಗುವರು. ಈ ಮಂತ್ರವನ್ನು ಜಪಿಸುತ್ತಿರುವವರಿಗೆ ಯಾವುದೇ ಭಯವು ಕಾಡುವುದಿಲ್ಲ. ಇದು ಅಥರ್ವಣ ವಾಕ್ಯ.

**ಯೋ ದೂರ್ವಾಂಕುರೈರ್ಯಜತಿ ಸ ವೈಶ್ರವಣೋಪಮೋ ಭವತಿ । ಯೋ ಲಾಜೈರ್ಯಜತಿ ಸ ಯಶೋವಾನ್ ಭವತಿ । ಸ ಮೇಧಾವಾನ್ ಭವತಿ । ಯೋ ಮೋದಕಸಹಸ್ರೇಣ ಯಜತಿ ಸ ವಾಂಛಿತಫಲಮವಾಪ್ನೋತಿ । ಯಃ ಸಾಜ್ಯ ಸಮಿದ್ಭಿರ್ಯಜತಿ ಸ ಸರ್ವಂ ಲಭತೇ ಸ ಸರ್ವಂ ಲಭತೇ ॥13॥**

ಭಾವಾರ್ಥ - ಈ ಮಂತ್ರಗಳನ್ನು ಹೇಳುತ್ತಾ ಗರಿಕೆಯ ತುದಿಗಳಿಂದ ಯಾರು ಹೋಮ ಮಾಡುವರೋ ಅವರು ಕುಬೇರ ಸಮಾನರಾದ ಧನಿಕರಾಗುವರು. ಯಾರು ಸಹಸ್ರ ಮೋದಕಗಳನ್ನು ಆಹುತಿಯಾಗಿ ಸಮರ್ಪಿಸುವರೋ ಅವರು ಇಚ್ಛಿಸಿದ ಕಾರ್ಯಗಳು ಸುಗಮವಾಗಿ ನೆರವೇರುತ್ತದೆ. ಭತ್ತದ ಅರಳಿನಿಂದ ಹೋಮ ಮಾಡುವವರು ಬುದ್ಧಿವಂತರಾಗುವರು. ತುಪ್ಪ ಮತ್ತು ಸಮಿತ್ತುಗಳಿಂದ ಹೋಮಿಸುವವರು ಸಕಲ ಸೌಭಾಗ್ಯಗಳನ್ನೂ ಹೊಂದುವರು.

**ಅಷ್ಟೌ ಬ್ರಾಹ್ಮಣಾನ್ ಸಮ್ಯಗ್ ಗ್ರಾಹಯಿತ್ವಾ ಸೂರ್ಯವರ್ಚಸ್ವೀ ಭವತಿ । ಸೂರ್ಯಗ್ರಹೇ ಮಹಾನದ್ಯಾಂ ಪ್ರತಿಮಾಸನ್ನಿಧೌ ವಾ ಜಪ್ತ್ವಾ ಸಿದ್ಧಮಂತ್ರೋ ಭವತಿ । ಮಹಾವಿಘ್ನಾತ್ ಪ್ರಮುಚ್ಯತೇ । ಮಹಾದೋಷಾತ್ ಪ್ರಮುಚ್ಯತೇ । ಮಹಾಪಾಪಾತ್ ಪ್ರಮುಚ್ಯತೇ । ಮಹಾಪ್ರತ್ಯವಾಯಾತ್ ಪ್ರಮುಚ್ಯತೇ । ಸ ಸರ್ವವಿದ್ಭವತಿ ಸ ಸರ್ವವಿದ್ಭವತಿ । ಯ ಏವಂ ವೇದ । ಇತ್ಯುಪನಿಷತ್ ॥14॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಭಾವಾರ್ಥ - ಎಂಟು ಮಂದಿ ಬ್ರಾಹ್ಮಣ ಸಮೂಹದ ಮೂಲಕ ಈ ಮಂತ್ರಗಳನ್ನು ಹೇಳಿಸುತ್ತಾ ಯಾವಾತನು ಹೋಮವನ್ನು ಮಾಡಿಸುವನೋ ಅವನು ಸೂರ್ಯನಂತೆ ತೇಜಸ್ವೀಯಾಗಿ ಪ್ರಕಾಶಿಸುತ್ತಾನೆ. ಸೂರ್ಯ ಗ್ರಹಣದಂದು ನದಿಯ ನೀರಿನಲ್ಲಿ ನಿಂತು ಅಥವಾ ಗಣಪತಿಯ ಪ್ರತಿಮೆಯ ಸನ್ನಿಧಿಯಲ್ಲಿ ಯಾರು ಈ ಮಂತ್ರವನ್ನು ಜಪಿಸುತ್ತಾರೋ ಅವರಿಗೆ ಮಂತ್ರ ಸಿದ್ಧಿಯಾಗುವುದು. ಈ ಮಂತ್ರದಿಂದ ಮಹಾ ವಿಘ್ನಗಳು, ಮಹಾ ದೋಷಗಳು, ಮಹಾ ಸಂಕಟಗಳು, ಮಹಾ ಪಾಪಗಳೆಲ್ಲವೂ ನಾಶಗೊಂಡು ಸಕಲ ಕಾಮಿತಾರ್ಥಗಳೂ ಸಿದ್ಧಿಯಾಗುವವು. ಇದನ್ನು ನಿರಂತರವಾಗಿ ಯಾರು ಜಪಿಸುತ್ತಾರೋ ಅವರಿಗೆ ಜನ್ಮಾಂತರಗಳಿಂದ ಕಾಡುತ್ತಿರುವ

ಪಾಪಶೇಷಗಳೆಲ್ಲವೂ ಪರಿಹಾರವಾಗಿ ಪ್ರಾರಬ್ಧ ಕರ್ಮ ಬಂಧನಗಳಿಂದ ಮುಕ್ತಿ ಹೊಂದಿ ಪರಮಾತ್ಮನಲ್ಲಿ ಐಕ್ಯವಾಗುತ್ತಾರೆಂದು ವೇದೋಪನಿಷತ್ತುಗಳು ತಿಳಿಸುತ್ತಿವೆ.

॥ ಇತಿ ಶ್ರೀ ಗಣೇಷಾಥರ್ವಶೀರ್ಷಂ ಸಂಪೂರ್ಣಂ ॥

## 15.2 ಶ್ರೀಸೂಕ್ತಂ

**ಓಂ ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ । ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥1॥**

ಭಾವಾರ್ಥ - ಬಂಗಾರದ ಬಣ್ಣವನ್ನು ಹೊಂದಿರುವ ಅಗ್ನಿಯೇ! ಹರಿಣದಂತೆ ಚುರುಕಾಗಿರುವ, ಹೊನ್ನು ಹಾಗೂ ಬೆಳ್ಳಿಯ ಪುಷ್ಪ ಮಾಲಿಕೆಯನ್ನು ಧರಿಸಿರುವ . ಚಂದಿರನೋಪಾದಿಯಲ್ಲಿ ಮನಸ್ಸಿಗೆ ಮುದ ನೀಡುವ ಚಿನ್ನದ ಒಡತಿ ಲಕ್ಷ್ಮಿಯನ್ನು ನನ್ನತ್ತ ಕರೆದು ತಾ.

**ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಂ । ಯಸ್ಯಾಂ ಹಿರಣ್ಯಂ ವಿಂದೇಯಂ ಗಾಮಶ್ವಂ ಪುರುಷಾನಹಂ ॥2॥**

ಭಾವಾರ್ಥ - ಅಗ್ನಿಯೇ, ಶಾಶ್ವತವಾಗಿರುವ ಲಕ್ಷ್ಮಿಯನ್ನು ನನಗಾಗಿ ಕರೆದುಕೊಂಡು ಬಾ. ಆಕೆ ಪ್ರಸನ್ನಳಾದಲ್ಲಿ ಬಂಗಾರ, ಗೋಸಂಪತ್ತು, ಕುದುರೆ, ಆಳುಗಳನ್ನು ನಾನು ಹೊಂದಬಹುದು.

**ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದ-ಪ್ರಬೋಧಿನೀಂ । ಶ್ರಿಯಂ ದೇವೀಮುಪಹ್ವಯೇ ಶ್ರೀರ್ಮಾ ದೇವೀರ್ಜುಷತಾಂ ॥3॥**

ಭಾವಾರ್ಥ - ಎದುರಲ್ಲಿ ಕುದುರೆ, ನಡುವಿನಲ್ಲಿ ರಥ, ಆನೆಯ ಶಬ್ದದಿಂದ ಸಂತಸಗೊಳ್ಳುವ ಆ ಶ್ರೀದೇವಿಯನ್ನು ನಾನು ಆಹ್ವಾನಿಸುತ್ತೇನೆ. ಶ್ರೀದೇವಿಯು ನನ್ನತ್ತ ಬಂದು ಅನುಗ್ರಹಿಸಲಿ.

**ಕಾಂಸೋಸ್ಮಿ ತಾಂ ಹಿರಣ್ಯಪ್ರಾಕಾರಾಮಾರ್ದ್ರಾಂ ಜ್ವಲಂತೀಂ ತೃಪ್ತಾಂ ತರ್ಪಯಂತೀಂ । ಪದ್ಮೇ ಸ್ಥಿತಾಂ ಪದ್ಮವರ್ಣಾಂ ತಾಮಿಹೋಪಹ್ವಯೇ ಶ್ರಿಯಂ ॥4॥**

ಭಾವಾರ್ಥ - ವರ್ಣಿಸಲಸದಳವಾಗಿರುವ, ಮಂದಹಾಸದಿಂದ ಕೂಡಿದ, ಬಂಗಾರದ ಆವರಣದೊಳಗಿರುವ, ಕರುಣಾಮಯಿಯಾಗಿರುವ, ಪ್ರಕಾಶಭರಿತಳಾಗಿರುವ, ತೃಪ್ತಳಾಗಿರುವ, ಭಕ್ತರನ್ನು ಮುದಗೊಳಿಸುತ್ತಲಿರುವ, ಕಮಲದ ಮೇಲೆ ಆಸೀನಳಾಗಿರುವ, ತಾವರೆಯ ವರ್ಣವನ್ನು ಹೊಂದಿರುವ ಶ್ರೀದೇವಿಯನ್ನು ನನ್ನತ್ತ ಕರೆಯುತ್ತಿರುವೆ.

**ಚಂದ್ರಾಂ ಪ್ರಭಾಸಾಂ ಯಶಸಾ ಜ್ವಲಂತೀಂ ಶ್ರಿಯಂ ಲೋಕೇ ದೇವಜುಷ್ಟಾಮುದಾರಾಂ । ತಾಂ ಪದ್ಮಿನೀಮೀಂ ಶರಣಮಹಂ ಪ್ರಪದ್ಯೇಽಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ ॥5॥**

ಭಾವಾರ್ಥ - ಚಂದ್ರನಂತೆ ಬೆಳಗುತ್ತಲಿರುವ, ಕೀರ್ತಿಯಿಂದ ಪ್ರಕಾಶಿಸುವ, ದೇವತೆಗಳ ಸೇವೆಯನ್ನು ಸ್ವೀಕರಿಸುತ್ತಲಿರುವ, ಭಕ್ತರಿಗೆ ವರದಾಯಕಳಾಗಿ, ಕಮಲದಂತೆ ಕೋಮಲ ಶರೀರೆಯಾಗಿರುವ, ಆ ಶ್ರೀದೇವಿಯನ್ನು ನಾನು ಆಶ್ರಯಿಸುತ್ತಿದ್ದೇನೆ. ನನ್ನಲ್ಲಿರುವ ಅಜ್ಞಾನ, ದುಃಖ, ದಾರಿದ್ರ್ಯ, ಮರೆವು, ಆಲಸ್ಯ, ಜಿಹ್ವಾಚಾಪಲ್ಯಾದಿ ದುರಾಚಾರಗಳು ನೀಗಲಿ. ನನಗೆ ಸದಾಚಾರಾದಿ ಶುಭಲಕ್ಷಣಗಳನ್ನು ದಯಪಾಲಿಸಿ ರಕ್ಷಿಸಲು ಆಕೆಯನ್ನು ಪ್ರಾರ್ಥಿಸುತ್ತಿದ್ದೇನೆ.

**ಆದಿತ್ಯವರ್ಣೇ ತಪಸೋಽಧಿಜಾತೋ ವನಸ್ಪತಿಸ್ತವ ವೃಕ್ಷೋಽಥ ಬಿಲ್ವಃ । ತಸ್ಯ ಫಲಾನಿ ತಪಸಾನುದಂತು ಮಾಯಾಂತರಾಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥6॥**

ಭಾವಾರ್ಥ - ಸೂರ್ಯನಂತೆ ಪ್ರಕಾಶಿಸಿಸುತ್ತಿರುವ ಶ್ರೀದೇವಿಯೇ! ನಿನ್ನ ತಪಸ್ಸಿನ ಪರಿಣಾಮವಾಗಿ ವನಸ್ಪತಿಗಳೂ, ಬಿಲ್ವ ವೃಕ್ಷದಂತಹಾ ಮರಗಳೂ ಉತ್ಪನ್ನವಾದವು. ಅದರೊಳಗೆ ಅಡಗಿರುವ ಶಕ್ತಿಗಳು ನನ್ನಲ್ಲಿ ಒಳ ಹೊರಗೆ ಹುದುಗಿಕೊಂಡಿರುವ ಆಂತರಿಕ ದೋಷಗಳಾದ ಅಜ್ಞಾನ, ಕಾಮ, ಕೋಪ, ದ್ವೇಷ, ಮತ್ಸರಾದಿ ಅಲಕ್ಷ್ಮಿಗಳೆಲ್ಲವನ್ನು ನಿವಾರಿಸಲಿ.

**ಉಪೈತು ಮಾಂ ದೇವಸಖಃ ಕೀರ್ತಿಶ್ಚ ಮಣಿನಾ ಸಹ । ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ ॥7॥**

ಭಾವಾರ್ಥ - ಪರಮೇಶ್ವರನ ಸಖನಾದ ಕುಭೇರನು ಮತ್ತು ಖ್ಯಾತಿಯು ನನ್ನ ಸಮೀಪಕ್ಕೆ ಬರಲಿ. ನಾನು ಈ ರಾಷ್ಟ್ರದಲ್ಲಿ ಜನ್ಮವೆತ್ತಿರುವೆ. ನನಗೆ ಯಶಸ್ಸು ಮತ್ತು ಸಮೃದ್ಧಿಯನ್ನು ಶ್ರೀದೇವಿಯು ದಯಪಾಲಿಸಲಿ.

**ಕ್ಷುತ್ಪಿಪಾಸಾಮಲಾಂ ಜ್ಯೇಷ್ಠಾಮಲಕ್ಷೀಂ ನಾಶಯಾಮ್ಯಹಂ । ಅಭೂತಿಮಸಮೃದ್ಧಿಂ ಚ ಸರ್ವಾಂ ನಿರ್ಣುದ ಮೇ ಗೃಹಾತ್ ॥8॥**

ಭಾವಾರ್ಥ - ಹಸಿವು, ಬಾಯಾರಿಕೆಗಳಿಂದ ದೋಷಪೂರಿತವಾದ, ಹಾಗೆಯೇ ಅದಕ್ಕಿಂತಲೂ ಮೊದಲು ಹುಟ್ಟಿಕೊಂಡಿರುವ ದೂಷಿತಗುಣಗಳನ್ನು ನಾನು ನಾಶಗೊಳಿಸಲಿಚ್ಛಿಸುವೆ. ಆ ಕಾರಣಕ್ಕಾಗಿ ಶ್ರೀದೇವಿಯೇ, ದರಿದ್ರತೆಗೆ ಕಾರಣವಾಗಿರುವ ಹಸಿವು, ಬಾಯಾರಿಕೆ, ಧನದಾಹ, ಅತಿಮೋಹ, ದುರಾಸೆ ಇತ್ಯಾದಿ ಕೆಟ್ಟ ಶಕ್ತಿಗಳನ್ನು ನನ್ನ ಮನೆಯಿಂದ ಹೊರಗೆ ಕಳುಹಿಸುವಂತವಳಾಗು.

**ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥9॥**

ಭಾವಾರ್ಥ - ಸುವಾಸನೆಯ ಮೂಲಕ ಗುರುತಿಸಬಹುದಾದ, ಆರಿಂದಲೂ ಅಲ್ಲಾಡಿಸಲು ಅಸದಳವಾಗಿರುವ, ನಿತ್ಯವೂ ಸಸ್ಯಾದಿಗಳಿಗೆ ಪೋಷಕ ಸತ್ವವನ್ನು ಒದಗಿಸುವ ಎಲ್ಲಾ ಜೀವಿಗಳ ಜೀವಾಧಾರವಾಗಿರುವ ಪೃಥ್ವೀ ರೂಪಿಣಿಯಾಗಿರುವ ಶ್ರೀದೇವಿಯನ್ನು ನಾನು ಇಲ್ಲಿಗೆ ಆಹ್ವಾನಿಸುತ್ತಿರುವೆ.

**ಮನಸಃ ಕಾಮಮಾಕೂತಿಂ ವಾಚಃ ಸತ್ಯಮಶೀಮಹಿ । ಪಶೂನಾಗ್ಂ ರೂಪಮನ್ಯಸ್ಯ ಮಯಿ ಶ್ರೀಃ ಶ್ರಯತಾಂ ಯಶಃ ॥10॥**

ಭಾವಾರ್ಥ - ಮನಸ್ಸಿನ ಎಲ್ಲಾ ಬಯಕೆಗಳನ್ನೂ, ಮಾತುಗಳಲ್ಲಿನ ಸತ್ಯಾಸತ್ಯತೆಯನ್ನೂ ಅರಿತುಕೊಳ್ಳೋಣ. ಅನ್ನ ರೂಪಿಣಿ, ಪಶು ರೂಪಿಣಿ, ಯಶೋ ರೂಪಿಣಿ, ಖ್ಯಾತಿ ಸಂಪನ್ನೆಯಾಗಿರುವ ಶ್ರೀದೇವಿಯು ನನ್ನಲ್ಲಿ ನೆಲೆಯಾಗಲಿ.

**ಕರ್ದಮೇನ ಪ್ರಜಾಭೂತಾ ಮಯಿ ಸಂಭವ ಕರ್ದಮ । ಶ್ರಿಯಂ ವಾಸಯ ಮೇ ಕುಲೇ ಮಾತರಂ ಪದ್ಮಮಾಲಿನೀಂ ॥11॥**

ಭಾವಾರ್ಥ - ಶ್ರೀದೇವಿಯು ಕರ್ದಮನೆಂಬ ಮಹರ್ಷಿಯಿಂದ ಪ್ರಜೆಗಳನ್ನು ಪಡೆದವಳು. ಕರ್ದಮ ಮಹರ್ಷಿಯು ನನ್ನ ಸಮೀಪವರ್ತಿಯಾಗಲಿ. ಅದರಿಂದ ಸಂತೃಪ್ತಳಾದ ತಾಯಿ ಶ್ರೀದೇವಿಯು ಪದ್ಮಮಾಲಾ ಭೂಷಿತಳಾಗಿ ನನ್ನ ಕುಲದಲ್ಲಿ ಸದಾ ನೆಲೆಗೊಳ್ಳುವಂತಾಗಲಿ.

**ಆಪಃ ಸೃಜಂತು ಸ್ನಿಗ್ಧಾನಿ ಚಿಕ್ಲೀತ ವಸ ಮೇ ಗೃಹೇ । ನಿ ಚ ದೇವೀಂ ಮಾತರಂ ಶ್ರಿಯಂ ವಾಸಯ ಮೇ ಕುಲೇ ॥12॥**

ಭಾವಾರ್ಥ - ಜಲ ರೂಪಿಣಿಯಾಗಿರುವ ಲಕ್ಷ್ಮಿಯು ಅನುಕೂಲವಾದ ಕಾರ್ಯಗಳನ್ನು ಮಾಡಲಿ. ಲಕ್ಷ್ಮೀ ಪುತ್ರನಾಗಿರುವ ಕಾಮದೇವನೇ [ಕಾಮ= ಕಾಮಿತಾರ್ಥ]ನನ್ನ ಮನೆಯಲ್ಲಿ ನೆಲೆಯಾಗು. ಮತ್ತು ತಾಯಿಯಾಗಿರುವ ಶ್ರೀದೇವಿಯು ನನ್ನಲ್ಲಿ ಸ್ಥಿರವಾಗಿ ನೆಲೆಗೊಳ್ಳುವಂತೆ ಮಾಡು.

**ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ ಪಿಂಗಳಾಂ ಪದ್ಮಮಾಲಿನೀಂ । ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥13॥**

ಭಾವಾರ್ಥ - ಕರುಣಾಳುವಾದ ಅಗ್ನಿದೇವನೇ! ಆನೆಯ ಸೊಂಡಿಲಿನಿಂದ ಅಭಿಷೇಕ ಮಾಡಿಸಿಕೊಳ್ಳುತ್ತಿರುವ, ಸಮೃದ್ಧಿ ಭರಿತಳಾದ, ನಸುಗೆಂಪು ವರ್ಣದ ಕಮಲದ ಹಾರವನ್ನು ಧರಿಸಿರುವ, ಚಂದ್ರನಂತೆ ಪ್ರಕಾಶಿಸುತ್ತಿರುವ ಸ್ವರ್ಣಾಭರಣ ಭೂಷಿತೆಯಾಗಿರುವ ತಾಯಿ ಲಕ್ಷ್ಮಿದೇವಿಯನ್ನು ನನಗಾಗಿ ಆಹ್ವಾನಿಸು.

**ಆರ್ದ್ರಾಂ ಯಃ ಕರಿಣೀಂ ಯಷ್ಟಿಂ ಸುವರ್ಣಾಂ ಹೇಮಮಾಲಿನೀಂ । ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥14॥**

ಭಾವಾರ್ಥ - ಹೇ!ಅಗ್ನಿದೇವನೇ, ದಯಾಪೂರ್ಣೆಯಾಗಿರುವ, ಹಸ್ತದಲ್ಲಿ ಧರ್ಮದಂಡವನ್ನು ಹಿಡಿದುಕೊಂಡಿರುವಂತಹಾ, ಶುಭವರ್ಣವನ್ನು ಹೊಂದಿದವಳಾಗಿರುವವಳಾದ, ಬಂಗಾರದ ಹಾರಗಳಿಂದ ಅಲಂಕೃತಳಾಗಿರುವ, ಸೂರ್ಯ ಪ್ರಕಾಶದಿಂದ ಬೆಳಗುತ್ತಲಿರುವ, ಸ್ವರ್ಣ ವಿಭೂಷಿತೆಯಾಗಿರುವ ತಾಯಿ ಲಕ್ಷ್ಮೀದೇವಿಯನ್ನು ನನ್ನಲ್ಲಿಗೆ ಕರೆದುಕೊಂಡು ಬಾ.

**ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಂ । ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋ ದಾಸ್ಯೋಽಶ್ವಾನ್, ವಿಂದೇಯಂ ಪುರುಷಾನಹಂ ॥15॥**

ಭಾವಾರ್ಥ - ಅಗ್ನಿದೇವನೇ! ಯಾವಾಕೆ ಪ್ರಸನ್ನಳಾದಾಗ ಅಪರಿಮಿತ ಬಂಗಾರವನ್ನೂ, ಗೋವುಗಳನ್ನೂ, ದಾಸಿಯರನ್ನೂ, ಕುದುರೆಗಳನ್ನೂ, ಮತ್ತು ಆಳುಗಳನ್ನೂ ನಾನು ಪಡೆಯಬಹುದಾಗಿದೆಯೋ, ಅಂತಹಾ ಚಿರಸ್ಥಾಯಿಯಾಗಿರುವ ಮಾತೆ ಲಕ್ಷ್ಮೀದೇವಿಯನ್ನು ನನ್ನಲ್ಲಿಗೆ ಕರೆದುಕೊಂಡು ಬಾ.

**ಓಂ ಮಹಾದೇವ್ಯೈ ಚ ವಿದ್ಮಹೇ ವಿಷ್ಣುಪತ್ನೀ ಚ ಧೀಮಹಿ । ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥16॥**

ಭಾವಾರ್ಥ - ಮಹಾಲಕ್ಷ್ಮಿಯನ್ನು ಅರಿತುಕೊಳ್ಳಲು ಯತ್ನಿಸುವೆವು. ವಿಷ್ಣು ಪತ್ನಿಯಾಗಿರುವ ಆಕೆಯಲ್ಲಿ ಅನುಗ್ರಹಿಸಲೋಸುಗವಾಗಿ ಪ್ರಾರ್ಥಿಸುವೆವು. ಅಂತಹ ಮಹಿಮಾನ್ವಿತಳಾಗಿರುವ ಲಕ್ಷ್ಮಿಯು ನಮ್ಮನ್ನು ಸದಾ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಣಾಶಕ್ತಿ ನೀಡಲಿ.

ಫಲಶ್ರುತಿ

**ಯಶ್ಶುಚಿಃ ಪ್ರಯತೋ ಭೂತ್ವಾ ಜುಹುಯಾ-ದಾಜ್ಯ-ಮನ್ವಹಂ । ಶ್ರಿಯಃ ಪಂಚದಶರ್ಚಂ ಚ ಶ್ರೀಕಾಮಸ್ಸತತಂ ಜಪೇತ್ ॥1॥**

ಭಾವಾರ್ಥ - ಯಾವಾತನು ಸುಖ-ಸಮೃದ್ಧಿಯನ್ನು ಬಯಸುತ್ತಾನೋ ಅಂತಹವನು ಅಂತರ್ಬಹಿರ್ಶುದ್ಧಿಯುಳ್ಳವನಾಗಿದ್ದು ಶ್ರದ್ಧಾಯುಕ್ತನಾಗಿ ಪ್ರತಿದಿವಸ ತುಪ್ಪದಿಂದ ಹೋಮವನ್ನು ಮಾಡಬೇಕು. ಮತ್ತು ಶ್ರೀದೇವಿಯ ಕುರಿತಾಗಿ ಋಗ್ವೇದದಲ್ಲಿ ಹೇಳಲಾಗಿರುವ ಈ ಹದಿನೈದು ಮಂತ್ರಗಳನ್ನು ಯಾವತ್ತೂ ಜಪಿಸುತ್ತಿರಬೇಕು.

**ಪದ್ಮಾನನೇ ಪದ್ಮ ಊರೂ ಪದ್ಮಾಕ್ಷೀ ಪದ್ಮಸಂಭವೇ । ತ್ವಂ ಮಾಂ ಭಜಸ್ವ ಪದ್ಮಾಕ್ಷೀ ಯೇನ ಸೌಖ್ಯಂ ಲಭಾಮ್ಯಹಂ ॥2॥**

ಭಾವಾರ್ಥ - ಪದ್ಮಾಸನದಲ್ಲಿ ಕುಳಿತವಳಾದ, ತಾವರೆಯನ್ನು ಹೋಲುವ ತೊಡೆಯನ್ನು ಹೊಂದಿರುವವಳಾದ, ಕಮಲದಂತೆ ಚೆಲುವಾಗಿರುವ ಕಣ್ಣುಗಳುಳ್ಳವಳಾದ, ತಾವರೆಯಲ್ಲಿ ಹುಟ್ಟಿರುವ ನೀನು ನನ್ನಲ್ಲಿಗೆ ಬಂದು ಅನುಗ್ರಹಿಸುವವಳಾಗು. ಆ ಮೂಲಕ ನಾನು ಸೌಖ್ಯವನ್ನು ಹೊಂದುತ್ತೇನೆ.

**ಅಶ್ವದಾಯೀ ಚ ಗೋದಾಯೀ ಧನದಾಯೀ ಮಹಾಧನೇ । ಧನಂ ಮೇ ಜುಷತಾಂ ದೇವೀಂ ಸರ್ವಕಾಮಾರ್ಥ ಸಿದ್ಧಯೇ ॥3॥**

ಭಾವಾರ್ಥ - ಭಕ್ತಾದಿಗಳಿಗೆ ಕುದುರೆ, ಗೋವು, ಸಂಪದಗಳನ್ನೀವ ಸಂಪದ್ಭರಿತೆ ದೇವಿಯೇ ನನ್ನೆಲ್ಲಾ ಇಷ್ಟಾರ್ಥ ಸಿದ್ಧಿಗಾಗಿ ನನಗೆ ಸಂಪತ್ತನ್ನು ಕರುಣಿಸು.

**ಪುತ್ರಪೌತ್ರ ಧನಂ ಧಾನ್ಯಂ ಹಸ್ತ್ಯಶ್ವಾದಿಗವೇ ರಥಂ । ಪ್ರಜಾನಾಂ ಭವಸಿ ಮಾತಾ ಆಯುಷ್ಮಂತಂ ಕರೋತು ಮಾಂ ॥4॥**

ಭಾವಾರ್ಥ - ಲಕ್ಷ್ಮಿದೇವಿಯೇ, ನೀನು ಸಮಸ್ತ ಪ್ರಜಾವರ್ಗದ ತಾಯಿ. ಮಕ್ಕಳು, ಮೊಮ್ಮಕ್ಕಳು, ಧಾನ್ಯ, ಸಂಪತ್ತು, ಆನೆ, ಕುದುರೆ, ಗೋವು, ರಥ ಇವೆಲ್ಲವನ್ನೂ ನನಗೆ ಕರುಣಿಸಿ ದೀರ್ಘಾಯುಷ್ಯವಂತನನ್ನಾಗಿ ಮಾಡು

**ಚಂದ್ರಾಭಾಂ ಲಕ್ಷ್ಮೀಮೀಶಾನಾಂ ಸೂರ್ಯಾಭಾಂ ಶ್ರಿಯಮೀಶ್ವರೀಂ । ಚಂದ್ರ ಸೂರ್ಯಾಗ್ನಿ ಸರ್ವಾಭಾಂ ಶ್ರೀ ಮಹಾಲಕ್ಷ್ಮೀ-ಮುಪಾಸ್ಮಹೇ ॥5॥**

ಭಾವಾರ್ಥ - ಚಂದ್ರನೋಪಾದಿಯ ಕಾಂತಿಯನ್ನು ಹೊಂದಿರುವ, ಶುಭಲಕ್ಷಣಯುಕ್ತಳಾದ, ಲೋಕಾಧೀಶೆಯಾಗಿರುವ, ಸೂರ್ಯನಂತೆ ಶೋಭಾಯಮಾನವಾಗಿ ಬೆಳಗುವ, ಚೆಲುವೆಯಾದ, ಸಂಪತ್ತಿಗೆ ಒಡತಿಯಾದ, ಸೂರ್ಯಾಚಂದ್ರಾಗ್ನಿಗಳಿಂದ ಮಿಗಿಲಾದ ಕಾಂತಿಯುಳ್ಳವಳಾದ ಮಹಾಲಕ್ಷ್ಮಿಯನ್ನು ನಾನು ಉಪಾಸಿಸುತ್ತೇನೆ.

**ಧನ-ಮಗ್ನಿ-ರ್ಧನಂ ವಾಯು-ರ್ಧನಂ ಸೂರ್ಯೋ ಧನಂ ವಸುಃ । ಧನಮಿಂದ್ರೋ ಬೃಹಸ್ಪತಿ-ರ್ವರುಣಂ ಧನಮಶ್ನುತೇ ॥6॥**

ಭಾವಾರ್ಥ - ಅಗ್ನಿ, ವಾಯು, ಸೂರ್ಯ, ವಸುದೇವತೆಯರು, ಇಂದ್ರ, ಬೃಹಸ್ಪತಿ, ವರುಣನೇ ಆದಿಯಾಗಿರುವ ಸಮಸ್ತ ದೇವತೆಯರು ನನಗೆ ಸಂಪತ್ತನ್ನು ಕರುಣಿಸಲಿ.

**ವೈನತೇಯ ಸೋಮಂ ಪಿಬ ಸೋಮಂ ಪಿಬತು ವೃತ್ರಹಾ । ಸೋಮಂ ಧನಸ್ಯ ಸೋಮಿನೋ ಮಹ್ಯಂ ದದಾತು ಸೋಮಿನಃ ॥7॥**

ಭಾವಾರ್ಥ - ವಿನತಾದೇವಿಯ ಮಗನಾಗಿರುವ ಗರುಡನೇ, ನೀನು ಸೋಮರಸವನ್ನು ಸೇವಿಸುವವನಾಗು. ವೃತ್ರಾಸುರಸಂಹಾರಿಯಾದ ಇಂದ್ರನೂ ಸೋಮರಸಪಾನ ಮಾಡಲಿ. ಸೋಮಪಾನಕ್ಕೆ ಯೋಗ್ಯರಾದ ದೇವತೆಗಳೇ, ನೀವೂ ಸೋಮಪಾನ ಮಾಡುವವರಾಗಿ. ಸೋಮಪಾನ ಮಾಡುವವರಾಗಿರುವ ನೀವುಗಳು ನನಗೂ ಧನಸೋಮಾದಿಗಳನ್ನು ದಯಪಾಲಿಸಿರಿ.

**ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ । ಭವಂತಿ ಕೃತ ಪುಣ್ಯಾನಾಂ ಭಕ್ತಾನಾಂ ಶ್ರೀ ಸೂಕ್ತಂ ಜಪೇತ್ಸದಾ ॥8॥**

ಭಾವಾರ್ಥ - ಶ್ರದ್ಧಾಪುರಸ್ಸರವಾಗಿ ಶ್ರೀಸೂಕ್ತವನ್ನು ಜಪಿಸುವ ಸಜ್ಜನರಿಗೆ ಎಂದೂ ಸಿಟ್ಟು, ಮತ್ಸರ, ದುರಾಸೆ, ಅತ್ಯಾಸೆ, ದುರ್ಬುದ್ಧಿಗಳು ಎಂದೂ ಉಂಟಾಗುವುದಿಲ್ಲ.

**ವರ್ಷಂತು ತೇ ವಿಭಾವರಿ ದಿವೋ ಅಭ್ರಸ್ಯ ವಿದ್ಯುತಃ । ರೋಹಂತು ಸರ್ವಬೀಜಾನ್ಯವ ಬ್ರಹ್ಮ ದ್ವಿಷೋ ಜಹಿ ॥9॥**

ಭಾವಾರ್ಥ - ರಾತ್ರೆಯರೂಪಿನವಳಾದ ಲಕ್ಷ್ಮಿಯೇ! ನಿನ್ನ ದಯೆಯಿಂದ ಅಂತರಿಕ್ಷದಲ್ಲಿನ ಮೋಡಗಳು ಸಿಡಿಲು, ಮಿಂಚುಸಹಿತವಾದ ಮಳೆಗರೆಯಲಿ. ಅದರಿಂದ ಭುವಿಯಲ್ಲಿನ ಬೀಜಗಳು ಮೊಳಕೆಯೊಡೆದು ಗಿಡವಾಗಿ ಬೆಳೆಯಲಿ. ಬ್ರಹ್ಮದ್ವೇಷಿಗಳನ್ನು ನಾಶಮಾಡುವುದರ ಮೂಲಕ ನಮ್ಮನ್ನು ಕಾಪಾಡು.

**ಸರಸಿಜನಿಲಯೇ ಸರೋಜಹಸ್ತೇ ಧವಲತರಾಂ ಶುಕಗಂಧಮಾಲ್ಯ ಶೋಭೇ । ಭಗವತಿ ಹರಿವಲ್ಲಭೇ ಮನೋಜ್ಞೇ ತ್ರಿಭುವನ ಭೂತಿಕರಿ ಪ್ರಸೀದಮಹ್ಯಂ ॥10॥**

ಭಾವಾರ್ಥ - ಸರೋವರದಲ್ಲಿ ನೆಲೆಯಾಗಿರುವವಳೇ, ತಾವರೆಪುಷ್ಪವನ್ನು ಹಸ್ತದಲ್ಲಿ ಹಿಡಿದಿರುವಾಕೆಯೇ, ಪರಿಶುಭ್ರವಾಗಿರುವ ಶ್ವೇತವಸನಧಾರಿಣಿಯೇ, ಸುವಾಸನಾಭರಿತಳಾಗಿ ಮಾಲೆಯನ್ನು ಧರಿಸಿ ಶೋಭಿಸುತ್ತಿರುವವಳೇ, ಪೂಜ್ಯಳೇ, ಶ್ರೀಹರಿಪ್ರಿಯಳಾದವಳೇ, ಚೆಲುವೆಯೇ, ಮೂರು ಲೋಕಗಳಿಗೂ ಐಶ್ವರ್ಯದಾತಳೇ, ನನಗೆ ಪ್ರಸನ್ನಳಾಗು.

**ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ ಪದ್ಮಾಲಯೇ ಪದ್ಮ-ದಳಾಯತಾಕ್ಷೀ । ವಿಶ್ವಪ್ರಿಯೇ ವಿಷ್ಣು ಮನೋನುಕೂಲೇ ತ್ವತ್ಪಾದಪದ್ಮಂ ಮಯಿ ಸನ್ನಿಧತ್ಸ್ವ ॥11॥**

ಭಾವಾರ್ಥ - ಕಮಲಪುಷ್ಪವನ್ನು ಇಷ್ಟಪಡುವ, ಪದ್ಮಿನೀ ಸ್ತ್ರೀಯಾಗಿರುವ [ಪದ್ಮಿನೀ=ಸ್ತ್ರೀಯರನ್ನು ವರ್ಣಿಸುವ ರೂಪಗಳಲ್ಲಿ ಒಂದು ವರ್ಗ] ತಾವರೆಯನ್ನು ಕೈಯಲ್ಲಿ ಹಿಡಿದಿರುವ, ಕಮಲಾಸನೆಯಾಗಿರುವ, ಕಮಲದ ದಳಗಳಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿರುವ, ಜಗತ್ತಿನ ಜನರಿಗೆ ಅಚ್ಚು ಮೆಚ್ಚಿನವಳಾದ ಮಹಾವಿಷ್ಣುವಿಗೆ ಅನುಕೂಲತೆಯ ಸತಿಯಾದ ಮಹಾಲಕ್ಷ್ಮಿಯೇ ನಿನ್ನ ಅಡಿದಾವರೆಯನ್ನು ನನ್ನಲ್ಲಿರಿಸು ತಾಯೀ.

**ವಿಷ್ಣುಪತ್ನೀಂ ಕ್ಷಮಾಂ ದೇವೀಂ ಮಾಧವೀಂ ಮಾಧವಪ್ರಿಯಾಂ । ವಿಷ್ಣೋಃ ಪ್ರಿಯಸಖೀಂ ನಮಾಮ್ಯಚ್ಯುತವಲ್ಲಭಾಂ ॥12॥**

ಭಾವಾರ್ಥ - ವಿಷ್ಣುವಿನ ಪತ್ನಿಯಾಗಿರುವ, ಕ್ಷಮಾಗುಣ ಪರಿಪೂರ್ಣೆಯಾಗಿರುವ, ವಸಂತಋತುವಿನಂತಿರುವ, ವಿಷ್ಣುವಿನಪ್ರೀತಿಪಾತ್ರಳಾದ, ವಿಷ್ಣುವಿಗೆ ಅತ್ಯಂತ

ಪ್ರೀತಿಯ ಸ್ನೇಹಿತೆಯಾಗಿರುವ, ಯಾವುದಕ್ಕೂ ಚ್ಯುತಿಯಿಲ್ಲದವನನ್ನು ಇಷ್ಟಪಡುವ ಭುವಿ ರೂಪಿಣಿಯಾಗಿರುವ ಲಕ್ಷ್ಮೀದೇವಿಗೆ ನಾನು ಶಿರಬಾಗುವೆ.

**ಓಂ ಮಹಾದೇವ್ಯೈ ಚ ವಿದ್ಮಹೇ ವಿಷ್ಣುಪತ್ನೀ ಚ ಧೀಮಹಿ । ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥13॥**

ಭಾವಾರ್ಥ - ಮಹಾದೇವಿಯನ್ನು ಅರಿತುಕೊಳ್ಳಲು ಪ್ರಯತ್ನಿಸುವೆವು. ವಿಷ್ಣು ಪತ್ನಿಯಾಗಿರುವ ಆಕೆಯ ಅನುಗ್ರಹಕ್ಕೋಸ್ಕರವಾಗಿ ಧ್ಯಾನಿಸುತ್ತಿದ್ದೇವೆ. ಆ ಮಹಾಲಕ್ಷ್ಮಿಯು ನಮ್ಮನ್ನು ಸನ್ಮಾರ್ಗದಲ್ಲಿ ಸಾಗುವಂತೆ ಪ್ರೇರೇಪಿಸಲಿ.

**ಶ್ರೀ-ರ್ವರ್ಚಸ್ವ-ಮಾಯುಷ್ಯ-ಮಾರೋಗ್ಯ-ಮಾವೀಧಾತ್ ಪವಮಾನಂ ಮಹೀಯತೇ । ಧಾನ್ಯಂ ಧನಂ ಪಶುಂ ಬಹುಪುತ್ರಲಾಭಂ ಶತಸಂವತ್ಸರಂ ದೀರ್ಘಮಾಯುಃ ॥14॥**

ಭಾವಾರ್ಥ - ಆ ಮಾತೆ ಶ್ರೀದೇವಿಯು ನಮ್ಮ ಮುಖ ಕಾಂತಿ, ಆರೋಗ್ಯ, ನಮಗೆ ಧೀರ್ಘಾಯುಷ್ಯವನ್ನು ಕರುಣಿಸಿ, ಕಾಂತಿಯುಕ್ತವಾದ ಶ್ರೇಷ್ಠತ್ವವನ್ನು ದಯಪಾಲಿಸುವುದರೊಂದಿಗೆ ಸಂಪತ್ತು, ಧಾನ್ಯ, ಗೋಸಂಪದ, ಪುತ್ರಸಂಪತ್ತು ಹಾಗೂ ನೂರು ವರ್ಷಗಳ ಪೂರ್ಣಾಯುಷ್ಯವನ್ನು ಅನುಗ್ರಹಿಸುವಳು.

**ಆನಂದಃ ಕರ್ದಮಃ ಶ್ರೀದಶ್ಚಿಕ್ಲೀತ ಇತಿ ವಿಶ್ರುತಾಃ । ಋಷಯಃ ಶ್ರಿಯಃ ಪುತ್ರಾಶ್ಚ ಶ್ರೀರ್ದೇವೀ ದೇವತಾ ಮತಾ ॥15॥**

ಭಾವಾರ್ಥ - ಈ ಶ್ರೀ ಸೂಕ್ತಕ್ಕೆ ಆನಂದ, ಕರ್ದಮ, ಶ್ರೀದ, ಚಿಕ್ಲೀತ ಎಂಬುದಾಗಿ ನಾಲ್ವರು ಶ್ರೀದೇವೀ ತನಯರೇ ಋಷಿಗಳೆಂದು ಪ್ರಸಿದ್ಧ ಪಡೆದಿರುತ್ತಾರೆ. ಶ್ರೀದೇವಿಯು ದೇವತೆಯಾಗಿದ್ದಾಳೆ.

**ಋಣ ರೋಗಾರಿ ದಾರಿದ್ರ್ಯ ಪಾಪಕ್ಷುದಪಮೃತ್ಯವಃ । ಭಯಶೋಕ ಮನಸ್ತಾಪಾ ನಶ್ಯಂತು ಮಮ ಸರ್ವದಾ ॥16॥**

ಭಾವಾರ್ಥ - ಶ್ರೀದೇವಿಯು ನನ್ನನ್ನು ಹಂಗಿನಿಂದ ಮುಕ್ತಗೊಳಿಸುವುದರೊಂದಿಗೆ, ನನ್ನಲ್ಲಿಯ ಅನಾರೋಗ್ಯ, ಶತ್ರು ಪೀಡೆ, ಬಡತನ, ಹಸಿವು, ಕೆಡುಕು, ಅಪಮೃತ್ಯುಗಳನ್ನೂ, ಭೀತಿ, ದುಃಖ, ಮನಸ್ತಾಪಗಳನ್ನೂ ಸದಾ ನಾಶಗೊಳಿಸಲಿ.

**ಯಾ ಸಾ ಪದ್ಮಾಸನಸ್ಥಾ ವಿಪುಲಕಟಿತಟೀ ಪದ್ಮಪತ್ರಾಯತಾಕ್ಷೀ । ಗಂಭೀರಾ ವರ್ತನಾಭಿಃ ಸ್ತನಭರನಮಿತಾ ಶುಭ್ರ ವಸ್ತ್ರೋತ್ತರೀಯಾ ॥ ಲಕ್ಷ್ಮೀ-ರ್ದಿವ್ಯೈ-ರ್ಗಜೇಂದ್ರೈ-ರ್ಮಣಿಗಣ ಖಚಿತೈ-ಸ್ಸ್ನಾಪಿತಾ ಹೇಮಕುಂಭೈಃ । ನಿತ್ಯಂ ಸಾ ಪದ್ಮಹಸ್ತಾ ಮಮ ವಸತು ಗೃಹೇ ಸರ್ವ ಮಾಂಗಲ್ಯಯುಕ್ತಾ ॥17॥**

ಭಾವಾರ್ಥ - ಯಾವಾಕೆಯು ಪದ್ಮಾಸನದಲ್ಲಿ ಕುಳಿತಿರುವಳೋ, ಯಾವಾಕೆಗೆ ವಿಸ್ತಾರವಾಗಿರುವ ನಡುವಿರುವುದೋ, ಯಾವಾಕೆಯು ಕಮಲದಳವನ್ನು ಹೋಲುವ ಕಣ್ಣುಗಳನ್ನು ಹೊಂದಿರುವಳೋ, ಆಳವಾಗಿರುವ ಸುಳಿಯಂತಹಾ ನಾಭಿಯನ್ನು ಹೊಂದಿರುವಳೋ, ಭಾರವಾಗಿರುವ ಸ್ತನಗಳಿಂದ ಕೂಡಿದವಳಾಗಿರುವಳೋ, ಶ್ವೇತವಸನಧಾರಿಣಿಯೋ, ರತ್ನಖಚಿತವಾದ ಬಂಗಾರದ ಕೊಡಗಳ ನೀರಿನಿಂದ ಆನೆಗಳ ಮೂಲಕ ಅಭಿಷೇಕವನ್ನು ಮಾಡಿಸಿಕೊಳ್ಳುತ್ತಿರುವಳೋ, ಹಸ್ತಗಳಲ್ಲಿ ತಾವರೆಪುಷ್ಪಗಳನ್ನು ಹಿಡಿದಿರುವಳೋ, ಅಂತಹಾ ಮಹಾಲಕ್ಷ್ಮಿಯು ಸರ್ವಸೌಭಾಗ್ಯವತಿಯಾಗಿ ಸದಾ ನನ್ನ ಮನೆಯಲ್ಲಿ ನೆಲೆ ಮಾಡಲಿ.

**ಲಕ್ಷ್ಮೀಂ ಕ್ಷೀರ ಸಮುದ್ರ ರಾಜತನಯಾಂ ಶ್ರೀರಂಗ ಧಾಮೇಶ್ವರೀಂ । ದಾಸೀಭೂತ ಸಮಸ್ತ ದೇವ ವನಿತಾಂ ಲೋಕೈಕ ದೀಪಾಂಕುರಾಂ ॥ ಶ್ರೀಮನ್ಮಂದ ಕಟಾಕ್ಷ ಲಬ್ಧ ವಿಭವ ಬ್ರಹ್ಮೇಂದ್ರ ಗಂಗಾಧರಾಂ । ತ್ವಾಂ ತ್ರೈಲೋಕ್ಯ ಕುಟುಂಬಿನೀಂ ಸರಸಿಜಾಂ ವಂದೇ ಮುಕುಂದಪ್ರಿಯಾಂ ॥18॥**

ಭಾವಾರ್ಥ - ಹಾಲುಗಡಲಿನ ಒಡೆಯನ ಮಗಳಾದ, ಶ್ರೀರಂಗಧಾಮದ ಅಧೀಶೆಯಾದ, ಸರ್ವ ದೇವತಾ ಸ್ತ್ರೀಯಯರು ಸೇವಕಿಯರಾಗಿ ಯಾರ ಸೇವೆ ಗೈಯುವರೋ, ಹಾಗೆಯೇ ಬ್ರಹ್ಮಾಂಡಕ್ಕೆ ಏಕಮಾತ್ರಾ ದೀಪದ ಕುಡಿಯಂತಿರುವ, ಯಾರ ಕಡೆಗಣ್ಣೋಟದಿಂದ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ವೈಭವ ದೊರಕಿದೆಯೋ

ಅಂತಹಾ, ಮೂರು ಲೋಕಗಳನ್ನೂ ತನ್ನ ಕುಟುಂಬವನ್ನಾಗಿ ಹೊಂದಿರುವ, ಮುಕುಂದನ ಪ್ರಿಯೆಯಾಗಿರುವ ಲಕ್ಷ್ಮೀಗೆ ನಾನು ಶಿರಸಾ ವಂದಿಸುವೆ.

**ಸಿದ್ಧಲಕ್ಷ್ಮೀ-ರ್ಮೋಕ್ಷಲಕ್ಷ್ಮೀ-ರ್ಜಯಲಕ್ಷ್ಮೀ-ಸ್ಸರಸ್ವತೀ । ಶ್ರೀಲಕ್ಷ್ಮೀ-ರ್ವರಲಕ್ಷ್ಮೀಶ್ಚ ಪ್ರಸನ್ನಾ ಮಮ ಸರ್ವದಾ ॥19॥**

ಭಾವಾರ್ಥ - ಸಿದ್ಧಿದಾಯಕಿಯಾದ ಲಕ್ಷ್ಮೀ, ಮೋಕ್ಷ ಪ್ರದಾಯಿನಿಯಾದ ಲಕ್ಷ್ಮೀ, ಜಯವನ್ನು ಕರುಣಿಸುವ ಲಕ್ಷ್ಮೀ, ಮದುರವಚನವನ್ನಾಡುವ ಲಕ್ಷ್ಮೀ, ಕಾಂತಿದಾಯಕಿಯಾಗಿರುವ ಲಕ್ಷ್ಮೀ, ಹಾಗೂ ವರದಾಯಿನಿಯಾಗಿರುವ ಲಕ್ಷ್ಮೀಯೂ ಆಗಿರುವ ಮಹಾಲಕ್ಷ್ಮೀಯೇ ನೀನು ಸದಾ ನನಗೆ ಪ್ರಸನ್ನಳಾಗು.

**ವರಾಂಕುಶೌ ಪಾಶಮಭೀತಿ ಮುದ್ರಾಂ । ಕರೈರ್ವಹಂತೀಂ ಕಮಲಾಸನಸ್ಥಾಂ ॥ ಬಾಲರ್ಕಕೋಟಿ ಪ್ರತಿಭಾಂ ತ್ರಿನೇತ್ರಾಂ । ಭಜೇಽಹಮಂಬಾಂ ಜಗದೀಶ್ವರೀಂ ತಾಂ ॥20॥**

ಭಾವಾರ್ಥ - ಹಸ್ತಗಳಲ್ಲಿ ಅಂಕುಶ, ಪಾಶಗಳನ್ನು ಹಾಗೂ ವರ, ಅಭಯ ಮುದ್ರೆಗಳನ್ನು ಧರಿಸಿ, ಪದ್ಮಾಸನದಲ್ಲಿ ವಿರಾಜಮಾನಳಾಗಿರುವ, ಉದಯಿಸುವ ಕೋಟಿ ಸೂರ್ಯರ ಪ್ರಕಾಶವನ್ನು ಹೊಂದಿರುವ, ಮುಕ್ಕಣ್ಣಳಾಗಿರುವ ಆ ಜಗದೊಡತಿಯನ್ನು ನಾನು ಭಜಿಸುತ್ತಿದ್ದೇನೆ.

**ಸರ್ವಮಂಗಳ ಮಾಂಗಳ್ಯೇ ಶಿವೇ ಸರ್ವಾರ್ಥ ಸಾಧಿಕೇ । ಶರಣ್ಯೇ ತ್ರ್ಯಂಬಕೇ ದೇವೀ ನಾರಾಯಣಿ ನಮೋಸ್ತುತೇ ॥21॥**

ಭಾವಾರ್ಥ - ಹೇ!ನಾರಾಯಣೀ, ಸರ್ವಮಂಗಲ ಮಾಂಗಲ್ಯದಾಯಕಿಯೂ, ಶಿವಸ್ವರೂಪಿಣಿಯೂ, ಸರ್ವಾರ್ಥಗಳನ್ನು ಸಾಧಿಸುವವಳೂ, ಶರಣ್ಯಳೂ, ಮೂರುಲೋಕಗಳ ಜನನಿಯೂ ಗೌರಿಯೂ ಆಗಿರುವ ನಿನಗೆ ನನ್ನ ಪ್ರಣಾಮಗಳು.

॥ ಇತಿ ಶ್ರೀಸೂಕ್ತಂ ಸಂಪೂರ್ಣಂ ॥

## 15.3 ಪುರುಷಸೂಕ್ತಂ

**॥ ಸಹಸ್ರಶೀರ್ಷಾ ನಾರಾಯಣೋ ಋಷಿಃ ಪುರುಷೋ ದೇವತಾ ಅನುಷ್ಟುಪ್ ಛಂದಃ ಅಂತ್ಯಾ ತ್ರಿಷ್ಟುಪ್ ಮಹಾಭಿಷೇಕೇ ವಿನಿಯೋಗಃ ॥**

**ಓಂ ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಸ್ಸಹಸ್ರಪಾತ್ ॥ ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಂ ॥1॥**

ಭಾವಾರ್ಥ - ಪುರುಷ ಶಬ್ದದಿಂದ ಮುಖ್ಯತಃ ವಾಚ್ಯನಾದ ನಾರಾಯಣನ ಶಿರಸ್ಸುಗಳು, ಕಣ್ಣುಗಳು, ಪಾದಗಳು, ಉಪಲಕ್ಷಣಯಾ ತೊಡೆ ಮೊದಲಾದ ಎಲ್ಲ ಅಂಗಗಳೂ ಅನಂತವಾಗಿವೆ. ಇಲ್ಲಿ ಸಹಸ್ರ ಶಬ್ದವು ಅನಂತವನ್ನು ಹೇಳುತ್ತದೆ. ಈ ಪುರಷನು ಭೂಮಿ ಶಬ್ದದಿಂದ ವಾಚ್ಯವಾದ ಬ್ರಹ್ಮಾಂಡದೊಳಗಿನ ಸಮಸ್ತ ಜಗತ್ತನ್ನು ಬಹಳವಾಗಿ ವ್ಯಾಪಿಸಿದ್ದರೂ ಅಂಗುಷ್ಟ ಗಾತ್ರದ ಹೃದಯದಲ್ಲಿಯೂ ಇರುತ್ತಾನೆ. ಅಂದರೆ ಅಲ್ಪವಾದ ಹೃದಯದಲ್ಲಿದ್ದು ಅಚಿಂತ್ಯ ಶಕ್ತಿಯಿಂದ ಇಡೀ ಬ್ರಹ್ಮಾಂಡವನ್ನು ವ್ಯಾಪಿಸಿರುತ್ತಾನೆ.

**ಪುರುಷ ಏವೇದಗ್ಂ ಸರ್ವಂ । ಯದ್ಭೂತಂ ಯಚ್ಚ ಭವ್ಯಂ ॥ ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥2॥**

ಭಾವಾರ್ಥ - ಹಿಂದೆ ಆಗಿಹೋದ, ಈಗಿರುವ ಮತ್ತು ಮುಂದೆ ಬರಲಿರುವ ಸಕಲ ಜಗತ್ತು ಸದಾ ಕಾಲದಲ್ಲಿಯೂ ಈ ಪುರುಷನ ಅಧೀನವೇ ಆಗಿರುವುದು. ಆತನೇ ಮುಕ್ತರಿಗೂ ಅಮುಕ್ತರಿಗೂ ಮತ್ತು ಮುಕ್ತಿಗೂ ಸ್ವಾಮಿಯು. ಅಂದರೆ ಮುಕ್ತರಿಗೂ ಅಮುಕ್ತರಿಗೂ ಆಶ್ರಯನು. ಈ ಪುರುಷನು ಅನ್ನ ಶಬ್ದದಿಂದ ವಾಚ್ಯಳಾದ ಶ್ರೀರಮಾದೇವಿಯನ್ನೂ ಮೀರಿನಿಂತಿರುವನು.

**ಏತಾವಾನಸ್ಯ ಮಹಿಮಾ । ಅತೋ ಜ್ಯಾಯಾಗ್‌ಶ್ಚ ಪೂರುಷಃ ॥ ಪಾದೋಽಸ್ಯ ವಿಶ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ ॥3॥**

ಭಾವಾರ್ಥ - "ಸಹಸ್ರಶೀರ್ಷಾ ಪುರುಷಃ" ಇತ್ಯಾದಿ ಹಿಂದೆ ಹೇಳಿದ್ದಕ್ಕಿಂತಲೂ ಅತ್ಯಧಿಕವಾಗಿದೆ ಈತನ ಮಹಿಮೆ. ಸಮಸ್ತ ಭೂತಗಳೂ ಇವನ ಒಂದು ಭಿನ್ನಾಂಶ

ಮಾತ್ರ. ಇವನ ಸ್ವರೂಪಭೂತವಾದ ಮೂರು ಅಂಶಗಳು "ದಿವಿ" ಎನಿಸಿಕೊಳ್ಳುತ್ತದೆ. "ಭೂರ್ಭುವ ಸ್ವಃ" ಎಂಬ ಮೂರು ಲೋಕಗಳಿಂದ ಬಹಳ ಎತ್ತರದಲ್ಲಿರುವ ಅಂತರಿಕ್ಷದ ಮೇಲಿರುವ ಶ್ವೇತದ್ವೀಪ ಅನಂತಾಸನ ವೈಕುಂಠಗಳ "ದ್ಯು" ಎಂದು ಕರೆಸಿಕೊಳ್ಳುವುದರಿಂದ ತದ್ಗತವಾದ ರೂಪವು "ದಿವಿ" ಎಂದು ಪ್ರಸಿದ್ಧವಾಗಿದೆ.

**ತ್ರಿಪಾದೂರ್ಧ್ವ ಉದೈತ್ಪುರುಷಃ । ಪಾದೋಽಸ್ಯೇಹಾಭವಾತ್ಪುನಃ ॥ ತತೋ ವಿಶ್ವಙ್ವ್ಯಕ್ರಾಮತ್ । ಸಾಶನಾನಶನೇ ಅಭಿ ॥4॥**

ಭಾವಾರ್ಥ - ಈ ಪುರುಷನು ದ್ಯುಲೋಕದಿಂದ ಉಪಲಕ್ಷಿತವಾದ ಮೂರು ಲೋಕಗಳಿಂದ ಹೊರಗಿರುವ ಉತ್ತಮವಾದ ಶ್ವೇತದ್ವೀಪಾದಿ ಮೂರು ಧಾಮಗಳಲ್ಲಿರುವವನಾಗಿ ಉತ್ಕೃಷ್ಟನಾಗಿದ್ದಾನೆ. ಹೀಗಿದ್ದರೂ ಈ ಪರಮಾತ್ಮನ ಭಿನ್ನವಾದ ಪಾದವು ನಿಯಮ್ಯವಾದ ಜಗತ್ತಿನಲ್ಲಿ ಪುನಃ ಇದ್ದೇ ಇರುವುದು. "ವಿಷ್ವಕ್" ಶಬ್ದದಿಂದ ಕರೆಸಿಕೊಳ್ಳುವ "ತ್ರಿಪಾತ್" ಪುರುಷನು ನಾನಾವಿಧವಾದ ದೇವಮಾನುಷ ತಿರ್ಯಗಾದಿ ಪ್ರಾಣಿಗಳಲ್ಲಿ ವ್ಯಾಪ್ತನಾಗಿದ್ದಾನೆ. ಅಲ್ಲದೆ ದೇವತೆಗಳನ್ನು (ಅನಶನರು) ಮತ್ತು ತದಿತರ ವಿದ್ವಜ್ಜನರಾದ ಋಷಿಗಳನ್ನು (ಸಾಶನರು) ವಿಶೇಷವಾಗಿ ಆಕ್ರಮಿಸಿ ಇದ್ದಾನೆ.

**ತಸ್ಮಾದ್ವಿರಾಡಜಾಯತ । ವಿರಾಜೋ ಅಧಿ ಪೂರುಷಃ ॥ ಸ ಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿಮಥೋ ಪುರಃ ॥5॥**

ಭಾವಾರ್ಥ - ಪುರುಷರೂಪಿ ನಾರಾಯಣನಿಂದ ವಿಶೇಷವಾಗಿ ಪ್ರಕಾಶಿಸುತ್ತದೆ ಎಂಬ ಕಾರಣದಿಂದ ವಿರಾಟ್ ಎಂದು ಹೇಳಲ್ಪಡುವ ಬ್ರಹ್ಮಾಂಡವು ಹುಟ್ಟಿತು. ಬ್ರಹ್ಮಾಂಡದಿಂದ ವಿರಾಣ್ಣಾಮ ಚತುರ್ಮುಖ ಬ್ರಹ್ಮ ದೇವರು ಹುಟ್ಟಿದರು. ಹೀಗೆ ಹುಟ್ಟಿದ ಬ್ರಹ್ಮದೇವರು ಅನಂತರ ಹುಟ್ಟಿದ ರುದ್ರಾದಿ ಸಮಸ್ತ ಜಗತ್ತನ್ನು (ಭೂಮಿಂ) ಹಾಗೂ ತಮಗಿಂತ ಮೊದಲು ಹುಟ್ಟಿದ ಬ್ರಹ್ಮಾಂಡವನ್ನು ಸಹ ಅತಿಕ್ರಮಿಸಿರುವರು. ಚತುರ್ಮುಖ ಬ್ರಹ್ಮದೇವರು ರುದ್ರಾದಿ ಜಗತ್ತಿಗಿಂತ ಅಧಿಕರು. ಇವರೆಲ್ಲರಿಗಿಂತ ಪುರುಷರೂಪಿ ನಾರಾಯಣನು ಅಧಿಕ.

**ಯತ್ಪುರುಷೇಣ ಹವಿಷಾ । ದೇವಾ ಯಜ್ಞಮತನ್ವತ ॥ ವಸಂತೋ ಅಸ್ಯಾಸೀದಾಜ್ಯಂ । ಗ್ರೀಷ್ಮ ಇಧ್ಮಃ ಶರದ್ಧವಿಃ ॥6॥**

ಭಾವಾರ್ಥ - ಹೀಗೆ ಮೊದಲನೆಯ ವರ್ಗದ ಐದು ಋಕ್ಕುಗಳಿಂದ ವಿಷ್ಣುವಿನ ಸರ್ವೋತ್ತಮತ್ವವನ್ನು ಹೇಳಿ, ಎರಡನೆಯ ವರ್ಗದ ಋಕ್ಕುಗಳಿಂದ ದೇವತೆಗಳು ಮಾನಸ ಯಜ್ಞದಿಂದ ಸರ್ವೋತ್ತಮನಾದ ಆ ಪುರುಷನನ್ನು ಆರಾಧಿಸಿದರೆಂದು ಹೇಳುತ್ತಾರೆ. ಮನಸ್ಸಿನಲ್ಲಿ ಸಂಕಲ್ಪಿತ ಚತುರ್ಮುಖಾಖ್ಯ ಪಶುರೂಪಿ ಹವಿಸ್ಸಿನಿಂದ ವಿಷ್ಣುವನ್ನು ಉದ್ದೇಶ ಮಾಡಿಕೊಂಡು ಯಜ್ಞವನ್ನು ಮಾಡಿದರು. ಈ ಮಾನಸ ಯಜ್ಞಕ್ಕೆ ವಸಂತ ಮಾಸಾಭಿಮಾನಿ ದೇವತೆಯೇ ತುಪ್ಪ, ಗ್ರೀಷ್ಮಾಭಿಮಾನಿಯೇ ಕಟ್ಟಿಗೆ, ಶರದಭಿಮಾನಿಯೇ ಹವಿಸ್ಸು. ಹೀಗೆ ವಿಷ್ಣುವಿನ ಅಂಗಗಳಿಂದ ಹುಟ್ಟಿದ ಹವಿರಾದಿ ಪದಾರ್ಥಗಳಿಂದ ದೇವತೆಗಳು ಮಾನಸಯಜ್ಞ ಮಾಡಿದರು.

**ಸಪ್ತಾಸ್ಯಾಸನ್ಪರಿಧಯಃ । ತ್ರಿಸ್ಸಪ್ತ ಸಮಿಧಃ ಕೃತಾಃ ॥ ದೇವಾ ಯದ್ಯಜ್ಞಂ ತನ್ವಾನಾಃ । ಅಬಧ್ನನ್ಪುರುಷಂ ಪಶುಂ ॥7॥**

ಭಾವಾರ್ಥ - ಬ್ರಹ್ಮಾದಿ ದೇವತೆಗಳು, ಸಾಧ್ಯರು, ಋಷಿಗಳು ಮಾಡಿದ ಮಾನಸಯಜ್ಞದಲ್ಲಿ ಗಾಯತ್ರ್ಯಾದಿ ಏಳು ಛಂದಸ್ಸುಗಳನ್ನು ಪರಿಧಿಗಳೆಂದೂ (ದರ್ಭವಿಶೇಷಗಳು), ಹನ್ನೆರಡು ತಿಂಗಳುಗಳು, ಐದು ಋತುಗಳು, ಮೂರು ಲೋಕಗಳು ಮತ್ತು ಸೂರ್ಯ ಇವುಗಳನ್ನು ಇಪ್ಪತ್ತೊಂದು ಸಮಿತ್ತುಗಳಾಗಿಯೂ ಭಾವಿಸಿ ಮಾನಸ ಯಜ್ಞವನ್ನು ಮಾಡಿದರು.

**ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ । ಪುರುಷಂ ಜಾತಮಗ್ರತಃ ॥ ತೇನ ದೇವಾ ಅಯಜಂತ । ಸಾಧ್ಯಾ ಋಷಯಶ್ಚ ಯೇ ॥8॥**

ಭಾವಾರ್ಥ - ಬ್ರಹ್ಮಾದಿ ದೇವತೆಗಳು, ಸಾಧ್ಯರು, ಋಷಿಗಳು, ಎಲ್ಲರೂ ರುದ್ರಾದಿ ಸಮಸ್ತ ದೇವತೆಗಳನ್ನು ಮನಸ್ಸಿನಿಂದ (ಬರ್ಹಿಷಾ) ಪಶುತ್ವೇನ ಕಲ್ಪಿಸಿ ಪ್ರೋಕ್ಷಿಸಿ ವಿಷ್ಣುವನ್ನು ಆರಾಧಿಸಿದರು.

**ತಸ್ಮಾದ್ಯಜ್ಞಾತ್ಸರ್ವಹುತಃ । ಸಂಭೃತಂ ಪೃಷದಾಜ್ಯಂ ॥ ಪಶೂಗ್ಂಸ್ತಾಗ್ಂಶ್ಚಕ್ರೇ ವಾಯವ್ಯಾನ್ । ಆರಣ್ಯಾನ್ಗ್ರಾಮ್ಯಾಶ್ಚ ಯೇ ॥9॥**

ಭಾವಾರ್ಥ - ಈ ಮಾನಸಯಜ್ಞದಿಂದ ಪ್ರಸನ್ನನಾದ ಭಗವಂತನಿಂದ ಹೊರಗಿನ ಯಜ್ಞಸಾಧನ ಪದಾರ್ಥಗಳು ಹುಟ್ಟಿದವೆಂದು ಹೇಳುತ್ತಾರೆ. ಈ ಪುರುಷನಿಂದ ಪ್ರಧಾನ ಹೋಮಗಳು ಹುಟ್ಟಿದವು. ಮೊಸರು ಕಲೆತ ತುಪ್ಪವು ಹುಟ್ಟಿತು. ಅಂತರಿಕ್ಷಲೋಕದಲ್ಲಿ ಹುಟ್ಟಿದ ಶ್ವೇತ ಪಶುಗಳನ್ನು ಅರಣ್ಯದಲ್ಲಿ ಹುಟ್ಟಿದ ಜಿಂಕೆ, ಗ್ರಾಮಗಳಲ್ಲಿ ಹುಟ್ಟಿದ ಆಡು ಮುಂತಾದವನ್ನು ಪುರಷನು ಉಂಟುಮಾಡಿದನು.

**ತಸ್ಮಾದ್ಯಜ್ಞಾತ್ಸರ್ವಹುತಃ । ಋಚಸ್ಸಾಮಾನಿ ಜಜ್ಞಿರೇ ॥ ಛಂದಾಗ್ಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ॥10॥**

ಭಾವಾರ್ಥ - ಸರ್ವಹುತನಾದ ವಿಷ್ಣುವಿನಿಂದ ಅಪ್ರಧಾನವಾದ ಎಲ್ಲ ಹೋಮಗಳು, ಋಕ್ ಸಾಮಾಭಿಮಾನಿ ದೇವತೆಗಳು ಹಾಗೂ ತತ್ತನ್ನಾಮಕ ವೇದಗಳು ಹುಟ್ಟಿದವು. ಅವನಿಂದಲೇ ಗಾಯತ್ರ್ಯಾದಿ ಛಂದಸ್ಸುಗಳು ಹುಟ್ಟಿದವು. ಯಜುವು ಹುಟ್ಟಿತು.

**ತಸ್ಮಾದಶ್ವಾ ಅಜಾಯಂತ । ಯೇ ಕೇ ಚೋಭಯಾದತಃ ॥ ಗಾವೋ ಹ ಜಜ್ಞಿರೇ ತಸ್ಮಾತ್ । ತಸ್ಮಾಜ್ಜಾತಾ ಅಜಾವಯಃ ॥11॥**

ಭಾವಾರ್ಥ - ವಿಷ್ಣುವಿನಿಂದ ಕುದುರೆಗಳು ಹುಟ್ಟಿದವು. ಮೇಲೆ, ಕೆಳಗೆ ಚೆನ್ನಾಗಿ ಹಲ್ಲುಗಳಿರುವ ಹೇಸರಕತ್ತೆ ಮೊದಲಾದವು. ಗೋವುಗಳು, ಆಡು ಮೊದಲಾದವು ಸಹ ಹುಟ್ಟಿದವು.

**ಯತ್ಪುರುಷಂ ವ್ಯದಧುಃ । ಕತಿಧಾ ವ್ಯಕಲ್ಪಯನ್ನ್ ॥ ಮುಖಂ ಕಿಮಸ್ಯ ಕೌ ಬಾಹೂ । ಕಾವೂರೂ ಪಾದಾವುಚ್ಯೇತೇ ॥12॥**

ಭಾವಾರ್ಥ - ಇದು ದ್ವಿತೀಯ ವರ್ಗದ ಮೊದಲು ಋಕ್ಕು. ಇಲ್ಲಿ ತತ್ತ್ವವನ್ನು ತಿಳಿಯಲು ಶಿಷ್ಯನು ಪ್ರಶ್ನಿಸುತ್ತಾನೆ. ಬ್ರಹ್ಮಾದಿ ದೇವತೆಗಳು ಪುರುಷನನ್ನು ಎಷ್ಟು ವಿಧವಾಗಿ ಚಿಂತಿಸಿದರು, ಯಜ್ಞದಲ್ಲಿ ಇದ್ದರೂ ವಿಶೇಷವಾಗಿ ಮನಸ್ಸಿನಿಂದ

ನಾನಾರೀತಿಯಿಂದ ಹೇಗೆ ಕಲ್ಪಿಸಿದರು ಎಂಬುದನ್ನೇ ಪ್ರಶ್ನೆಯ ರೂಪದಲ್ಲಿ ವಿಶದಪಡಿಸುತ್ತಾರೆ. ಮುಖವು ಯಾವುದಕ್ಕೆ ಜನಕವಾಯಿತು(ಕಾರಣವಾಯಿತು)? ಬಾಹುಗಳು ಯಾವುದಕ್ಕೆ ಜನಕವಾದವು? ತೊಡೆಗಳು ಹಾಗೂ ಪಾದಗಳು ಯಾವುದಕ್ಕೆ ಜನಕವಾದವು?

**ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂ ರಾಜನ್ಯಃ ಕೃತಃ ॥ ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾಗ್ಂ ಶೂದ್ರೋ ಅಜಾಯತ ॥13॥**

ಭಾವಾರ್ಥ - ಹಿಂದಿನ ಪ್ರಶ್ನೆಗೆ ಇಲ್ಲಿ ಉತ್ತರ ಕೊಡುತ್ತಾರೆ. ವಿಷ್ಣುವಿನ ಮುಖದಿಂದ ಬ್ರಾಹ್ಮಣ ಹಾಗೂ ಬ್ರಾಹ್ಮಣ ಜಾತಿಯ ಅಭಿಮಾನಿ ಬ್ರಹ್ಮನೂ, ಬಾಹುಗಳಿಂದ ಕ್ಷತ್ರಿಯ ಹಾಗೂ ಕ್ಷತ್ರಾಭಿಮಾನಿ ವಾಯುವೂ, ತೊಡೆಗಳಿಂದ ವೈಶ್ಯ ಹಾಗೂ ತದಭಿಮಾನಿ ನಾಸಿಕ್ಯ ವಾಯುವೂ, ಪಾದಗಳಿಂದ ಶೂದ್ರ ಹಾಗೂ ತದಭಿಮಾನಿ ನಿಋತಿಯೂ ಹುಟ್ಟಿದರು.

**ಚಂದ್ರಮಾ ಮನಸೋ ಜಾತಃ । ಚಕ್ಷೋಸ್ಸೂರ್ಯೋ ಅಜಾಯತ ॥ ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯುರಜಾಯತ ॥14॥**

ಭಾವಾರ್ಥ - ಈ ವಿರಾಟ್ ಪುರುಷನ ಮನಸ್ಸಿನಿಂದ ಚಂದ್ರನು ಹುಟ್ಟಿದನು ಮತ್ತು ಅದನ್ನು ಆಶ್ರಯಿಸಿರುವನು. ಕಣ್ಣುಗಳಿಂದ ಸೂರ್ಯನು ಹುಟ್ಟಿ ಅದನ್ನೇ ಆಶ್ರಯಿಸಿರುವನು. ಮುಖದಿಂದ ಇಂದ್ರ ಮತ್ತು ಅಗ್ನಿ, ಪ್ರಾಣದಿಂದ ಮುಖ್ಯವಾಯು, ನಾಸಿಕ್ಯವಾಯು ಇವರುಗಳು ಹುಟ್ಟಿ ಆಯಾ ಅಂಗಗಳನ್ನೇ ಆಶ್ರಯಿಸಿರುವರು.

**ನಾಭ್ಯಾ ಆಸೀದಂತರಿಕ್ಷಂ । ಶೀರ್ಷ್ಣೋ ದ್ಯೌಸ್ಸಮವರ್ತತ ॥ ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ । ತಥಾ ಲೋಕಾಗ್ಂ ಅಕಲ್ಪಯನ್ ॥15॥**

ಭಾವಾರ್ಥ - ವಿಷ್ಣುವಿನ ನಾಭಿಯಿಂದ ಅಂತರಿಕ್ಷವು ಹುಟ್ಟಿ ಅದನ್ನೇ ಆಶ್ರಯಿಸಿತು. ಶಿರಸ್ಸಿನಿಂದ ದ್ಯು ಲೋಕ, ಪಾದಗಳಿಂದ ಭೂಮಿ, ಕಿವಿಗಳಿಂದ ದಿಕ್ಕುಗಳು ಮತ್ತು ಪಾತಾಳಾದಿ ಲೋಕಗಳು ಹುಟ್ಟಿದವು. ಅವುಗಳು ತಮ್ಮ ಉತ್ಪತ್ತಿಗೆ ಕಾರಣವಾದ ಅಂಗಗಳನ್ನೇ ಆಶ್ರಯಿಸಿದವು. ಇಲ್ಲಿನ ಉತ್ಪತ್ತಿಯ ಕ್ರಮದಲ್ಲಿ ಆಯಾ ಅಭಿಮಾನಿ ದೇವತೆಗಳನ್ನೂ ಇಟ್ಟುಕೊಳ್ಳಬೇಕು.

**ವೇದಾಹಮೇತಂ ಪುರುಷಂ ಮಹಾಂತಂ । ಆದಿತ್ಯವರ್ಣಂ ತಮಸಸ್ತು ಪಾರೇ ॥
ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ । ನಾಮಾನಿ ಕೃತ್ವಾಽಭಿವದನ್, ಯದಾಸ್ತೇ ॥
ಧಾತಾ ಪುರಸ್ತಾದ್ಯಮುದಾಜಹಾರ । ಶಕ್ರಃ ಪ್ರವಿದ್ವಾನ್ಪ್ರದಿಶಶ್ಚತಸ್ರಃ ॥ ತಮೇವಂ
ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ ॥ ಯಜ್ಞೇನ
ಯಜ್ಞಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ॥ ತೇ ಹ ನಾಕಂ
ಮಹಿಮಾನಸ್ಸಚಂತೇ । ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥16॥**

ಭಾವಾರ್ಥ - ಹೀಗೆ ದೇವತೆಗಳು ಮಾಡಿದ ಯಜ್ಞಕ್ಕೆ ಫಲವನ್ನು ಹೇಳುತ್ತಾರೆ. ಬ್ರಹ್ಮಾದಿಗಳು ದ್ರವ್ಯ ಮತ್ತು ಮಾನಸ ಯಜ್ಞದಿಂದ ವಿಷ್ಣುವನ್ನು ಕುರಿತು ಯಜ್ಞ ಮಾಡಿದ್ದರಿಂದ ತಮಗೆ ಯೋಗ್ಯವಾದ ಪದವಿಗಳನ್ನು ಹೊಂದಿದರು ಹಾಗೂ ಆಯಾ ಲೋಕಗಳಿಗೆ ಮುಖ್ಯ ಧಾರಕರಾದರು. ಮಹಾತ್ಮರಾದ ಅವರು ತಮ್ಮ ಸಾಧನೆ ಪೂರ್ತಿಯಾದ ಬಳಿಕ ಪೂರ್ಣಸುಖಾತ್ಮಕವಾದ ಮೋಕ್ಷವನ್ನು ಹೊಂದಿದರು. ದೇವತೆಗಳು ಭಗವತ್ಪೂಜೆಯ ಫಲವಾಗಿ ಮೋಕ್ಷಾದಿ ಪುರಷಾರ್ಥವನ್ನು ಗಳಿಸಿದರು. ಆದ್ದರಿಂದ ಎಲ್ಲರೂ ಅವಶ್ಯವಾಗಿ ದ್ರವ್ಯ ಮತ್ತು ಮಾನಸ ಸಾಧನಗಳಿಂದ ಸರ್ವೋತ್ತಮನಾದ ವಿಷ್ಣುವನ್ನು ಆರಾಧಿಸಬೇಕು.

॥ ಇತಿ ಪುರುಷಸೂಕ್ತಂ ಸಂಪೂರ್ಣಂ ॥

## 15.4 ಸ್ವಸ್ತಿಮಂತ್ರಂ

**ಓಂ ಸ್ವಸ್ತಿ ನೋ ಮಿಮೀತಾಮಶ್ವಿನಾ ಭಗಃ ಸ್ವಸ್ತಿ ದೇವ್ಯದಿತಿರನರ್ವಣಃ । ಸ್ವಸ್ತಿ
ಪೂಷಾ ಅಸುರೋ ದಧಾತು ನಃ ಸ್ವಸ್ತಿ ದ್ಯಾವಾಪೃಥಿವೀ ಸುಚೇತುನಾ ॥1॥**

ಭಾವಾರ್ಥ - ಅಶ್ವಿನಿದೇವತೆಗಳು, ಸೂರ್ಯ, ಚಂದ್ರ, ನಕ್ಷತ್ರಾದಿಗಳು, ಐಶ್ವರ್ಯದೇವತೆ, ಭೂದೇವಿ, ಗೋಮಾತೆ, ನಮಗೆ ಶುಭವನ್ನುಂಟುಮಾಡಲಿ. ಅನ್ಯರಿಂದ ಎದುರಿಸಲಸಾಧ್ಯವಿರುವ ಮತ್ತು ವೈರಿಗಳನ್ನು ಸಂಹರಿಸುವ ಸೂರ್ಯ, ಹಾಗೂ ಶ್ರೇಷ್ಠ ಜ್ಞಾನದಿಂದ ಕೂಡಿದ ದ್ಯಾವಾಪೃಥುವಿಗಳು ನಮಗೆ ಮಂಗಲಕಾರಕರಾಗಿರಲಿ.

**ಸ್ವಸ್ತಯೇ ವಾಯುಮುಪ ಬ್ರವಾಮಹೈ ಸೋಮಂ ಸ್ವಸ್ತಿ ಭುವನಸ್ಯ ಯಸ್ಪತಿಃ । ಬೃಹಸ್ಪತಿಂ ಸರ್ವಗಣಂ ಸ್ವಸ್ತಯೇ ಸ್ವಸ್ತಯ ಆದಿತ್ಯಾಸೋ ಭವನ್ತು ನಃ ॥2॥**

ಭಾವಾರ್ಥ - ನಮ್ಮ ಒಳಿತಿಗಾಗಿ ವಾಯುವನ್ನು ಸ್ತುತಿಸುವೆವು. ಜಗತ್ಪಾಲಕನಾದ ಶಿವನನ್ನು, ಮತ್ತು ಸಮಸ್ತ ದೇವತಾಸಮೂಹದೊಂದಿಗೆ ಗುರುವನ್ನು ನೆಮ್ಮದಿಗಾಗಿ ಸ್ತುತಿಸುವೆವು. ಅದಿತಿಯ ಮಕ್ಕಳಾದ ದ್ವಾದಶಾದಿತ್ಯರು ಮತ್ತು ಸಮಸ್ತ ದೇವರ್ಕಳು ನಮಗೆ ಸುಖಾರೋಗ್ಯ ಕರುಣಿಸುವವರಾಗಲಿ.

**ವಿಶ್ವೇ ದೇವಾ ನೋ ಅದ್ಯಾ ಸ್ವಸ್ತಯೇ ವೈಶ್ವಾನರೋ ವಸುರಗ್ನಿಃ ಸ್ವಸ್ತಯೇ । ದೇವಾ ಅವಂತ್ವೃಭವಃ ಸ್ವಸ್ತಯೇ ಸ್ವಸ್ತಿ ನೋ ರುದ್ರಃ ಪಾತ್ವಂಹಸಃ ॥3॥**

ಭಾವಾರ್ಥ - ಸಮಸ್ತ ದೇವರ್ಕಳು ನಮಗೆ ಈ ದಿನ ಮಂಗಲದಾಯಕರಾಗಿರಲಿ. ಸರ್ವರಿಗೂ ಹಾದಿಯನ್ನು ತೋರುವವನಾದ ಮತ್ತು ನಿವಾಸವನ್ನು ಅನುಗ್ರಹಿಸುವ ಅಗ್ನಿಯು ಶುಭಕಾರಕನಾಗಲಿ. ದೇವತೆಯರಾದ ಬ್ರಹ್ಮನ ಮಾನಸಪುತ್ರರು ಕ್ಷೇಮವನ್ನು ದಯಪಲಿಸುವುದರೊಡನೆ ನಮ್ಮನ್ನು ಕಾಪಾಡಲಿ. ದೇವನಾದ ರುದ್ರನು ಶುಭವನ್ನು ಕರುಣಿಸಿ ನಮ್ಮನ್ನು ಕಾಪಾಡಲಿ.

**ಸ್ವಸ್ತಿ ಮಿತ್ರಾವರುಣಾ ಸ್ವಸ್ತಿ ಪಥ್ಯೇ ರೇವತಿ । ಸ್ವಸ್ತಿ ನ ಇಂದ್ರಶ್ಚಾಗ್ನಿಶ್ಚ ಸ್ವಸ್ತಿ ನೋ ಅದಿತೇ ಕೃಧಿ ॥4॥**

ಭಾವಾರ್ಥ - ಸೂರ್ಯವರುಣರುಗಳೇ, ನಮಗೆ ಶುಭವನ್ನು ಉಂಟುಮಾಡಿರಿ. ಅಂತರಿಕ್ಷಹಾದಿಯ ಅಭಿಮಾನಿದೇವತೆಯಾದ ರೇವತಿ ದೇವಿಯೇ, ನಮಗೆ ಸೌಖ್ಯವನ್ನುಂಟುಮಾಡು. ಇಂದ್ರಾಗ್ನಿ ದೇವರ್ಕಳು ನಮಗೆ ಪಾಲಕರಾಗಲಿ. ಭೂದೇವಿಯೇ ನಮಗೆ ಮಂಗಳವನ್ನುಂಟುಮಾಡು.

**ಸ್ವಸ್ತಿ ಪಂಥಾಮನು ಚರೇಮ ಸೂರ್ಯಾಚಂದ್ರಮಸಾವಿವ । ಪುನರ್ದದತಾಘ್ನತಾ ಜಾನತಾ ಸಂ ಗಮೇಮಹಿ ॥5॥**

ಭಾವಾರ್ಥ - ರವಿಚಂದ್ರರು ತಮ್ಮ ಹಾದಿಯಲ್ಲಿ ಎಡವದೆ ಶಾಶ್ವತವಾಗಿ ಸಂಚರಿಸುವಂತೆ ನಾವುಗಳು ಕೂಡಾ ನಮ್ಮ ಜೀವನದ ಹಾದಿಯಲ್ಲಿ ಯಜ್ಞಾದಿಗಳ ನಿರ್ವಹಣೆಯಲ್ಲಿ ಚ್ಯುತಿ-ವಿಘ್ನಗಳಿಲ್ಲದೆ ನೆಮ್ಮದಿಯಿಂದ ಸಾಗುವಂತಾಗಲಿ. ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುವ, ಕಾಲಮೀರಿದ ಕಾರಣಕ್ಕಾಗಿ ರೋಷಕ್ಕೊಳಗಾಗಿ ಹಿಂಸೆಗಿಳಿಯದಿರುವ, ಅಲ್ಲದೆ ನಮ್ಮ ಬಂಧುತ್ವನ್ನು ಉತ್ತಮ ರೀತಿಯಲ್ಲಿ ಅರಿತುಕೊಳ್ಳುವ ಬಂಧುಗಳೊಡನೆ ನಾವುಗಳು ಬೆರೆಯುವಂತಾಗಲಿ.

**ಸ್ವಸ್ತ್ಯಯನಂ ತಾರ್ಕ್ಷ್ಯಮರಿಷ್ಟನೇಮಿಂ ಮಹದ್ಭೂತಂ ವಾಯಸಂ ದೇವತಾನಾಂ ।**
**ಅಸುರಘ್ನಮಿಂದ್ರಸಖಂ ಸಮತ್ಸು ಬೃಹದ್ಯಶೋ ನಾವಮಿವ ರುಹೇಮ ॥6॥**

ಭಾವಾರ್ಥ - ಸುಲಕ್ಷಣಗಳಿಗೆ ನೆಲೆಯಾಗಿರುವ, ಸೌಭಾಗ್ಯವೇ ಸುತ್ತಲೂ ಆವರಿಸಿಕೊಂಡಿರುವ, ಬೃಹದ್ಗಾತ್ರದ ಹಾಗೂ ದೇವತೆಗಳ ಪಕ್ಷಿಯಾಗಿರುವ, ಅಸುರಸಂಹಾರಿಯಾಗಿರುವ ದೇವೇಂದ್ರನ ಸ್ನೇಹಿತನಾಗಿರುವ ಗರುಡನನ್ನು ಮಹಾನ್ ಕೀರ್ತಿಶಾಲಿಯಾದ ಭಗವಂತನು ನಾವೆಯನ್ನು ಏರುವ ರೀತಿಯಲ್ಲಿ ನಾವು ಸವಾರಿ ಮಾಡೋಣ.

**ಅಗ್ಂಹೋಮುಚ ಮಾಂಗಿರ ಸಂ ಗಯಂ ಚ ಸ್ವಸ್ತ್ಯಾತ್ರೇಯಂ ಮನಸಾ ಚ ತಾರ್ಕ್ಷ್ಯಂ ।**
**ಪ್ರಯತ ಪಾಣಿಃ ಶರಣಂ ಪ್ರಪದ್ಯೇ ಸ್ವಸ್ತಿ ಸಂಬಾಧೇಷ್ವಭಯಂ ನೋ ಅಸ್ತು ॥7॥**

ಭಾವಾರ್ಥ - ಕ್ರೂರತನಗಳಿಂದ ನಮ್ಮನ್ನು ಪಾರು ಮಾಡುವ ಅಂಗೀರಸನಿಗೆ, ಗಾಯತ್ರೀಮಾತೆಗೆ, ಶುಭಕರನಾದ ಆತ್ರೇಯ ಮಹರ್ಷಿಗೆ ಅಂತೆಯೇ ಗರುಡನಿಗೆ ನಾನು ಹೃತ್ಪೂರ್ವಕವಾಗಿ ಕೈಜೋಡಿಸುತ್ತಾ ಶರಣು ಹೊಗುವೆನು. ಅಭಿವೃದ್ಧಿಕಾರಕಗಳಿಗೆ ಅಡ್ಡಿಯನ್ನುಂಟುಮಾಡುವ ಸಮಸ್ತ ಸನ್ನಿವೇಶಗಳಲ್ಲಿ ಸದಾ ನಮ್ಮನ್ನು ಕಾಯುವವರಾಗಲಿ.

॥ ಇತಿ ಸ್ವಸ್ತಿಮಂತ್ರಂ ಸಂಪೂರ್ಣಂ ॥

## 15.5 ವಿವಾಹ ಮಂಗಲಾಷ್ಟಕಂ

**ವಿಘ್ನೇಶ್ವರೋ ವಿಘ್ನವಿಧೂರಕಾರೀ ನಿರ್ವಿಘ್ನಕಾರ್ಯಾರ್ಥಮಸೌ ಪ್ರಸಿದ್ಧಃ ।**
**ವಿಘ್ನೇಶ್ವರೋ ನಾಮ ಸುರೇಷು ಪೂಜ್ಯೋ ವಧೂವರಾಭ್ಯಾಂ ಶುಭತಾ ಕರೋತು ॥1॥**

ಭಾವಾರ್ಥ - ಅಡೆತಡೆಗಳನ್ನು ದೂರೀಕರಿಸುವವನಾಗಿರುವ, ಕಾರ್ಯಗಳಲ್ಲಿ ನಿರ್ವಿಘ್ನದಾಯಕನೆಂದು ಪ್ರಸಿದ್ಧನಾಗಿರುವ, ದೇವತೆಗಳಲ್ಲಿ ಪರಮಪೂಜ್ಯನಾಗಿರುವ ವಿಘ್ನೇಶ್ವರನು ವಧೂವರರಿಗೆ ಶುಭವನ್ನು ದಯಪಾಲಿಸಲಿ.

**ಸರ್ವೇಷು ಕಾರ್ಯೇಷ್ವಖಿಲಾರ್ಥಸಿದ್ಧಿರ್ವಾಗೀಶ್ವರೀ ಸತ್ಯವತೀ ಚ ದುರ್ಗಾ ।**
**ಸರಸ್ವತೀ ನಾಮ ವಿಧಾತೃಪತ್ನೀ ವಧೂವರಾಭ್ಯಾಂ ಶುಭತಾಂ ಕರೋತು ॥2॥**

ಭಾವಾರ್ಥ - ಸಮಸ್ತ ಕಾರ್ಯಗಳಲ್ಲಿಯೂ ಸಕಲೇಷ್ಟಾರ್ಥಗಳನ್ನು ದಯಪಾಲಿಸುವ ಸತ್ಯವತಿಯೂ, ವಾಕ್ಕಿಗೆ ಅಧೀಶ್ವರಿಯೂ, ದುರಿತ ನಿವಾರಕಳೂ, ಬ್ರಹ್ಮನ ಸತಿಯೂ ಆಗಿರುವ ಸರಸ್ವತಿಯು ವಧೂವರರಿಗೆ ಶುಭವನ್ನು ಕರುಣಿಸಲಿ.

**ವಸಂತಲಕ್ಷ್ಮೀರ್ವನರಾಜಲಕ್ಷ್ಮೀಃ ಕ್ಷೀರಾಬ್ಧಿ ಪುತ್ರೀ ಕಮಲಾಯತಾಕ್ಷೀ ।**
**ಶ್ರೀ ವಿಷ್ಣು ಪತ್ನೀ ಭುವನೈಕಮಾತಾ ವಧೂವರಾಭ್ಯಾಂ ಶುಭತಾ ಕರೋತು ॥3॥**

ಭಾವಾರ್ಥ - ವಸಂತಲಕ್ಷ್ಮಿಯೂ, ವನರಾಜಲಕ್ಷ್ಮಿಯೂ, ಕ್ಷೀರಸಾಗರ ತನಯೆಯೂ, ತಾವರೆಯ ಎಲೆಯಂತೆ ವಿಸ್ತಾರವಾಗಿರುವ ಕಣ್ಣುಗಳನ್ನು ಹೊಂದಿರುವವಳೂ, ಬ್ರಹ್ಮಾಂಡದ ಏಕಮಾತ್ರ ತಾಯಿಯೂ ಶ್ರೀ ಮಹಾವಿಷ್ಣುವಿನ ಸತಿಯೂ ಆಗಿರುವ ಲಕ್ಷ್ಮಿಯು ವಧೂವರರಿಗೆ ಶುಭವನ್ನು ದಯಪಾಲಿಸಲಿ.

**ಶಿವಸ್ಯಪತ್ನೀ ಗಿರಿರಾಜಪುತ್ರೀ ಸುವರ್ಣದಿವ್ಯಾಂಬರರತ್ನಭೂಷಾ ।**
**ಕಲ್ಯಾಣ ಗೌರೀ ಶುಭ ಮಂಗಲಾರ್ಥೀ ವಧೂವರಾಭ್ಯಾಂ ಶುಭತಾಂ ಕರೋತು ॥4॥**

ಭಾವಾರ್ಥ - ಮನಮೋಹಕವಾಗಿರುವ ಬಂಗಾರವರ್ಣದ ವಸನದಿಂದ ಅಲಂಕೃತಳಾಗಿರುವ, ರತ್ನಾಭರಣ ಭೂಷಿಣಿಯಾಗಿರುವ,

ಕಲ್ಯಾಣದಾಯಿನಿಯಾಗಿರುವ, ಕ್ಷೇಮವನ್ನೂ, ಮಂಗಳವನ್ನೂ ಕರುಣಿಸುವ ಪಾರ್ವತೀ ದೇವಿಯು ವಧೂವರರಿಗೆ ಶುಭವನ್ನು ದಯಪಾಲಿಸಲಿ.

**ಚಕೋರನೇತ್ರೀ ಚಪಲಾಯತಾಕ್ಷೀ ಸೌಂದರ್ಯರೂಪಾ ನವಚಂದ್ರರೇಖಾ ।**
**ನಲಸ್ಯ ಪತ್ನೀ ದಮಯಂತಿ ನಾಮ್ನೀ ವಧೂವರಾಭ್ಯಾಂ ಶುಭತಾಂ ಕರೋತು ॥5॥**

ಭಾವಾರ್ಥ - ಬೆಳದಿಂಗಳಪಕ್ಷಿಯ ಕಣ್ಣುಗಳನ್ನು ಹೊಂದಿರುವವಳೂ, ಚಂಚಲನಯನಳೂ, ಸೌಂದರ್ಯದ ಪ್ರತಿಬಿಂಬದಂತಿರುವವಳೂ, ಚಂದ್ರನ ಹೊಸಕಳೆಯಂತಿರುವವಳೂ, ದಮಯಂತಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವ ನಳ ಮಹಾರಾಜನ ಸತಿಯು ವಧೂವರರಿಗೆ ಶುಭವನ್ನು ದಯಪಾಲಿಸಲಿ.

**ಶ್ರೀಶೈಲೇಂದ್ರಸುವೇಲವಿಂಧ್ಯಮಲಯಾಃ ಶ್ರೀಶೈಲಜಾತಾ ದ್ರುಮಾಃ ।**
**ಹೇಮಾದ್ರಿಶ್ಚ ಮಹೇಂದ್ರಸುಂದರಗಿರಿಃ ಶ್ರೀಕಂಠವಾಸಾದಯಃ ॥**

**ಪ್ರಾಕ್ಸಂಸ್ಥಾಶ್ಚ ರವೇಸ್ತುರಂಗಮಖುರಪ್ರಕ್ಷುಣ್ಣಶೃಂಗಾನ್ವಿತಾಃ ।**
**ಸರ್ವೇ ತೇ ಗಿರಿಚಾರಿಲೇಖಸಹಿತಾಃ ಕುರ್ಯುಃ ಸದಾ ಮಂಗಲಂ ॥6॥**

ಭಾವಾರ್ಥ - ಶ್ರೀಶೈಲಪರ್ವತ, ಸುವೇಲ ಬೆಟ್ಟ, ವಿಂಧ್ಯಪರ್ವತ, ಮಲಯಾಚಲ ಮೊದಲಾದ ಪಾವನ ಪರ್ವತಗಳು, ಶ್ರೀಶೈಲಪರ್ವತಪ್ರದೇಶದ ಗಿಡಮರಗಳು, ಹೇಮಾದ್ರಿ ಶಿಖರ, ಮಹೇಂದ್ರ ಪರ್ವತ, ಕೈಲಾಸಾದಿಗಿರಿಗಳು, ಅನುದಿನವೂ ಸಂಚರಿಸುವ ಸೂರ್ಯನ ರಥದ ಕುದುರೆಗಳ ಮೊಗದರ್ಶನದಿಂದ ಗಾಯಗೊಂಡಿರುವ ಗಿರಿಶಿಖರಗಳು ಸಂಚರಿಸುತ್ತಿರುವ ಪವಿತ್ರಾತ್ಮ ಸ್ವರೂಪದ ಸಮಸ್ತದೇವತಾಶಕ್ತಿಗಳಿಂದ ಕೂಡಿದ ಈ ಸಕಲ ಗಿರಿ ಶಿಖರ ಪರ್ವತಗಳು ವಧೂವರರಿಗೆ ಸದಾ ಶುಭವನ್ನು ದಯಪಾಲಿಸಲಿ.

**ಗಂಗಾತುಂಗಕಣಾಃ ಕಲೀಂದುತನಯಾ ಗೋದಾವರೀ ನರ್ಮದಾ ।**
**ಕಾವೇರಿ ಚ ಸರಸ್ವತೀ ಚ ಸರಯೂಃ ಸಿಂಧುಸ್ತಥಾ ದೇವಿಕಾ ॥**

**ಇತ್ಯೇತಾಃ ಸರಿತಃ ಸಮುದ್ರ ಸಹಿತಾಃ ಕ್ಷೇತ್ರಾಣಿ ಪುಣ್ಯಾನ್ಯಥಾ ।**
**ದ್ವೀಪಾಃ ಸಪ್ತ ಸ ಪರ್ವತಾಃಪ್ರತಿದಿನಂ ಕುರ್ವಂತು ತೇ ಮಂಗಲಂ ॥7॥**

ಭಾವಾರ್ಥ - ಗಂಗೆ, ತುಂಗೆ, ಯಮುನೆ, ಗೋದಾವರಿ, ನರ್ಮದೆ, ಕಾವೇರಿ, ಸರಸ್ವತಿ, ಸರಯೂ, ಸಿಂಧು, ರೇಣುಕೆ, ಇತ್ಯಾದಿಯಾದ ಪರಮಪಾವನವಾಗಿರುವ ಸಕಲ ಪುಣ್ಯ ನದಿಗಳು, ಸಮಸ್ತ ಸಮುದ್ರಗಳು, ಮಲಯಾಚಲಾದಿ ಸಪ್ತ ಪರ್ವತಗಳು, ಸಪ್ತ ದ್ವೀಪಗಳು, ವಧೂ ವರರಾದ ನಿಮಗೆ ಪ್ರತಿದಿನವೂ ಶುಭವನ್ನು ದಯಪಾಲಿಸಲಿ.

**ಗಾಯತ್ರೀ ಗಿರಿನಂದನಾ ಗಣಪತಿರ್ಗಂಗಾಧರೋ ಗೌತಮೋ ।**
**ಗಾಂಗೇಯೋ ಗಣನಾಯಕೋ ಗಣಸುಧಾಗಾರಸ್ತಥಾ ಗೋಕುಲಂ ॥**

**ಗಂಧರ್ವಾ ಗಗನಂ ಗ್ರಹಾ ರವಿಮುಖ ಗೋಪಾಲಕೃಷ್ಣೋದ್ಭವೋ ।**
**ದಂಪತ್ಯೋಶ್ಚಿರಕಾಲಭೋಗಮತುಲಂ ದದ್ಯುಃ ಸದಾ ಮಂಗಲಂ ॥8॥**

ಭಾವಾರ್ಥ - ಗಾಯತ್ರಿ, ಪಾರ್ವತಿ, ಗಣಪತಿ, ಶಿವ, ಗೌತಮ, ಭೀಷ್ಮ, ಗಂಧರ್ವಸಮೂಹ, ಆಕಾಶ, ಸೂರ್ಯಾದಿ ನವಗ್ರಹಗಳ ರಾಶಿ, ಮೊದಲಾದ ಗೋಪಾಲಕೃಷ್ಣನಿಂದ ಉತ್ಪತ್ತಿಯಾಗಿರುವ ಇವರೆಲ್ಲರೂ ದಂಪತಿಗಳಾದ ಈ ವಧೂ ವರರಿಗೆ ಚಿರಕಾಲ ಸಕಲ ಭೋಗ ಭಾಗ್ಯಾದಿ ಐಶ್ವರ್ಯಗಳನ್ನಿತ್ತು ಶುಭವನ್ನು ದಯಪಾಲಿಸಲಿ.

॥ ಇತಿ ವಿವಾಹ ಮಂಗಲಾಷ್ಟಕಂ ಸಂಪೂರ್ಣಂ ॥

## 15.6 ಉಪನಯನ ಮಂಗಲಾಷ್ಟಕಂ

**ಬ್ರಹ್ಮಾದ್ಯಾಃ ಸನಕಾದಯಃ ಸುರಗಣಾಃ ಸಂತಃ ಸಭಾ-ವಜ್ರಿಣೌ ।**
**ಭಾರದ್ವಾಜ-ಪರಾಶರಾದಿ-ಮುನಯಃ ಸಂಸ್ತೂಯಮಾನಾಃ ಸದಾ ॥**

**ವಿಶ್ವಾಮಿತ್ರ-ಪುರೋಗಮಾ ಮುನಿಗಣಾಃ ಪೌರಾಣಿಕಾ ಯಾಜ್ಞಿಕಾಃ ।**
**ಯೇ ಚಾನ್ಯೇ ವಟವೇ ಸ್ವಕರ್ಮಪಟವೇ ಕುರ್ಯುಃ ಸದಾ ಮಂಗಲಂ ॥1॥**

ಭಾವಾರ್ಥ - ಬ್ರಹ್ಮ-ವಿಷ್ಣು-ಮಹೇಶ್ವರ-ಸನಕಾದಿ ಮಹರ್ಷಿಗಳು, ದೇವತೆಗಳು, ಸಂತರಸಮೂಹ, ದೇವೇಂದ್ರ, ಭಾರದ್ವಾಜ, ಪರಶರಾದಿ ಮುನಿಗಳು, ವಿಶ್ವಾಮಿತ್ರನೇ ಮೊದಲಾದ ಋಷಿಗಳು, ಯಾಗಮಾಡುವವರು-ಇವರೆಲ್ಲರೂ ಸ್ವಕರ್ಮಾನುಷ್ಠಾನ ನಿರತನಾಗುವ ವಟುವಿಗೆ ಸದಾ ಮಂಗಲವನ್ನು ದಯಪಾಲಿಸಲಿ.

**ಶ್ರೀಶಂಭುಃ ಕುಶಲಂ ಕರೋತು ಭವತಾಂ, ಧಾತಾ ಪ್ರಜಾನಾಂ ಸುಖಂ ।**
**ನಿರ್ವಿಘ್ನಂ ಗಣನಾಯಕಃ, ಪ್ರತಿದಿನಂ ಸೂರ್ಯಃ ಪ್ರತಾಪೋದಯಂ ॥**

**ಕೀರ್ತಿಸ್ತೇ ಧನ ಧಾನ್ಯದಾಂತಿಮತುಲಾಂ, ದುರ್ಗಾರಿನಾಶಂ ಮುದಾ ।**
**ಗಂಗಾ ತೇ ಖಲು ಪಾಪಹಾ ನಿಶಿದಿನಂ ಕುರ್ಯಾತ್ ಸದಾ ಮಂಗಲಂ ॥2॥**

ಭಾವಾರ್ಥ - ಶಿವನು ನಿಮಗೆ ಕ್ಷೇಮವನ್ನುಂಟುಮಾಡಲಿ. ಬ್ರಹ್ಮನು ಪ್ರಜೆಗಳಿಗೆ ಸುಖವನ್ನು ಕರುಣಿಸಲಿ. ಗಣಪತಿಯು ನಿರ್ವಿಘ್ನತ್ವವನ್ನು ದಯಪಾಲಿಸಲಿ. ರವಿಯು ಅನುದಿನವೂ ಪ್ರಕಾಶವನ್ನು ಒದಗಿಸಲಿ. ಕೀರ್ತಿಯು ವಟುವಾದ ನಿನಗೆ ಧನ ಧಾನ್ಯಾದಿ ಸಂಪದಗಳ ಸಹಿತ ಅಪರಿಮಿತವಾದ ಜ್ಞಾನವನ್ನು ನೀಡಲಿ. ದುರ್ಗೆಯು ವೈರಿಗಳನ್ನು ಸಂಹರಿಸಲಿ. ಗಂಗೆಯು ಸದಾ ಪಾಪಗಳನ್ನು ಕಳೆಯುತ್ತಾ ಸಂಕಷ್ಟಗಳನ್ನುನಿವಾರಿಸಿ ನಿರಂತರ ವಟುವಿಗೆ ಶುಭವನ್ನು ಕರುಣಿಸಲಿ.

**ಬ್ರಹ್ಮಾ ವೇದಪತಿಃ, ಶಿವಃ ಪಶುಪತಿಃ, ಸೂರ್ಯೋ ಗ್ರಹಾಣಾಂ ಪತಿಃ ।**
**ಸಕ್ರೋ ದೇವಪತಿರ್ನಲೋ ನರಪತಿಃ, ಸ್ಕಂದಶ್ಚ ಸೇನಾಪತಿಃ ॥**

**ವಿಷ್ಣುರ್ಯಜ್ಞಪತಿರ್ಯಮಃ ಪಿತೃಪತಿಸ್ತಾರಪತಿಶ್ಚಂದ್ರಮಾಃ ।**
**ಇತ್ಯೇತೇ ಪತಯಃ ಸುವರ್ಣಸಹಿತಾಃ ಕುರ್ಯುರ್ವಟೋರ್ಮಂಗಲಂ ॥3॥**

ಭಾವಾರ್ಥ - ವೇದಪತಿಯಾಗಿರುವಂತಹಾ ಬ್ರಹ್ಮ, ಗ್ರಹಗಳ ಅಧಿಪತಿಯಾಗಿರುವಂತಹಾ ಸೂರ್ಯ, ದೇವತೆಗಳ ಅಧಿಪತಿಯಾಗಿರುವ ಇಂದ್ರ, ಅರಸುಗಳೊಡೆಯನಾದ ನಳ, ದೇವ ಸೇನಾಧಿಪತಿಯಾಗಿರುವ ಷಣ್ಮುಖ, ಯಜ್ಞಾಧೀಶನಾಗಿರುವ ಶ್ರೀಹರಿ, ಪಿತೃಗಳ ಒಡೆಯನಾದ ಯಮ, ನಕ್ಷತ್ರಗಳ ದೊರೆಯಾಗಿರುವ ಚಂದ್ರ-ಇವರೆಲ್ಲರೂ ಅನವರತವೂ ಸೌಂದರ್ಯ ಸಹಿತರಾಗಿ ವಟುವಿಗೆ ಶುಭವನ್ನು ದಯಪಾಲಿಸಲಿ.

**ಗೌರೀನಂದನ-ಗೌರವರ್ಣವದನಃ ಶೃಂಗಾರಲಂಬೋದರಃ ।**
**ಸಿಂಧೂರಾಶ್ರಿತದಿಗ್ಗಜೇಂದ್ರವದನಶ್ಚಾಂಘ್ರೌರಣನ್ನೂಪುರಃ ॥**

**ಕರ್ಣೋಲ್ಲಾಸಿತಕುಂಡಲಪ್ರವಿಲಸನ್ ಕಂಠಸ್ಥಮುಕ್ತಾವಲೀ ।**
**ಶುಂಡಾದಂಡವಿಭೂಷಿತೋ ಗಣಪತಿರ್ದದ್ಯಾದ್ವಟೋರ್ಮಂಗಲಂ ॥4॥**

ಭಾವಾರ್ಥ - ಗೌರೀತನಯನೂ, ಗೌರ ವರ್ಣಮೊಗದನೂ, ಲಂಬೋದರನೂ, ಸಿಂಧೂರವನ್ನು ಲೇಪಿಸಿಕೊಂಡ ಗಜೇಂದ್ರ ವದನನೂ, ಪಾದಗಳಲ್ಲಿ ಸುಮಧುರ ನಾದವನ್ನುಂಟುಮಾಡುವ ಗೆಜ್ಜೆಗಳನ್ನು ಧರಿಸಿ, ಕಿವಿಗಳಲ್ಲಿ ಕುಂಡಲಗಳನ್ನು ಧರಿಸಿ, ಕೊರಳಲ್ಲಿ ಮುತ್ತಿನಹಾರದಿಂದ ಶೋಭಿಸುತ್ತಿರುವ ಆನೆಯ ಸೊಂಡಿಲಿನಿಂದ ಶೋಭಿಸುತ್ತಿರುವವನೂ ಆದ ಮಹಾಗಣಪತಿಯು ವಟುವಿಗೆ ಶುಭವನ್ನುಂಟುಮಾಡಲಿ.

**ಲಕ್ಷ್ಮೀಃ- ಕೌಸ್ತುಭ-ಪಾರಿಜಾತಕ-ಸುರಾ ಧನ್ವಂತರೀಶ್ಚಂದ್ರಮಾಃ ।**
**ಗಾವಃ ಕಾಮದುಹಃ ಸುರೇಶ್ವರಗಜೋ ರಂಭಾದಿ-ದೇವಾಂಗನಾಃ ॥**

**ಅಶ್ವಃ ಸಪ್ತಮುಖೋ ವಿಷಂ ಹರಧನುಃ ಶಂಖೋಮೃತಂ ಚಾಂಬುಧೇಃ ।**
**ರತ್ನಾನೀಹ ಚತುರ್ದಶ ಪ್ರತಿದಿನಂ ಕುರ್ಯುರ್ವಟೋರ್ಮಂಗಲಂ ॥5॥**

ಭಾವಾರ್ಥ - ಸಾಗರಮಥನದಿಂದ ಉದ್ಭವಿಸಿದ ಲಕ್ಷ್ಮೀ, ಕೌಸ್ತುಭ, ಪಾರಿಜಾತ, ದೇವತೆಗಳು, ಚಂದ್ರ, ಧನ್ವಂತರಿ, ಕಾಮಧೇನು, ಐರಾವತ, ರಂಭೆ ಊರ್ವಶಿಯರೇ ಆದಿಯಾದ ಸುರಾಂಗನೆಯರು, ಏಳುಮುಖಗಳನ್ನು ಹೊಂದಿದ ಕುದುರೆ, ವಿಷವನ್ನು ನಾಶಪಡಿಸುವ ಧನುಸ್ಸು, ಶಂಖ, ಅಮೃತ-ಚತುರ್ದಶ ರತ್ನವೇ ಆದಿಯಾಗಿ ಸಕಲವೂ ಪ್ರತಿದಿನವೂ ವಟುವಿಗೆ ಶುಭವನ್ನುಂಟುಮಾಡಲಿ.

**ನಂದಾ ನಾರದ-ನರ್ಮದಾ-ನಗಸುತಾ ನಂದಾದಿ-ಮಂದಾತ್ಮಜಾಃ ।**
**ನಂದೀನಾಯಕ-ನಿಮ್ನಗಾಧಿಪ ನರಾ ನಾರಾಯಣೋ ನರ್ಮವಾಕ್ ॥**

**ನಕ್ಷತ್ರಂ ನವಖಂಡಕಾ ನವನಿಧಿರ್ನಾರೀ ನಗೋ ದಾನಪಾಃ ।**

**ನಂದಾಂಬಾ ನವರಾತ್ರಯೋ ನವಖಗಾ ದದ್ಯುರ್ವಟೋರ್ಮಂಗಲಂ ॥6॥**

ಭಾವಾರ್ಥ - ನಂದಾ[ದುರ್ಗಾದೇವಿ], ನಾರದ, ನರ್ಮದ, ನಗಸುತ ಇತ್ಯಾದಿಯಾಗಿ "ನ"ಕಾರದಿಂದ ಆರಂಭಗೊಳ್ಳುವ ಪೂಜ್ಯರೂ, ದೇವತಾಸ್ವರೂಪಗಳೂ, ವಟುವಿಗೆ ಶುಭವನ್ನುಂಟು ಮಾಡಲಿ. ಪಾರ್ವತೀ, ಗಣಪತಿ, ಧರ್ಮರಾಜ, ಶಿವ, ಸಾಗರ, ಮನುಷ್ಯರು, ಸಂತಸದ ನುಡಿಗಳು, ಶ್ರೀಹರಿ, ನಕ್ಷತ್ರಗಳು, ನವ ನಿಧಿಗಳು, ನವ ಖಂಡಗಳು, ಸುವಾಸಿನಿಯರು, ಬೇವು, ಬೆಟ್ಟ, ಪರ್ವತಗಳು, ನವರಾತ್ರಿಗಳು, ನವಪಕ್ಷಿಗಳಾದಿಯಾಗಿ ಸಮಸ್ತರೂ ವಟುವಿಗೆ ಶುಭವನ್ನು ದಯಪಾಲಿಸಲಿ.

**ಯಾ ದೇವೀ ತ್ವರಿತಾ ವಿಶಾಲನಯನಾ ಯಾ ರೇಣುಕಾ ಹಿಂಗುಲಾ ।**

**ಯಾ ದುರ್ಗಾ ಭುವನೇಶ್ವರೀ ಕಮಲಜಾ ಶ್ರೀಶಾರದಾ ಚಂಡಿಕಾ ॥**

**ಯಾ ವೈ ಕುಕ್ಕುಟವಾಹಿನೀ ಚ ತುಲಜಾ ಕಾಲಿಂಗಿನೀ ಜ್ವಾಲಿನೀ ।**

**ಕಾಮಾಕ್ಷೀ ಗಿರಿಜಾ ಶಿವಾ ಭಗವತೀ ಕುರ್ಯಾತ್ ವಟೋರ್ಮಂಗಲಂ ॥7॥**

ಭಾವಾರ್ಥ - ತ್ವರಿತಳೂ ವಿಶಾಲನಯನಳೂ ಆಗಿರುವ ರೇಣುಕೆ, ಸಿಂಧೂರೆ, ಭುವನಾಧೀಶ್ವರಿ ದುರ್ಗೆ, ಕಮಲಜೆಯಾಗಿರುವ ಶಾರದೆ, ಕುಕ್ಕುಟವಾಹಿನೀ, ಕಲಿಂಗಿಣೀ, ಕಾಮಾಕ್ಷೀ, ಭಗವತಿಯಾಗಿರುವ ಪಾರ್ವತಿ-ಇವರೆಲ್ಲರೂ ನಿರಂತರ ವಟುವಿಗೆ ಶುಭವನ್ನು ಕರುಣಿಸಲಿ.

**ಆದಿತ್ಯಾದಿ ನವಗ್ರಹಾಶ್ಚ ಋಷಯೋ ಮೇಷಾದಿರಾಶ್ಯಾದಿಕಂ ।**

**ಆಚಾರ್ಯಾ ವಟವಶ್ಚ ತೇ ಸುಬಲವಾನ್ ಚಂದ್ರಗ್ರಹಸ್ತೇ ಶುಭಾಃ ॥**

**ಮಾಸಃಪಕ್ಷ ಸುತಿಥ್ಯ-ವಾರ-ಕರಣಂ-ಋಕ್ಷಾದಿಯೋಗಾಃ ಶುಭಾಃ ।**

**ತೇ ಸರ್ವೇಪಿ ವಟೋಶ್ಚಿರಾಯುಷಮಥೋ ಕುರ್ವಂತು ವಿದ್ಯಾಬಲಂ ॥8॥**

ಭಾವಾರ್ಥ - ಆದಿತ್ಯಾದಿ ನವ ಗ್ರಹಗಳು, ಋಷಿಗಳು, ಮೇಷಾದಿ ದ್ವಾದಶ ರಾಶಿಗಳು, ಆಚಾರ್ಯರುಗಳು, ಮಾಸ, ಪಕ್ಷ, ತಿಥಿ, ವಾರ, ಯೋಗ, ಕರಣ, ಇವೆಲ್ಲವುಗಳು ವಟುವಿಗೆ ಚಿರಾಯುಷ್ಯದೊಡನೆ ವಿದ್ಯಾ ಬಲವನ್ನು ಕರುಣಿಸಲಿ.

**ಗಂಗಾ ಸಿಂಧು ಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ ।**
**ಕಾವೇರೀ ಸರಯೂ ಮಹೇಂದ್ರ ತನಯಾ ಚರ್ಮಣ್ವತೀ ವೇದಿಕಾ ॥**

**ಕ್ಷಿಪ್ರಾ ವೇತ್ರವತೀ ಮಹಾಸುರನದೀ ಖ್ಯಾತಾ ಚ ಯಾ ಗಂಡಕೀ ।**
**ಪೂರ್ಣಾಃ ಪುಣ್ಯಜಲೈಃ ಸಮುದ್ರ ಸಹಿತಾ ಕುರ್ಯುಃ ಸದಾ ಮಂಗಲಂ ॥9॥**

ಭಾವಾರ್ಥ - ಗಂಗಾ, ಸಿಂಧು, ಸರಸ್ವತೀ, ಯಮುನಾ, ಗೋದಾವರೀ, ನರ್ಮದಾ, ಕಾವೇರೀ, ಸರಯೂ, ಚರ್ಮಣ್ವತೀ, ಕ್ಷಿಪ್ರಾ, ವೇತ್ರವತೀ, ದೇವತೆಗಳ ಶ್ರೇಷ್ಠ ನದಿಯೆಂದು ವಿಖ್ಯಾತವಾಗಿರುವ ಗಂಡಕೀಯೇ ಮೊದಲಾದ ಜಲಭರಿತವಾಗಿ ಸಾಗಿ ಸಾಗರದಲ್ಲಿ ಲೀನವಾಗುವ ಸಕಲ ನದಿಗಳೂ, ಯಾಗ ಭೂಮಿಯೂ ವಟುವಿಗೆ ನಿರಂತರ ಶುಭವನ್ನು ಕರುಣಿಸಲಿ.

॥ ಇತಿ ಉಪನಯನ ಮಂಗಲಾಷ್ಟಕಂ ಸಂಪೂರ್ಣಂ ॥

## 15.7 ಶ್ರೀ ರುದ್ರ ನಮಕ

**ಓಂ ನಮ॑ಸ್ತೇ ರುದ್ರ ಮ॒ನ್ಯವ॑ ಉ॒ತೋತ॒ ಇಷ॑ವೇ॒ ನಮ॑ಃ । ನಮ॑ಸ್ತೇ ಅ॒ಸ್ತು ಧನ್ವ॑ನೇ ಬಾ॒ಹುಭ್ಯಾ॑ಮು॒ತ ತೇ॒ ನಮ॑ಃ ॥1॥**

ಭಾವಾರ್ಥ - "ಎಲೈ ರುದ್ರನೆ, ನಿನಗೆ ನಮಸ್ಕಾರವು ಮತ್ತು ನಿನ್ನ ಕೋಪಕ್ಕೆ ನಮಸ್ಕಾರ! ಮತ್ತು ನಿನ್ನ ಬಾಣಗಳಿಗೆ, ಧನಸ್ಸಿಗೆ ಹಾಗೂ ಧನುರ್ಬಾಣಗಳನ್ನು ಹಿಡಿದಿರುವ ಎರಡು ತೋಳುಗಳಿಗೆ ನಮಸ್ಕಾರ!"

**ಯಾತ॒ ಇಷು॑ಃ ಶಿ॒ವತ॑ಮಾ ಶಿ॒ವಂ ಬ॒ಭೂವ॑ ತೇ॒ ಧನು॑ಃ । ಶಿ॒ವಾ ಶ॑ರ॒ವ್ಯಾ॑ ಯಾ ತವ॒ ತಯಾ॑ ನೋ ರುದ್ರ ಮೃಡಯ ॥2॥**

ಭಾವಾರ್ಥ - "ಎಲೈ ರುದ್ರನೆ, ಯಾವ ನಿನ್ನ ಹಿಂಸಾಕಾರಣವಾದ ಬಾಣವೂ ಧನುಸ್ಸೂ ಶಾಂತವಾದವೋ ಅವುಗಳಿಂದ ನಮ್ಮನ್ನು ಸುಖಗೊಳಿಸುವವನಾಗು"

**ಯಾ ತೇ ರುದ್ರ ಶಿವಾ ತನೂರಘೋರಾಪಾಪಕಾಶಿನೀ । ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿ ಚಾಕಶೀಹಿ ॥3॥**

ಭಾವಾರ್ಥ - 'ಎಲೈ ರುದ್ರನೆ, ಯಾವ ನಿನ್ನ ಘೋರವಲ್ಲದ ಮಂಗಳಕರವಾದ ಶರೀರವು ಆತ್ಮಜ್ಞಾನವನ್ನುಂಟುಮಾಡತಕ್ಕದ್ದಾಗಿದೆಯೋ ಆ ಸುಖಕರವಾದ ಶರೀರದಿಂದ, ಎಲೈ ಗಿರಿಶಂತನೆ, ನಮ್ಮನ್ನು ಜ್ಞಾನಯುಕ್ತರಾಗುವಂತೆ ಮಾಡು.'

**ಯಾಮಿಷುಂ ಗಿರಿಶಂತ ಹಸ್ತೇ ಬಿಭರ್ಷ್ಯಸ್ತವೇ । ಶಿವಾಂ ಗಿರಿತ್ರ ತಾಂ ಕುರು ಮಾ ಹಿಗ್ಂಸೀಃ ಪುರುಷಂ ಜಗತ್ ॥4॥**

ಭಾವಾರ್ಥ - 'ಎಲೈ ಗಿರಿಶಂತನೆ, ಪಾಪಿಗಳ ಕಡೆಗೆ ಎಸೆಯುವದಕ್ಕಾಗಿ ಯಾವ ಬಾಣವನ್ನು ನೀನು ಕೈಯಲ್ಲಿ ಧರಿಸಿರುವೆಯೋ ಅದನ್ನು ಶಿವವಾಗಿ ಮಾಡು. ಜಗತ್ತನ್ನೂ ನಮ್ಮ ಪುತ್ರಪೌತ್ರಾದಿಕುಟುಂಬವರ್ಗವನ್ನೂ ಗೋಧನಗೃಹಾದಿಗಳನ್ನೂ ಹಿಂಸಿಸಬೇಡ.'

**ಶಿವೇನ ವಚಸಾ ತ್ವಾ ಗಿರಿಶಾಚ್ಛಾ ವದಾಮಸಿ । ಯಥಾ ನಃ ಸರ್ವಮಿಜ್ಜಗದಯಕ್ಷ್ಮಗ್ಂ ಸುಮನಾ ಅಸತ್ ॥5॥**

ಭಾವಾರ್ಥ - 'ಎಲೈ ಗಿರಿಶನೆ, ನಿನ್ನನ್ನು ಮಂಗಳಕರವಾದ ಮಾತಿನಿಂದ ನಿರ್ಮಲವಾಗಿ ಸ್ತೋತ್ರಮಾಡುವೆವು. ಆ ಯಾವ ಸ್ತುತಿಯಿಂದ ನಮ್ಮ ಸಂಬಂಧವುಳ್ಳ ಪಶುಪುತ್ರಾದಿರೂಪವಾದ ಜಗತ್ತೆಲ್ಲವೂ ರೋಗರಹಿತವೂ ಸೌಮನಸ್ಯವುಳ್ಳದ್ದೂ ಆಗುವದೋ ಹಾಗೆ ಸ್ತುತಿಸುವೆವು.'

**ಅಧ್ಯವೋಚದಧಿವಕ್ತಾ ಪ್ರಥಮೋ ದೈವ್ಯೋ ಭಿಷಕ್ । ಅಹೀಗ್‌ಶ್ಚ ಸರ್ವಾಂಜಂಭಯಂಥ್ಸರ್ವಾಶ್ಚ ಯಾತುಧಾನ್ಯಃ ॥6॥**

ಭಾವಾರ್ಥ - 'ಅಧಿವಕ್ತನೂ ಪ್ರಧಾನನೂ ದೇವತೆಗಳಲ್ಲಿರುವವನೂ, ಭವರೋಗವೈದ್ಯನೂ ಆದ ಪರಮೇಶ್ವರನು ಎಲ್ಲಾ ವಿಷಪ್ರಾಣಿಗಳು, ರಾಕ್ಷಸರೇ ಮುಂತಾದವರನ್ನೂ ನಾಶಮಾಡಿ ನನ್ನ ವಿಷಯದಲ್ಲಿ ಪಕ್ಷಪಾತವಚನವನ್ನು ಹೇಳುವವನಾಗಲಿ!'

**ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಃ ಸುಮಂಗಲಃ । ಯೇ ಚೇಮಾಗ್ಂ ರುದ್ರಾ ಅಭಿತೋ ದಿಕ್ಷು ಶ್ರಿತಾಃ ಸಹಸ್ರಶೋಽವೈಷಾಗ್ಂ ಹೇಡ ಈಮಹೇ ॥7॥**

ಭಾವಾರ್ಥ - 'ಹಿಂದೆ ಸ್ತುತಿಸಲ್ಪಟ್ಟ ಆ ರುದ್ರನೇ ಈಗ ಎದುರಿಗೆ ಕಂಡುಬರುತ್ತಿರುವ ಕೆಂಪುವರ್ಣದ ನಸುಗೆಂಪಿನ ವರ್ಣದ ಹಾಗೂ ಹಳದಿಯ ಬಣ್ಣದವನಾಗಿ ತೋರುತ್ತಿರುವ ಬಭ್ರುವೆಂಬ ಮಂಗಲಕರನಾದ ಆದಿತ್ಯನಾಗಿರುತ್ತಾನೆ. ಈ ಭೂಮಿಯನ್ನು ಎಲ್ಲೆಲ್ಲೂ ಸುತ್ತುವರೆದಿರುವ ಸಹಸ್ರಾರುಸಂಖ್ಯೆಯ ಯಾವ ರುದ್ರರಿರುವರೋ ಅಂಥವರೆಲ್ಲರೂ ಒಂದಾಗಿ ಸೇರಿರುವ ಈ ಆದಿತ್ಯನೆಂಬ ರುದ್ರನನ್ನು ನಾವು ವಿಹಿತಾಕರಣನಿಷಿದ್ಧಸೇವೆಗಳೆಂಬ ಅಪಚಾರಗಳಿಂದ ಉಂಟಾದ ಕೋಪದಿಂದ ಸಮಾಧಾನಗೊಳಿಸಿ ಸ್ತುತಿನಮಸ್ಕಾರಗಳಿಂದ ಭಜಿಸುವೆವು.'

**ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ । ಉತೈನಂ ಗೋಪಾ ಅದೃಶನ್ನದೃಶನ್ನುದಹಾರ್ಯಃ ॥ ಉತೈನಂ ವಿಶ್ವಾ ಭೂತಾನಿ ಸ ದೃಷ್ಟೋ ಮೃಡಯಾತಿ ನಃ ॥8॥**

ಭಾವಾರ್ಥ - 'ಯಾವ ನೀಲಗ್ರೀವನೂ ವಿಶೇಷವಾಗಿ ಕೆಂಪಾಗಿರುವವನೂ ಆದ ಈ ಸಂಚರಿಸುವ ಆದಿತ್ಯ (ರೂಪನಾದ ರುದ್ರನೆಂಬುವ) ನಿದಾನಲ್ಲ, ಇವನನ್ನು ದನಕಾಯುವವರೂ ನೀರುತರುವವರೂ ನೋಡಿರುತ್ತಾರೆ. ಮತ್ತು ಗೋವು, ಎಮ್ಮೆ ಮುಂತಾಗಿ ಎಲ್ಲಾ ಪ್ರಾಣಿಗಳೂ ಕಂಡಿರುವವು. ಹೀಗೆ ಎಲ್ಲರಿಗೂ ಕಂಡುಬಂದಿರುವ ಆತನೇ ಧ್ಯಾನಮಾಡಿದವರನ್ನು ಸುಖಿಗೊಳಿಸುವವನಾಗಿರುವನು.'

**ನಮೋ ಅಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಮೀಢುಷೇ । ಅಥೋ ಯೇ ಅಸ್ಯ ಸತ್ವಾನೋಽಹಂ ತೇಭ್ಯೋಽಕರಂ ನಮಃ ॥9॥**

ಭಾವಾರ್ಥ - 'ನೀಲಗ್ರೀವನೂ ಸಹಸ್ರಾಕ್ಷನೂ, ಭಕ್ತರ ಕಾಮಗಳನ್ನು ಮಳೆಗರೆಯುವವನೂ ಆದ (ರುದ್ರನಿಗೆ) ನಮಸ್ಕಾರವು. ಮತ್ತು ಇವನ ಗೃಹದಲ್ಲಿರುವ (ಸಮಿಪದಲ್ಲಿರುವ) ಯಾವ ಪ್ರಮಥಗಣಗಳಿರುವರೋ ಅವರುಗಳಿಗೆ ನಾನು ನಮಸ್ಕರಿಸುವೆನು.'

**ಪ್ರ ಮುಂಚ ಧನ್ವನಸ್ತ್ವಮುಭಯೋರಾರ್ತ್ನಿಯೋರ್ಜ್ಯಾಂ । ಯಾಶ್ಚ ತೇ ಹಸ್ತ ಇಷವಃ ಪರಾ ತಾ ಭಗವೋ ವಪ ॥10॥**

ಭಾವಾರ್ಥ - 'ಎಲೈ ಭಗವಂತನೆ, ನಿನ್ನ ಬಿಲ್ಲಿನ ತುದಿಗಳನ್ನು ಅಲ್ಲಿಗೆ ಬಿಗಿದಿರುವ ಮೌರ್ವಿ(ಹಗ್ಗ)ಗಳಿಂದ ಬಿಡಿಸಿ ಶಿಥಿಲಗೊಳಿಸುವವನಾಗು ಮತ್ತು ನಿನ್ನ ಕೈಯಲ್ಲಿರುವ ಬಾಣಗಳನ್ನು ಪರಾಙ್ಮುಖವಾಗಿ ಮಾಡುವವನಾಗು.' ಇಲ್ಲಿಂದ ಮುಂದಕ್ಕೆ ಆರು ಮಂತ್ರಗಳಿಂದ ಆಯುಧಗಳನ್ನು ಉಪಸಂಹಾರಮಾಡಿಕೊಳ್ಳುವಂತೆ ಭಗವಂತನನ್ನು ಪ್ರಾರ್ಥಿಸಿದೆ.

**ಅವತತ್ಯ ಧನುಸ್ತ್ವಗ್ಂ ಸಹಸ್ರಾಕ್ಷ ಶತೇಷುಧೇ । ನಿಶೀರ್ಯ ಶಲ್ಯಾನಾಂ ಮುಖಾ ಶಿವೋ ನಃ ಸುಮನಾ ಭವ ॥11॥**

ಭಾವಾರ್ಥ - 'ಎಲೈ ಸಹಸ್ರಾಕ್ಷನೆ, ನೂರಾರು ಬತ್ತಳಿಕೆಗಳುಳ್ಳವನೆ, ನೀನು ಧನುಸ್ಸನ್ನು ಕೆಳಗಿಳಿಸಿ ಬಾಣಗಳ ಮುಖಗಳನ್ನು ಹಿಂತಿರುಗಿಸಿ ಬತ್ತಳಿಕೆಗೆ ಸೇರಿಸುವನಾಗಿ ನಮ್ಮಗಳ ವಿಷಯಕ್ಕೆ ಸಮನಸ್ಕನಾಗು.'

**ವಿಜ್ಯಂ ಧನುಃ ಕಪರ್ದಿನೋ ವಿಶಲ್ಯೋ ಬಾಣವಾಗ್ಂ ಉತ । ಅನೇಶನ್ನಸ್ಯೇಷವ ಆಭುರಸ್ಯ ನಿಷಂಗಥಿಃ ॥12॥**

ಭಾವಾರ್ಥ - ಕಪರ್ದಿಯಾದ (ಪರಮೇಶ್ವರನ) ಧನುಸ್ಸು ಜ್ಯಾ (ಹಗ್ಗ)ವಿಲ್ಲದ್ದಾಗಲೀ! ಬಾಣಗಳುಳ್ಳ (ಚೀಲವೂ) ವಿಶಲ್ಯ (ಬಾಣಗಳಿಲ್ಲದ್ದು)ವಾಗಲಿ! ಇವನ ಬಾಣಗಳು ಹೊಡೆಯುವದಕ್ಕೆ ತಕ್ಕದ್ದಲ್ಲದಂತಾಗಲಿ! ಮತ್ತು ಖಡ್ಗದ ಚೀಲವೂ ಅದನ್ನು ಧಾರಣೆಮಾಡುವಷ್ಟು ಮಾತ್ರ ಸಮರ್ಥವಾಗಲಿ!'

**ಯಾ ತೇ ಹೇತಿರ್ಮೀಢುಷ್ಟಮ ಹಸ್ತೇ ಬಭೂವ ತೇ ಧನುಃ । ತಯಾಸ್ಮಾನ್, ವಿಶ್ವತಸ್ತ್ವಮಯಕ್ಷ್ಮಯಾ ಪರಿ ಬ್ಭುಜ ॥13॥**

ಭಾವಾರ್ಥ - 'ಎಲೈ ಮಿಢುಷ್ಟಮನೆ, ಯಾವ ನಿನ್ನ (ಕತ್ತಿಯೇ ಮುಂತಾದ) ಆಯುಧಗಳು ಇವೆಯೋ ಮತ್ತು ಕೈಯಲ್ಲಿರುವ ಧನುಸ್ಸುಂಟೋ ಅಯಕ್ಷ್ಮವಾದ ಅದರಿಂದ ನೀನು ನಮ್ಮನ್ನು ಎಲ್ಲಾ ಪಾಪಗಳಿಂದಲೂ ಕಾಪಾಡುವವನಾಗು.'

**ನಮಸ್ತೇ ಅಸ್ತ್ವಾಯುಧಾಯಾನಾತತಾಯ ಧೃಷ್ಣವೇ । ಉಭಾಭ್ಯಾಮುತ ತೇ ನಮೋ ಬಾಹುಭ್ಯಾಂ ತವ ಧನ್ವನೇ ॥14॥**

ಭಾವಾರ್ಥ - '(ಎಲೈ ಭಗವಂತನೆ), ನಿನ್ನ ಆಯುಧಗಳಿಗೆ ನಮಸ್ಕಾರ! ಅವು ಹೊಡೆಯಲು ಎತ್ತಲ್ಪಡದೆ ಇರುವವೂ, ಆದರೆ, ಹೊಡೆಯುವ ಸಾಮರ್ಥ್ಯವುಳ್ಳವೂ ಆಗಿದೆಯಷ್ಟೆ! ಮತ್ತು ನಿನ್ನ ಎರಡು ಬಾಹುಗಳಿಗೂ ನಿನ್ನ ಧನುಸ್ಸಿಗೂ ನಮಸ್ಕಾರ!'

**ಪರಿ ತೇ ಧನ್ವನೋ ಹೇತಿರಸ್ಮಾನ್ವೃಣಕ್ತು ವಿಶ್ವತಃ । ಅಥೋ ಯ ಇಷುಧಿಸ್ತವಾರೇ ಅಸ್ಮನ್ನಿ ಧೇಹಿ ತಂ ॥15॥**

ಭಾವಾರ್ಥ - '(ಎಲೈ ಭಗವಂತನೆ), ನಿನ್ನ ಧನುಸ್ಸಿನ ಸಂಬಂಧವಾದ (ಬಾಣರೂಪವಾದ ಆಯುಧವು ನಮ್ಮನ್ನು (ಎಲ್ಲಾ ತೊಂದರೆಗಳಿಂದಲೂ) ರಕ್ಷಿಸಿ ಕಾಪಾಡಲಿ! ಮತ್ತು ಇನ್ನು ಯಾವ ನಿನ್ನ ಬಾಣದ ಚೀಲವುಂಟೋ ಅದನ್ನು ನಮ್ಮ ಶತ್ರುಗಳಲ್ಲಿ ಇಡುವವನಾಗು.'

**ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮೋ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ಪಶೂನಾಂ ಪತಯೇ ನಮೋ ನಮಃ ಸಸ್ಪಿಂಜರಾಯ ತ್ವಿಷೀಮತೇ ಪಥೀನಾಂ ಪತಯೇ ನಮೋ ನಮೋ ಬಭ್ಲುಶಾಯ ವಿವ್ಯಾಧಿನೇಽನ್ನಾನಾಂ ಪತಯೇ ನಮೋ ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮೋ ನಮೋ ಭವಸ್ಯ ಹೇತ್ಯೈ ಜಗತಾಂ ಪತಯೇ ನಮೋ ನಮೋ ರುದ್ರಾಯಾತತಾವಿನೇ ಕ್ಷೇತ್ರಾಣಾಂ**

**ಪತಯೇ ನಮೋ ನಮಃ ಸೂತಾಯಾಹಂತ್ಯಾಯ ವನಾನಾಂ ಪತಯೇ ನಮೋ ನಮೋ ರೋಹಿತಾಯ ಸ್ಥಪತಯೇ ವೃಕ್ಷಾಣಾಂ ಪತಯೇ ನಮೋ ನಮೋ ಮಂತ್ರಿಣೇ ವಾಣಿಜಾಯ ಕಕ್ಷಾಣಾಂ ಪತಯೇ ನಮೋ ನಮೋ ಭುವಂತಯೇ ವಾರಿವಸ್ಕೃತಾಯೌಷಧೀನಾಂ ಪತಯೇ ನಮೋ ನಮ ಉಚ್ಚೈರ್ಘೋಷಾಯಾ ಕ್ರಂದಯತೇ ಪತ್ತೀನಾಂ ಪತಯೇ ನಮೋ ನಮಃ ಕೃತ್ಸ್ನವೀತಾಯ ಧಾವತೇ ಸತ್ವನಾಂ ಪತಯೇ ನಮಃ ॥2॥**

ಭಾವಾರ್ಥ - 'ಹಿರಣ್ಯಬಾಹುವೂ ಸೇನಾನಿಯೂ ದಿಕ್ಕುಗಳೊಡೆಯನೂ ಆದವನಿಗೆ ನಮಸ್ಕಾರ! ಹಸಿರಾದ ಕೇಶಗಳುಳ್ಳ ವೃಕ್ಷಗಳಿಗೂ ಪಶುಪತಿಗೂ ನಮಸ್ಕಾರ! ಸಸ್ಪಿಂಜರನೂ, ಕಾಂತಿಯುಕ್ತನೂ ಮಾರ್ಗಗಳಿಗೆ ಅಧಿಪತಿಯೂ ಆದವನಿಗೆ ನಮಸ್ಕಾರ! ವೃಷಭವಾಹನನಾಗಿಯೂ ವಿವ್ಯಾಧಿಯೂ ಅನ್ನಗಳೊಡೆಯನೂ ಆದವನಿಗೆ ನಮಸ್ಕಾರ!'

'ಹರಿಕೇಶನೂ ಉಪವೀತಿಯೂ ಪುಷ್ಟರುಗಳ ಒಡೆಯನೂ ಸಂಸಾರವನ್ನು ಕತ್ತರಿಸುವ ಆಯುಧರೂಪನೂ ಜಗತ್ಪತಿಯೂ ರುದ್ರನೂ ಆತತಾವಿಗಳಾದ ಕ್ಷೇತ್ರಗಳ ಪತಿಯೂ ಸೂತನೂ ಅಹಂತ್ಯನೂ ವನಗಳಿಗೆ ಪತಿಯೂ ಆದವನಿಗೆ ನಮಸ್ಕಾರ!'

'ಲೋಹಿವರ್ಣನೂ ಸ್ಥಪತಿಯೂ ವೃಕ್ಷಗಳ ಒಡೆಯನೂ, ಮಂತ್ರಗಳ ಪತಿಯೂ ವಾಣಿಜನೂ ಕಕ್ಷಗಳ ಪ್ರಭುವೂ ಆಗಿರುವ, ಭುವಂತನೂ ವಾರಿವಸ್ಕೃತನೂ ಸಸ್ಯಗಳ ಒಡೆಯನೂ ಆಗಿರುವ, ಗಟ್ಟಿಯಾಗಿ ನಾದಮಾಡುವವನೂ ವೈರಿಗಳನ್ನು ಆಳುವಂತೆ ಮಾಡುವವನೂ ಪದಾತಿಗಳ ಒಡೆಯನೂ, ಜಗತ್ತನ್ನೆಲ್ಲ ಪೂರ್ಣವಾಗಿ ವ್ಯಾಪಿಸಿರುವವನೂ ಓಡುವವನೂ ಸತ್ವರುಗಳಿಗೆ ಪತಿಯೂ ಆಗಿರುವವನಿಗೆ ನಮಸ್ಕಾರವು.'

**ನಮಃ ಸಹಮಾನಾಯ ನಿವ್ಯಾಧಿನ ಆವ್ಯಾಧಿನೀನಾಂ ಪತಯೇ ನಮೋ ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮೋ ನಮೋ ನಿಷಂಗಿಣ ಇಷುಧಿಮತೇ ತಸ್ಕರಾಣಾಂ ಪತಯೇ ನಮೋ ನಮೋ ವಂಚತೇ ಪರಿವಂಚತೇ ಸ್ತಾಯೂನಾಂ ಪತಯೇ**

**ನಮೋ ನಮೋ ನಿಚೇರವೇ ಪರಿಚರಾಯಾರಣ್ಯಾನಾಂ ಪತಯೇ ನಮೋ ನಮಃ ಸೃಕಾವಿಭ್ಯೋ ಜಿಘಾಗ್ಂ ಸದ್ಭ್ಯೋ ಮುಷ್ಣತಾಂ ಪತಯೇ ನಮೋ ನಮೋಽಸಿಮದ್ಭ್ಯೋ ನಕ್ತಂ ಚರದ್ಭ್ಯಃ ಪ್ರಕೃಂತಾನಾಂ ಪತಯೇ ನಮೋ ನಮ ಉಷ್ಣೀಷಿಣೇ ಗಿರಿಚರಾಯ ಕುಲುಂಚಾನಾಂ ಪತಯೇ ನಮೋ ನಮ ಇಷುಮದ್ಭ್ಯೋ ಧನ್ವಾವಿಭ್ಯಶ್ಚ ವೋ ನಮೋ ನಮ ಆತನ್ವಾನೇಭ್ಯಃ ಪ್ರತಿದಧಾನೇಭ್ಯಶ್ಚ ವೋ ನಮೋ ನಮ ಆಯಚ್ಛದ್ಭ್ಯೋ ವಿಸೃಜದ್ಭ್ಯಶ್ಚ ವೋ ನಮೋ ನಮೋಽಸ್ಯದ್ಭ್ಯೋ ವಿಧ್ಯದ್ಭ್ಯಶ್ಚ ವೋ ನಮೋ ನಮ ಆಸೀನೇಭ್ಯಃ ಶಯಾನೇಭ್ಯಶ್ಚ ವೋ ನಮೋ ನಮಃ ಸ್ವಪದ್ಭ್ಯೋ ಜಾಗ್ರದ್ಭ್ಯಶ್ಚ ವೋ ನಮೋ ನಮಸ್ತಿಷ್ಠದ್ಭ್ಯೋ ಧಾವದ್ಭ್ಯಶ್ಚ ವೋ ನಮೋ ನಮಃ ಸಭಾಭ್ಯಃ ಸಭಾಪತಿಭ್ಯಶ್ಚ ವೋ ನಮೋ ನಮೋ ಅಶ್ವೇಭ್ಯೋಽಶ್ವಪತಿಭ್ಯಶ್ಚ ವೋ ನಮಃ ॥ 3 ॥**

ಭಾವಾರ್ಥ - 'ಸಹಮಾನನೂ ನಿವ್ಯಾಧಿಯೂ ಆವ್ಯಾಧಿನಿಗಳ ಪತಿಯೂ ಕಕುಭನೂ ನಿಷಂಗಿಯೂ, ಕಳ್ಳರ ಒಡೆಯನೂ, ನಿಷಂಗಿಯೂ, ಇಷುಧಿಮಂತನೂ ತಸ್ಕರಪತಿಯೂ ಆಗಿರುವ, ವಂಚನೆಪರಿವಂಚನೆಗಳನ್ನು ಮಾಡುವ ಸ್ತಾಯುಗಳ ಪತಿಯೂ ಆದ, ನಿಚೇರುವೂ ಪರಿಚರನೂ ಅರಣ್ಯಕರ ಪತಿಯೂ ಆದವನಿಗೆ ನಮಸ್ಕಾರ!'

'ಸೃಕಾವಿಗಳೂ ಜಿಘಾಂಸರೂ, ಕದಿಯುವವರ ಪತಿಯೂ ಖಡ್ಗಧಾರಿಗಳೂ ರಾತ್ರೆಯಲ್ಲಿ ಸಂಚರಿಸುವವರೂ ಪ್ರಕೃಂತರ ಪತಿಯೂ, ಉಷ್ಣೀಷಿಯೂ ಬೆಟ್ಟಗಳಲ್ಲಿ ತಿರುಗುವವನೂ ಕುಲುಂಚರ ಪತಿಯೂ, ಆದವನಿಗೆ ನಮಸ್ಕಾರ!'

'ಇಷುಮಂತರೂ, ಧನ್ವಾವಿಗಳೂ, ಆತನ್ವಾನರೂ, ಪ್ರತಿದಧಾನರೂ, ಆಯಚ್ಛಂತರೂ, ವಿಸೃಜಂತರೂ, ಬಾಣಗಳನ್ನು ಎಸೆಯುವವರೂ, ಹೊಡೆಯುವವರೂ, ಕುಳಿತಿರುವವರೂ, ಮಲಗಿರುವವರೂ (ಆದ ಎಲ್ಲಾ ಪರಮೇಶ್ವರನ ರೂಫಗಳಿಗೂ) ನಮಸ್ಕಾರ!'

'ಮಲಗಿರುವವರಿಗೂ ಎಚ್ಚತ್ತಿರುವವರಿಗೂ ನಿಂತಿರುವವರಿಗೂ ಓಡುತ್ತಿರುವವರಿಗೂ ಸಭೆಗಳಿಗೂ ಸಭಾಪತಿಗಳಿಗೂ ಕುದುರೆಗಳಿಗೂ ಕುದುರೆಗಳ ಒಡೆಯರಿಗೂ ನಮಸ್ಕಾರವು.'

**ನಮ ಆವ್ಯಾಧಿನೀಭ್ಯೋ ವಿವಿಧ್ಯಂತೀಭ್ಯಶ್ಚ ವೋ ನಮೋ ನಮ ಉಗಣಾಭ್ಯಸ್ತೃಗ್ಂಹತೀಭ್ಯಶ್ಚ ವೋ ನಮೋ ನಮೋ ಗೃಥ್ಸೇಭ್ಯೋ ಗೃಥ್ಸಪತಿಭ್ಯಶ್ಚ ವೋ ನಮೋ ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮೋ ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮೋ ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮೋ ನಮೋ ಮಹದ್ಭ್ಯಃ, ಕ್ಷುಲ್ಲಕೇಭ್ಯಶ್ಚ ವೋ ನಮೋ ನಮೋ ರಥಿಭ್ಯೋಽರಥೇಭ್ಯಶ್ಚ ವೋ ನಮೋ ನಮೋ ರಥೇಭ್ಯೋ ರಥಪತಿಭ್ಯಶ್ಚ ವೋ ನಮೋ ನಮಃ ಸೇನಾಭ್ಯಃ ಸೇನಾನಿಭ್ಯಶ್ಚ ವೋ ನಮೋ ನಮಃ, ಕ್ಷತ್ತೃಭ್ಯಃ ಸಂಗ್ರಹೀತೃಭ್ಯಶ್ಚ ವೋ ನಮೋ ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚ ವೋ ನಮೋ ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚ ವೋ ನಮೋ ನಮಃ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚ ವೋ ನಮೋ ನಮ ಇಷುಕೃದ್ಭ್ಯೋ ಧನ್ವಕೃದ್ಭ್ಯಶ್ಚ ವೋ ನಮೋ ನಮೋ ಮೃಗಯುಭ್ಯಃ ಶ್ವನಿಭ್ಯಶ್ಚ ವೋ ನಮೋ ನಮಃ ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ ॥ 4 ॥**

ಭಾವಾರ್ಥ - 'ಅವ್ಯಾಧಿನಿಯರೂ ವಿವಿಧ್ಯಂತಿಯರೂ ಆದ, ಹಿಂಸೆಮಾಡಲು ಸಮರ್ಥರಾದ ಉತ್ಕೃಷ್ಟಗಣದೇವತೆಗಳಿಗೂ ಗೃತ್ಸರಿಗೂ ಗೃತ್ಸಪತಿಗಳಿಗೂ ವ್ರಾತರಿಗೂ ವ್ರಾತಪತಿಗಳಿಗೂ ಗಣಗಳಿಗೂ ಗಣಪತಿಗಳಿಗೂ ನಮಸ್ಕಾರವು!'

'ವಿರೂಪರಿಗೂ ವಿಶ್ವರೂಪರುಗಳಿಗೂ ಮಹಾಂತರಿಗೂ ಕ್ಷುಲ್ಲಕರಿಗೂ ರಥಿಗಳಿಗೂ ರಥವಿಲ್ಲದವರಿಗೂ ರಥಗಳಿಗೂ ರಥಪತಿಗಳಿಗೂ ಸೇನೆಗಳಿಗೂ ಸೇನಾನಿಗಳಿಗೂ ಕ್ಷತ್ತೃಗಳಿಗೂ ಸಂಗ್ರಹೀತೃಗಳಿಗೂ ತಕ್ಷರಿಗೂ ರಥಕಾರರಿಗೂ ನಮಸ್ಕಾರ!'

'ಕುಂಬಾರರಿಗೂ ಕಮ್ಮಾರರಿಗೂ ಹಕ್ಕಿಗಳ ಗುಂಪನ್ನು ಹೊಡೆಯುವವರಿಗೂ, ನಾಯಿಯನ್ನು ಬೇಯಿಸಿ ತಿನ್ನುವವರಿಗೂ ಬಾಣಗಳನ್ನು ತಯಾರಿಸುವವರಿಗೂ

ಬಿಲ್ಲುಗಳನ್ನು ತಯಾರಿಸುವವರಿಗೂ ಬೇಟೆಗಾರರಿಗೂ ನಾಯಿಗಳನ್ನು ಹಿಡಿದುಕೊಂಡು ಸಂಚರಿಸುವವರಿಗೂ ನಾಯಿಗಳಿಗೂ ನಾಯಿಗಳ ಯಜಮಾನರಿಗೂ ನಮಸ್ಕಾರ!'

**ನಮೋ ಭವಾಯ ಚ ರುದ್ರಾಯ ಚ ನಮಃ ಶರ್ವಾಯ ಚ ಪಶುಪತಯೇ ಚ ನಮೋ ನೀಲಗ್ರೀವಾಯ ಚ ಶಿತಿಕಂಠಾಯ ಚ ನಮಃ ಕಪರ್ದಿನೇ ಚ ವ್ಯುಪ್ತಕೇಶಾಯ ಚ ನಮಃ ಸಹಸ್ರಾಕ್ಷಾಯ ಚ ಶತಧನ್ವನೇ ಚ ನಮೋ ಗಿರಿಶಾಯ ಚ ಶಿಪಿವಿಷ್ಟಾಯ ಚ ನಮೋ ಮೀಢುಷ್ಟಮಾಯ ಚೇಷುಮತೇ ಚ ನಮೋ ಹ್ರಸ್ವಾಯ ಚ ವಾಮನಾಯ ಚ ನಮೋ ಬೃಹತೇ ಚ ವರ್ಷೀಯಸೇ ಚ ನಮೋ ವೃದ್ಧಾಯ ಚ ಸಂವೃಧ್ವನೇ ಚ ನಮೋ ಅಗ್ರಿಯಾಯ ಚ ಪ್ರಥಮಾಯ ಚ ನಮ ಆಶವೇ ಚಾಜಿರಾಯ ಚ ನಮಃ ಶೀಘ್ರಿಯಾಯ ಚ ಶೀಭ್ಯಾಯ ಚ ನಮ ಊರ್ಮ್ಯಾಯ ಚಾವಸ್ವನ್ಯಾಯ ಚ ನಮಃ ಸ್ರೋತಸ್ಯಾಯ ಚ ದ್ವೀಪ್ಯಾಯ ಚ ॥ 5 ॥**

ಭಾವಾರ್ಥ - "ಭವನಿಗೂ ರುದ್ರನಿಗೂ ಶರ್ವನಿಗೂ ಪಶುಪತಿಗೂ ನೀಲಗ್ರೀವನಿಗೂ ಶಿತಿಕಂಠನಿಗೂ ಕಪರ್ದಿಗೂ ವ್ಯುಪ್ತಕೇಶನಿಗೂ ಸಹಸ್ರಾಕ್ಷನಿಗೂ ಶತಧನ್ವನಿಗೂ ನಮಸ್ಕಾರವು"

'ಗಿರಿಶನಿಗೂ ಶಿಪಿವಿಷ್ಟನಿಗೂ ಮಿಢುಷ್ಟಮನಿಗೂ ಇಷುಮಂತನಿಗೂ ಹ್ರಸ್ವನಿಗೂ ವಾಮನನಿಗೂ ಬೃಹಂತನಿಗೂ ವರ್ಷೀಯನಿಗೂ ವೃದ್ಧನಿಗೂ ಸಂವೃಧ್ವನಿಗೂ ನಮಸ್ಕಾರವು'.

'ಅಗ್ರಿಯನಿಗೂ ಪ್ರಥಮನಿಗೂ ಅಶುವಿಗೂ ಅಜಿರನಿಗೂ ಶೀಘ್ರಿಯನಿಗೂ ಶೀಭ್ಯನಿಗೂ ಊರ್ಮ್ಯನಿಗೂ ಅವಸ್ವನ್ಯನಿಗೂ ಸ್ರೋತ್ರಸ್ಯನಿಗೂ ದ್ವೀಪ್ಯನಿಗೂ ನಮಸ್ಕಾರವು.'

**ನಮೋ ಜ್ಯೇಷ್ಠಾಯ ಚ ಕನಿಷ್ಠಾಯ ಚ ನಮಃ ಪೂರ್ವಜಾಯ ಚಾಪರಜಾಯ ಚ ನಮೋ ಮಧ್ಯಮಾಯ ಚಾಪಗಲ್ಭಾಯ ಚ ನಮೋ ಜಘನ್ಯಾಯ ಚ ಬುಧ್ನಿಯಾಯ ಚ ನಮಃ ಸೋಭ್ಯಾಯ ಚ ಪ್ರತಿಸರ್ಯಾಯ ಚ ನಮೋ ಯಾಮ್ಯಾಯ ಚ ಕ್ಷೇಮ್ಯಾಯ ಚ ನಮ ಉರ್ವರ್ಯಾಯ ಚ ಖಲ್ಯಾಯ ಚ ನಮಃ ಶ್ಲೋಕ್ಯಾಯ ಚಾವಸಾನ್ಯಾಯ ಚ**

**ನಮೋ ವನ್ಯಾಯ ಚ ಕಕ್ಷ್ಯಾಯ ಚ ನಮಃ ಶ್ರವಾಯ ಚ ಪ್ರತಿಶ್ರವಾಯ ಚ ನಮ ಆಶುಷೇಣಾಯ ಚಾಶುರಥಾಯ ಚ ನಮಃ ಶೂರಾಯ ಚಾವಭಿಂದತೇ ಚ ನಮೋ ವರ್ಮಿಣೇ ಚ ವರೂಥಿನೇ ಚ ನಮೋ ಬಿಲ್ಮಿನೇ ಚ ಕವಚಿನೇ ಚ ನಮಃ ಶ್ರುತಾಯ ಚ ಶ್ರುತಸೇನಾಯ ಚ ॥ 6 ॥**

ಭಾವಾರ್ಥ - 'ಜ್ಯೇಷ್ಠನಿಗೂ ಕನಿಷ್ಠನಿಗೂ ಪೂರ್ವಜನಿಗೂ ಅಪರಜನಿಗೂ ಮಧ್ಯಮನಿಗೂ ಅಪಗಲ್ಭನಿಗೂ ಜಘನ್ಯನಿಗೂ ಬುಧ್ನಿಯನಿಗೂ ಸೋಭ್ಯನಿಗೂ ಪ್ರತಿಸರ್ಯನಿಗೂ ಯಾಮ್ಯನಿಗೂ ಕ್ಷೇಮ್ಯನಿಗೂ ನಮಸ್ಕಾರವು ಮತ್ತು ಉರ್ವರ್ಯನಿಗೂ ಖಲ್ಯನಿಗೂ ಶ್ಲೋಕ್ಯನಿಗೂ ಅವಸಾನ್ಯನಿಗೂ ವನ್ಯನಿಗೂ ಕಕ್ಷ್ಯನಿಗೂ ಶ್ರವನಿಗೂ ಪ್ರತಿಶ್ರವನಿಗೂ ನಮಸ್ಕಾರ!'

'ಆಸುಷೇಣನಿಗೂ ಆಶುರಥನಿಗೂ, ಶೂರನಿಗೂ ಅವಭಿಂದನಿಗೂ, ವರ್ಮಿಗೂ ವರೂಥಿಗೂ, ಬಿಲ್ಮಿಗೂ ಕವಚಿಗೂ ಶ್ರುತನಿಗೂ, ಶ್ರುತಸೇನನಿಗೂ ನಮಸ್ಕಾರ!'

**ನಮೋ ದುಂದುಭ್ಯಾಯ ಚಾಹನನ್ಯಾಯ ಚ ನಮೋ ಧೃಷ್ಣವೇ ಚ ಪ್ರಮೃಶಾಯ ಚ ನಮೋ ದೂತಾಯ ಚ ಪ್ರಹಿತಾಯ ಚ ನಮೋ ನಿಷಂಗಿಣೇ ಚೇಷುಧಿಮತೇ ಚ ನಮಸ್ತೀಕ್ಷ್ಣೇಷವೇ ಚಾಯುಧಿನೇ ಚ ನಮಃ ಸ್ವಾಯುಧಾಯ ಚ ಸುಧನ್ವನೇ ಚ ನಮಃ ಸ್ರುತ್ಯಾಯ ಚ ಪಥ್ಯಾಯ ಚ ನಮಃ ಕಾಟ್ಯಾಯ ಚ ನೀಪ್ಯಾಯ ಚ ನಮಃ ಸೂದ್ಯಾಯ ಚ ಸರಸ್ಯಾಯ ಚ ನಮೋ ನಾದ್ಯಾಯ ಚ ವೈಶಂತಾಯ ಚ ನಮಃ ಕೂಪ್ಯಾಯ ಚಾವಟ್ಯಾಯ ಚ ನಮೋ ವರ್ಷ್ಯಾಯ ಚಾವರ್ಷ್ಯಾಯ ಚ ನಮೋ ಮೇಘ್ಯಾಯ ಚ ವಿದ್ಯುತ್ಯಾಯ ಚ ನಮ ಈಧ್ರಿಯಾಯ ಚಾತಪ್ಯಾಯ ಚ ನಮೋ ವಾತ್ಯಾಯ ಚ ರೇಷ್ಮಿಯಾಯ ಚ ನಮೋ ವಾಸ್ತವ್ಯಾಯ ಚ ವಾಸ್ತುಪಾಯ ಚ ॥ 7 ॥**

ಭಾವಾರ್ಥ - 'ದುಂದುಭ್ಯನೂ ಅಹನನ್ಯನೂ ಧೃಷ್ಣವೂ ಪ್ರಮೃಶನೂ ದೂತನೂ ಪ್ರಹಿತನೂ ನಿಷಂಗಿಯೂ ಇಷುಧಿಮಂತನೂ ತೀಕ್ಷ್ಣೇಷುವೂ ಆಯುಧಿಯೂ ಸ್ವಾಯುಧನೂ ಸುಧನ್ವನೂ ಆದ ಭಗವಂತನಿಗೆ ನಮಸ್ಕಾರ!'

'ಸ್ರುತ್ಯನೂ ಪಥ್ಯನೂ ಕಾಟ್ಯನೂ ನೀಪ್ಯನೂ ಸೂದ್ಯನೂ ಸರಸ್ಯನೂ ನಾದ್ಯನೂ ವೈಶಂತನೂ ಆಗಿರುವವನಿಗೆ ನಮಸ್ಕಾರ!'

'ವಾತ್ಯನೂ ರೇಷ್ಮಿಯನೂ ವಾಸ್ತವ್ಯನೂ ವಾಸ್ತುಪನೂ ಆದವನಿಗೆ ನಮಸ್ಕಾರ!'

**ನಮಃ ಸೋಮಾಯ ಚ ರುದ್ರಾಯ ಚ ನಮಸ್ತಾಮ್ರಾಯ ಚಾರುಣಾಯ ಚ ನಮಃ ಶಂಗಾಯ ಚ ಪಶುಪತಯೇ ಚ ನಮ ಉಗ್ರಾಯ ಚ ಭೀಮಾಯ ಚ ನಮೋ ಅಗ್ರೇವಧಾಯ ಚ ದೂರೇವಧಾಯ ಚ ನಮೋ ಹಂತ್ರೇ ಚ ಹನೀಯಸೇ ಚ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯೋ ನಮಸ್ತಾರಾಯ ನಮಃ ಶಂಭವೇ ಚ ಮಯೋಭವೇ ಚ ನಮಃ ಶಂಕರಾಯ ಚ ಮಯಸ್ಕರಾಯ ಚ ನಮಃ ಶಿವಾಯ ಚ ಶಿವತರಾಯ ಚ ನಮಸ್ತೀರ್ಥ್ಯಾಯ ಚ ಕೂಲ್ಯಾಯ ಚ ನಮಃ ಪಾರ್ಯಾಯ ಚಾವಾರ್ಯಾಯ ಚ ನಮಃ ಪ್ರತರಣಾಯ ಚೋತ್ತರಣಾಯ ಚ ನಮ ಆತಾರ್ಯಾಯ ಚಾಲಾದ್ಯಾಯ ಚ ನಮಃ ಶಷ್ಪ್ಯಾಯ ಚ ಫೇನ್ಯಾಯ ಚ ನಮಃ ಸಿಕತ್ಯಾಯ ಚ ಪ್ರವಾಹ್ಯಾಯ ಚ ॥ 8 ॥**

ಭಾವಾರ್ಥ - 'ಸೋಮನಿಗೂ ರುದ್ರನಿಗೂ ತಾಮ್ರನಿಗೂ ಅರುಣನಿಗೂ ನಮಸ್ಕಾರ!' 'ಶಂಗನಿಗೂ ಪಶುಪತಿಗೂ ನಮಸ್ಕಾರವು. ಉಗ್ರನಿಗೂ ಭೀಮನಿಗೂ ಅಗ್ರೇವಧನಿಗೂ ದೂರೇವಧನಿಗೂ ಹಂತೃವಿಗೂ ಹನೀಯಸನಿಗೂ ಹರಿಕೇಶಗಳಾದ ವೃಕ್ಷಗಳಿಗೂ ನಮಸ್ಕಾರವು'

"ತಾರನಿಗೂ ಶಂಭುನಿಗೂ ಮಯೋಭವನಿಗೂ ಶಂಕರನಿಗೂ ಮಯಸ್ಕರನಿಗೂ ಶಿವನಿಗೂ ಶಿವತರನಿಗೂ ನಮಸ್ಕಾರ"

'ತೀರ್ಥ್ಯನಿಗೂ ಕೂಲ್ಯನಿಗೂ ಪಾರ್ಯನಿಗೂ, ಅವಾರ್ಯನಿಗೂ, ಪ್ರತರಣನಿಗೂ ಉತ್ತರಣನಿಗೂ ಆತಾರ್ಯನಿಗೂ ಆಲಾದ್ಯನಿಗೂ ಶಷ್ಪ್ಯನಿಗೂ ಫೇನ್ಯನಿಗೂ ಸಿಕತ್ಯನಿಗೂ ಪ್ರವಾಹ್ಯನಿಗೂ ನಮಸ್ಕಾರವು'

**ನಮ ಇರಿಣ್ಯಾಯ ಚ ಪ್ರಪಥ್ಯಾಯ ಚ ನಮಃ ಕಿಗ್ಂಶಿಲಾಯ ಚ ಕ್ಷಯಣಾಯ ಚ ನಮಃ ಕಪರ್ದಿನೇ ಚ ಪುಲಸ್ತಯೇ ಚ ನಮೋ ಗೋಷ್ಠ್ಯಾಯ ಚ ಗೃಹ್ಯಾಯ ಚ ನಮಸ್ತಲ್ಪ್ಯಾಯ ಚ ಗೇಹ್ಯಾಯ ಚ ನಮಃ ಕಾಟ್ಯಾಯ ಚ ಗಹ್ವರೇಷ್ಠಾಯ ಚ ನಮೋ**

ಹ್ರದಯ್ಯಾಯ ಚ ನಿವೇಷ್ಪ್ಯಾಯ ಚ ನಮಃ ಪಾಗ್ಂಸವ್ಯಾಯ ಚ ರಜಸ್ಯಾಯ ಚ ನಮಃ ಶುಷ್ಕ್ಯಾಯ ಚ ಹರಿತ್ಯಾಯ ಚ ನಮೋ ಲೋಪ್ಯಾಯ ಚೋಲಪ್ಯಾಯ ಚ ನಮ ಊರ್ವ್ಯಾಯ ಚ ಸೂರ್ಮ್ಯಾಯ ಚ ನಮಃ ಪರ್ಣ್ಯಾಯ ಚ ಪರ್ಣಶದ್ಯಾಯ ಚ ನಮೋಽಪಗುರಮಾಣಾಯ ಚಾಭಿಘ್ನತೇ ಚ ನಮ ಆಕ್ಖಿದತೇ ಚ ಪ್ರಕ್ಖಿದತೇ ಚ ನಮೋ ವಃ ಕಿರಿಕೇಭ್ಯೋ ದೇವಾನಾಗ್ಂ ಹೃದಯೇಭ್ಯೋ ನಮೋ ವಿಕ್ಷೀಣಕೇಭ್ಯೋ ನಮೋ ವಿಚಿನ್ವತ್ಕೇಭ್ಯೋ ನಮ ಆನಿರ್ಹತೇಭ್ಯೋ ನಮ ಆಮೀವತ್ಕೇಭ್ಯಃ ॥ 9 ॥

ದ್ರಾಪೇ ಅಂಧಸಸ್ಪತೇ ದರಿದ್ರನ್ನೀಲಲೋಹಿತ । ಏಷಾಂ ಪುರುಷಾಣಾಮೇಷಾಂ ಪಶೂನಾಂ ಮಾ ಭೇರ್ಮಾರೋ ಮೋ ಏಷಾಂ ಕಿಂ ಚನಾಮಮತ್ ॥ ಯಾ ತೇ ರುದ್ರ ಶಿವಾ ತನೂಃ ಶಿವಾ ವಿಶ್ವಾಹಭೇಷಜೀ । ಶಿವಾ ರುದ್ರಸ್ಯ ಭೇಷಜೀ ತಯಾ ನೋ ಮೃಡ ಜೀವಸೇ ॥ ಇಮಾಗ್ಂ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರ ಭರಾಮಹೇ ಮತಿಂ । ಯಥಾ ನಃ ಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿ ನ್ನನಾತುರಂ ॥ ಮೃಡಾ ನೋ ರುದ್ರೋತ ನೋ ಮಯಸ್ಕೃಧಿ ಕ್ಷಯದ್ವೀರಾಯ ನಮಸಾ ವಿಧೇಮ ತೇ । ಯಚ್ಛಂ ಚ ಯೋಶ್ಚ ಮನುರಾಯಜೇ ಪಿತಾ ತದಶ್ಯಾಮ ತವ ರುದ್ರ ಪ್ರಣೀತೌ ॥ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಂ । ಮಾ ನೋ ವಧೀಃ ಪಿತರಂ ಮೋತ ಮಾತರಂ ಪ್ರಿಯಾ ಮಾ ನಸ್ತನುವೋ ರುದ್ರ ರೀರಿಷಃ ॥ ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತೋ ನಮಸಾ ವಿಧೇಮ ತೇ ॥ ಆರಾತ್ತೇ ಗೋಘ್ನ ಉತ ಪೂರುಷಘ್ನೇ ಕ್ಷಯದ್ವೀರಾಯ ಸುಮ್ನಮಸ್ಮೇ ತೇ ಅಸ್ತು । ರಕ್ಷಾ ಚ ನೋ ಅಧಿ ಚ ದೇವ ಬ್ರೂಹ್ಯಥಾ ಚ ನಃ ಶರ್ಮ ಯಚ್ಛ ದ್ವಿಬರ್ಹಾಃ ॥ ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಂ । ಮೃಡಾ ಜರಿತ್ರೇ ರುದ್ರ ಸ್ತವಾನೋ ಅನ್ಯಂ ತೇ ಅಸ್ಮನ್ನಿ ವಪಂತು ಸೇನಾಃ ॥ ಪರಿಣೋ ರುದ್ರಸ್ಯ ಹೇತಿರ್ವೃಣಕ್ತು ಪರಿ ತ್ವೇಷಸ್ಯ ದುರ್ಮತಿರಘಾಯೋಃ । ಅವ ಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಡಯ ॥ ಮೀಢುಷ್ಟಮ

ಶಿವತಮ ಶಿವೋ ನಃ ಸುಮನಾ ಭವ । ಪರಮೇ ವೃಕ್ಷ ಆಯುಧಂ ನಿಧಾಯ ಕೃತ್ತಿಂ ವಸಾನ ಆ ಚರ ಪಿನಾಕಂ ಬಿಭ್ರದಾ ಗಹಿ ॥ ವಿಕಿರಿದ ವಿಲೋಹಿತ ನಮಸ್ತೇ ಅಸ್ತು ಭಗವಃ । ಯಾಸ್ತೇ ಸಹಸ್ರಗ್ಂ ಹೇತಯೋಽನ್ಯಮಸ್ಮನ್ನಿ ವಪಂತು ತಾಃ ॥ ಸಹಸ್ರಾಣಿ ಸಹಸ್ರಧಾ ಬಾಹುವೋಸ್ತವ ಹೇತಯಃ । ತಾಸಾಮೀಶಾನೋ ಭಗವಃ ಪರಾಚೀನಾ ಮುಖಾ ಕೃಧಿ ॥

ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿ ಭೂಮ್ಯಾಂ । ತೇಷಾಗ್ಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ ॥ ಅಸ್ಮಿನ್ಮಹತ್ಯರ್ಣವೇಽನ್ತರಿಕ್ಷೇ ಭವಾ ಅಧಿ । ನೀಲಗ್ರೀವಾಃ ಶಿತಿಕಂಠಾಃ ಶರ್ವಾ ಅಧಃ, ಕ್ಷಮಾಚರಾಃ ॥ ನೀಲಗ್ರೀವಾಃ ಶಿತಿಕಂಠಾ ದಿವಗ್ಂ ರುದ್ರಾ ಉಪಶ್ರಿತಾಃ । ಯೇ ವೃಕ್ಷೇಷು ಸಸ್ಪಿಂಜರಾ ನೀಲಗ್ರೀವಾ ವಿಲೋಹಿತಾಃ ॥ ಯೇ ಭೂತಾನಾಮಧಿಪತಯೋ ವಿಶಿಖಾಸಃ ಕಪರ್ದಿನಃ । ಯೇ ಅನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋ ಜನಾನ್ ॥ ಯೇ ಪಥಾಂ ಪಥಿರಕ್ಷಯ ಐಲಬೃದಾ ಯವ್ಯುಧಃ । ಯೇ ತೀರ್ಥಾನಿ ಪ್ರಚರಂತಿ ಸೃಕಾವಂತೋ ನಿಷಂಗಿಣಃ ॥ ಯ ಏತಾವಂತಶ್ಚ ಭೂಯಾಗ್ಂಸಶ್ಚ ದಿಶೋ ರುದ್ರಾ ವಿತಸ್ಥಿರೇ । ತೇಷಾಗ್ಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ ॥ ಓಂ ನಮಃ ಶಿವಾಯ ಓಂ ನಮೋ ನಾರಾಯಣಾಯ ॥

ಸರ್ವೋ ವೈ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು । ಪುರುಷೋ ವೈ ರುದ್ರಸ್ಸನ್ಮಹೋ ನಮೋನಮಃ ॥ ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್ । ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು ॥ ಕದ್ರುದ್ರಾಯ ಪ್ರಚೇತಸೇ ಮೀಢುಷ್ಟಮಾಯ ತವ್ಯಸೇ । ವೋಚೇಮ ಶಂತಮಗ್ಂ ಹೃದೇ । ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು ॥ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥ ಏಷ ತೇ ರುದ್ರ ಭಾಗಸ್ತಂ ಜುಷಸ್ವ ತೇನಾವಸೇನ ಪರೋ ಮೂಜವತೋಽ ತೀಹ್ಯವತತಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ ॥ ಋತಗ್ಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ ॥

ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ ಹಿರಣ್ಯಪತಯೇಽಮ್ಬಿಕಾಪತಯ ಉಮಾಪತಯೇ ಪಶುಪತಯೇ ನಮೋ ನಮಃ ॥

ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ । ಭವೇಭವೇ ನಾತಿಭವೇ ಭವಸ್ವ ಮಾಂ । ಭವೋದ್ಭವಾಯ ನಮಃ ॥ ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಸ್ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥ ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ । ಸರ್ವೇಭ್ಯಸ್ಸರ್ವ ಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ॥ ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ ॥

ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋ ರುದ್ರೋ ವಿಶ್ವಾ ಭುವನಾವಿವೇಶ ತಸ್ಮೈ ರುದ್ರಾಯ ನಮೋ ಅಸ್ತು ॥ ತಮು ಷ್ಟುಹಿ ಯಃ ಸ್ವಿಷುಃ ಸುಧನ್ವಾ ಯೋ ವಿಶ್ವಸ್ಯ ಕ್ಷಯತಿ ಭೇಷಜಸ್ಯ । ಯಕ್ಷ್ವಾ ಮಹೇ ಸೌಮನಸಾಯ ರುದ್ರಂ ನಮೋಭಿರ್ದೇವಮಸುರಂ ದುವಸ್ಯ ॥ ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ॥ ಯೇ ತೇ ಸಹಸ್ರಮಯುತಂ ಪಾಶಾ ಮೃತ್ಯೋ ಮರ್ತ್ಯಾಯ ಹಂತವೇ । ತಾನ್, ಯಜ್ಞಸ್ಯ ಮಾಯಯಾ ಸರ್ವಾನವಯಜಾಮಹೇ ॥ ಮೃತ್ಯವೇ ಸ್ವಾಹಾ ಮೃತ್ಯವೇ ಸ್ವಾಹಾ ॥ ಓಂ ನಮೋ ಭಗವತೇ ರುದ್ರಾಯ ವಿಷ್ಣವೇ ಮೃತ್ಯುರ್ಮೇ ಪಾಹಿ । ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ । ತೇನಾನ್ನೇನಾಪ್ಯಾಯಸ್ವ ॥ ಓಂ ನಮೋ ಭಗವತೇ ರುದ್ರಾಯ ವಿಷ್ಣವೇ ಮೃತ್ಯುವೇ ಸ್ವಾಹಾ । ಸದಾಶಿವೋಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## 15.8 ಗೋ ಸೂಕ್ತಂ

**ಓಂ ಆ ಗಾವೋ ಅಗ್ಮನ್ನುತ ಭದ್ರಮಕ್ರನ್ । ಸೀದಂತು ಗೋಷ್ಠೇ ರಣಯಂತ್ವಸ್ಮೇ । ಪ್ರಜಾವತೀಃ ಪುರುರೂಪಾ ಇಹ ಸ್ಯುಃ । ಇಂದ್ರಾಯ ಪೂರ್ವೀರುಷಸೋ ದುಹಾನಾಃ ॥1॥**

ಭಾವಾರ್ಥ - ಗೋವುಗಳು ನಮ್ಮ ನಿಲಯಕ್ಕೆ ಆಗಮಿಸಲಿ. ನಮಗೆ ಶುಭವನ್ನು ಕರುಣಿಸಲಿ. ನಮ್ಮ ಹಟ್ಟಿಯಲ್ಲಿ ಮಲಗಲಿ. ನಮ್ಮ ಬಗೆಗೆ ಪ್ರೀತಿಯನ್ನು ಹೊಂದಲಿ. ನಾನಾ ಬಣ್ಣದ ಉತ್ತಮ ಕರುಗಳನ್ನು ಹೊಂದಿರುವ ಬಹು ಸಂಖ್ಯೆಯ ಹಸುಗಳು ಉದಯಕಾಲದಲ್ಲಿ ದೇವರಿಗಾಗಿ ಹಾಲನ್ನು ಕೊಡಲಿ.

**ಇಂದ್ರೋ ಯಜ್ವನೇ ಪೃಣತೇ ಚ ಶಿಕ್ಷತಿ । ಉಪೇದ್ದದಾತಿ ನ ಸ್ವಂ ಮುಷಾಯತಿ ॥ ಭೂಯೋ ಭೂಯೋ ರಯಿಮಿದಸ್ಯ ವರ್ಧಯನ್ । ಅಭಿನ್ನೇ ಖಿಲ್ಯೇ ನಿದಧಾತಿ ದೇವಯುಂ ॥2॥**

ಭಾವಾರ್ಥ - ಯಾಗವನ್ನು ಮಾಡುವ ಹಾಗೂ ಸ್ತುತಿಯನ್ನು ಮಾಡುವ ಯಜಮಾನನಿಗೆ ಇಂದ್ರನು ಅಪೇಕ್ಷೆಪಟ್ಟ ಸಂಪತ್ತನ್ನು ದಯಪಾಲಿಸುವನು. ತಾನೇ ಯಜಮಾನನ ಹತ್ತಿರಕ್ಕೆ ಆಗಮಿಸಿ ನೀಡುತ್ತಾನೆ. ಕೊಟ್ಟ ಸಂಪದವನ್ನು ಮತ್ತೆ ಪುನಃ ಕಿತ್ತುಕೊಳ್ಳುವುದಿಲ್ಲ. ಬದಲಾಗಿ ಸಂಪತ್ತನ್ನು ಮತ್ತೆ ಮತ್ತೆ ಇನ್ನಷ್ಟು ವೃದ್ಧಿಸುವಂತೆ ಕರುಣಿಸುತ್ತಾನೆ. ಆತನು ದೇವರನ್ನು ಅರ್ಚಿಸುವಾತನನ್ನು ಶತ್ರುಗಳಿಗೆ ಭೇಧಿಸಲು ಅಸಾಧ್ಯವಾಗಿರುವ ಸುರಕ್ಷಿತ ಜಾಗದಲ್ಲಿರಿಸುವನು.

**ನ ತಾ ನಶಂತಿ ನ ದಭಾತಿ ತಸ್ಕರಃ । ನೈನಾ ಅಮಿತ್ರೋ ವ್ಯಥಿರಾದಧರ್ಷತಿ ॥ ದೇವಾಂಶ್ಚ ಯಾಭಿರ್ಯಜತೇ ದದಾತಿ ಚ । ಜ್ಯೋಗಿತ್ತಾಭಿಃ ಸಚತೇ ಗೋಪತಿಃ ಸಹ ॥3॥**

ಭಾವಾರ್ಥ - ನಮ್ಮ ಗೋವುಗಳು ಅವಿನಾಶಿಯಾಗಿರಲಿ. ಅವುಗಳನ್ನು ಕಳ್ಳರು ಅಪಹರಿಸದಿರಲಿ. ವೈರಿಗಳ ಶಸ್ತ್ರ ಗೋವುಗಳಿಗೆ ಹಾನಿಯುಂಟು ಮಾಡದಿರಲಿ.

ಗೋವುಗಳ ಸಹಕಾರದಿಂದ ದೇವ ಯಜ್ಞವನ್ನು ಮಾಡಿ ಯಜ್ಞಕ್ಕೆ ಹವಿಸ್ಸನ್ನು ಸಮರ್ಪಿಸುವ ಗೋವುಗಳ ಒಡೆಯನು ಚಿರಕಾಲ ಸುಖವಾಗಿ ಬಾಳಲಿ.

**ನ ತಾ ಅರ್ವಾ ರೇಣುಕಕಾಟೋ ಅಶ್ನುತೇ । ನ ಸಗ್ಗ್ಂಸ್ಕೃತತ್ರಮುಪಯಂತಿ ತಾ ಅಭಿ । ಉರುಗಾಯಮಭಯಂ ತಸ್ಯ ತಾ ಅನು । ಗಾವೋ ಮರ್ತ್ಯಸ್ಯ ವಿಚರಂತಿ ಯಜ್ವನಃ ॥4॥**

ಭಾವಾರ್ಥ - ಮಣ್ಣಿನಹುಡಿಯನ್ನು ಎಬ್ಬಿಸುತ್ತಾ ಕುದುರೆಗಳು ಗೋವುಗಳತ್ತ ಮುನ್ನುಗ್ಗಿ ಬರದಿರಲಿ. ಗೋವುಗಳು ಯಜ್ಞಪಶುಗಳಾಗಿ ಕತ್ತರಿಸುವಿಕೆಗೆ ಒಳಗಾಗದಿರಲಿ. ಯಜಮಾನನ ವಿಸ್ತಾರವಾಗಿರುವ ಹುಲ್ಲುಗಾವಲಿನಲ್ಲಿ ನಿರ್ಭಯವಾಗಿ ಗೋವುಗಳು ಸ್ವತಂತ್ರವಾಗಿ ಸಂಚರಿಸಲಿ.

**ಗಾವೋ ಭಗೋ ಗಾವ ಇಂದ್ರೋ ಮೇ ಅಚ್ಛಾನ್ । ಗಾವಃ ಸೋಮಸ್ಯ ಪ್ರಥಮಸ್ಯ ಭಕ್ಷಃ । ಇಮಾ ಯಾ ಗಾವಃ ಸ ಜನಾಸ ಇಂದ್ರಃ । ಇಚ್ಛಾಮೀದ್ಧೃದಾ ಮನಸಾ ಚಿದಿಂದ್ರಂ ॥5॥**

ಭಾವಾರ್ಥ - ಗೋವುಗಳು ಸಂಪತ್ತಿನ ಪ್ರತೀಕವಾಗಿವೆ. ಇಂದ್ರನು ನಮಗೆ ಗೋವುಗಳನ್ನು ಕರುಣಿಸಲಿ. ಮೊದಲು ಅರ್ಪಿತವಾಗುವಂತಹಾ ಸೋಮಕ್ಕೆ ಹಸುಗಳು ಕ್ಷೀರಾದಿ ದ್ರವ್ಯಗಳನ್ನು ಒದಗಿಸಿಕೊಡಲಿ. ಮಾನವುಳ್ಳವರಾಗಿರುವ ಮಾನವರೇ! ಗೋವುಗಳು ಇಂದ್ರನ ಪ್ರತೀಕವಾಗಿವೆ. ಹಾಗಾಗಿ ಇಂತಹಾ ಇಂದ್ರನನ್ನು ಮನಸಾ ಬೇಡಿಕೊಳ್ಳುವೆನು.

**ಯೂಯಂ ಗಾವೋ ಮೇದಯಥಾ ಕೃಶಂ ಚಿತ್ । ಅಶ್ರೀಲಂ ಚಿತ್ಕೃಣುಥಾ ಸುಪ್ರತೀಕಂ । ಭದ್ರಂ ಗೃಹಂ ಕೃಣುಥ ಭದ್ರವಾಚಃ । ಬೃಹದ್ವೋ ವಯ ಉಚ್ಯತೇ ಸಭಾಸು ॥6॥**

ಭಾವಾರ್ಥ - ಗೋವುಗಳೇ!ನೀವು ನಮಗೆ ಸಂತಸವನ್ನುಂಟು ಮಾಡಿರಿ. ಕೆಟ್ಟ ಲಕ್ಷಣದ ಹಾಗೂ ಸೊರಗಿರುವ ನಮ್ಮ ಅಂಗಾಂಗಗಳನ್ನು ಲಕ್ಷಣವಾಗಿರುವಂತೆ ಅನುಗ್ರಹಿಸಿರಿ. ಮಂಗಲಮಯವಾಗಿರುವ ಧ್ವನಿಯುಳ್ಳ ಗೋವುಗಳೇ! ನಮ್ಮ ನಿಲಯದಲ್ಲಿ

ಮಂಗಲವು ಸ್ಥಿರವಾಗಿರುವಂತೆ ಅನುಗ್ರಹಿಸಿರಿ. ನಿಮಗೆ ಯಜ್ಞಯಾಗಾದಿಗಳಲ್ಲಿ ಅಧಿಕ ಅನ್ನವನ್ನು ಸಮರ್ಪಿಸುವೆವು.

**ಪ್ರಜಾವತೀಃ ಸೂಯವಸಗ್ಂ ರಿಶಂತೀಃ । ಶುದ್ಧಾ ಅಪಃ ಸುಪ್ರಪಾಣೇ ಪಿಬಂತೀಃ । ಮಾ ವಃ ಸ್ತೇನ ಈಶತ ಮಾಽಘಶಗ್ಂಸಃ । ಪರಿ ವೋ ಹೇತೀ ರುದ್ರಸ್ಯ ವೃಂಜ್ಯಾತ್ ॥7॥**

ಭಾವಾರ್ಥ - ಗೋವುಗಳೇ! ನೀವು ಕರುಗಳನ್ನು ಹೊಂದಿದವರಾಗಿ ಉತ್ತಮ ಹುಲ್ಲನ್ನು ಮೆಲ್ಲುತ್ತಾ ಇರಿ. ಶುದ್ಧ ನೀರಿರುವ ಕೊಳದಲ್ಲಿ ಸುಖವಾಗಿ ನೀರನ್ನು ಕುಡಿಯಿರಿ. ಕಳ್ಳರು ಎಂದಿಗೂ ನಿಮ್ಮ ಒಡೆಯರಾಗದಿರಲಿ. ವ್ಯಾಘ್ರರೂಪಿಗಳು ನಿಮಗೆಂದೂ ಕೇಡನ್ನು ಬಗೆಯದಿರಲಿ. ರುದ್ರನ ಆಯುಧವು ನಿಮಗೆ ಕೇಡನ್ನು ಉಂಟು ಮಾಡದಿರಲಿ.

**ಉಪೇದಮುಪ ಪರ್ಚನಂ । ಆಸು ಗೋಷೂಪಪೃಚ್ಯತಾಂ । ಉಪರ್ಷಭಸ್ಯ ರೇತಸಿ । ಉಪೇಂದ್ರ ತವ ವೀರ್ಯೇ ॥8॥**

ಭಾವಾರ್ಥ - ಗೋವುಗಳಲ್ಲಿ ಈ ರೀತಿಯ ಪರಿಪೂರ್ಣತೆ ತುಂಬಿರಲೆಂಬುದು ಪ್ರಾರ್ಥನೆಯಾಗಿರಲಿ. ಇಂದ್ರನೇ! ನಿನ್ನ ಶಕ್ತಿಯ ಮೇಲ್ಮೆಗಾಗಿ ವೃಷಭದ ವೀರ್ಯದಲ್ಲಿ ಸಾಮರ್ಥ್ಯವು ತುಂಬಿರಲಿ.

॥ ಇತಿ ಗೋ ಸೂಕ್ತಂ ಸಂಪೂರ್ಣಂ ॥

ಓಂ ತತ್ಸತ್.

# ಅರ್ಪಣೆ

## ಪೂಜ್ಯ ತಾಯಿ - ತಂದೆ



ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ದಿಕ್ಷಿತ,

(1935 – 2002)



ಶ್ರೀ ದಕ್ಷಿಣಾಮೂರ್ತಿ ತಿಮ್ಮಣ್ಣ ದಿಕ್ಷಿತ, ಓಣಿಕೈ

(1927 – 1996)

## ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯ ಪ್ರಕಟಣೆಗಳು

1. ದೈನಂದಿನ ಪ್ರಾರ್ಥನಾ ಶ್ಲೋಕಗಳು
2. ಸಂಧ್ಯಾವಂದನಾದಿ ನಿತ್ಯಕರ್ಮಗಳು
3. ನಿತ್ಯೋಪಯೋಗಿ ವೇದ ಮಂತ್ರಗಳು
4. ನಾಮ ಪಾರಾಯಣ ಸ್ತೋತ್ರಗಳು
5. ಪಂಚಾಯತನ ದೇವ ಪೂಜಾ ವಿಧಿ
6. ನಿತ್ಯ ಭಜನಾ ಪದ್ಧತಿ
7. ಆದಿ ಶಂಕರಾಚಾರ್ಯರ ಕೃತಿಗಳು
8. ಹಬ್ಬ-ಹರಿದಿನಗಳ ಆಚರಣೆ
9. ಓಣಿಕೈ ಮನೆತನ - ವಂಶ ವೃಕ್ಷ
10. ಹವ್ಯಕರ ಹಾಡುಗಳು
11. ಬಹೂಪಯೊಗೀ ನಾಮಾವಳಿಗಳು
12. ಶ್ರೀ ಗುರುಚರಿತ್ರ ಪದ್ಯ

## ಸದ್ಗುರು ಸುಜ್ಞಾನ ವೇದಿಕೆಯ ಪ್ರಕಟಣೆಗಳು

1. ವೈದಿಕ-ಜೀವನ ಕೈಪಿಡಿ
2. ವೈದಿಕ ಜ್ಯೋತಿ
3. ಪ್ರತಿ ಸಾಂವತ್ಸರಿಕ ಶ್ರಾದ್ಧ ಪ್ರಯೋಗ
4. ದೇವಿ ಆರಾಧನಾ ಪ್ರದೀಪ
5. ವಾಸ್ತು ಪ್ರಯೋಗ ದೀಪ
6. ಪುರಾಣೋಕ್ತ ಶ್ಲೋಕೈ: ಪ್ರತಿ ಸಾಂವತ್ಸರಿಕ ಶ್ರಾದ್ಧ ಪ್ರಯೋಗ



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,
ಕರ್ನಾಟಕ, ದೂರವಾಣಿ : +91 94482 42402, sddixit@outlook.com